ಕನಕದಾಸ ಅಧ್ಯಯನ ಕೇಂದ್ರ ಸಾಹಿತ್ಯ ಸರಣಿ–6

**ಪ್ರಧಾನ ಸಂಪಾದಕ: ಕಾ ತ ಚಿಕ್ಕಣ್ಣ**

# ಕನಕ–ಮರುದರ್ಶನ

ಪ್ರಬಂಧಗಳ ಸಂಕಲನ

ಸಂಪಾದಕ
**ಡಾ. ಬಂಜಗೆರೆ ಜಯಪ್ರಕಾಶ**

ಪ್ರಕಾಶಕರು
**ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ**
2ನೆಯ ಮಹಡಿ, ಚಾಲುಕ್ಯ ವಿಭಾಗ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು–02
ದೂರವಾಣಿ: 080–22113147,
E-mail: kanakaresearchcentre@gmail.com web: www.saintpoetkanaka.in

*Editer* : *Dr. Banjagere Jayaprakasha*

*Chief Editor* : *Ka Tha Chikkanna*

*Publisher* : *V.N. Mallikarjuna Swamy*
*Member Secretary*
*National Saint Poet Kanakadasa Study and Research Center*
*2nd Floor, Chalukya Vibhaga*
*Kannada Bhavana, J.C. Road, Bangalore-560 002*
*Ph: 080-22113147*
*E-mail: kanakaresearchcentre@gmail.com*
*web: www.saintpoetkanaka.in*

First Impression : 2015



Pages : viii + 254 = 262

Copies : 500

Size : Demy 1/8

Cover page Art Work : O. Venkatesh

Cover page Design : Ila Mudrana

Paper : 70 gsm N.S. Maplitho

Price : ` **75/-**

Printed at : **Ila Mudrana**
Bangalore - 560 026
Ph : 26757159

# ಸಂಪಾದಕರ ಮಾತು

ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರವು ಬೆಂಗಳೂರು, ಮೈಸೂರು ಮತ್ತು ಬೀದರ್‌ಗಳಲ್ಲಿ ಏರ್ಪಡಿಸಿದ್ದ ಚಿಂತನಾ–ಸಂವಾದ ಗೋಷ್ಠಿಗಳಲ್ಲಿ ಪ್ರಸ್ತುತಗೊಂಡ ಭಾಷಣ ಹಾಗೂ ಲೇಖನಗಳನ್ನು ಈ ಕೃತಿಯಲ್ಲಿ ಸಂಕಲನಗೊಳಿಸಲಾಗಿದೆ. ಸಂವಾದ ಮತ್ತು ಚಿಂತನಾ ಗೋಷ್ಠಿಗಳನ್ನು ಉಪನ್ಯಾಸ ಹಾಗೂ ಚರ್ಚೆ ಎನ್ನುವ ವಿಧಾನದ ಬದಲಿಗೆ ಟಿಪ್ಪಣಿ ಮಂಡನೆ ಹಾಗೂ ಮುಕ್ತ ಸಂವಾದ ಎನ್ನುವ ವಿಧಾನದಲ್ಲಿ ಸಂಘಟಿಸಲಾಗಿತ್ತು. ಹೆಚ್ಚು ಜನರ ಚಿಂತನೆಗಳನ್ನು ಒಳಗೊಂಡು ಆ ಮುಖಾಂತರ ಕನಕದಾಸರ ಜೀವನ ದರ್ಶನ, ಸಾಹಿತ್ಯ ಸಂದೇಶ ಹಾಗೂ ಸಂಸ್ಕೃತಿ ಪ್ರತಿಪಾದನೆ ಇವುಗಳನ್ನು ಮರುದರ್ಶನ ಮಾಡುವುದು, ಆ ಮುಖಾಂತರ ಕನಕದಾಸರಿಗೆ ನಮ್ಮ ವರ್ತಮಾನದಲ್ಲಿ ಇರುವ ಹಲಬಗೆಯ ಪ್ರಸ್ತುತತೆಯನ್ನು ಅರ್ಥೈಸಿಕೊಳ್ಳುವುದು ಈ ಚಿಂತನಾ ಗೋಷ್ಠಿಗಳ ಮುಖ್ಯ ಉದ್ದೇಶವಾಗಿತ್ತು.

ಕನಕದಾಸರು ಕರ್ನಾಟಕ ಸಂಸ್ಕೃತಿಯಲ್ಲಿ ಪುನಾಪ್ರಸ್ತುತ ಗೊಳ್ಳುತ್ತಿರುವ ಕಾಲಘಟ್ಟವಿದು. ಸಂತಶ್ರೇಷ್ಠರಾಗಿ, ಕವಿಯಾಗಿ, ತತ್ತ್ವ ಚಿಂತಕರಾಗಿ ಕನಕದಾಸರಿಗಿರುವ ಮಹತ್ವ ದಿನದಿಂದ ದಿನಕ್ಕೆ ವೃದ್ಧಿಗೊಳ್ಳುತ್ತಿದೆ. ಸಂತಶ್ರೇಷ್ಠ ಕನಕದಾಸರು 20ನೆಯ ಶತಮಾನದ ಆರಂಭ ಕಾಲಘಟ್ಟದಲ್ಲಿ ಪಡೆದುಕೊಂಡಿದ್ದ ಪರಿಗಣನೆ ಹಾಗೂ ಪ್ರಾಮುಖ್ಯತೆಯನ್ನು ಗಮನಿಸಿದರೆ, 20ನೆಯ ಶತಮಾನದ ಕೊನೆಯ ಹೊತ್ತಿಗೆ ಅದು ಭರಾಟೆಯಿಂದ ಬೆಳೆಯುತ್ತಿರುವುದನ್ನು ಗಮನಿಸಬಹುದಾಗಿದೆ. 16–17ನೆಯ ಶತಮಾನದಲ್ಲಿ ಜೀವಿಸಿದ್ದ ಕನಕದಾಸರು ಆನಂತರ ಒಂದೆರಡು ಶತಮಾನಗಳ ಅವಧಿಯಲ್ಲಿ ಒಂದು ಬಗೆಯ ಅಜ್ಞಾತ ಸ್ಥಿತಿಯಲ್ಲಿ ಇದ್ದುದನ್ನೂ ನಾವು ಗಮನಿಸಬೇಕು. ಅದಕ್ಕಿರುವ ಸರಳ ಕಾರಣವನ್ನು ಊಹಿಸಿ ಹೀಗೆ ಹೇಳಬಹುದೆಂದು ಕಾಣುತ್ತದೆ: 16–17ನೆಯ ಶತಮಾನದಲ್ಲಿ ಸಕ್ರಿಯವಾಗಿದ್ದ ಹರಿದಾಸ ಪಂಥ ಎಂದು ಗುರುತಿಸಲ್ಪಟ್ಟಿರುವ ಭಕ್ತಿ ಚಳವಳಿಯನ್ನು ಒಟ್ಟಾರೆಯಾಗಿ ಶ್ರೀವೈಷ್ಣವ ಹಾಗೂ ಮಾಧ್ವ ಪಂಥಗಳ ಉಪಾಂಗವೆಂಬಂತೆ ಪರಿಗಣಿಸಿದ್ದು, ಈ ಬಗೆಯ ಪಂಥದಲ್ಲಿ ಇದ್ದ ಒಬ್ಬ ಕೀರ್ತನಾಕಾರನಾಗಿ ಮಾತ್ರ ಕನಕದಾಸರನ್ನು ಪರಿಗಣನೆಗೆ ತೆಗೆದುಕೊಂಡದ್ದು ಒಂದು ಮುಖ್ಯ ಕಾರಣ. 16–17ನೆಯ ಶತಮಾನದಲ್ಲಿ ಹರಿದಾಸ ಪಂಥ ಸಕ್ರಿಯವಾಗಿದ್ದ ಕಾಲಘಟ್ಟದಲ್ಲಿ ಅದಕ್ಕೆ ಬೆಂಬಲವಾಗಿ ನಿಂತ ಸಮುದಾಯಗಳು ಹಲವಿರಬಹುದಾದರೂ, ನಂತರದಲ್ಲಿ ಅವು ವೈದಿಕ ಮತಪಂಥಗಳಾಗಿರುವ ಶ್ರೀವೈಷ್ಣವ ಮತ್ತು ಮಾಧ್ವ ಅನುಯಾಯಿಗಳಲ್ಲಿ ಹೆಚ್ಚೂ ಕಮ್ಮಿ ತನ್ನ ನೆಲೆಯನ್ನು ಕಂಡುಕೊಂಡಿದ್ದು ಎರಡನೆಯ ಕಾರಣ.

ಆ ಪಂಥಗಳ ಹಿನ್ನೆಲೆಯನ್ನು ನೋಡುವುದಾದರೆ ಅಲ್ಲಿ ಮಠಾಚಾರ್ಯರುಗಳಿಗೆ ಪ್ರಥಮ ಪ್ರಾಶಸ್ತ್ಯ ಮತ್ತು ಮಹತ್ವ. ಅದನ್ನೊಂದು ಮತಪಂಥ ದರ್ಶನವಾಗಿ ಪರಿಭಾವಿಸುವುದರಿಂದ ಅದರಲ್ಲಿ ಇರುವ ತತ್ವಶಾಸ್ತ್ರೀಯ ಪ್ರಮೇಯಗಳು, ಅವುಗಳ ಭಾಷ್ಯಕಾರರು, ಟೀಕುದಾರರಿಗೆ ಮೊದಲ ಮಹತ್ವ. ಹೆಚ್ಚೆಂದರೆ ದಾಸರುಗಳನ್ನ ಪಂಥ ಪ್ರಚಾರಕರೆಂಬ ನೆಲೆಯಲ್ಲಿ ಮಾತ್ರವೇ ಪರಿಗಾಣಿಸಿದ್ದು ಕಂಡುಬರುತ್ತದೆ.

ಹರಿದಾಸ ಪಂಥವನ್ನು ಶ್ರೀವೈಷ್ಣವ ಹಾಗೂ ಮಾಧ್ವ ಮತಪಂಥಗಳ ಅಂಗವಾಗಿ ಮಾತ್ರವೇ ಗಮನಿಸದೆ, ಅದೇ ಕಾಲಘಟ್ಟದಲ್ಲಿ ಶೂದ್ರ ಸಮುದಾಯಗಳ ನಡುವೆ ಹುಟ್ಟಿ ಬಂದ ಆಧ್ಯಾತ್ಮಿಕ ಹಾಗೂ ಧಾರ್ಮಿಕ ಮೇಲ್ಮುಖ ಚಲನೆಯ ಪ್ರಕ್ರಿಯೆಯ ಭಾಗವಾಗಿ ನೋಡಿದರೆ ಅದರ ಕೇಂದ್ರ ಲಕ್ಷ್ಯ ಆಗ ವ್ಯಾಸರಾಯರಿಂದ, ತಾತಾಚಾರ್ಯರಿಂದ ಬದಲುಗೊಂಡು ಅದು ಕನಕ ಪುರಂದರರ ಕಡೆಗೆ ಬಂದು ನಿಲ್ಲುತ್ತದೆ. ಈ ಮೊದಲು ಇಂತಹ ಬಗೆಯ ದೇಸಿ ಸಾಂಸ್ಕೃತಿಕ ಆಂದೋಲನಗಳ ಕುರಿತು ಅಷ್ಟು ನಿಗಾ ಮಾಡಿದ್ದು ಅಥವಾ ಅರ್ಥ ಮಾಡಿಕೊಳ್ಳಲು ಎಡಪಂಥೀಯ ಬುದ್ಧಿಜೀವಿಗಳು ಪ್ರಯತ್ನಿಸಿದ್ದು ಬಹಳ ಕಡಿಮೆ. ಪ್ರಪಂಚದ ಬೇರೆ ಭೂ ಖಂಡಗಳಲ್ಲಿ ಆರಂಭಗೊಂಡ ನಿರ್ಲಕ್ಷಿತ ನೆಲೆಗಳ ಸಮಾಜೋ ಸಾಂಸ್ಕೃತಿಕ ಅಧ್ಯಯನಗಳ ಪ್ರೇರಣೆಯಿಂದ ಕರ್ನಾಟಕದಲ್ಲೂ ಆ ಬಗೆಯ ಅಧ್ಯಯನದ ಒಲವುಗಳು ಆರಂಭಗೊಂಡವು. ಈ ಹಿನ್ನೆಲೆಯಲ್ಲಿಯೇ ಭಕ್ತರಾಗಿ, ದಾಸರಾಗಿ, ಕೀರ್ತನಕಾರರಾಗಿ, ನಂತರ ನಳಚರಿತ್ರೆ, ಹರಿಭಕ್ತಿಸಾರ ಹಾಗೂ ರಾಮಧಾನ್ಯ ಚರಿತೆಗಳ ಕವಿಯಾಗಿ, ನಂತರದಲ್ಲಿ ದಾರ್ಶನಿಕ ಸಂತರಾಗಿ, ಜಾತಿ ಶ್ರೇಣೀಕರಣದ ಟೀಕಾಕಾರರಾಗಿ ಹಂತಹಂತವಾಗಿ ಕನಕದಾಸರು ಅತ್ಯಂತ ಸೂಕ್ತ ರೀತಿಯಲ್ಲಿ ನಮ್ಮ ನಡುವೆ ಅನಾವರಣಗೊಳ್ಳುತ್ತಾ ನಡೆದಿದ್ದಾರೆ.

ಹೀಗೆ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಶರಣ ಚಳವಳಿಯ ನಂತರ  ಮೂಡಿ ಬಂದ ಮತ್ತೊಬ್ಬ ಜನಮುಖೀ ದಾರ್ಶನಿಕರಾಗಿ, ಸಮಾನತಾ ಸಂಸ್ಕೃತಿಯ ಪ್ರತಿಪಾದಕರಾಗಿ, ಹರಿದಾಸ ಪಂಥದ ಆವರಣದ ಒಳಗೆ ಕಂಡು ಬಂದಾಗಲೂ ಅದರಿಂದ ಹೊರಗೆ ನಿಂತ ಸ್ವತಂತ್ರ ಚೈತನ್ಯದವರಾಗಿ ಕನಕದಾಸರು ನಮಗೀಗ ದರುಶನ ಕೊಟ್ಟಿದ್ದಾರೆ.

ಕನಕದಾಸರು ತಮ್ಮ ಬದುಕು–ಬರಹ ಮತ್ತು ಕನಸುಗಳಿಂದಾಗಿ ಜನಮುಖೀ ಚಿಂತನಾ ನೆಲೆಗಳ ನಡುವೆ ವಿಶಿಷ್ಟ ಸಾಧನೆಯ ಸಂತರಾಗಿ ನಿಂತಿದ್ದಾರೆ. ಆ ಕಾಲಘಟ್ಟದ ಪರಿಪ್ರೇಕ್ಷ್ಯದಲ್ಲಿಟ್ಟು ಹೇಳುವುದಾದರೆ ಅಂತಹ ಸಾಧ್ಯತೆ ಇದ್ದದ್ದು ಅವರೊಬ್ಬರಿಗೆ ಮಾತ್ರವೇ ಎಂದರೂ ವಿಪರೀತದ ಮಾತಾಗಲಾರದು. ಇದು ನಾವು ಇನ್ನೂ ಚೆನ್ನಾಗಿ ಅರ್ಥೈಸಿಕೊಳ್ಳಬೇಕಾದ ವಲಯವಾಗಿಯೇ

ಉಳಿದಿದೆ. ಕರ್ನಾಟಕದ ಜಾತಿ ಶ್ರೇಣೀಕರಣ ವಿರೋಧಿ ಪರಂಪರೆ ಹಾಗೂ ಪಂಪನಿಂದ ಕುವೆಂಪುವರೆಗೂ, ಆನಂತರದ ನಮ್ಮವರೆಗೂ ಜನಸಂಸ್ಕೃತಿ ರೂಪಿಸಿದ ಉತ್ಕೃಷ್ಟ ವ್ಯಕ್ತಿತ್ವಗಳಲ್ಲಿ ಕನಕದಾಸರಿಗೆ ಒಂದು ಅನನ್ಯ ಸ್ಥಾನವಿದೆ. ಈ ಅಂಶವನ್ನು ಈ ಮೂರೂ ಚಿಂತನಾ ಹಾಗೂ ಸಂವಾದ ಗೋಷ್ಠಿಗಳಲ್ಲಿ ಮಂಡಿತವಾಗಿರುವ ಬರಹಗಳು ಪ್ರತಿಪಾದಿಸುತ್ತಿವೆ. ದಾಸನಾಗುವುದೆಂದರೆ ದೈನ್ಯತೆಯ ಪ್ರತಿಪಾದನೆಯಲ್ಲ, ಒಂದು ಸರ್ವೋನ್ನತ ಲೌಕಿಕ ಸ್ವಾತಂತ್ರ್ಯದ ಪ್ರತಿಪಾದನೆ. ಭಕ್ತಿ ಪಂಥದಲ್ಲಿ ದೈವವೆನ್ನುವುದು ಧಣಿಯಲ್ಲ. ಸಖ, ಸಂರಕ್ಷಕ, ಕೆಲವು ಸಲ ಸೇವಕ ಎನ್ನುವಂತಹ ಮಾನವೀಯ ಪರಿಗಣನೆಗಳ ತತ್ವ. ಇದನ್ನು ನಿದರ್ಶಿಸಲು ಶರಣ ವಚನಕಾರರಂತೆಯೇ ಆನಂತರದ ಮೂರು ಶತಮಾನಗಳ ನಂತರ ಮೂಡಿಬಂದ ಅರೆಮೈ ಉಡುಪಿನ, ಬರಿಗಾಲ ಬೌದ್ಧ ಭಿಕ್ಕು ಮಾದರಿಯ ಸಂಚಾರಿ ದಾರ್ಶನಿಕ, ಕವಿ, ಸಂತ ಕನಕದಾಸರು ಒಂದು ಮಾದರಿಯನ್ನು ಒದಗಿಸುತ್ತಿದ್ದಾರೆ.

ಹರಿದಾಸ ಪಂಥದ ಭಕ್ತನಾಗಿ ಕಾಣಿಸಲ್ಪಟ್ಟ ಕನಕದಾಸರು ಕವಿಯಾಗಿ, ಸಂತಶ್ರೇಷ್ಠರಾಗಿ, ದಾರ್ಶನಿಕರಾಗಿ ಅನಾವರಣಗೊಳ್ಳುತ್ತಾ ಹೋದ ಕ್ರಮದಲ್ಲಿಯೇ, 'ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೇ' ಎನ್ನುವ ಭಕ್ತಿ ಪರಾಕಾಷ್ಠತೆ ಮತ್ತು ಪವಾಡಗಳ ಪ್ರಭಾವಳಿಯ ಸಮೇತ ಆತ್ಮ ಯಾವ ಕುಲ, ಜೀವ ಯಾವ ಕುಲ ಎಂದು ಸಾರಬಲ್ಲ ದಾರ್ಶನಿಕರಾಗಿ ನಮ್ಮೆದುರು ಪ್ರಸ್ತುತಗೊಂಡಿದ್ದಾರೆ. ಕೀರ್ತನೆಗಳು ಹಾಗೂ ಮುಂಡಿಗೆಗಳ ನೆಲೆಯಲ್ಲಿ ಅನುಭಾವಿಯಾಗಿ ಕಂಡುಬರುವ ಕನಕದಾಸರು ಅದನ್ನು ಮೀರಿ 'ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ' ಎಂಬ ದಿಟ್ಟ ಸತ್ಯ ಪ್ರತಿಪಾದಕರಾಗಿ ಅವತರಿಸಿದ್ದಾರೆ. 'ನಳ ಚರಿತ್ರೆ'ಯಂತಹ ಉತ್ತಮ ಕಾವ್ಯ ರಚನೆ ಮಾಡಿದ ಸಾಧನೆಗಿಂತಲೂ 'ರಾಮಧಾನ್ಯಚರಿತೆ' ಎಂಬ ಪ್ರಖರ ಕಾವ್ಯದ ಮುಖಾಂತರ 'ಶ್ರೀಸಾಮಾನ್ಯನೇ ಭಗವನ್ ಮಾನ್ಯಂ' ಎಂಬ ನಿಲುವನ್ನು ಮನಗಾಣಿಸಿದ ಕವಿಯಾಗಿ ದಲಿತ ಬಂಡಾಯ ಸಾಹಿತಿಗಳ ಸಂವೇದನೆಗೆ ಒಬ್ಬ ಪೂರ್ವಸೂರಿಯಾಗಿ ಬೆಳಗುತ್ತಿದ್ದಾರೆ.

ಇಂತಹ ಬಹುಮುಖೀ ಪವಾಡಸದೃಶ ಬದುಕಿನ ಸಂತ ದಾರ್ಶನಿಕ ಕವಿ ಇಂದಿನ ತಲೆಮಾರಿನ ವಿದ್ವಜ್ಜನರ ನಡುವೆ ಜಿಜ್ಞಾಸೆಗೊಳಪಡುತ್ತಿರುವ ಕ್ರಮ ಹಾಗೂ ಸತ್ಯಶೋಧನೆಗಳಿಗೆ ಕಾರಣವಾಗುತ್ತಿರುವ ವಿಧಾನ ಹೇಗಿದೆ ಎಂಬುದನ್ನು ಗ್ರಹಿಸಲು ಈ ಕೃತಿಯಲ್ಲಿರುವ ಹಲವಾರು ಲೇಖನಗಳು ಕೈ ದೀವಿಗೆಯಂತಿವೆ. ಇದು ನಿಂತ ನಿಲುವಿನ ಮಾತಲ್ಲ; ಹೊರಟ ಹಾದಿಯ ಹುಡುಕಾಟ. ಈ ಹುಡುಕುವಿಕೆಗಳು ನಮ್ಮ ಕಾಲಘಟ್ಟದ ಸಾಂಸ್ಕೃತಿಕ ರಾಜಕಾರಣದ ಪರಿಗಳನ್ನು, ಹಲವು ವ್ಯೂಹಾತಾಂತ್ರಿಕ ನಡೆಗಳನ್ನು ನಮ್ಮ ಗಮನಕ್ಕೆ ತರಬಯಸುತ್ತಿವೆ.

ಇಂತಹ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ತಮ್ಮ ಅಮೂಲ್ಯ ಚಿಂತನೆಗಳಿಂದ 'ಕನಕ' ಎಂಬ ಚಿನ್ನವನ್ನು ಒರೆಗೆ ಹಚ್ಚಿ ಜನರ ಮುಂದಿಡುತ್ತಿರುವ ಲೋಹ ಪರೀಕ್ಷಕರಂತಿರುವ ವಿದ್ವಾಂಸರು ಹಾಗೂ ಈ ಬಗೆಯ ಹಲವು ಕಾರ್ಯಕ್ರಮಗಳನ್ನು ಸಂಘಟಿಸಲು ಅಹರ್ನಿಶಿ ಉತ್ಸಾಹದಿಂದ ಶ್ರಮಿಸುತ್ತಿರುವ ನಮ್ಮ ಪ್ರೀತಿಯ ಚಿರತರುಣ, ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರದ ಸಮನ್ವಯಾಧಿಕಾರಿ ಕಾ ತ ಚಿಕ್ಕಣ್ಣನವರು ಇವರೆಲ್ಲರಿಗೆ ಈ ಎಲ್ಲಾ ಅರ್ಥಪೂರ್ಣ ಪ್ರಕ್ರಿಯೆಗಳಿಗಾಗಿ ನಮ್ಮ ಅಭಿನಂದನೆಗಳು ಸಲ್ಲಬೇಕಿವೆ.

**–ಡಾ. ಬಂಜಗೆರೆ ಜಯಪ್ರಕಾಶ**

# ಸಂಪಾದಕರ ಮಾತು

ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರವು ಬೆಂಗಳೂರು, ಮೈಸೂರು ಮತ್ತು ಬೀದರ್‌ಗಳಲ್ಲಿ ಏರ್ಪಡಿಸಿದ್ದ ಚಿಂತನಾ–ಸಂವಾದ ಗೋಷ್ಠಿಗಳಲ್ಲಿ ಪ್ರಸ್ತುತಗೊಂಡ ಭಾಷಣ ಹಾಗೂ ಲೇಖನಗಳನ್ನು ಈ ಕೃತಿಯಲ್ಲಿ ಸಂಕಲನಗೊಳಿಸಲಾಗಿದೆ. ಸಂವಾದ ಮತ್ತು ಚಿಂತನಾ ಗೋಷ್ಠಿಗಳನ್ನು ಉಪನ್ಯಾಸ ಹಾಗೂ ಚರ್ಚೆ ಎನ್ನುವ ವಿಧಾನದ ಬದಲಿಗೆ ಟಿಪ್ಪಣಿ ಮಂಡನೆ ಹಾಗೂ ಮುಕ್ತ ಸಂವಾದ ಎನ್ನುವ ವಿಧಾನದಲ್ಲಿ ಸಂಘಟಿಸಲಾಗಿತ್ತು. ಹೆಚ್ಚು ಜನರ ಚಿಂತನೆಗಳನ್ನು ಒಳಗೊಂಡು ಆ ಮುಖಾಂತರ ಕನಕದಾಸರ ಜೀವನ ದರ್ಶನ, ಸಾಹಿತ್ಯ ಸಂದೇಶ ಹಾಗೂ ಸಂಸ್ಕೃತಿ ಪ್ರತಿಪಾದನೆ ಇವುಗಳನ್ನು ಮರುದರ್ಶನ ಮಾಡುವುದು, ಆ ಮುಖಾಂತರ ಕನಕದಾಸರಿಗೆ ನಮ್ಮ ವರ್ತಮಾನದಲ್ಲಿ ಇರುವ ಹಲಬಗೆಯ ಪ್ರಸ್ತುತತೆಯನ್ನು ಅರ್ಥೈಸಿಕೊಳ್ಳುವುದು ಈ ಚಿಂತನಾ ಗೋಷ್ಠಿಗಳ ಮುಖ್ಯ ಉದ್ದೇಶವಾಗಿತ್ತು.

ಕನಕದಾಸರು ಕರ್ನಾಟಕ ಸಂಸ್ಕೃತಿಯಲ್ಲಿ ಪುನಾಪ್ರಸ್ತುತ ಗೊಳ್ಳುತ್ತಿರುವ ಕಾಲಘಟ್ಟವಿದು. ಸಂತಶ್ರೇಷ್ಠರಾಗಿ, ಕವಿಯಾಗಿ, ತತ್ತ್ವ ಚಿಂತಕರಾಗಿ ಕನಕದಾಸರಿಗಿರುವ ಮಹತ್ವ ದಿನದಿಂದ ದಿನಕ್ಕೆ ವೃದ್ಧಿಗೊಳ್ಳುತ್ತಿದೆ. ಸಂತಶ್ರೇಷ್ಠ ಕನಕದಾಸರು 20ನೆಯ ಶತಮಾನದ ಆರಂಭ ಕಾಲಘಟ್ಟದಲ್ಲಿ ಪಡೆದುಕೊಂಡಿದ್ದ ಪರಿಗಣನೆ ಹಾಗೂ ಪ್ರಾಮುಖ್ಯತೆಯನ್ನು ಗಮನಿಸಿದರೆ, 20ನೆಯ ಶತಮಾನದ ಕೊನೆಯ ಹೊತ್ತಿಗೆ ಅದು ಭರಾಟೆಯಿಂದ ಬೆಳೆಯುತ್ತಿರುವುದನ್ನು ಗಮನಿಸಬಹುದಾಗಿದೆ. 16–17ನೆಯ ಶತಮಾನದಲ್ಲಿ ಜೀವಿಸಿದ್ದ ಕನಕದಾಸರು ಆನಂತರ ಒಂದೆರಡು ಶತಮಾನಗಳ ಅವಧಿಯಲ್ಲಿ ಒಂದು ಬಗೆಯ ಅಜ್ಞಾತ ಸ್ಥಿತಿಯಲ್ಲಿ ಇದ್ದುದನ್ನೂ ನಾವು ಗಮನಿಸಬೇಕು. ಅದಕ್ಕಿರುವ ಸರಳ ಕಾರಣವನ್ನು ಊಹಿಸಿ ಹೀಗೆ ಹೇಳಬಹುದೆಂದು ಕಾಣುತ್ತದೆ: 16–17ನೆಯ ಶತಮಾನದಲ್ಲಿ ಸಕ್ರಿಯವಾಗಿದ್ದ ಹರಿದಾಸ ಪಂಥ ಎಂದು ಗುರುತಿಸಲ್ಪಟ್ಟಿರುವ ಭಕ್ತಿ ಚಳವಳಿಯನ್ನು ಒಟ್ಟಾರೆಯಾಗಿ ಶ್ರೀವೈಷ್ಣವ ಹಾಗೂ ಮಾಧ್ವ ಪಂಥಗಳ ಉಪಾಂಗವೆಂಬಂತೆ ಪರಿಗಣಿಸಿದ್ದು, ಈ ಬಗೆಯ ಪಂಥದಲ್ಲಿ ಇದ್ದ ಒಬ್ಬ ಕೀರ್ತನಾಕಾರನಾಗಿ ಮಾತ್ರ ಕನಕದಾಸರನ್ನು ಪರಿಗಣನೆಗೆ ತೆಗೆದುಕೊಂಡದ್ದು ಒಂದು ಮುಖ್ಯ ಕಾರಣ. 16–17ನೆಯ

ಶತಮಾನದಲ್ಲಿ ಹರಿದಾಸ ಪಂಥ ಸಕ್ರಿಯವಾಗಿದ್ದ ಕಾಲಘಟ್ಟದಲ್ಲಿ ಅದಕ್ಕೆ ಬೆಂಬಲವಾಗಿ ನಿಂತ ಸಮುದಾಯಗಳು ಹಲವಿರಬಹುದಾದರೂ, ನಂತರದಲ್ಲಿ ಅವು ವೈದಿಕ ಮತಪಂಥಗಳಾಗಿರುವ ಶ್ರೀವೈಷ್ಣವ ಮತ್ತು ಮಾಧ್ವ ಅನುಯಾಯಿಗಳಲ್ಲಿ ಹೆಚ್ಚೂ ಕಮ್ಮಿ ತನ್ನ ನೆಲೆಯನ್ನು ಕಂಡುಕೊಂಡಿದ್ದು ಎರಡನೆಯ ಕಾರಣ.

ಆ ಪಂಥಗಳ ಹಿನ್ನೆಲೆಯನ್ನು ನೋಡುವುದಾದರೆ ಅಲ್ಲಿ ಮತಾಚಾರ್ಯರುಗಳಿಗೆ ಪ್ರಥಮ ಪ್ರಾಶಸ್ತ್ಯ ಮತ್ತು ಮಹತ್ವ. ಅದನ್ನೊಂದು ಮತಪಂಥ ದರ್ಶನವಾಗಿ ಪರಿಭಾವಿಸುವುದರಿಂದ ಅದರಲ್ಲಿ ಇರುವ ತತ್ವಶಾಸ್ತ್ರೀಯ ಪ್ರಮೇಯಗಳು, ಅವುಗಳ ಭಾಷ್ಯಕಾರರು, ಟೀಕುದಾರರಿಗೆ ಮೊದಲ ಮಹತ್ವ, ಹೆಚ್ಚೆಂದರೆ ದಾಸರುಗಳನ್ನ ಪಂಥ ಪ್ರಚಾರಕರೆಂಬ ನೆಲೆಯಲ್ಲಿ ಮಾತ್ರವೇ ಪರಿಗಾಣಿಸಿದ್ದು ಕಂಡುಬರುತ್ತದೆ.

ಹರಿದಾಸ ಪಂಥವನ್ನು ಶ್ರೀವೈಷ್ಣವ ಹಾಗೂ ಮಾಧ್ವ ಮತಪಂಥಗಳ ಅಂಗವಾಗಿ ಮಾತ್ರವೇ ಗಮನಿಸದೆ, ಅದೇ ಕಾಲಘಟ್ಟದಲ್ಲಿ ಶೂದ್ರ ಸಮುದಾಯಗಳ ನಡುವೆ ಹುಟ್ಟಿ ಬಂದ ಆಧ್ಯಾತ್ಮಿಕ ಹಾಗೂ ಧಾರ್ಮಿಕ ಮೇಲ್ಮುಖ ಚಲನೆಯ ಪ್ರಕ್ರಿಯೆಯ ಭಾಗವಾಗಿ ನೋಡಿದರೆ ಅದರ ಕೇಂದ್ರ ಲಕ್ಷ್ಯ ಆಗ ವ್ಯಾಸರಾಯರಿಂದ, ತಾತಾಚಾರ್ಯರಿಂದ ಬದಲುಗೊಂಡು ಅದು ಕನಕ ಪುರಂದರರ ಕಡೆಗೆ ಬಂದು ನಿಲ್ಲುತ್ತದೆ. ಈ ಮೊದಲು ಇಂತಹ ಬಗೆಯ ದೇಸಿ ಸಾಂಸ್ಕೃತಿಕ ಆಂದೋಲನಗಳ ಕುರಿತು ಅಷ್ಟು ನಿಗಾ ಮಾಡಿದ್ದು ಅಥವಾ ಅರ್ಥ ಮಾಡಿಕೊಳ್ಳಲು ಎಡಪಂಥೀಯ ಬುದ್ಧಿಜೀವಿಗಳು ಪ್ರಯತ್ನಿಸಿದ್ದು ಬಹಳ ಕಡಿಮೆ. ಪ್ರಪಂಚದ ಬೇರೆ ಭೂ ಖಂಡಗಳಲ್ಲಿ ಆರಂಭಗೊಂಡ ನಿರ್ಲಕ್ಷಿತ ನೆಲೆಗಳ ಸಮಾಜೋ ಸಾಂಸ್ಕೃತಿಕ ಅಧ್ಯಯನಗಳ ಪ್ರೇರಣೆಯಿಂದ ಕರ್ನಾಟಕದಲ್ಲೂ ಆ ಬಗೆಯ ಅಧ್ಯಯನದ ಒಲವುಗಳು ಆರಂಭಗೊಂಡವು. ಈ ಹಿನ್ನೆಲೆಯಲ್ಲಿಯೇ ಭಕ್ತರಾಗಿ, ದಾಸರಾಗಿ, ಕೀರ್ತನಕಾರರಾಗಿ, ನಂತರ ನಳಚರಿತ್ರೆ, ಹರಿಭಕ್ತಿಸಾರ ಹಾಗೂ ರಾಮಧಾನ್ಯ ಚರಿತೆಗಳ ಕವಿಯಾಗಿ, ನಂತರದಲ್ಲಿ ದಾರ್ಶನಿಕ ಸಂತರಾಗಿ, ಜಾತಿ ಶ್ರೇಣೀಕರಣದ ಟೀಕಾಕಾರರಾಗಿ ಹಂತಹಂತವಾಗಿ ಕನಕದಾಸರು ಅತ್ಯಂತ ಸೂಕ್ತ ರೀತಿಯಲ್ಲಿ ನಮ್ಮ ನಡುವೆ ಅನಾವರಣಗೊಳ್ಳುತ್ತಾ ನಡೆದಿದ್ದಾರೆ.

ಹೀಗೆ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಶರಣ ಚಳವಳಿಯ ನಂತರ ಮೂಡಿ ಬಂದ ಮತ್ತೊಬ್ಬ ಜನಮುಖೀ ದಾರ್ಶನಿಕರಾಗಿ, ಸಮಾನತಾ ಸಂಸ್ಕೃತಿಯ ಪ್ರತಿಪಾದಕರಾಗಿ, ಹರಿದಾಸ ಪಂಥದ ಆವರಣದ ಒಳಗೆ ಕಂಡು ಬಂದಾಗಲೂ ಅದರಿಂದ ಹೊರಗೆ ನಿಂತ ಸ್ವತಂತ್ರ ಚೈತನ್ಯದವರಾಗಿ ಕನಕದಾಸರು ನಮಗೀಗ ದರುಶನ ಕೊಟ್ಟಿದ್ದಾರೆ.

ಕನಕದಾಸರು ತಮ್ಮ ಬದುಕು–ಬರಹ ಮತ್ತು ಕನಸುಗಳಿಂದಾಗಿ ಜನಮುಖೀ ಚಿಂತನಾ ನೆಲೆಗಳ ನಡುವೆ ವಿಶಿಷ್ಟ ಸಾಧನೆಯ ಸಂತರಾಗಿ ನಿಂತಿದ್ದಾರೆ. ಆ ಕಾಲಘಟ್ಟದ ಪರಿಪ್ರೇಕ್ಷ್ಯದಲ್ಲಿಟ್ಟು ಹೇಳುವುದಾದರೆ ಅಂತಹ ಸಾಧ್ಯತೆ ಇದ್ದದ್ದು ಅವರೊಬ್ಬರಿಗೆ ಮಾತ್ರವೇ ಎಂದರೂ ವಿಪರೀತದ ಮಾತಾಗಲಾರದು. ಇದು ನಾವು ಇನ್ನೂ ಚೆನ್ನಾಗಿ ಅರ್ಥೈಸಿಕೊಳ್ಳಬೇಕಾದ ವಲಯವಾಗಿಯೇ ಉಳಿದಿದೆ. ಕರ್ನಾಟಕದ ಜಾತಿ ಶ್ರೇಣೀಕರಣ ವಿರೋಧಿ ಪರಂಪರೆ ಹಾಗೂ ಪಂಪನಿಂದ ಕುವೆಂಪುವರೆಗೂ, ಆನಂತರದ ನಮ್ಮವರೆಗೂ ಜನಸಂಸ್ಕೃತಿ ರೂಪಿಸಿದ ಉತ್ಕೃಷ್ಟ ವ್ಯಕ್ತಿತ್ವಗಳಲ್ಲಿ ಕನಕದಾಸರಿಗೆ ಒಂದು ಅನನ್ಯ ಸ್ಥಾನವಿದೆ. ಈ ಅಂಶವನ್ನು ಈ ಮೂರೂ ಚಿಂತನಾ ಹಾಗೂ ಸಂವಾದ ಗೋಷ್ಠಿಗಳಲ್ಲಿ ಮಂಡಿತವಾಗಿರುವ ಬರಹಗಳು ಪ್ರತಿಪಾದಿಸುತ್ತಿವೆ. ದಾಸನಾಗುವುದೆಂದರೆ ದೈನ್ಯತೆಯ ಪ್ರತಿಪಾದನೆಯಲ್ಲ, ಒಂದು ಸರ್ವೋನ್ನತ ಲೌಕಿಕ ಸ್ವಾತಂತ್ರ್ಯದ ಪ್ರತಿಪಾದನೆ. ಭಕ್ತಿ ಪಂಥದಲ್ಲಿ ದೈವವೆನ್ನುವುದು ಧಣಿಯಲ್ಲ. ಸಖ, ಸಂರಕ್ಷಕ, ಕೆಲವು ಸಲ ಸೇವಕ ಎನ್ನುವಂತಹ ಮಾನವೀಯ ಪರಿಗಣನೆಗಳ ತತ್ವ. ಇದನ್ನು ನಿದರ್ಶಿಸಲು ಶರಣ ವಚನಕಾರರಂತೆಯೇ ಆನಂತರದ ಮೂರು ಶತಮಾನಗಳ ನಂತರ ಮೂಡಿಬಂದ ಅರೆಮೈ ಉಡುಪಿನ, ಬರಿಗಾಲ ಬೌದ್ಧ ಭಿಕ್ಕು ಮಾದರಿಯ ಸಂಚಾರಿ ದಾರ್ಶನಿಕ, ಕವಿ, ಸಂತ ಕನಕದಾಸರು ಒಂದು ಮಾದರಿಯನ್ನು ಒದಗಿಸುತ್ತಿದ್ದಾರೆ.

ಹರಿದಾಸ ಪಂಥದ ಭಕ್ತನಾಗಿ ಕಾಣಿಸಲ್ಪಟ್ಟ ಕನಕದಾಸರು ಕವಿಯಾಗಿ, ಸಂತಶ್ರೇಷ್ಠರಾಗಿ, ದಾರ್ಶನಿಕರಾಗಿ ಅನಾವರಣಗೊಳ್ಳುತ್ತಾ ಹೋದ ಕ್ರಮದಲ್ಲಿಯೇ, 'ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೇ' ಎನ್ನುವ ಭಕ್ತಿ ಪರಾಕಾಷ್ಠತೆ ಮತ್ತು ಪವಾಡಗಳ ಪ್ರಭಾವಳಿಯ ಸಮೇತ ಆತ್ಮ ಯಾವ ಕುಲ, ಜೀವ ಯಾವ ಕುಲ ಎಂದು ಸಾರಬಲ್ಲ ದಾರ್ಶನಿಕರಾಗಿ ನಮ್ಮೆದುರು ಪ್ರಸ್ತುತಗೊಂಡಿದ್ದಾರೆ. ಕೀರ್ತನೆಗಳು ಹಾಗೂ ಮುಂಡಿಗೆಗಳ ನೆಲೆಯಲ್ಲಿ ಅನುಭಾವಿಯಾಗಿ ಕಂಡುಬರುವ ಕನಕದಾಸರು ಅದನ್ನು ಮೀರಿ 'ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ' ಎಂಬ ದಿಟ್ಟ ಸತ್ಯ ಪ್ರತಿಪಾದಕರಾಗಿ ಅವತರಿಸಿದ್ದಾರೆ. 'ನಳ ಚರಿತ್ರೆ'ಯಂತಹ ಉತ್ತಮ ಕಾವ್ಯ ರಚನೆ ಮಾಡಿದ ಸಾಧನೆಗಿಂತಲೂ 'ರಾಮಧಾನ್ಯಚರಿತೆ' ಎಂಬ ಪ್ರಖರ ಕಾವ್ಯದ ಮುಖಾಂತರ 'ಶ್ರೀಸಾಮಾನ್ಯನೇ ಭಗವನ್ ಮಾನ್ಯಂ' ಎಂಬ ನಿಲುವನ್ನು ಮನಗಾಣಿಸಿದ ಕವಿಯಾಗಿ ದಲಿತ ಬಂಡಾಯ ಸಾಹಿತಿಗಳ ಸಂವೇದನೆಗೆ ಒಬ್ಬ ಪೂರ್ವಸೂರಿಯಾಗಿ ಬೆಳಗುತ್ತಿದ್ದಾರೆ.

ಇಂತಹ ಬಹುಮುಖೀ ಪವಾಡಸದೃಶ ಬದುಕಿನ ಸಂತ ದಾರ್ಶನಿಕ ಕವಿ ಇಂದಿನ ತಲೆಮಾರಿನ ವಿದ್ವಜ್ಜನರ ನಡುವೆ ಜಿಜ್ಞಾಸೆಗೊಳಪಡುತ್ತಿರುವ ಕ್ರಮ ಹಾಗೂ ಸತ್ಯಶೋಧನೆಗಳಿಗೆ ಕಾರಣವಾಗುತ್ತಿರುವ ವಿಧಾನ ಹೇಗಿದೆ ಎಂಬುದನ್ನು ಗ್ರಹಿಸಲು ಈ ಕೃತಿಯಲ್ಲಿರುವ ಹಲವಾರು ಲೇಖನಗಳು ಕೈ ದೀವಿಗೆಯಂತಿವೆ. ಇದು ನಿಂತ ನಿಲುವಿನ ಮಾತಲ್ಲ; ಹೊರಟ ಹಾದಿಯ ಹುಡುಕಾಟ. ಈ ಹುಡುಕುವಿಕೆಗಳು ನಮ್ಮ ಕಾಲಘಟ್ಟದ ಸಾಂಸ್ಕೃತಿಕ ರಾಜಕಾರಣದ ಪರಿಗಳನ್ನು, ಹಲವು ವ್ಯೂಹಾತಾಂತ್ರಿಕ ನಡೆಗಳನ್ನು ನಮ್ಮ ಗಮನಕ್ಕೆ ತರಬಯಸುತ್ತಿವೆ.

ಇಂತಹ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ತಮ್ಮ ಅಮೂಲ್ಯ ಚಿಂತನೆಗಳಿಂದ 'ಕನಕ' ಎಂಬ ಚಿನ್ನವನ್ನು ಒರೆಗೆ ಹಚ್ಚಿ ಜನರ ಮುಂದಿಡುತ್ತಿರುವ ಲೋಹ ಪರೀಕ್ಷಕರಂತಿರುವ ವಿದ್ವಾಂಸರು ಹಾಗೂ ಈ ಬಗೆಯ ಹಲವು ಕಾರ್ಯಕ್ರಮಗಳನ್ನು ಸಂಘಟಿಸಲು ಅಹರ್ನಿಶಿ ಉತ್ಸಾಹದಿಂದ ಶ್ರಮಿಸುತ್ತಿರುವ ನಮ್ಮ ಪ್ರೀತಿಯ ಚಿರತರುಣ, ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರದ

ಸಮನ್ವಯಾಧಿಕಾರಿ ಕಾ ತ ಚಿಕ್ಕಣ್ಣನವರು ಇವರೆಲ್ಲರಿಗೆ ಈ ಎಲ್ಲಾ ಅರ್ಥಪೂರ್ಣ ಪ್ರಕ್ರಿಯೆಗಳಿಗಾಗಿ ನಮ್ಮ ಅಭಿನಂದನೆಗಳು ಸಲ್ಲಬೇಕಿವೆ.

**–ಡಾ. ಬಂಜಗೆರೆ ಜಯಪ್ರಕಾಶ**

## ಪರಿವಿಡಿ

**ಬೆನ್ನುಡಿ**

ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರವು ಕನಕದಾಸರ ಜೀವನದರ್ಶನ ಮತ್ತು ಅವರ ಕಾವ್ಯ–ಕೀರ್ತನೆಗಳ ಕುರಿತು ಅಧ್ಯಯನ, ಸಂಶೋಧನೆ, ಪ್ರಕಟಣೆ ಮತ್ತು ಪ್ರಸಾರ ಕಾರ್ಯಗಳನ್ನು ಕೈಗೆತ್ತಿಕೊಂಡಿದೆ. ಈ ಬಗೆಯ ಕಾರ್ಯಾಧ್ಯಯನಗಳಿಗೆ ಯುವ ಸಮುದಾಯವನ್ನು ತೊಡಗಿಸಿಕೊಳ್ಳುವುದು ಇದರ ಆಶಯವಾಗಿದೆ. ಈ ನೆಲೆಯಲ್ಲಿ ಹೊಸ ಹೊಸ ದೃಷ್ಟಿಕೋನದಿಂದ ಅಧ್ಯಯನಶೀಲ ವಿದ್ವಾಂಸ–ಸಂಶೋಧನಾರ್ಥಿಗಳಿಗೆ ಫೆಲೋಶಿಪ್ ನೀಡಿಕೆ, ಅಧ್ಯಯನಗಳಿಗೆ ಅನುದಾನ, ರಾಜ್ಯ–ರಾಷ್ಟ್ರಮಟ್ಟದಲ್ಲಿ ವಿಚಾರ ಸಂಕಿರಣ–ಸಂವಾದಗೋಷ್ಠಿಗಳ ಏರ್ಪಾಟು, ವಿವಿಧ ಮಾಧ್ಯಮಗಳಲ್ಲಿ ಕನಕದಾಸರ ತತ್ತ್ವಾದರ್ಶಗಳ ಪ್ರದರ್ಶನ–ಪ್ರಸಾರಕಾರ್ಯ, ವಿವಿಧ ಭಾಷೆಗಳಿಗೆ ಕನಕದಾಸರ ಸಮಗ್ರ ಸಾಹಿತ್ಯ ಅನುವಾದ, ತೌಲನಿಕ ಅಧ್ಯಯನದ ಹಿನ್ನೆಲೆಯಲ್ಲಿ ಕಾರ್ಯಕ್ರಮಗಳು, ಕರ್ನಾಟಕ ತತ್ವಪದಕಾರರ ಸಮಗ್ರ ಸಾಹಿತ್ಯ ಪ್ರಕಟಣೆ, ಯುವಜನ–ವಿದ್ಯಾರ್ಥಿ ಸಮುದಾಯಕ್ಕಾಗಿ ಕನಕ ಸಂಸ್ಕೃತಿ ಕಮ್ಮಟ–ರಸಗ್ರಹಣ ಶಿಬಿರಗಳ ಸಂಘಟನೆ, ಹಿರಿಯ ಹಾಗೂ ಯುವ ವಿದ್ವಾಂಸರಿಗೆ ಪುರಸ್ಕಾರ ಮುಂತಾದ ಹಲವಾರು ರಚನಾತ್ಮಕ ಯೋಜನೆಗಳನ್ನು ರೂಪಿಸಿಕೊಂಡು ಜಾರಿಗೊಳಿಸುತ್ತಿದೆ.

ಕನಕದಾಸರನ್ನು ಕುರಿತು ಪ್ರಸ್ತುತ ಸನ್ನಿವೇಶದಲ್ಲಿ ಅರಿಯಬೇಕಾದ ಅಗತ್ಯದ ಉದ್ದೇಶದಿಂದ ಏರ್ಪಡಿಸಿದ್ದ ಸಂಕಿರಣಗಳಲ್ಲಿ ಮಂಡಿಸಲಾದ ಪ್ರಬಂಧಗಳ ಗುಚ್ಛ ಕನಕ ಮರುದರ್ಶನ. ಈ ಪ್ರಬಂಧ ಸಂಕಲನವನ್ನು ಡಾ. ಬಂಜಗೆರೆ ಜಯಪ್ರಕಾಶ್‌ರವರು ಸಂಪಾದಿಸಿದ್ದಾರೆ. ಪ್ರಸ್ತುತ ಸಾಹಿತ್ಯಭ್ಯಾಸಿಗಳಿಗೆ ಆಕರ ಕೃತಿಯಾಗಬೇಕೆಂಬ ಸದುದ್ದೇಶದಿಂದ ಅಧ್ಯಯನ ಕೇಂದ್ರವು ಕೃತಿಯನ್ನು ಪ್ರಕಟಿಸುತ್ತಿದೆ.

## ಕವಲು – ಒಂದು

## ಕನಕ : ಮರುದರ್ಶನದ ಆಯಾಮಗಳು

1. **ಪ್ರಸ್ತಾವನೆ**
2. **ಉದ್ಘಾಟನಾ ನುಡಿ**
3. **ಆಶಯ ನುಡಿ**
4. **ಕನಕ ಕಂಡರಿಸಿದ ಜೀವನ ಗ್ರಹಿಕೆಗಳು**
5. **ಸಂವಾದ** – 1
6. **ಕನಕ : ಭಕ್ತಿಯ ವಿಭಿನ್ನ ನೆಲೆಗಳು**
7. **ಸಂವಾದ** – 2
8. **ಕನಕರ ಪರಿಸರ ಸ್ಪಂದನ**
9. **ಸಂವಾದ** – 3

## ಸ್ವಾಗತ ಹಾಗೂ ಪ್ರಸ್ತಾವನೆ

**ಕಾ ತ ಚಿಕ್ಕಣ್ಣ**

ಮೊದಲ ಕಾರ್ಯಕ್ರಮ ಸಾಂಪ್ರದಾಯಿಕ ವಿಧಾನದಲ್ಲಿ ಆಗಬಾರದೆಂಬ ಒಂದು ಉದ್ದೇಶದಿಂದಲೇ ಈ ಕೇಂದ್ರದ ಕಾರ್ಯಕ್ರಮಗಳು, ಅದರ ನಡೆ, ಹೇಗಿರಬೇಕು, ಎತ್ತ ಸಾಗಬೇಕು ಎಂಬ ಬಗ್ಗೆ ಕ್ಷೇತ್ರದಲ್ಲಿ ತೊಡಗಿರುವ ಮತ್ತು ಚಿಂತನೆ ಮಾಡಿರುವಂಥ ವಿದ್ವಾಂಸರನ್ನು ಕರೆದು ಚರ್ಚೆ, ಸಂವಾದವನ್ನು ಮಾಡಿ ಆ ಮೂಲಕ ಇನ್ನೊಂದಷ್ಟು, ಅಂದರೆ ಹಂಡ್ರೆಡ್ ಪರ್‌ಸೆಂಟ್ ಇಷ್ಟೇ, ಹೀಗೇ ಮಾಡ್ತೀವಿ ಅಂತ ಹೇಳಲಿಕ್ಕಾಗೋಲ್ಲ, ಅದೊಂದು ರೀತಿಯ ಪರಿಶೀಲನೆಗೆ ಮತ್ತು ನಮ್ಮ ಕಾಲ ಕಾಲಕ್ಕೆ ಅದು ಬದಲಾಗೋ ಸಾಧ್ಯತೆಗಳಿದ್ದೇ ಇರ್ತವೆ; ಯಾವ ರೀತಿ ಸಾಗಬೇಕು ಅನ್ನೋದರ ಬಗ್ಗೆ ಮತ್ತು ಈ ನಾಲ್ಕು ವಿಷಯಗಳನ್ನಿಟ್ಟುಕೊಂಡು ಚರ್ಚೆ ಮಾಡೋದರ ಮೂಲಕ ಇದರ ವ್ಯಾಪ್ತಿಯನ್ನು ವಿಸ್ತರಿಸಲಿಕ್ಕೆ ಸಾಧ್ಯಾನಾ ಅಂತ ನೋಡಲು ಮಾಡಿದ ಚಿಕ್ಕ ಪ್ರಯತ್ನ ಇವತ್ತಿನ ಈ ಚಿಂತನಾ ಗೋಷ್ಠಿ. ಈ ಗೋಷ್ಠಿಗೆ ಬಂದು ನಮ್ಮ ಆಶಯಗಳ ಸಂಬಂಧದಲ್ಲಿ ಮತ್ತು ಅದರ ಹಿನ್ನೆಲೆಯಲ್ಲಿ ತಾವೊಂದಷ್ಟು ಮಾತಾಡಬೇಕು ಅಂತ ಹೇಳಿ, ಬಹುಶಃ ಇವತ್ತು ನಾವು ತುಂಬ ಹೆಮ್ಮೆಯಿಂದ, ತುಂಬ ಆತ್ಮ ವಿಶ್ವಾಸದಿಂದ ಹೇಳಿಕೊಳ್ಳುವಂಥ ಭಾಷೆ ಮತ್ತು ಸಂಸ್ಕೃತಿಯ ವಿಷಯದ ವಿದ್ವಾಂಸರಾದ ಡಾ. ಕೆ.ವಿ.ನಾರಾಯಣ ಅವರನ್ನು ಕೇಳಿಕೊಂಡಾಗ ಅವರು ಖಂಡಿತವಾಗಿ ಪ್ರೀತಿಯಿಂದ ನಾನು ಬರ್ತೀನಿ ಅಂತ ಹೇಳಿ ಇಲ್ಲಿಗೆ ಬಂದಿದ್ದಾರೆ. ಅವರಿಗೆ ನಾನು ನಮ್ಮ ಅಧ್ಯಯನ ಕೇಂದ್ರದ ಪರವಾಗಿ ಹಾಗೂ ನಿಮ್ಮೆಲ್ಲರ ಪರವಾಗಿ ಹಾರ್ದಿಕವಾದ ಸ್ವಾಗತವನ್ನು ಬಯಸ್ತಿದ್ದೇನೆ. ಇವತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯುಕ್ತರಾದ ಶ್ರೀ ಕೆ.ಆರ್. ರಾಮಕೃಷ್ಣ ಅವರು ಬರಬೇಕಾಗಿತ್ತು. ಅವರು ತುರ್ತಾಗಿ ಸರ್ಕಾರದ ಸೂಚನೆ ಮೇರೆಗೆ ಬೇರೆ ಕಡೆ ಹೋಗಿದ್ದಾರೆ. ಅವರನ್ನು ಅಧ್ಯಕ್ಷತೆ ವಹಿಸಿ ಎಂದು ಕೇಳಿದ್ದೋ, ಕಾರಣ ಇಷ್ಟೇ ಅವರು ಕೇವಲ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯುಕ್ತರು ಅಲ್ಲ, ಇಡೀ ಅಧ್ಯಯನ ಕೇಂದ್ರದ ಅಧ್ಯಕ್ಷರೂ ಕೂಡ. ಹಾಗಾಗಿ ಮೊದಲನೆಯ ಕಾರ್ಯಕ್ರಮದಲ್ಲಿ ಭಾಗವಹಿಸಿ, ನಮ್ಮ ವಿದ್ವಾಂಸರು, ಚಿಂತಕರು ಹ್ಯಾಗೆ ನಮಗೆ ಸಲಹೆ ಸೂಚನೆಗಳನ್ನು ಕೊಡುತ್ತಾರೆ ಅನ್ನೋದನ್ನ ಗಮನಿಸುವುದಕ್ಕಾಗಿ ಈ ಗೋಷ್ಠಿಯಲ್ಲಿ ಭಾಗವಹಿಸಬೇಕು ಅಂತ ಹೇಳಿದ್ದಕ್ಕೆ ಬರ್ತೀನಿ ಅಂತ ಹೇಳಿದ್ದರು. ಆದರೆ ಅವರಿಗೆ ಬರಲಿಕ್ಕಾಗಲಿಲ್ಲ. ಜೊತೆಗೆ ಈ ಗೋಷ್ಠಿಯಲ್ಲಿ ಏನು ನಾವು ಮಾತಾಡ್ತೀವಿ ಮುಂದೆ, ನಾಲ್ಕು ಜನ ವಿಷಯವನ್ನು ಮಂಡಿಸುತ್ತಾರೆ, ಟಿಪ್ಪಣಿ ರೂಪದಲ್ಲಿ ಅದಾದ ಮೇಲೆ ತಾವೆಲ್ಲ ಚರ್ಚೆ ಮಾಡ್ತೀರಿ. ಅವರು ಮಂಡಿಸುವ ವಿಷಯ ಮತ್ತು ಅದಕ್ಕೆ ಪೂರಕವಾದಂತೆ ಚರ್ಚೆಗಳೇನಿರ್ತಾವಲ್ಲ ಆ ಚರ್ಚೆ ಎಲ್ಲವನ್ನು ಕೂಡ ನಾವು ದಾಖಲೆ ಮಾಡ್ಬೇಕು ಅಂತ ಹೇಳಿ ನಾವು ಆಸೆ ಪಟ್ಟಿದ್ದೇವೆ. ಹಾಗಾಗಿ ಇದನ್ನೆಲ್ಲ ಈ ತರದ ಸ್ವರೂಪಕ್ಕಿಳಿಸಿ ಕೊಡಿ ಅಂತ ಹೇಳಿ ಮತ್ತು ಈ ಗೋಷ್ಠಿಯನ್ನು ಅಥವಾ ಈ ಸಂವಾದ ಕಾರ್ಯಕ್ರಮವನ್ನು ನಡೆಸಿಕೊಡಿ ಹಾಗೂ ನಮ್ಮ ಜೊತೆಗಿರಿ ಎಂದು ವಿನಂತಿಸಿಕೊಂಡಾಗ ಡಾ. ಬಂಜಗೆರೆ ಜಯಪ್ರಕಾಶ್ ಬರ್ತೀನಿ ಅಂತ ಹೇಳಿ ಬಂದಿದ್ದಾರೆ, ಅವರಿಗೂ ಕೂಡ ನಾನು ಕೇಂದ್ರದ ಪರವಾಗಿ ಸ್ವಾಗತವನ್ನು ಬಯಸ್ತಾ ಇದ್ದೀನಿ.

ಸ್ನೇಹಿತರೇ ಈ ಅಧ್ಯಯನ ಕೇಂದ್ರದ ಸ್ಥೂಲ ಆಶಯವನ್ನು ಎರಡು ಮಾತುಗಳಲ್ಲಿ ಹೇಳೋದಕ್ಕೆ ಬಯಸ್ತೀನಿ. ಅದೂ ಕೂಡ ನಮ್ಮ ಚರ್ಚೆಗೆ ಒಳಪಡಬಹುದು ಅನ್ನೋ ಕಾರಣಕ್ಕೋಸ್ಕರ; ಒಂದು, ಕನಕದಾಸರ ಸಾಹಿತ್ಯ, ಬದುಕು, ಸಂದೇಶ ಅಂದ್ರೆ ಈ ಮಾನವ ಕುಲಕ್ಕೆ ಕೊಟ್ಟಂತಹ ಸಂದೇಶ ಇರಬಹುದು ಮತ್ತೆ ನಾವು ವಿಸ್ತರಿಸಿಕೊಳ್ಳೋದಾದ್ರೆ ಸಾಮಾಜಿಕ, ಧಾರ್ಮಿಕ, ಇತ್ಯಾದಿ ಇತ್ಯಾದಿ ಜೊತೆಗೆ ಕನಕದಾಸರ ಸಮಕಾಲೀನ ಸಂತರು ರಾಷ್ಟ್ರ ಮಟ್ಟದಲ್ಲಿರಬಹುದು, ಅದರಾಚೆ ಇರಬಹುದು, ಹಾಗೆ ಅವರ ಜೊತೆ ಇವರನ್ನು ಇಟ್ಟು ನೋಡುವ ಒಂದು ಬಗೆ ಕೂಡ ಆಗಿರಬಹುದು, ಹಾಗಾಗಿ 16ನೆಯ ಶತಮಾನದಲ್ಲಿ ಆವತ್ತಿನ ಆ ಪ್ರಾಬಲ್ಯಕ್ಕೆ ಒಳಪಟ್ಟಿದ್ದಂತಹ, ಕರ್ಮ ಸಿದ್ಧಾಂತಕ್ಕೆ ಒಳಪಟ್ಟಿದ್ದಂತಹ ಅಥವಾ ಅದೇ ತನ್ನ ಪ್ರಮುಖ ಧ್ಯೇಯ ಅಂತ ಭಾವಿಸಿದ್ದಂತಹ ವಿಚಾರಕ್ಕೆ ಒಳಪಟ್ಟಂತಹ ಒಬ್ಬ ಕನಕದಾಸ, ಇಪ್ಪತ್ತೊಂದನೇ ಶತಮಾನದಲ್ಲಿ ಕೂಡ ನಮ್ಮ ಜೊತೆಗೆ ಹ್ಯಾಗೆ ಮಾತಾಡ್ತಾನೆ ಅಂತ, ಮಾತಾಡ್ಲಿಕ್ಕೆ ಸಾಧ್ಯ ಉಂಟು, ಆ ಮಾತು ಎಷ್ಟರ ಮಟ್ಟಿಗೆ ಏನು – ನೆಲಸ್ಪರ್ಶಿ ಯಾಗಿದೆ ಅನ್ನೋ ದಿಕ್ಕಿನಲ್ಲಿ ಚಿಂತನೆ ಮಾಡಲಿಕ್ಕೆ ಸಾಧ್ಯಾನಾ ಅಂತೇಳಿ ಚಿಂತನೆ ಮಾಡುವಂಥಾದ್ದು ಒಂದಾದರೆ, ಈ ಕನಕದಾಸರ ಮತ್ತು ಸಮಕಾಲೀನ ಆಚೆ ಈಚೆ ಇರುವಂತಾದ್ದನ್ನು ಒಂದು comparative study ಮಾಡ್ಲಿಕ್ಕೆ ಸಾಧ್ಯಾನಾ ಅಂತ ಚಿಂತನೆ ಮಾಡ್ತಕ್ಕಂಥಾದು ಒಂದಿದೆ. ಹಾಗೇನೆ ಕನಕದಾಸರನ್ನು ಕನ್ನಡೇತರರಿಗೆ, ಹೊರಗಡೆ ಯವರಿಗೂ ತಲುಪಿಸುವಂಥಾದ್ದು, ಮತ್ತೆ ಅಲ್ಲಿ ಕನಕದಾಸ ತರದ ಭಾವನೆ ಇಟ್ಕೊಂಡು ಚಿಂತನೆ ಮಾಡಿರೋ ಸಂತರಿರಬಹುದು, ಬೇರೆ ತರದವರಿರಬಹುದು ಅವರನ್ನು ಕೂಡ compare ಮಾಡಿ ನಮ್ಮ ಕನ್ನಡಕ್ಕೆ ತರೋದಿರಬಹುದು. ಹೀಗೆ–ಏನಾರೂ ಮಾಡ್ಲಿಕ್ಕಾಗ್ತದಾ ಅಂತ ನೋಡೋ ಉದ್ದೇಶಗಳನ್ನು ಈ ಅಧ್ಯಯನ ಕೇಂದ್ರ ಇರಿಸಿಕೊಂಡಿದೆ. ಜೊತೆಗೆ ಹೀಗೆ ಅಧ್ಯಯನ ಮಾಡುವ, ಸಂಶೋಧನೆ ಮಾಡುವಂತೋರಿಗೆ ಫೆಲೋಶಿಪ್ ಕೊಡುವುದಕ್ಕೂ provission ಮಾಡಿದೆ ಮತ್ತು ಜೊತೆಗೆ ಯುವ ವಿದ್ವಾಂಸರು (40 ವರ್ಷದೊಳಪಟ್ಟು) ಕನಕದಾಸರನ್ನು ನಾನು ಈ ತನಕ ಮಾತಾಡಿದ್ನಲ್ಲ ಅದರ ಬೇರಿಟ್ಟುಕೊಂಡು ಕೆಲಸ ಮಾಡ್ತಕ್ಕಂತಹ ಯುವ ಚಿಂತಕರಿಗೆ, ಬರಹಗಾರರಿಗೆ ಪುರಸ್ಕಾರ ಕೊಡಲಿಕ್ಕೂ ಕೂಡ provission ಮಾಡಿದ್ದಾರೆ.

ಹಾಗಾಗಿ ಸೆಮಿನಾರ್‌ಗಳಿರಬಹುದು, ಅನುವಾದ ಕಾರ್ಯಕ್ರಮಗಳಿರಬಹುದು. ಒಟ್ಟು ಕನಕದಾಸರನ್ನು ಕರ್ನಾಟಕ ಮತ್ತು ಕರ್ನಾಟಕದಿಂದಾಚೆಗೆ ಮುಟ್ಟಿಸುವಂತಾದ್ದು ಮತ್ತೆ ಹಾಗೇನೆ ಈಚೆಗೆ ತರುವಂತಾದ್ದು – ಈ ಹಿನ್ನೆಲೆಯಲ್ಲಿ ಅಧ್ಯಯನ ಕೇಂದ್ರ ಕೆಲಸವನ್ನು ಮಾಡಬೇಕು ಹಾಗೆ ಅಂತೇಳಿ ಅದರ ರಚನೆಯ ಸಂದರ್ಭದಲ್ಲಿ ಕೆಲವು ಧ್ಯೇಯಗಳನ್ನು ಹಾಕಿದ್ದಾರೆ, ಉದ್ದೇಶಗಳನ್ನು ರೂಪಿಸಿದ್ದಾರೆ. ಜೊತೆಗೆ ಅದರಾಚೆಯೂ ಕೂಡ ನಾವು ಮಾಡೋದಿದೆ. ಹಾಗಾಗಿ ಅದರಾಚೆ ಏನು ಮಾಡಬಹುದು ಅನ್ನೋದರ ಬಗ್ಗನೇ ಇವತ್ತಿನ ಈ ಚರ್ಚೆಯ ಕೇಂದ್ರ ಆಗಿದೆ ಅಂತ ನಾನು ಭಾವಿಸಿದ್ದೀನಿ.

ಇವತ್ತಿನ ಸಂವಾದ ಗೋಷ್ಠಿಯಲ್ಲಿ 4 ವಿಷಯಗಳನ್ನು ಚರ್ಚೆಗಿರಿಸಿ ಆ ಮೂಲಕ ನಮ್ಮ ಆಲೋಚನೆಗಳನ್ನು ವಿಸ್ತರಿಸಿಕೊಳ್ಳಬೇಕೆಂದು ನಿರೀಕ್ಷಿಸಲಾಗಿದೆ. 'ಕನಕರು ಕಂಡರಿಸಿದ ಜೀವನ ಗ್ರಹಿಕೆಗಳು', 'ಕನಕ; ಕೃತಿ ಸಂಸ್ಕೃತಿ', 'ಕನಕ; ಭಕ್ತಿ

ವಿಭಿನ್ನ ನೆಲೆಗಳು' ಹಾಗೂ 'ಕನಕರ ಪರಿಸರ ಸ್ಪಂದನ' ಎಂಬ ನಾಲ್ಕು ವಿಷಯಗಳು ಇವಾಗಿವೆ. ಈ ಗೋಷ್ಠಿಯ ಚರ್ಚೆಯನ್ನು ತಾತ್ವಿಕವಾಗಿ ವಿಸ್ತರಿಸುವ ಆಶಯದಿಂದ ಭಾಷೆ, ಸಂಸ್ಕೃತಿಯ ವಿದ್ವಾಂಸರಾದ ಡಾ. ಕೆ.ವಿ.ನಾರಾಯಣ ಅವರನ್ನು ಆಶಯ ನುಡಿಗಳನ್ನು ಆಡಬೇಕೆಂದು ಕೋರಿಕೊಂಡಾಗ ವಿಶ್ವಾಸವಿರಿಸಿ ಬಂದಿದ್ದಾರೆ. ಸಂವಾದದ ವಿಷಯಗಳನ್ನು ಚರ್ಚೆಗೆ ಅನುವಾಗುವ ರೀತಿಯಲ್ಲಿ ಟಿಪ್ಪಣಿ ಮಂಡಿಸಲು ಡಾ. ಮಲ್ಲಿಕಾರ್ಜುನ ಮೇಟಿ, ಡಾ. ಮಾನಕರಿ ಶ್ರೀನಿವಾಸಾಚಾರ್ಯ, ಡಾ. ಕೆ.ವೈ. ನಾರಾಯಣಸ್ವಾಮಿ ಆಗಮಿಸಿದ್ದಾರೆ. 'ಕನಕ; ಕೃತಿ ಸಂಸ್ಕೃತಿ' ಬಗ್ಗೆ ಟಿಪ್ಪಣಿ ಮಂಡಿಸಬೇಕಾದ ಡಾ. ಶಾಮಸುಂದರ ಬಿದರಕುಂದಿ ಬರುತ್ತಿಲ್ಲ. ಆದರೆ ಆ ವಿಷಯ ಕುರಿತಂತೆ ಸಂವಾದಿಸಬಹುದು. ಇಡೀ ಚಿಂತನಾ ಗೋಷ್ಠಿಯ ನಿರ್ವಹಣೆ ಮತ್ತು ಇಲ್ಲಿ ಮೂಡಿಬಂದ ಎಲ್ಲ ಅಭಿಪ್ರಾಯಗಳನ್ನು ದಾಖಲಿಸಿ ಸಂಕಲಿಸಿಕೊಡುವಂತೆ ಸಂಸ್ಕೃತಿ ಚಿಂತಕರಾದ ಡಾ. ಬಂಜಗೆರೆ ಜಯಪ್ರಕಾಶ್ ಅವರನ್ನು ಕೇಳಿಕೊಳ್ಳಲಾಗಿದೆ. ಜೊತೆಗೆ ಸಂವಾದಕ್ಕೆಂದೇ ಈ ದಿಶೆಯಲ್ಲಿ ಗಂಭೀರವಾಗಿ ಚಿಂತನೆ ನಡೆಸಿರುವ ತಾವೆಲ್ಲ ಬಂದಿದ್ದೀರಿ. ಮೊದಲನೆಯದಾಗಿ ತಮಗೆಲ್ಲರಿಗೂ ಹಾರ್ದಿಕ ಸ್ವಾಗತ ಬಯಸುತ್ತೇನೆ.

ಕನಕದಾಸರನ್ನು ಹರಿದಾಸ ಪರಂಪರೆಯಾಗಲೀ, ಕನ್ನಡ ಸಾಹಿತ್ಯ ಚರಿತ್ರಕಾರರಾಗಲೀ, ಒಬ್ಬ ಭಕ್ತನೆಂದು ಮಾತ್ರ ಪ್ರಧಾನವಾಗಿ ಗುರುತಿಸಿದೆ. ಹೌದು– ತಿಮ್ಮಪ್ಪನಾಯಕ ನಾಗಿದ್ದವನು ಭಕ್ತನಾದ ತರುವಾಯವೇ ಕನಕದಾಸನಾದದ್ದು. ಆದರೆ ಕನಕದಾಸ ಭಕ್ತನ ನೆಲೆಯನ್ನು ದಾಟಿ ಒಬ್ಬ ಕನ್ನಡದ ಶ್ರೇಷ್ಠ ಕವಿ ಎಂಬುದನ್ನು ವೈದಿಕ ಪರಂಪರೆಯಾಗಲಿ, ವಿಮರ್ಶಾಲೋಕವಾಗಲಿ ಗಂಭೀರವಾಗಿ ಪರಿಗಣಿಸಿದಂತೆ ಕಾಣಲಿಲ್ಲ. ಇದು ವೈಷ್ಣವ ಧರ್ಮಾನುಯಾಯಿಗಳು ಕಂಡರಿಸಿದ ಬಗೆ. ಆದರೆ ನಾವು ಗಮನಿಸಬೇಕು; ಕನಕರು ಹಲವು ಅಭಿವ್ಯಕ್ತಿಗಳ ಏಕಧಾರೆ. ಭಕ್ತನಾಗಿ, ಸಂತನಾಗಿ, ಕೀರ್ತನಾಕಾರನಾಗಿ, ಕವಿಯಾಗಿ ದಾರ್ಶನಿಕನಾಗಿ, ಮಾನವೀಯ ಮೌಲ್ಯದ ಪ್ರತಿಪಾದಕನಾಗಿ, ಸಮಾಜ ವಿಜ್ಞಾನಿಯಾಗಿ, ಜನಪದರದಲ್ಲಿ ಒಬ್ಬನಾಗಿ ಅಭಿವ್ಯಕ್ತಿಗೊಂಡ ಬಗೆಯೇ ಒಂದು ವಿಶೇಷ. ಅವತ್ತಿನ ಕಾಲಮಾನ ಮತ್ತು ಸಮಾಜದ ಸಾಂಸ್ಕೃತಿಕ ಒತ್ತಡದಿಂದ ಹಲವು ಮುಖಗಳಲ್ಲಿ ಪ್ರಕಟಗೊಂಡ ಕನಕರನ್ನು ಒಬ್ಬ ಭಕ್ತನನ್ನಾಗಿ ವೈಷ್ಣವ ಧರ್ಮಕ್ಕೆ ಜೋಡಿಸುತ್ತಾ ಬಂದ ಲೆಕ್ಕಾಚಾರ ಇವತ್ತಿನ ಚಿಂತನಾಗೋಷ್ಠಿಯ ಚರ್ಚೆಗೂ ಗ್ರಾಸ ಒದಗಿಸಬಹುದು. ಯಾಕೆಂದರೆ ಇಂದಿಗೂ ಸಹಿತ ಕನಕರನ್ನು ವೈಷ್ಣವ ಮತಾವಲಂಬಿಯಾಗಿ, ಅವನ ಕೀರ್ತನೆಗಳನ್ನು ವೈಷ್ಣವ ಭಕ್ತಿ ಪಂಥದ ಪ್ರತಿಪಾದನೆಗಳನ್ನಾಗಿ ನೋಡುವಂತೆ ನಮ್ಮ ಓದು, ಪಠ್ಯಗಳು ಒತ್ತಾಯಿಸುತ್ತವೆ. ಈ ಹಲವು ಕನಕರಲ್ಲಿ 21ನೆಯ ಶತಮಾನದ ಸಾಮಾಜಿಕ, ಧಾರ್ಮಿಕ ಒತ್ತಡದ ಒಳಗೂ, ನಮ್ಮೊಳಗೊಬ್ಬ ಕನಕದಾಸನನ್ನು ಹುಡುಕಿಕೊಳ್ಳಲು ಸಾಧ್ಯವಾಗದಂತಹ ಪರಿಸರ ಸಿದ್ಧ ಮಾದರಿಯ ರೂಪದಲ್ಲಿ ನಿರ್ಮಾಣಗೊಂಡು ಬಿಟ್ಟಿದೆ. ಇಷ್ಟಾಗ್ಯೂ ಕನಕದಾಸರು ಹಿಂದುಳಿದ ವರ್ಗಕ್ಕೆ ಸೇರಿದವರು; ಅಸಹಾಯಕ ಸಮುದಾಯದ ಆತ್ಮಾಭಿಮಾನದ ಸಂಕೇತ ಇತ್ಯಾದಿ ಪ್ರತಿಪಾದನೆಗಳು ಕನಕದಾಸರನ್ನು ಪೂರ್ಣವಾಗಿ ಪರಿಚಯಿಸಲಾರವು.

ಹೀಗಾಗಿ ಕನಕದಾಸರು ನಿರಂತರವಾಗಿ ಕಾಲಧರ್ಮದ ಜೊತೆ ದಾಟುತ್ತಾ ಬಂದ ಸಂಗತಿಗಳು; ಈ ಸಂಗತಿಗಳನ್ನು ಅವರು ಗ್ರಹಿಸಿ ಕಂಡರಿಸಿದ ರೀತಿ ಹರಿಯೇ ಸರ್ವೋತ್ತಮನೆಂದು ಪ್ರತಿಪಾದಿಸುವ ಭಕ್ತಿಯ ಪ್ರತಿಪಾದಕನಾಗಿದ್ದರೂ ಆ ಭಕ್ತಿಸಿದ್ಧಾಂತದ ವಿರೋಧಾಭಾಸಗಳನ್ನು ಪ್ರಖರವಾಗಿ ಪ್ರಕಟಿಸಿ ಭಿನ್ನ ನೆಲೆಯಲ್ಲಿ ತನ್ನ ನಡೆಯನ್ನು ಗುರುತಿಸಿಕೊಂಡ ಬಗೆ; ಈ ಬಗೆಯ ಜೀವನದರ್ಶನ, ಕಾವ್ಯಸತ್ವ ಮತ್ತು ಸಮಾಜಮುಖಿ ಚಿಂತನೆಗಳು ಕನಕದಾಸರಲ್ಲಿ ನೆಲೆಯೂರಿ ಮುನ್ನಡೆಸಲು ಕಾರಣವಾದ ಪರಿಸರ ಸ್ಪಂದನ ಈ ಚಿಂತನಾಗೋಷ್ಠಿಯ ಆಶಯವೇ ಹೊರತು ಇದರ ನಿರ್ದಿಷ್ಟ ಚೌಕಟ್ಟು ಅಲ್ಲ; ಹಾಗಾಗಿ ನಮ್ಮ ಇವತ್ತಿನ ಸಂವಾದ ಮುಕ್ತವಾಗಿ, ತುಂಬ informal ಆಗಿ ನಡೆಯಬೇಕೆಂಬುದು ನನ್ನ ಅಪೇಕ್ಷೆ. ಚರ್ಚೆ ರಚನಾತ್ಮಕವಾಗಿ ಸಾಗಲಿ; ಅದರಿಂದ ಅಧ್ಯಯನ ಕೇಂದ್ರದ ಕಾರ್ಯಕ್ರಮಗಳ ಆಶಯ ಇನ್ನಷ್ಟು ಖಚಿತವಾಗಲಿ ಎಂದು ಆಶಿಸುತ್ತಾ ಮತ್ತೊಮ್ಮೆ ನಿಮ್ಮೆಲ್ಲರನ್ನೂ ಪ್ರೀತಿಯಿಂದ ಸ್ವಾಗತಿಸುತ್ತೇನೆ. ನಮಸ್ಕಾರ.

## ಕನಕದಾಸರು ಒಡ್ಡುವ ಚರ್ಚೆಗಳು

**ಡಾ. ಕೆ.ವಿ. ನಾರಾಯಣ**

ಸ್ನೇಹಿತರೇ, ಕನಕದಾಸ ಅವರ ಹೆಸರಿನಲ್ಲಿ ಕರ್ನಾಟಕ ಸರ್ಕಾರ ಪ್ರಾರಂಭ ಮಾಡಿರ್ತಕ್ಕಂಥ ಈ ಅಧ್ಯಯನ ಮತ್ತು ಸಂಶೋಧನಾ ಕೇಂದ್ರದ ಮೊದಲ ಸಮಾರಂಭದಲ್ಲಿ ಉದ್ಘಾಟಕನಾಗಿ ಭಾಷಣ ಮಾಡಿದ್ದೇನೆ. ಆದ್ದರಿಂದ ಇದು ಮೊದಲನೇ ಉಪನ್ಯಾಸ ಅಂತ ಅಂದ್ಕೋಳ್ಳೋದು ಒಳ್ಳೇದು. ಉಪನ್ಯಾಸಗಳಿಗೆ ಉದ್ಘಾಟನೆ ಅಂತೇನಲ್ಲ. ಅಂದ್ರೆ ನೇರವಾಗಿ ಚರ್ಚೆಗೆ ತೆರೆದಿದೆ ಅಂತ ಹೇಳೋದಕ್ಕೋಸ್ಕರ ಹೇಳ್ತಿದ್ದೀನಿ. ನಾನು ಏನ್ ಮಾತಾಡ್ತಿದೀನಿ ಇದು ಚರ್ಚೆಗೆ ಹೊರತಾದುದಲ್ಲ ಚರ್ಚೆಗೆ ತೆರೆದಿದ್ದು ಅನ್ನೋದನ್ನು ನಿಮ್ಮ ಮುಂದಿಡೋಕೆ ಇಷ್ಟಪಡ್ತೀನಿ.

ಎರಡನೇದು – ಕನಕದಾಸರ ಬಗೆಗೆ ಮಾತಾಡೋದು. ಬಹಳ ಎಚ್ಚರಿಕೆಯಿಂದ ಮಾತಾಡ್ಬೇಕು. ಅಂದ್ರೆ ಎಷ್ಟರ ಮಟ್ಟಿಗೆ ಕನ್ನಡ ಚಿಂತನೆ political correctnessದಾಗಿ ಬಿಟ್ಟಿದೆ ಅಂದ್ರೆ ಅದರಾಚೆಗೆ ಮಾತಾಡ್ಬೇಕಾದ್ರೆ ಬಹಳ ಎಚ್ಚರಿಕೆಯಿಂದಾನೆ ಮಾತಾಡ್ಬೇಕಾಗಿರುತ್ತದೆ. ಬಹಳ ವಿಚಾರಗಳಲ್ಲಿ ಇದು ನಡೀತಾ ಇದೆ; ಪರ–ವಿರೋಧ ಅವುಗಳ ನಡುವೆ ಮೂರನೇ ದಾರಿ ಇರಬಹುದು ಅನ್ನೋ ಕಲ್ಪನೇನೂ ಕೂಡ ಇಲ್ದೆ ಇರುವ ಪ್ರಸಂಗಗಳು ಕೂಡ ನಡೆದಿವೆ. ತೀರಾ ಈಚೆಗೆ ನಡೀತಾ ಇರುವ

ಆರ್.ಕೆ.ನಾರಾಯಣ ಅವರಿಗೆ ಸಂಬಂಧಪಟ್ಟ ಚರ್ಚೆಯನ್ನೆ ಗಮನಿಸಬಹುದು. ಅಂದ್ರೆ ಅದು ಎರಡೇ ಪಕ್ಷಗಳಿರೋಕೆ ಸಾಧ್ಯ, ಮೂರನೇದೊಂದು ಸಾಧ್ಯ ಇದೆ ಅನ್ನೋ ಚಿಂತನೆಗಳು ನಮ್ಮ ತಲೆಯಲ್ಲಿ ಬರ್ತಾ ಇಲ್ಲ. ಪ್ರಜಾಪ್ರಭುತ್ವದಲ್ಲಿ ಆ ಮೂರನೇ ದಾರಿ ಯಾವುದು ಅಂತ ಅನ್ನೋದು ನಾವು ಹುಡುಕೋಕೆ ಹೋಗೋದೇ ಇಲ್ಲ.

ಪರ ಮತ್ತು ವಿರೋಧಗಳ ನೆಲೆಯಲ್ಲೇ ಕೆಲಸ ಮಾಡ್ತಾ ಇರ್ತೀವಿ. ಅದರಿಂದ ಈ ಚೌಕಟ್ಟಿನೊಳಗಡೆ ನಾನು ಕೆಲವು ವಿಚಾರಗಳನ್ನು ನಿಮ್ಮ ಜೊತೆಗೆ ಹಂಚಿಕೊಳ್ಳೋಕೆ ಇಷ್ಟಪಡ್ತೀನಿ. ಚಿಕ್ಕಣ್ಣನವರು ಈ ಅಧ್ಯಯನ ಕೇಂದ್ರ ಹೇಗೆ ಕೆಲಸ ಮಾಡಬೇಕು ಅನ್ನೋದರ ಬಗ್ಗೆ ಕೂಡ ಕೆಲವು ಸಲಹೆ ಸೂಚನೆಗಳು ಬೇಕು ಅಂತ ಅಂದ್ರು. ನಾನು ನೇರವಾಗಿ ಕೊಡ್ತೀನಿ ಅಂತ ಅಲ್ಲ. ನಾವೆಲ್ಲರೂ ಕೂಡಿ ಕೂತು ಮಾತಾಡುವಾಗ ಕೆಲವು ಸೂಚನೆಗಳು ನಿಮಗೆ ಸಿಗಲೂಬಹುದು. ಸಿಗದೇ ಇದ್ರೂನೂ ಅದು ಹುಡುಕಿಕೊಳ್ಳೋಕೆ ಬೇಕಿರೋ ದಾರಿಗಳಾದ್ರೂ ಸಿಗಬಹುದು ಅಂತ ಅಂದ್ಕೊಂಡಿದೀನಿ.

ಕನಕದಾಸರು ಕನ್ನಡ ಜನರ ಒಳಗಡೆ ಸೇರಿ ಹೋಗಿರುವ ಬಗೆ ಇದೆಯಲ್ಲ ಆ ಬಗೆಯಿಂದ ಕನಕದಾಸರನ್ನು ಅಕ್ಷರಗಳಲ್ಲಿ ಹಿಡಿದಿಟ್ಟು Reclaim ಮಾಡೋದಕ್ಕೆ ಪ್ರಾರಂಭ ಮಾಡಿ, ಅವರನ್ನು ಮರಳಿ ಪಡೆಯೋದಕ್ಕೆ 140–150 ವರ್ಷಗಳು ಕಳೆದಿವೆ ಅಂತಿಟ್ಕೊಳ್ಳೋಣ. ಅಂದ್ರೆ 19ನೇ ಶತಮಾನದ ಕೊನೆಯ ಭಾಗದಲ್ಲಿ ಅವರ ಕೆಲವು ಹಾಡುಗಳನ್ನು ಜರ್ಮನ್ ಭಾಷೆಗೆ ಅನುವಾದಿಸಿ ಅವರ ಬಗ್ಗೆ ಟಿಪ್ಪಣಿಯನ್ನು ಬರೆದ ಜರ್ಮನ್ ವಿದ್ವಾಂಸರುಗಳು, ಕಿಟೆಲ್ ಅವರು ಬರೆದಂತಹ ಟಿಪ್ಪಣಿ, 20ನೇ ಶತಮಾನದ ಆರಂಭದಲ್ಲಿ ಕರ್ನಾಟಕದ ಬೇರೆ ಬೇರೆ ಕಡೆಗಳಲ್ಲಿ ಅದರಲ್ಲೂ ಕೂಡ ಉತ್ತರ ಕರ್ನಾಟಕದಲ್ಲಿ ಮತ್ತು ಕರಾವಳಿ ಕರ್ನಾಟಕದಲ್ಲಿ ಕನಕದಾಸರ ಕೀರ್ತನೆಗಳನ್ನು ಸಂಗ್ರಹಿಸುವ, ಪ್ರಕಟಿಸುವ, ಅವಕ್ಕೆ ವ್ಯಾಖ್ಯಾನ ಮಾಡತಕ್ಕಂತಹ ಕೆಲಸಗಳು ಪ್ರಾರಂಭ ವಾದವು. ಒಟ್ಟು ಕನ್ನಡ ಸಾಹಿತ್ಯ ಚರಿತ್ರೆಯೊಳಗೆ ಕನಕದಾಸರನ್ನು place ಮಾಡುವ ಅಥವಾ ಭಕ್ತಿಪಂಥದ ಚೌಕಟ್ಟಿನೊಳಗೆ ಕನಕದಾಸರನ್ನು ಇಟ್ಟು ನೋಡ್ತಕ್ಕಂಥ ಚಿಂತನೆಗಳು 20ನೇ ಶತಮಾನದ ಮೊದಲ ಭಾಗದಿಂದ ಆರಂಭವಾಗಿ ಬೆಳೆದುಕೊಂಡು ಬರ್ತವೆ. ಇಂಗ್ಲಿಷ್‌ನಲ್ಲೂ ಕೂಡ ಕೆಲಸ ನಡೆದಿದೆ. ಕನ್ನಡದಲ್ಲೂ ಕೆಲಸ ನಡೆದುಕೊಂಡು ಬಂದಿದೆ.

20ನೇ ಶತಮಾನದ ಕೊನೆಯ ಭಾಗಕ್ಕೆ ಬಂದ ಮೇಲೆ ಈ 21ನೇ ಶತಮಾನದ ಒಂದು ದಶಕ ಕಳೆದ ಮೇಲೆ ಈಗ Reclaim ಮಾಡುವ, ಈ ಪ್ರಕ್ರಿಯೆ ಹೇಗೆ ನಡೀಬಹುದು ಅಥವಾ ಇಷ್ಟು ದಿವಸಗಳ ಕಾಲ ನಾವು ಏನು ಮಾಡ್ಕೊಂಡು ಬಂದಿದೀವಿ ಅನ್ನೋದನ್ನು ಸ್ವಲ್ಪ ಯೋಚನೆ ಮಾಡೋದಕ್ಕೆ ಅವಕಾಶಗಳಿವೆ ಅಂತ ನಾನು ತಿಳ್ಕೊಂಡಿದೀನಿ.

ಬಹಳ ಮುಖ್ಯವಾಗಿ ಮೂರು ನೆಲೆಗಳಲ್ಲಿ ಅಥವಾ ಮೂರು ದಿಕ್ಕುಗಳಲ್ಲಿ ಕನಕರನ್ನು ಪಡೆದುಕೊಳ್ಳುವ, ಕಟ್ಟಿಕೊಳ್ಳುವ ಕೆಲಸಗಳು ಕನ್ನಡದಲ್ಲಿ ನಡೆದ ಹಾಗೆ ಕಾಣಿಸ್ತವೆ. ಈ ಮೂರು ದಿಕ್ಕುಗಳು ಒಂದು ಇನ್ನೊಂದರ ಮೇಲೆ ಪ್ರಭಾವ ಬೀರಿವೆಯೇ ಒಂದು ಇನ್ನೊಂದರಿಂದ ಸಂಪೂರ್ಣವಾಗಿ ಭಿನ್ನವೇ? ಒಂದು ಇನ್ನೊಂದನ್ನು ವಿರೋಧಿಸುತ್ತದೆಯೇ, ಒಂದು ಇನ್ನೊಂದಕ್ಕೆ ಪೂರಕವಾಗಿದೆಯೇ ಇವೆಲ್ಲವೂ ಕೂಡ ಚರ್ಚೆಗೆ ತೆರೆದಿಟ್ಟ ಸಂಗತಿಗಳು. ಆದರೆ ಈ ಮೂರು ಯಾವುದು? ಅನ್ನೋದನ್ನ ಮೊದಲು ತಿಳ್ಕೊಳ್ಳೋಕೆ ಪ್ರಯತ್ನಪಡೋಣ.

ಮೊದಲ್ನೇದು ಚಾರಿತ್ರಿಕ ನೆಲೆ. ಆ ಚಾರಿತ್ರಿಕ ನೆಲೆಯಲ್ಲಿ ಕನಕದಾಸರನ್ನು ಒಬ್ಬ ವ್ಯಕ್ತಿಯಾಗಿ, ಒಬ್ಬ ಸಂತನಾಗಿ, ಒಬ್ಬ ಕವಿಯಾಗಿ, ಒಂದು ಸಾಮಾಜಿಕ ಹಿನ್ನೆಲೆಯಲ್ಲಿ ಕಟ್ಟುವ ಪ್ರಯತ್ನಗಳನ್ನು ಮಾಡಲಾಗಿದೆ. ಅದು ಹೇಗೆ ನಡ್ಕೊಂಡು ಬಂದಿದೆ ಅನ್ನೋದನ್ನ ನಾವು ಮುಂದೆ ನೋಡೋಣ.

ಎರಡನೆಯ ನೆಲೆ ಜನಪದದ ನೆಲೆ, ಜನಪ್ರಿಯ ನೆಲೆ. ಜನಪ್ರಿಯ ಅನ್ನೋ ಪದವನ್ನು ಹೀನಾರ್ಥದಲ್ಲಿ ಕೆಟ್ಟ ಅರ್ಥದಲ್ಲಿ ಬಳಸ್ತಿಲ್ಲ. ಜನರು ಹೀಗೆ ಕಟ್ತಾ ಇದಾರೆ, ಜನರು ಹೀಗೆ ಕನಕದಾಸರನ್ನು ಕಟ್ಕೊಳ್ಳೋಕೆ ಪ್ರಯತ್ನಪಡ್ತಿದ್ದಾರೆ. ಇದು ನಿಂತ ನೀರಾಗಿಲ್ಲ. ನಿಧಾನವಾಗಿ ಬೆಳೀತಾ, ವಿಸ್ತರಿಸ್ತಾ ಹೋಗಿರಬಹುದು. So ಇದು ನಿರಂತರವಾಗಿ ನಡ್ಕೊಂಡು ಬಂದಿರ್ತಕ್ಕಂಥದು. ಈ ರೀತಿಯಲ್ಲಿ ಕನಕರನ್ನ Reclaim ಮಾಡಿರ್ತಕ್ಕಂಥ ಬಗೆ ಕೂಡ ಇದೆ.

ಮೂರನೇದು, ಕನಕದಾಸರು ವ್ಯಕ್ತಿಯಾಗಿ, ಕನಕರನ್ನ ಕಟ್ಟಿರ್ತಕ್ಕಂಥ ಈ ಜನಪದರ ನೆಲೆಯನ್ನು ಹೊರತುಪಡಿಸಿ, ಅವರ ಭಾಷಿಕ ರಚನೆಗಳ ಮುಖಾಂತರವೇ, ಅವರನ್ನ ಕಂಡುಕೊಳ್ಳುವ ಪ್ರಯತ್ನವನ್ನ ಮಾಡಿರ್ತಕ್ಕಂಥದು. ಅಲ್ಲಿ ಕನಕದಾಸರಿಗಿಂತ ಅವರ ಭಾಷಿಕ ರಚನೆಗಳ ಮುಖಾಂತರ ಕನಕರನ್ನು ಮರುಕಟ್ಟೋಣಕ್ಕೆ ತಂದುಕೊಳ್ಳುವಂಥ ಕೆಲಸಗಳು ನಡೆದಿವೆ.

ಈ ದಿಕ್ಕುಗಳಲ್ಲಿ ನಮ್ಮ ಚಿಂತನೆಗಳು ಹೇಗೆ ನಡೆದಿವೆ ಅನ್ನೋದನ್ನ ಒಂದೊಂದಾಗಿ ನಾನು ನಿಮ್ಮ ಮುಂದೆ ತೆರೆದಿಡೋಕೆ ಪ್ರಯತ್ನಪಡ್ತೀನಿ. ಚಾರಿತ್ರಿಕ ನೆಲೆಯಲ್ಲಿ ಹಲವು ಪ್ರಶ್ನೆಗಳನ್ನು ಎದುರಿಸಲಾಗಿದೆ. ಹಲವು ಗೋಜುಗಳು ಒಳಗೊಂಡಿವೆ ಮತ್ತು ಅವುಗಳು ಪ್ರಶ್ನೆಗಳಾಗಿ, ಗೋಜುಗಳಾಗಿ ಮತ್ತು ಅವುಗಳು ಪರಿಹಾರ ಆಗದೇ ಇರುವ ನೆಲೆಯಲ್ಲಿ ಕೂಡ ಉಳಿದುಕೊಂಡವುಗಳು. ಅಂತಹ ಐದಾರು ಪ್ರಶ್ನೆಗಳು ಹಾಗೇ ಉಳಿದುಕೊಂಡಿವೆ. ಉದಾಹರಣೆಗೆ ಅವರ ಹೆಸರಿನ ಬಗ್ಗೆ. ಹತ್ತು ವರ್ಷದ ಆಸುಪಾಸಿನ ಟಿಪ್ಪಣಿಯಲ್ಲಿ ಅವರ ಹೆಸರು ಕನಕದಾಸ ಇದ್ದಿರಲಾರದು ಅಂತ ಅನ್ನೋ ಒಂದು ಸಂದೇಹವನ್ನು ಮುಂದಿಟ್ಟವರು ಪ್ರೊ. ಕಲಬುರ್ಗಿಯವರು. ಅವರು ಕನಕ ಅನ್ನುವ ಹೆಸರು ಇರಲಾರದು, ಆತನ ಹೆಸರು ಕನ್ನ ಇರಬಹುದು, ಅದಕ್ಕೆ 'ಕ' ಎನ್ನುವ ಒಂದು ತದ್ಧಿತ ಪ್ರತ್ಯಯ ಅಥವಾ ವ್ಯಕ್ತಿನಾಮ ಸೂಚಕವಾಗಿ ಆಮೇಲೆ ದಾಸ ಬಂದು ಸೇರಿರಬಹುದು. ಕನ್ನ ಅಂತಕ್ಕಂಥದ್ದು ಕನ್ನಡನಾಡಲ್ಲಿ ವ್ಯಕ್ತಿಗೆ ಇರುವ ಹೆಸರುಗಳಲ್ಲಿ ಒಂದು. ಕನ್ನಯ್ಯ, ಕನ್ನಪ್ಪ, ಅದು ಕಣ್ಣ ಕೂಡ ಇರಬಹುದು, ಕೃಷ್ಣನ ರೂಪ ಕೂಡ ಇರಬಹುದು ಅನ್ನೋ ಅಂತ ಊಹೆಯನ್ನು ಮಾಡ್ತಾರೆ. ದ್ರಾವಿಡ ಮೂಲದ ಹೆಸರಿರಬೇಕೆಂದು ಸಂಸ್ಕೃತದ ಹೆಸರಿರಲಾರದು ಅನ್ನೋದರಿಂದ ಹಿಡಿದು, ಅದಕ್ಕೆ ಕನಕದಾಸ ಆಗೋದಕ್ಕೆ ಮೊದಲಿದ್ದ ಆತನ ಹೆಸರೇನು ಅನ್ನೋದರ ಬಗ್ಗೆ ಸಂದೇಹಗಳೇನೂ ಇಲ್ಲ. ಆ ಹೆಸರು ಯಾವುದು ಅನ್ನೋದು ಈಗಾಗಲೇ ಗೊತ್ತಿರೋ ಸಂಗತಿ. ಅದು ತಿರುಪತಿಯ ದೇವರ ಹೆಸರಲ್ಲಿರ್ತಕ್ಕಂಥ ತಿಮ್ಮಪ್ಪನಾಯಕ ಅಂತನ್ನೋದು ಬಹುಮಟ್ಟಿಗೆ ಒಪ್ಪಿರ್ತಕ್ಕಂಥದು.

ಎರಡನೇದು ಆತನ ಸಾಮಾಜಿಕ ಹಿನ್ನೆಲೆಯ ಬಗೆಗೆ, ಆತನ ಜಾತಿಯ ಬಗೆಗೆ. ಇಲ್ಲೂ ಕೂಡ ಪರಸ್ಪರ ಮುಖಾಮುಖಿ ಮಾಡಿರ್‍ತಕ್ಕಂಥ ಸಂಗತಿಗಳು ಬೇಕಾದಷ್ಟಿವೆ. ಆತನು ಬೇಡ ಕುಲದವನು ಅಂತ ಕರೆಯುವ ಅಥವಾ ಕುರುಬ ಜನಾಂಗಕ್ಕೆ ಸೇರಿದವನು ಅಂತ ಹೇಳ್ತಕ್ಕಂಥ – ಈ ಚರ್ಚೆಗಳು ಪರಿಹರಿಸಲಿಕ್ಕೆ ಆಗದೇ ಇರುವಂಥ ರೀತಿಯಲ್ಲಿ ಬೆಳೆದುಕೊಂಡು ಬಂದಿವೆ. ಈ ಗೊಂದಲಕ್ಕೆ ಬಹಳ ಮುಖ್ಯವಾದ ಕಾರಣ, ಕರ್ನಾಟಕದ ಎರಡನೆಯ ಸಹಸ್ರಮಾನ ಚರಿತ್ರೆಯ ಬಗೆಗೆ, ಅದು ಮೊದಲ ಸಹಸ್ರಮಾನದಿಂದ ಪ್ರಾರಂಭವಾಗಿ ಎರಡನೇ ಸಹಸ್ರಮಾನದಲ್ಲಿ ನಿಚ್ಚಳಗೊಂಡಂತೆ ಕೆಲವು ಗೋಜಲುಗಳನ್ನು ನಾವು ಸರಿಯಾಗಿ ಗ್ರಹಿಸದೇ ಇರೋದಕ್ಕೆ ಕಾರಣ ಇರಬಹುದು ಅಂತ ಅನ್ನಿಸ್ತದೆ. ಇದನ್ನ ನಿಮ್ಮೆದುರು ಒಂದು ಪ್ರಶ್ನೆಯಾಗಿ ಇಡೋದಕ್ಕೆ ಪ್ರಯತ್ನಪಡ್ತೀನಿ.

ಅದರಲ್ಲೂ ಕರ್ನಾಟಕದ ಮೂರು ಜನಾಂಗಗಳ ಬಗ್ಗೆ – ಒಂದು ಬೇಡರು, ಇನ್ನೊಂದು ಗೊಲ್ಲರು ಮತ್ತು ಇನ್ನೊಂದು ಕುರುಬರು. ಈ ಮೂರು ಜನಾಂಗಗಳ ಬಗೆಗೆ ಅವುಗಳ ನಡುವಣ ಗೆರೆಗಳನ್ನು ನಾವು ತಿಳಿದಷ್ಟು ಸುಲಭವಾಗಿ ಎಳೀಲಿಕ್ಕೆ ಬರಲ್ಲ. ಅದನ್ನು ಅಷ್ಟು ಸುಲಭವಾಗಿ ಹೇಳೋಕೆ ಬರದೇ ಇರಬಹುದು. ಸ್ವಲ್ಪ ಆಂತ್ರೋಪಾಲಜಿ – ಮಾನವಶಾಸ್ತ್ರದ ಅದರಲ್ಲೂ ಕೂಡ ಸಾಂಸ್ಕೃತಿಕ ಮಾನವಶಾಸ್ತ್ರದ ವಿದ್ಯಾರ್ಥಿಗಳಾಗಿದ್ದರೆ, ಮನುಷ್ಯ ಸಮಾಜದ ಸಾಮಾಜಿಕ ಬೆಳವಣಿಗೆಯಲ್ಲಿ ಆಹಾರಕ್ಕೆ ಸಂಬಂಧಪಟ್ಟಂತೆ ಅದೊಂದು ಚಟುವಟಿಕೆಯಲ್ಲಿ ಎರಡನೇ ಹಂತವಾಗಿ ಬೇಟೆಯನ್ನು ಮೂರನೇ ಹಂತವಾಗಿ ಪಶುಪಾಲನೆಯನ್ನು ಕೂಡ ನಾವು ನೋಡ್ತೇವೆ. ಮೊದಲನೆ ಹಂತದಲ್ಲಿ ಆಹಾರ ಸಂಗ್ರಹಣೆ ಬರ್‍ತದೆ. ನಾಲ್ಕನೇ ಹಂತದಲ್ಲಿ ಕೃಷಿ ಬರ್‍ತದೆ. ಈ ಬೇಟೆ ಮತ್ತು ಪಶುಪಾಲನೆ ಬೇರೆ ಬೇರೆ ಸಮುದಾಯಗಳಲ್ಲಿ ಒಂದಾಗಿ ಸಂಭವಿಸಿದವು ಅಂತ ಹೇಳೋದು ಕಷ್ಟ. ನಿಜ, ಬೇಟೆ ಇದ್ದದ್ದು ಪಶುಪಾಲನೆಗೆ ಪರಿವರ್ತನೆ ಹೊಂದ್ತದೆ. ಆದರೆ ಯಾವಾಗ ಬೇಟೆ ನಿಂತ್ಹೋಗ್ತದೆ ಯಾವಾಗ ಪಶುಪಾಲನೆ ಆರಂಭವಾಗ್ತದೆ ಅಂತ ಹೇಳೋದು ಕಷ್ಟ. ಮತ್ತು ಪಶುಪಾಲನೆ ಪ್ರಾರಂಭ ಆದ ಮೇಲೂ ಕೂಡ ಬೇಟೆ ಅನ್ನೋದು ಮುಖ್ಯ ಆರ್ಥಿಕ ಚಟುವಟಿಕೆಯಾಗಿ ಮುಂದುವರೀತದೆ. ಅದರಿಂದಾಗಿ ಇವೆರಡೂ ಬೆರೆತುಕೊಳ್ತಾ ಹೋಗ್ತವೆ. ಹೀಗಿರುವಾಗ ಈ ಮೂರು ಜನಾಂಗಗಳನ್ನು ಬೇರ್ಪಡಿಸೋದು ಅದರಲ್ಲೂ ಕೂಡ ಗೊಲ್ಲರು ಮತ್ತು ಕುರುಬರು ಪಶುಗಾಹಿ ಗಳಾಗಿದ್ದೋರು. ಬೇಟೆ ಒಂದು ಆರ್ಥಿಕ ಚಟುವಟಿಕೆಯನ್ನಾಗಿ ಹೊಂದಿರ್‍ತಕ್ಕಂಥ ಬೇಡರು, ಈ ಮೂರು ಜನಾಂಗಗಳನ್ನ ಬೇರ್ಪಡಿಸಿ ಇಡೋದು ಬಹಳ ಕಷ್ಟ ಇದೆ. ಅದರಲ್ಲೂ ಕೂಡ ಕರ್ನಾಟಕದ ಸಮಾಜವನ್ನು ಬಹಳ ನಿಕಟವಾಗಿ ನೋಡಿದ್ರೆ ಅವರ ಆಚರಣೆಗಳಲ್ಲಿ, ಅವರ ನಂಬಿಕೆಗಳಲ್ಲಿ, ಅವರ ಜೀವನ ಕ್ರಮಗಳಲ್ಲಿ ಎಷ್ಟರ ಮಟ್ಟಿಗೆ ಬೆರೆತುಹೋಗೋ ಕ್ರಮಗಳಿವೆ ಅಂದ್ರೆ ಅವುಗಳನ್ನು ಬಹಳ ಎಚ್ಚರದಿಂದ ಬೇರ್ಪಡಿಸಬೇಕೇ ಹೊರತು ಸಹಜವಾದ ಕ್ರಮದಲ್ಲಿ ಆ ಮೂರೂ ಕೂಡ ಬೆರೆತುಕೊಂಡು ಹೋಗಿಬಿಡುತ್ವೆ. ಅದಕ್ಕೆ ಬೇರೆ ಬೇರೆ ಕಾರಣಗಳಿವೆ. ಉದಾ: ಈ ಜನಾಂಗಗಳು ಬೆಳಕೊಂಡು ಬಂದ ಕ್ರಮದಲ್ಲಿ ಬೇಟೆ ಹಂತದಲ್ಲಿ ಇದ್ದುದಕ್ಕಿಂತ, ಪಶುಪಾಲನೆ ಹಂತದಲ್ಲಿ ಕನ್ನಡ ಮಾತಾಡೋದರ ಜೊತೆಗೆ, ಕನ್ನಡದ ಜೊತೆಗೆ ಇತರೆ ಭಾಷೆಗಳನ್ನು ಮಾತಾಡುವ ಪಶುಗಾಹಿಗಳು ಬಂದು ಕರ್ನಾಟಕದೊಳಗೆ ಸೇರಿಕೊಂಡದ್ದು ಬಹಳ ಮುಖ್ಯವಾದ ಕಾಲ.

ಇವರು ಪಶ್ಚಿಮ ಕರಾವಳಿಯಿಂದ ಬಂದ ಪ್ರಾಕೃತವನ್ನು ಮಾತನಾಡುತ್ತಿದ್ದಂತ ಜನಾಂಗಗಳಿರಬಹುದು ಅಥವಾ ಪೂರ್ವ ಕರಾವಳಿಯಿಂದ ಬಂದ ಪ್ರಾಕೃತ ಮಾತಾಡ್ತಿದ್ದಂತ ಜನಾಂಗಗಳಿರಬಹುದು. ಇದನ್ನು ಶಂಬಾರವರು ಅದರಲ್ಲೂ ಕೂಡ ಪಶ್ಚಿಮ ಕರಾವಳಿಯಿಂದ ಬಂದ ಪಶುಗಾಹಿಗಳ ಬಗ್ಗೆ ಹಾಲುಮತ ದರ್ಶನ ಕೃತಿಯಲ್ಲಿ ಬಹಳ ವಿವರವಾಗಿ ನಮ್ಮೆದುರು ವಿಚಾರಗಳನ್ನು ತೆರೆದಿಟ್ಟಿದ್ದಾರೆ. ಪೂರ್ವ ಕರಾವಳಿಯಿಂದ ಬಂದಂಥ ಈ ಪಶುಗಾಹಿಗಳ ನೆಲೆಗಳ ಬಗೆಗೆ ನಮ್ಮಲ್ಲಿ ಇನ್ನೂ ಕೂಡ ಅಧ್ಯಯನಗಳು ನಡೆದಿಲ್ಲ. ಯಾಕೇಂತಂದ್ರೆ, ಅವರು ಕೊನೆಗೆ ಹೋಗಿ ನೀಲಗಿರಿಯಲ್ಲಿ ತೋಡರ ಅಂದ್ರೆ ಹಸುಗಳನ್ನು ಸಾಕುವ ಜನಾಂಗಗಳು ಬಂದ್ರು, ಎಮ್ಮೆಗಳನ್ನು ಸಾಕುವ ಜನಾಂಗಗಳು ಬಂದ್ರು, ಕುರಿಗಳನ್ನು ಸಾಕುವ ಜನಾಂಗಗಳು ಬಂದ್ರು. ಇವರೆಲ್ಲರೂ ಪ್ರಾಕೃತವನ್ನು ಮಾತಾಡ್ತಿದ್ದೋರು. ಇಲ್ಲಿ ಕನ್ನಡ ಮಾತಾಡ್ತಾ ಇದ್ದ ಅಥವಾ ಕನ್ನಡ ಅಂತ ನಾವು ಇವತ್ತು ಹೇಳ್ತಾ ಇರುವ ಒಂದು ಭಾಷೆಯ ರೂಪವನ್ನು ಮಾತಾಡ್ತಾ ಇದ್ದಂತಹ ದ್ರಾವಿಡ ಜನಾಂಗಗಳು ಕೂಡ ಇಲ್ಲಿ ಇದ್ವು. ಇದು ಎರಡನೇ ಸಹಸ್ರಮಾನದ ಜೊತೆಗೆ, ಅದ್ರಲ್ಲೂ ಕೂಡ ಕೃಷಿ ಪ್ರಧಾನವಾಗೋ ಹೊತ್ತಿಗೆ ಈ ಮೂರು ಜನಾಂಗಗಳು ಹೇಗೆ ಬೆರೆತುಹೋಗ್ತವೆ ಅಂತ ಅಂದ್ರೆ, ಇವತ್ತು ನಾವು ಹೇಗೆ ಹೆಸರುಗಳಲ್ಲಿ ಅವನ್ನು ಬೇರ್ಪಡಿಸ್ತೀವಿ ಹಾಗೆ ಹೆಸರುಗಳಲ್ಲಿ ಬೇರ್ಪಡಿಸೋದಕ್ಕೆ ಸಾಧ್ಯ ಆಗೋದಿಲ್ಲ. ಆದ್ದರಿಂದ ಈ ಪ್ರಶ್ನೆ ಅವರು ಬೇಡರೋ ಕುರುಬರೋ ಅನ್ನೋ ಅಂತಾದ್ದನ್ನ ಬಹುಶಃ 21ನೇ ಶತಮಾನದಲ್ಲಿ ಬಿಡಿಸಲಾಗದ ಅಥವಾ ಬಿಡಿಸೋದಕ್ಕೆ ಹೋಗಬಾರದ ಪ್ರಶ್ನೆಯಾಗಿ ಇದೆ ಅಂತ ನಾನು ತಿಳ್ಕೊಳ್ತೀನಿ. ಚರ್ಚೆಗೆ ಇದನ್ನು ನಾನು ನಿಮ್ಮೆದುರು ಇಡ್ತಾ ಇದೀನಿ.

ಮೂರನೆಯ ಪ್ರಶ್ನೆ–ಅವರ ಹೆಸರು ಮತ್ತು ಜಾತಿ ಬಗ್ಗೆ ಅಲ್ಲದೇನೆ, ಅವರ ಎರಡು ನೆಲೆಗಳೇನು ಇವೆ ಅವರು ಸೈನ್ಯಾಧಿಕಾರಿಯಾಗಿದ್ದಿದ್ದು ಆಡಳಿತಾಧಿಕಾರಿ ಆಗಿದ್ದಿದ್ದು. ಪಾಳೆಪಟ್ಟಿನ ಅಧಿಪತಿ ಆಗಿದ್ದದ್ದು ಮತ್ತು ಆತ ಸಂತನಾಗಿದ್ದಿದ್ದು ದಾಸನಾಗಿದ್ದಿದ್ದು, ದಾಸ ಪರಂಪರೆಗೆ ಬಂದು ಸೇರಿದ್ದು. ಈ ಬದಲಾವಣೆಗೆ ಕಾರಣಗಳು ಕೂಡ ಚಾರಿತ್ರಿಕವಾಗಿ ನಿಖರವಾಗಿವೆ ಅಂತ ನನಗನಿಸಿಲ್ಲ ಅಥವಾ ಅದರ ಬಗ್ಗೆ ಖಚಿತವಾಗಿ ಹೇಳೋಕೆ ಆಗ್ತಾ ಇಲ್ಲ. ಅವರ ಕೀರ್ತನೆಗಳು ಅಥವಾ ಹಾಡುಗಳ ಮುಖಾಂತರಾನೇ ಒಂದೆರಡು ಸೂಚನೆಗಳನ್ನು ಪಡೆದುಕೊಳ್ಳುವ ಕೆಲಸವನ್ನು ವಿದ್ವಾಂಸರು ಮಾಡಿದಾರೆ, ಆದ್ರೆ ಅದು ಅಷ್ಟೊಂದು ಗಟ್ಟಿಯಾದ ನೆಲೆ ಅಂತ ಅನಿಸ್ತಾ ಇಲ್ಲ. ಅದರ ಬಗ್ಗೆ ನಾನು ಮತ್ತೆ ಎರಡನೆಯ ದಿಕ್ಕಿನ ಚಿಂತನೆಗಳ ಬಗ್ಗೆ ಹೇಳ್ತೀನಿ. ಕರ್ನಾಟಕದಲ್ಲಿ ನೆಲೆಗೊಂಡಿರುವ ಭಕ್ತಿ ಪಂಥದ ಮೂರು ನೆಲೆಗಳಲ್ಲಿ, ಭಕ್ತಿ ಪಂಥಕ್ಕೆ ನೇರವಾಗಿ ಸಂಬಂಧಪಟ್ಟಿದ್ದು ಎರಡು ನೆಲೆಗಳು; ಅಷ್ಟೊಂದು ಭಕ್ತಿ ಪಂಥಕ್ಕೆ ನಂಟನ್ನು ಬೆಳೆಸಿಕೊಳ್ಳದೇ ಇರುವ ಮೂರನೆಯ ನೆಲೆ ಒಂದಿದೆ. ಈ ಮೂರು ಕೂಡ ವೈದಿಕ ನೆಲೆಯಿಂದ ಬಂದಿವೆ. ಅದ್ವೈತ, ದ್ವೈತ ಮತ್ತು ವಿಶಿಷ್ಟಾದ್ವೈತ. ಈ ಮೂರು ನೆಲೆಗಳಲ್ಲಿ ಕನಕದಾಸರು ಮೊದಲು

ವಿಶಿಷ್ಟಾದ್ವೈತ ಅಥವಾ ಅವರು ಕೊನೆಯವರೆಗೂ ವಿಶಿಷ್ಟಾದ್ವೈತ ಪಂಥದ ಅನುಯಾಯಿಗಳಾಗಿದ್ದರೇ ಅಥವಾ ಅವರು ಶ್ರೀವೈಷ್ಣವರು ಅಥವಾ ಮಾಧ್ವಮತದ ಅನುಯಾಯಿಗಳಾದರೇ ಎಂಬುದು. ಕಲ್ಬುರ್ಗಿಯವರು ಎತ್ತುತಾ ಇರುವ ಪ್ರಶ್ನೆ ಎಂದರೆ ಅವರ ಹೆಸರ್‍ನಲ್ಲಿ ನೆಲೆಗೊಳಿಸ್ತಾ ಇರುವಂತ ಮತ ಏನಿದೆ ಅದು ಶಂಕರ ಸಿದ್ಧಾಂತ, ಅದ್ವೈತ ಸಿದ್ಧಾಂತಕ್ಕೆ ಸಂಬಂಧ ಪಡುತ್ತೆ. ಇಲ್ಲಿ ಅದ್ವೈತ ಸಿದ್ಧಾಂತ ಭಕ್ತಿ ಪಂಥದೊಡನೆ ಹಾಗೆ ನಿಕಟವಾಗಿ ಸಂಪರ್ಕವನ್ನು ಪಡೆದುಕೊಳ್ಳಲಿಲ್ಲ. ಕರ್ನಾಟಕದಲ್ಲಿ ಕನಕದಾಸರನ್ನು ಈ ಮೂರರಲ್ಲಿ ಯಾವುದರೊಡನೆ ನಂಟನ್ನು ಕಾಣಬೇಕು ಅನ್ನುವ ಪ್ರಶ್ನೆಗಳು ಕೂಡ ಪರಿಹಾರ ಆಗ್ದೇನೆ ಉಳಿದುಕೊಂಡಿವೆ ಅಂತ ಅನ್ನೋದು. ಇದು ಕೂಡ ಬಹಳ ದೊಡ್ಡ ಪ್ರಶ್ನೆಯಾಗಿ ಉಳಿದುಕೊಂಡಿದೆ.

ಆದರೂ ಕೂಡ ಪುರಂದರ ಹಾಗೂ ಕನಕ ಇವರಿಬ್ಬರು ಎಷ್ಟರ ಮಟ್ಟಿಗೆ ಬೆಸೆದು ಕೊಂಡು ಬಿಟ್ಟಿದ್ದಾರೆ ಅಂದ್ರೆ ಕರ್ನಾಟಕ ಸರ್ಕಾರ ಕೂಡ ಅವರನ್ನ ಬೇರ್ಪಡಿಸಲಿಕ್ಕಾಗದೆ ಅವರ ಪ್ರಶಸ್ತಿಯನ್ನು ಕನಕಪುರಂದರ ಪ್ರಶಸ್ತಿ ಅಂತ್ಲೇನೆ ಒಟ್ಟಿಗೆ ಸೇರಿಸಿ ಇಟ್ಟು ಬಿಟ್ಟಿದೆ. ಜಗಳವೇ ಬೇಡ ಅಂದ್ಕೊಂಡು ಕನಕ–ಪುರಂದರ ಇಬ್ಬರ ಹೆಸರಲ್ಲೂ ಪ್ರಶಸ್ತಿಯನ್ನು ಇಡಲಾಗಿದೆ. ಕೀರ್ತನೆಗಳಲ್ಲಿ ಯಾವುದು ಕನಕದಾಸರದ್ದು, ಯಾವುದು ಪುರಂದರದಾಸರದ್ದು, ಯಾರು ಯಾವಾಗ ಯಾರ ನಾಮಾಂಕಿತಗಳನ್ನು ಪಲ್ಲಟ ಮಾಡಿ ಯಾರ ಹೆಸರಲ್ಲಿ ಯಾವ ಕೀರ್ತನೆಗಳನ್ನು ಪ್ರಚಾರದಲ್ಲಿಡಲಾಗಿದೆ, ಇದರ ಬಗ್ಗೆನೂ ವಾದ–ವಿವಾದಗಳು ನಡ್ಕೊಂಡು ಹೋಗ್ತಾ ಇವೆ.

ಇದು ಚಾರಿತ್ರಿಕ ನೆಲೆಯಲ್ಲಿ, ಯಾವುದು ಅಧಿಕೃತ, ಯಾವುದು ನಿಜ ಅನ್ನೋದನ್ನ ಕಟ್ಟುವ ಪ್ರಯತ್ನ. ಈ ಮರುಕಟ್ಟೋಣದ ಪ್ರಯತ್ನಗಳಿಗೆ ನಂದೇ ಆದ ಸಂದೇಹಗಳಿವೆ. ಈಗಾಗಲೇ ನಿಮ್ಗೆ ಗೊತ್ತಿರೋ ಹಾಗೆ, ಈ ಪ್ರಶ್ನೆಗಳನ್ನ ನಮ್ಮೆದುರು ಇಡಬಹುದೇ ಹೊರತು ಎಂದಾದರೂ ಕೂಡ ನಾವು ಬಿಡಿಸಬಹುದೇ, ಹಾಗೆ ಬಿಡಿಸೋದರಿಂದ ಕನಕದಾಸರ ಬಗ್ಗೆ ನಮಗೆ ತಿಳಿವಳಿಕೆ ಹೆಚ್ಚಾಗುತ್ತದೆಯೇ ಅನ್ನೋದರ ಬಗ್ಗೆ ನನಗೆ ಸಂದೇಹಗಳಿವೆ. ವಿದ್ವಾಂಸರು ಆ ಪ್ರಶ್ನೆಗಳನ್ನು ಬಿಡಿಸಲೂಬಹುದು. ಈ ಪ್ರಶ್ನೆಗಳನ್ನು ಹಾಕಬೇಕೆ? ಅವುಗಳ ಬೆನ್ನು ಹತ್ತಬೇಕೆ ಅನ್ನೋದರ ಬಗ್ಗೆ ನನಗೆ ಪ್ರಶ್ನೆಗಳಿವೆ. ಇದೂ ಕೂಡ ನಿಮ್ಮ ಚರ್ಚೆಗೆ ತೆರೆದಿಟ್ಟಿದೆ. ಈ ಚಾರಿತ್ರಿಕ ವ್ಯಕ್ತಿ ಅಥವಾ ಚಾರಿತ್ರಿಕ ಕನಕದಾಸರನ್ನು ಕಟ್ಟುವ ಪ್ರಯತ್ನದಲ್ಲಿ ಬಹಳ ಮುಖ್ಯವಾದ ಆಕರಗಳು ದಾಖಲೆಗಳು. ಒಂದಷ್ಟು ಶಾಸನಗಳು, ಹಸ್ತಪ್ರತಿಗಳು ಅಲ್ಲಿ ಇಲ್ಲಿ ಸಿಕ್ಕಿರ್‍ತಕ್ಕಂತಾದ್ದು ಇವುಗಳನ್ನು ಮಾತ್ರ ಆಧರಿಸಿ ಕೆಲಸ ಮಾಡಲಾಗಿದೆ. ಎರಡನೇದು ಜನಪ್ರಿಯ ಅಥವಾ ಜನಪದದ ನೆಲೆಯಲ್ಲಿ ಕನಕದಾಸರನ್ನು ಕಟ್ಟಿರೋದು, ಹತ್ತಾರು ಕಥೆಗಳನ್ನು ಕನಕದಾಸರ ಬಗ್ಗೆ ಜನ ಕಟ್ಟಿಕೊಂಡಿರ್‍ತಕ್ಕಂಥದು ಅವುಗಳನ್ನು ನಂಬಿರ್‍ತಕ್ಕಂಥದು, ಬಾಯಿಂದ ಬಾಯಿಗೆ ಅವುಗಳನ್ನು ಪ್ರಚಾರ ಮಾಡಿರ್‍ತಕ್ಕಂಥದು ಇವುಗಳನ್ನು ನೋಡ್ತೀವಿ. ಕರ್ನಾಟಕದಲ್ಲಿ ಇದು ಬಹಳ ದೊಡ್ಡ ಪ್ರಮಾಣದಲ್ಲಿ ನಡೆದಿದ್ರೂ ಕೂಡ ಅದಕ್ಕೊಂದು ಅಧಿಕೃತ ದಾಖಲೆ ದೊರೆತಿದ್ದು ಸುಮಾರು 60ನೇ ದಶಕದಲ್ಲಿ. 60ರ ದಶಕದಲ್ಲಿ ಕನಕದಾಸರ ಹೆಸರಿನಲ್ಲಿ ಭಕ್ತ ಕನಕದಾಸ ಚಲನಚಿತ್ರ ತಯಾರಾದಾಗ, ನಾನು ಅದನ್ನು ನೋಡಿದ್ದು ಬಹಳ ಚಿಕ್ಕವನಾಗಿದ್ದಾಗ. ನಿನ್ನೆ ಹಠಮಾಡಿ you tubeನಲ್ಲಿ ಆ ಚಲನಚಿತ್ರವನ್ನು ಮತ್ತೆ ನೋಡಿದೆ. ಅಲ್ಲಿ ಕನಕದಾಸರನ್ನು ಮತ್ತು ಮರು ಕಟ್ಟೋಣದಲ್ಲಿ ಆ ಜನಪ್ರಿಯ ನೆಲೆಯ ಸಂಗತಿಗಳೇನಿವೆ ಅವುಗಳನ್ನು ಮಂಡಿಸಲಾಗಿದೆ. ಅವರ ಹಾಡುಗಳಿಗೂ ಆತನ ಬದುಕಿಗೂ ಇರುವ ಸಂಬಂಧಗಳು, ಆತನ ಬದುಕಿನ ಕೆಲವು ಘಟನೆಗಳೂ ಆತನ ಜೀವನದಲ್ಲಿ ಆಗಿರ್‍ತಕ್ಕಂಥ ಸಂಗತಿಗಳೂ, ಇವುಗಳಿಗೆ ಒಂದು ತಾರ್ಕಿಕವಾದ ಸಂಬಂಧವನ್ನು ಕಟ್ಕೊಂಡು ಹೋಗಿರ್‍ತಕ್ಕಂಥದು. ಅದು ಬೇರೆ ಬೇರೆ ಹಂತಗಳಲ್ಲಿ ಹೇಗಾಗ್ತ ಬಂತು, ಜೀವನದ ಕೊನೆಯ ಘಟ್ಟದಲ್ಲಿ ಅದು ಹೇಗೆ ಬರ್‍ತದೆ, ವೈದಿಕ–ಅವೈದಿಕ ಪ್ರಶ್ನೆ, ಜಾತಿಯ ಪ್ರಶ್ನೆ, ಇವೆಲ್ಲವೂ ಕೂಡ ಅದರೊಳಗೆ ಬೆರೆತುಕೊಂಡು ಬಿಟ್ಟಿವೆ. ಇದು ಒಂದು ರೀತಿ ಜನಮಾನಸಕ್ಕೆ ಕನಕದಾಸರನ್ನು ಮರು ಕಟ್ಟಿಕೊಡುವ ಬಹಳ ದೊಡ್ಡ ಪ್ರಯತ್ನ. ಕನಕದಾಸರನ್ನು ಜನ ಹೇಗೆ ಕಟ್ಟಿಕೊಂಡಿದ್ದಾರೆ ಅಂತ ಅನ್ನೋದಕ್ಕೆ ಆ ಚಲನಚಿತ್ರವನ್ನು ದೊಡ್ಡ ದಾಖಲೆಯನ್ನಾಗಿ ನಾವು ನೋಡಲೇಬೇಕಾಗ್ತದೆ.

ಯಾಕೆ ಅಂತಂದ್ರೆ ಒಂದು Icon creationನಲ್ಲಿ ಇವೆಲ್ಲವೂ ಕೂಡ ಬಹಳ ದೊಡ್ಡ ಕೆಲಸವನ್ನು ಮಾಡ್ತವೆ. ಅಲ್ಲಿ ಕನಕದಾಸರನ್ನ ಆ ಪಾತ್ರವನ್ನು ಅಭಿನಯಿಸಿ ತೋರ್‍ಸುವಾಗ, ರಾಜಕುಮಾರ್ ಅವರ ಆಹಾರ್ಯ ಅಂದ್ರೆ ಉಡುಪುಗಳನ್ನು ನಾನು ಗಮನಿಸಿದೆ. ಹೇಗೆ ಅವರಿಗೆ ಉಡುಪುಗಳನ್ನು ಹಾಕಲಾಗಿದೆ ಅಂತ. ಸಾಮಾನ್ಯವಾಗಿ ಸಂತರುಗಳನ್ನು ಹೇಗೆ ಚಿತ್ರಿಸಲಾಗ್ತದೆ, ಆ ಸಂತರುಗಳಿಗೆ ಇರಬಹುದಾದ ಉಡುಪಿನ ಕ್ರಮವನ್ನೇ ಅವರಿಗೆ ಕೊಡಲಾಗಿದೆ. ಇದು ಯಾಕೆ ಈ ರೀತಿ ಆಯ್ತು ಅನ್ನೋದು ಬಹಳ ಕುತೂಹಲಕಾರಿ ಸಂಗತಿ. ಇವತ್ತು ಪ್ರಚಲಿತವಾಗಿರೋ ಕನಕದಾಸರ ಚಿತ್ರ ಏನಿದೆ ಆ ಚಿತ್ರವನ್ನು ಯಾರು ಬರೆದರು ಅಥವಾ ಯಾವಾಗ create ಮಾಡಿದರು ಅಂತ ಅನ್ನೋದು. ಅದನ್ನ ಮತ್ತೆ ನಾವೀಗ ಅಗೆದು ತೆಗೀಬೇಕಾಗಿರೋದು, ಯಾರು ಅದನ್ನು ರೂಪಿಸಿದರು ಅನ್ನೋದನ್ನ. ಗಡ್ಡ ಬಿಟ್ಟುಕೊಂಡಿರುವ ಹೆಗಲ ಮೇಲೆ ಕಂಬಳಿ ಹಾಕಿಕೊಂಡಿರ್‍ತಕ್ಕಂಥ, ಒಬ್ಬ ವ್ಯಕ್ತಿಯ ಚಿತ್ರ. ಈ ಚಿತ್ರವನ್ನು create ಮಾಡೋಕೆ ಇದ್ದ ಕಾರಣ ಏನು? ದಾಸರುಗಳಿಗೆ ಬಹುಮಟ್ಟಿಗೆ ಇದ್ದಿರಬಹುದಾದ, ಆದರೆ ಕನಕದಾಸರಿಗೆ ಮಾತ್ರ ಕೊಡದೆ ಇರ್‍ತಕ್ಕಂಥ, ಒಂದು ಅಂಶ ಏನಿದೆ ಆ ಆಹಾರ್ಯದಲ್ಲಿ ಅಂತಂದ್ರೆ ಮುಂಡಾಸು. ತಲೆಗೆ ಬಟ್ಟೆ ಇಲ್ಲ. ಬರಿದಲೆಯವರು ಕನಕದಾಸರು. ಆದರೆ ಬೇರೆ ದಾಸರುಗಳನ್ನು ಚಿತ್ರಿಸುವಾಗ ಹಾಗಿರೋದಿಲ್ಲ, ಪುರಂದರದಾಸರಿಗೆ ಮೊದಲಾಗಿ. ಯಾಕೆ ಈ ರೀತಿ create ಮಾಡಲಾಯ್ತು, ಅದರ ಹಿಂದೆ ಯಾವ ಒತ್ತಡಗಳು ಕೆಲಸ ಮಾಡಿದವು, ಜನಪ್ರಿಯ ಚಿಂತನೆಗಳು ಹೇಗೆ ನಡೀತಾ ಇದ್ವು, ಈ ಬರಿದಲೆಯ ಕನಕದಾಸರನ್ನು ಯಾರು ಕಲ್ಪಿಸಿದರು. ಈ Icon ಕ್ರಿಯೇಶನ್‌ನಲ್ಲಿ ಇವೆಲ್ಲ ಬಹಳ ದೊಡ್ಡದಾಗಿ ಕೆಲಸ ಮಾಡ್ತಾ ಇರ್‍ತವೆ. ಈಚೆಗೆ ನಮ್ಮ ಮಿತ್ರರೊಬ್ಬರು, ಇದು ಸ್ವಲ್ಪ ಬೇರೆ ವಿಚಾರ ಆಯ್ತು. ಆದರೆ ಇದನ್ನು ನಿಮಗೆ ಹೇಳ್ಬೇಕು. ಈ ವಿಶುವಲ್ ಆಗಿ ಒಂದು ಐಕಾನಿಕ್ ಕ್ರಿಯೇಶನ್ ಹೇಗೆ ನಡೆಯುತ್ತೆ ಅನ್ನೋದರ ಬಗ್ಗೆ ಅವರು ಒಂದು ರಿಸರ್ಚ್ ಮಾಡ್ತಾ ಇದ್ದು ಕನ್ನಡ ಭುವನೇಶ್ವರಿಯನ್ನು ಹೇಗೆ ಕನ್ನಡ ಜನತೆ create ಮಾಡ್ಕೊಂಡಿದ್ದಾರೆ, ಅಥವಾ ಅವರು ಅದನ್ನು

ಒಪ್ಪಿಕೊಳ್ಳೋ ಹಾಗೆ ಮಾಡಲಾಗಿದೆ, ಕನ್ನಡ ಭುವನೇಶ್ವರಿಯನ್ನು ಆಕೆಯ ಸೀರೆಯ ಬಣ್ಣ ಇರಬಹುದು, ಆಕೆ ಹಾಕಿಕೊಳ್ಳುವ ಆಭರಣಗಳಿರಬಹುದು, ಆಕೆಯ ದೇಹ ಸೌಷ್ಠವ ಇರಬಹುದು, ಹೈಟ್ ಇರಬಹುದು. ಇವುಗಳೆಲ್ಲವೂ ಕೂಡ ಯಾವ ರೀತಿ ಒಂದು ಜನ ಮಾನಸಕ್ಕೆ ಕಟ್ಟಿಕೊಡುವ ಪ್ರಯತ್ನವನ್ನು ಮಾಡಿದಾರೆ. ಯಾರೋ ಒಬ್ಬ ಆರ್ಟಿಸ್ಟ್ ಮಾಡ್ತಕ್ಕಂಥ ಕೆಲಸ ಇದು. Actually ಶಿವಕಾಶಿಯಲ್ಲಿದ್ದಂತ ಒಬ್ಬ ಕ್ಯಾಲೆಂಡರ್ ಆರ್ಟಿಸ್ಟ್ ಮಾಡಿದ್ದು ಅದನ್ನ. ಆತ ಇದನ್ನು ಹೇಗೆ ಮಾಡಿದ, ತೆಲುಗು ತಲ್ಲಿಯನ್ನ ಕ್ರಿಯೇಟ್ ಮಾಡ್ಡೋರು ಯಾವ ರೀತಿ ಕೆಲಸ ಮಾಡ್ತಾ ಇದ್ರು ಅನ್ನೋ ಬಗ್ಗೆ ರಿಸರ್ಚ್ ಮಾಡ್ತಾ ಇದ್ದಾರೆ. ಹಾಗೆ ಈ ಕನಕದಾಸರನ್ನು ಈ ಕನ್ನಡ ಜನಮಾನಸ create ಮಾಡಿತು ಅಂತ ಅಲ್ಲ, create ಮಾಡಿ ಅವರಿಗದನ್ನ ನಿಕಟಗೊಳಿಸಿ ಒಪ್ಪಿಕೊಳ್ಳೋ ಹಾಗೆ ಮಾಡಲಾಗಿದೆ. ಬಾಯ್ದೆರೆಯ ಕಥನಗಳಿರಬಹುದು, ಅಂದ್ರೆ ದಾಸ ಕೂಟದಲ್ಲಿ ನಡೆದಂತಹ ಕೆಲವು ಘಟನೆಗಳಿರಬಹುದು, ಯಾರೂ ಇಲ್ದೆ ಇರೋ ಕಡೆ ಹೋಗಿ ಬಾಳೆಹಣ್ಣು ತಿಂದ್ಬಿಟ್ಟು ಬಾ ಅಂತ ಹೇಳಿದ್ದು, ಎಲ್ಲರೂ ಮರೆ ಮರೆಯಲ್ಲಿ ಹೋಗಿ ತಿಂದು ಬಂದಿದ್ದು. ಈತ ತಿನ್ನದೇ ಬಂದಿದ್ದು. ಈ ಕತೆಗಳೆಲ್ಲ ನೀವು ಕೇಳಿರ್ತೀರಿ. ಆ ಮೇಲೆ ಯಾರು ಸ್ವರ್ಗಕ್ಕೆ ಹೋಗಬಹುದು ಅಂತ ಕೇಳಿದಾಗ ಕನಕದಾಸರ ಉತ್ತರ ಏನಾಗಿತ್ತು ಅದಕ್ಕೆ ಇಂತಹ ಹತ್ತಾರು ಕತೆಗಳು ಕನಕದಾಸರ ಬಗೆಗೆ ಬಂದಿವೆ.

ಎರಡನೇದು–ಆತನ ಜೀವನದ ಘಟನಾವಳಿಗೂ ಆತನ ಹಾಡುಗಳಿಗೂ ಸಂಪರ್ಕ ಕಲ್ಪಿಸಿರೋದು. ಇವು ಎಲ್ಲ ಸಂತರ ಬಗ್ಗೆಯೂ ನಡೆದಿವೆ. ಅಕ್ಕನ ಬಗೆಗೂ ನಡೆದಿದೆ. ಬಸವಣ್ಣನವರ ಬಗೆಗೂ ನಡೆದಿದೆ. ಕನಕದಾಸರ ಬಗ್ಗೆ, ಪುರಂದರ ದಾಸರ ಬಗೆಗೂ ನಡೆದಿದೆ. ಯಾರ್‍ಯಾರು ಅವರ ಕಥನವನ್ನು ದೃಶ್ಯ ರೂಪದಲ್ಲಿ ಮಂಡಿಸೋದಕ್ಕೆ ಪ್ರಯತ್ನ ಪಡ್ತಿದ್ದಾರೆ ಅವರೆಲ್ಲರೂ ಕೂಡ ಈ ಕೆಲಸವನ್ನು ಮಾಡಿದ್ದಾರೆ. ಅಂದ್ರೆ ಅವರ ಭಾಷಿಕ ರಚನೆಗಳಿಗೂನು, ಅವರ ಜೀವನದಲ್ಲಿ ನಡೆದಿರೋ ಘಟನೆಗಳಿಗೂನೂ ಒಂದು linkಅನ್ನು ಕಲ್ಪಿಸುವ ಪ್ರಯತ್ನವನ್ನು ಮಾಡಲಾಗಿದೆ. ಇದು ಒಂದು ರೀತಿ Folk creation ಆದರೆ ಅವುಗಳಿಗೆ ಆಧಾರವನ್ನು ಹೇಳೋಕೆ ಬರಲ್ಲ, ಆದ್ರೆ ಜನ ಒಪ್ಪುವ ರೀತಿಯಲ್ಲಿ ಇದನ್ನು create ಮಾಡಿಕೊಡಲಾಗ್ತದೆ. ಇದು ಕೇವಲ ಕರ್ನಾಟಕದಲ್ಲಿ ಮಾತ್ರ ನಡೆದಿದೆ ಅಂತಲ್ಲ. ಮೀರಾ ಬಗ್ಗೆಯೂ ಕೂಡ ಇದನ್ನು ನೋಡಬಹುದು. ಬಹಳ ಪ್ರಖ್ಯಾತವಾದ ಮೀರಾ ಭಜನ್‌ಗಳ ಒಂದು ಆಲ್ಬಂ ಲತಾ ಮಂಗೇಶ್ಕರ್ ಹಾಡಿರುವ ಮತ್ತು ಹೃದಯನಾಥ ಮಂಗೇಶ್ಕರ್ ಸಂಗೀತ ನೀಡಿರುವ ಎರಡು ಎಲ್‌ಪಿಗಳನ್ನು ಕೇಳಿದ್ರೆ ಗೊತ್ತಾಗ್ತದೆ. ಹೇಗೆ ಒಂದಾದ ಮೇಲೆ ಒಂದನ್ನು place ಮಾಡಿರೋ ರೀತಿನಲ್ಲೇನೆ, ಆ ಕೊನೆಯಲ್ಲಿ ಚಾಲವಾಹಿ ದೇಶ್ ಅಂತ್ಹೇಳಿ ಅವಳು ತನ್ನ ತಂಬೂರಿಯನ್ನು ತೊರೆದು ಹೊರಟು ಹೋಗುವಂತ ಒಂದು ಹಾಡಿದೆ. That is lost song. ಮೀರಾ sings in the album ಅಂದ್ರೆ ಬದುಕಿನ ಬೇರೆ ಬೇರೆ ಹಂತಗಳಲ್ಲಿ ಅವಳು, ಮದುವೆಯಾಗಿದ್ದಿರಬಹುದು, ಮದುವೆಯ ಬಂಧವನ್ನು ಬಿಟ್ಟು ಕನ್ಹಯ್ಯನನ್ನು ಹುಡುಕ್ಕೊಂಡು ಹೊರಟಿದ್ದು ಇರಬಹುದು, ಆಮೇಲೆ ಮರುಭೂಮಿಯಲ್ಲಿ ವಿಲೀನವಾಗಿ ಹೋಗುವ ಕತೆ ಇದೆಯಲ್ಲ ಅದನ್ನು ಮತ್ತು ಆಕೆಯ ಭಜನ್‌ಗಳನ್ನು ಒಂದು ರೀತಿಯ ಸಂಪರ್ಕ ಕಲ್ಪಿಸುವ ಪ್ರಯತ್ನವನ್ನು ಎಲ್ಲಾ ವಿಶುವಲ್ ಮೀಡಿಯಾ ನೆರೇಶನ್ ಅಥವಾ ಓರಲ್ ನೆರೇಶನ್‌ನಲ್ಲಿ ತೊಡಗಿದ ಪ್ರತಿಯೊಬ್ಬರೂ ಕೂಡ ಮಾಡಿದಾರೆ. ಕನಕದಾಸರ ಬಗ್ಗೇನೂ ಈ ರೀತಿಯ ಪ್ರಯತ್ನವನ್ನು ಮಾಡಲಾಗಿದೆ. ಆದರೆ ಇದಕ್ಕೆ ನೀವು ಇದೇ ಆಧಾರ ಅಂತ ಹೇಳೋಕೆ ಬರಲ್ಲ. 'ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು' ಅಂತ ಅನ್ನೋ ಕೀರ್ತನೆ ಅದು ಯಾವಾಗ ಹಾಡಿರಬಹುದು, 'ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೇ' ಹಾಡನ್ನ ಯಾವಾಗ ರಚನೆ ಮಾಡಿರಬಹುದು? ಇವುಗಳನ್ನು ಕುರಿತು ಒಂದು ಕಥನವನ್ನು ಕಟ್ಟಿಕೊಳ್ಳಲಾಗ್ತದೆ. ಅದನ್ನು ನೀವು ಹೀಗೇ ಆಯ್ತು ಅಂತ prove ಮಾಡೋಕೆ ಬರಲ್ಲ.

ಎರಡನೆಯ ಚಿತ್ರ ಇದು. ಎರಡನೆಯ ದಿಕ್ಕಿನಲ್ಲಿ ಕನಕರನ್ನು ಕಟ್ಟಿಕೊಳ್ಳುವ ಚಿತ್ರ ಇದು. ಮೊದಲನೆಯದಕ್ಕಿಂತ ಬಹಳ ಬಲವಾಗಿದೆ. ಇದು ಮತ್ತು ಜನರಿಗೆ ನಿಕಟವಾಗಿರುವ ಕನಕರು ಇವರೇನೇ. ಮೊದಲನೇ ಕನಕರಿಗಿಂತ ಎರಡನೇ ಕನಕರು ಬಹಳ ನಿಕಟವಾಗಿರೋರು.

ಈಗ ಮೂರನೇದಕ್ಕೆ ಬರ್ತೀನಿ. ಮೂರನೇದಕ್ಕೆ ಬಂದು ಮತ್ತೆ ನಾನು ಎರಡನೇದಕ್ಕೆ ಹೋಗಲು ಪ್ರಯತ್ನ ಪಡ್ತೀನಿ. ಇದು ಭಾಷಿಕ ರಚನೆಗಳ ಮುಖಾಂತರವೇ ಕನಕರನ್ನು ಮರು ಕಟ್ಟುವಿಕೆಗೆ ಅಥವಾ ಮರುಗಳಿಕೆಗೆ ನಡೆಸಿರ್ತಕ್ಕಂಥ ಪ್ರಯತ್ನಗಳು. ಅಂದ್ರೆ ಇಲ್ಲಿ ಕನಕ ಒಬ್ಬ ವ್ಯಕ್ತಿ ಅಥವಾ ಕನಕದಾಸರು ಅನ್ತಕ್ಕಂಥ ರಚನಕಾರರು ಅಂತ ಬೇರ್ಪಡಿಸೋಕೆ ಆಗಲ್ಲ. ಬೇರ್ಪಡಿಸಿ ಕನಕರನ್ನು ಕೇವಲ ನುಡಿರಚನೆಗಳ ನಿರ್ಮಾತೃ ಅಂತ ಮಾತ್ರ ನೋಡೋಕೆ ಬರಲ್ಲ. Still ಇದು ಬಹುಮಟ್ಟಿಗೆ ಭಾಷಿಕ ರಚನೆಗಳನ್ನು ಅವಲಂಬಿಸಿದ ಚಿಂತನೆಗಳು ಅನ್ನೋಬಹುದು. ಕನಕದಾಸರು ಈ ರೀತಿ ನುಡಿ ರಚನೆಗಳನ್ನು ಕೊಟ್ಟ ಕನ್ನಡದ, ಕನ್ನಡ ಪರಂಪರೆಯಲ್ಲಿ ಒಂದು ವಿಶಿಷ್ಟ ರೀತಿ ವ್ಯಕ್ತಿ. ಯಾಕೆ ಅಂದ್ರೆ ದಾಸರ ಪರಂಪರೆಯಲ್ಲಿ ಮಾತ್ರ ಅಲ್ಲ, ಇಡೀ ನಾಡಿನ ಯಾವ ಪರಂಪರೆಗೆ ಹೋಗಿ ನೋಡಿದ್ರೂ ಕೂಡ ಈ ಎರಡು ಬಗೆಯ ರಚನೆಗಳನ್ನು ಒಬ್ಬನೇ ವ್ಯಕ್ತಿ ಕೊಟ್ಟಿರ್ತಕ್ಕಂಥದು ಬಹಳ ಅಪರೂಪ. ಅತ್ಯಂತ ಹತ್ತಿರದ ಉದಾಹರಣೆ ಸಿಕ್ತಕ್ಕಂಥದು ಹರಿಹರನದೊಬ್ಬಂದೇ. ನಮಗೆ ಅವನು ಗಿರಿಜಾ ಕಲ್ಯಾಣವನ್ನು ಬರೆದ ಮತ್ತು ಶಿವಶರಣ ರಗಳೆಗಳನ್ನು ಕೂಡ ಬರೆದ. ಕನಕರು ಮೋಹನ ತರಂಗಿಣಿ, ನಳಚರಿತ್ರೆ, ರಾಮಧಾನ್ಯ ಚರಿತೆ ಹಾಗೂ ಹರಿಭಕ್ತಿಸಾರ ಈ ಕೃತಿಗಳ ಜೊತೆಗೆ ಮತ್ತೊಂದು 'ನೃಸಿಂಹಸ್ತವ' ಅನ್ತಕ್ಕಂಥ ಕೃತಿ– ಅದರ ಬಗ್ಗೆ ಚರ್ಚೆ ಇದೆ, ನೃಸಿಂಹಸ್ತವ ಅವರದ್ದೋ ಅಲ್ಲವೋ ಅಂತ– ಉಳಿದ ನಾಲ್ಕು ಕೃತಿಗಳಂತೂ ನಿರ್ವಿವಾದವಾಗಿ ಅವರದೇ ರಚನೆಗಳು. ಇವುಗಳನ್ನು ಈಗ ನಂಬಿರುವ ರೀತಿಯಲ್ಲಿ ಈ ನಾಲ್ಕನ್ನು ಅವರು ಮೊದಲು ಬರೆದರು, ಆನಂತರ ಅವರು ಹಾಡುಗಳನ್ನು ಬರೆದರು ಅಂತ ತಿಳಿಯಲಾಗಿದೆ. ಅದನ್ನು ಒಪ್ಪದೇ ಇರೋಕೆ ನಮ್ಮಲ್ಲಿ ಕಾರಣಗಳು ಇಲ್ದೇ ಇದ್ರೂ ಕೂಡ ಒಪ್ಪೋಕೂ ಕಾರಣಗಳು ಇಲ್ಲ ನಮ್ಮತ್ರ.

ಆದ್ದರಿಂದ ಯಾವುದನ್ನು ಒಪ್ಕೋಬೇಕು, ಯಾವುದನ್ನು ಒಪ್ಪಬಾರದು ಅನ್ನೋದನ್ನ ಹೇಳೋದು ಕಷ್ಟ. ಈ ನಾಲ್ಕನ್ನ ಬರೆದು ಮುಗಿಸಿ ಆದ ಮೇಲೆ ಅವರು ದಾಸರಾದರು. ಆಮೇಲೆ ಹಾಡುಗಳನ್ನು ಬರೆದರೋ ಅಥವಾ ಅವರು ಯಾವುದೋ ಹಂತದಲ್ಲಿ ಯಾವುದೋ ಕಾರಣದಿಂದಾಗಿ ನಾಲ್ಕು ಕೃತಿಗಳನ್ನು ಅಂದ್ರೆ ಹರಿಭಕ್ತಿಸಾರವನ್ನು ಬಿಟ್ರೆ ಉಳಿದವನ್ನು ಯಾವಾಗ ಬರೆದ್ರು ದಾಸರಾಗಿದ್ದಾಗ ಬರೆದರಾ, ದಾಸರಾಗೋಕಿಂತ ಮೊದಲು ಬರೆದ್ರಾ, ಈ ಅನುಕ್ರಮಣಿಕೆಯನ್ನು ಒಪ್ಪಿ ಅದನ್ನೇ ಸಾಧಿಸೋದಕ್ಕೂ ಕೂಡ ಬಹಳ ಕಷ್ಟ ಇದೆ. ಒಟ್ಟಾರೆ ಇವೆಲ್ಲ ಅವರ ರಚನೆಗಳು. ಅವುಗಳನ್ನು ಇಟ್ಕೊಂಡು ನೋಡಿದ್ರು ಕೂಡ ಕನಕದಾಸರನ್ನು ಹಲವು ರೀತಿಗಳಲ್ಲಿ ನಮ್ಮೆದುರು Recreate ಮಾಡಲಾಗಿದೆ. ಅದರಲ್ಲೂ ಕೂಡ ಬಹಳ ಜನಪ್ರಿಯವಾದ, ಜನಪ್ರಿಯ ಅನ್ನೋದಕ್ಕಿಂತ ಬಹಳ ಮನ್ನಣೆಯನ್ನು ಪಡೆದಿರ್ತಕ್ಕಂಥ ಒಂದು ಚಿಂತನಾ ಕ್ರಮ ಅಂತಂದ್ರೆ, ಒಂದು ವೈದಿಕ ಮತ್ತು ಅವೈದಿಕ ತಿಕ್ಕಾಟ– 60ರ ದಶಕದಿಂದೀಚೆಗೆ ಕರ್ನಾಟಕದ ಸಾಹಿತ್ಯ ವಿಮರ್ಶೆ, ಸಂಸ್ಕೃತಿ ವಿಮರ್ಶೆಯಲ್ಲಿ ಬಹಳ ನೆಲೆಯೂರ್ತಾ ಬಂದಿತು. ವೈದಿಕ ಚಿಂತನೆಗಳು ಮತ್ತು ಅವೈದಿಕ ಚಿಂತನೆಗಳು ಇವುಗಳ ನಡುವಣ ಮುಖಾಮುಖಿಯಲ್ಲಿ ಕನ್ನಡ ಸಾಹಿತ್ಯವನ್ನು, ಪರಂಪರೆಯನ್ನು ನೋಡುವಂಥ ಒಂದು ಚಿಂತನಾ ಕ್ರಮ ಏನು ಬಂತು ಅದಕ್ಕೆ ಅನುಸಾರವಾಗಿ ಕನಕದಾಸರ ಕೀರ್ತನೆಗಳನ್ನು, ರಚನೆಗಳನ್ನು ಬಳಸಿಕೊಳ್ಳುವ ಕ್ರಮವನ್ನು ನಾವು ನೋಡ್ತೀವಿ.

1967ರಲ್ಲಿ ಪ್ರಕಟವಾದ ಪರಿಶೀಲನದಲ್ಲಿ ಜಿ.ಎಸ್. ಶಿವರುದ್ರಪ್ಪನವರು ಕೀರ್ತನೆಗಳನ್ನು ಹೊರತುಪಡಿಸಿ, ಉಳಿದ ರಚನೆಗಳನ್ನು ಅವುಗಳ ಸಾಹಿತ್ಯಕ ಮೌಲ್ಯದ ದೃಷ್ಟಿಯಿಂದ ನಳಚರಿತ್ರೆಗೆ ಮೊದಲ ಜಾಗವನ್ನು, ಮೋಹನ ತರಂಗಿಣಿಗೆ ಎರಡನೆ ಜಾಗವನ್ನು ಮತ್ತು ರಾಮಧಾನ್ಯ ಚರಿತೆಗೆ ಮೂರನೆ ಸ್ಥಾನವನ್ನು ಕೊಡ್ತಾರೆ. ಅವರ ಪ್ರಕಾರ ರಾಮಧಾನ್ಯ ಚರಿತ್ರೆ ಬರೆಯೋದಕ್ಕೆ ಯಾವ ಕಾರಣಗಳೂ ಇರಲಿಲ್ಲ. ಕೊನೆಯ ಪಕ್ಷ ನಳಚರಿತ್ರೆಯನ್ನು place ಮಾಡಿದ್ದಕ್ಕೆ ಕಾರಣಗಳನ್ನು ಕೊಡಬಹುದು. ಅವರ ಪ್ರಕಾರ ಅತ್ಯಂತ ಒಳ್ಳೆಯ ಕಾವ್ಯ ಅದು. ಮೋಹನ ತರಂಗಿಣಿ ಅವರ ಪ್ರಕಾರ ಅಷ್ಟು ಒಳ್ಳೆಯ ಕಾವ್ಯ ಅಲ್ಲ. ಈ ಮಾತು ಹೇಳುವಾಗ ಶಿವರುದ್ರಪ್ಪನೋರು ಯಾವ ಬಗೆಯ ವಿಮರ್ಶೆಯ ಪರಿಕರಗಳನ್ನು ಬಳಸ್ತಾ ಇದ್ರು ಮತ್ತು ಆಗ ಪ್ರಚಲಿತದಲ್ಲಿದ್ದ ವಿಮರ್ಶೆ ಪರಿಕರಗಳ ನೆಲೆಯಲ್ಲಿ ಅವರ ಮಾತುಗಳು ಸರಿ ಅಂತ ಅನಿಸುತ್ತೆ. ಆದ್ರೆ ಇಡೀ ಕನ್ನಡ ವಿಮರ್ಶೆಯ ಪರಿಕರಗಳು ಬದಲಾದ ಪರಿಸರದಲ್ಲಿ ರಾಮಧಾನ್ಯ ಚರಿತ್ರೆ ಮೇಲ್ಗೈಯನ್ನು ಪಡೆದುಕೊಂಡುಬಿಡ್ತು. ಆಮೇಲೆ ಮೋಹನ ತರಂಗಿಣಿ ಕಾವ್ಯವನ್ನು ಒಂದು ಪ್ರತ್ಯೇಕ ಕಾವ್ಯವನ್ನಾಗಿ ನೋಡದೆ, ಎರಡನೆ ಸಹಸ್ರಮಾನದಲ್ಲಿ ಬಂದ ನಿರೂಪಣೆಗಳ ಜೊತೆಯಲ್ಲಿ ಅದನ್ನಿಟ್ಟುಕೊಂಡು ನೋಡುವ ಪರಂಪರೆ ಬಂದಿದೆ. ಯಾಕೆಂದ್ರೆ ಮೋಹನ ತರಂಗಿಣಿಯ ಕಥೆ ಇದೆಯಲ್ಲ ಈ ಕಥೆ ಕನ್ನಡ ಕವಿಗಳು ಮತ್ತೆ ಮತ್ತೆ ಪರೀಕ್ಷೆ ಮಾಡಿರುವ ಕಥೆ. ಬೇರೆ ಬೇರೆ ಕವಿಗಳು ಬೇರೆ ಬೇರೆ ರೀತಿಯಲ್ಲಿ ಆ ಕಥೆಯನ್ನು ಹೇಳ್ಕೊಂಡು ಬಂದಿದ್ದಾರೆ. ಯಾಕೆ ಆ ಕತೆಯನ್ನು ಹೇಳಿಕೊಂಡು ಬಂದರು? ಇದುವರೆಗೆ ಅದನ್ನು ಸಾಂಸ್ಕೃತಿಕ ಚೌಕಟ್ಟಿನಲ್ಲಿ ಇಡೋದಕ್ಕೆ ಸಾಧ್ಯ ಆಗಿಲ್ಲ. ಅಂದ್ರೆ ಆ ಪ್ರಶ್ನೇನ ಇನ್ನೂ ನಾವು ಮೈಮೇಲೆ ಹಾಕೊಂಡಿಲ್ಲ.

ಈ ಕೃತಿಗಳನ್ನು ವಿಮರ್ಶೆ ಚೌಕಟ್ಟಿನಲ್ಲಿ ಅವುಗಳ ಮೌಲ್ಯಮಾಪನ ಮಾಡಿರುವ, ಅವುಗಳ ಮಹತ್ವವನ್ನು ವಿವರಿಸುವ ಒಂದು ಪರಂಪರೆ ಬಹಳ ದೀರ್ಘಕಾಲ ಅಲ್ಲದಿದ್ದೂನು ಒಂದು ಇಪ್ಪತ್ತು ವರ್ಷಗಳ ಕಾಲ ನಡೆದುಕೊಂಡು ಬಂದ ಹಾಗೆ ಕಾಣಿಸ್ತದೆ. ಆ ಕಾಲದ ಸಾಹಿತ್ಯ ಚರಿತ್ರೆಗಳನ್ನು ಗಮನಿಸಿದರೆ, ಸಾಹಿತ್ಯ ವಿಮರ್ಶೆಯ ಲೇಖನಗಳನ್ನು ಗಮನಿಸಿದರೆ, ಈ ಅಂಶ ನಮಗೆ ಗೊತ್ತಾಗ್ತದೆ. ಆ ಕಾಲದ ಒಂದೇ ಪ್ರಾತಿನಿಧಿಕ ಸಾಹಿತ್ಯ ಚರಿತ್ರೆ ರಂ.ಶ್ರೀ.ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆ. ಕನ್ನಡ ಸಾಹಿತ್ಯದ ಚರಿತ್ರೆಗಳು ಆ ಚೌಕಟ್ಟನ್ನು ಬಿಟ್ಟು ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ಸಾಹಿತ್ಯ ಚರಿತ್ರೆ ಕೂಡ ಆ ನಂತರದ ಕಾಲದಲ್ಲಿ ಬಂದಿದ್ದಾದ್ದರಿಂದ ಅದರಲ್ಲಿ ಕನಕದಾಸರನ್ನು ಗ್ರಹಿಸಿಕೊಂಡಿರುವ ಕ್ರಮಗಳು ಸಂಪೂರ್ಣವಾಗಿ ಬೇರೆಯಾಗ್ತವೆ. ಒಪ್ಪಿರುವ ಚಿಂತನಾ ಕ್ರಮಗಳಿಗಿಂತ ಬೇರೆಯದೇ ಆದ ಕ್ರಮದಲ್ಲಿ ಅವುಗಳನ್ನು ನೋಡಲಾಗಿದೆ.

ಕನ್ನಡ ಕಾವ್ಯ ವಿಮರ್ಶೆಯಲ್ಲೇನೆ, ಇಡೀ ಕನ್ನಡ ಕಾವ್ಯ ಪರಂಪರೆಯನ್ನು ಬೇಂದ್ರೆಯವರು ಎರಡು ನೆಲೆಗಳಲ್ಲಿ ಬೇರ್ಪಡಿಸಿ ನೋಡಿದರು. ಒಂದು ಕಾವ್ಯ ಕವಿಗಳ ಪರಂಪರೆ ಮತ್ತೊಂದು ಭಕ್ತ ಕವಿಗಳ ಪರಂಪರೆ. ಇವರಿಬ್ಬರಲ್ಲಿ ಬೇಂದ್ರೆಯವರು ಹೆಚ್ಚು ಅಂಶಗಳನ್ನು ಕೊಡ್ತಕ್ಕಂಥದು ಭಕ್ತ ಕವಿಗಳ ಪರಂಪರೆಗೆ. ಕನ್ನಡ ಕಾವ್ಯ ಪರಂಪರೆಯಲ್ಲಿ ಕಾವ್ಯ ಕವಿಗಳಿಗಿಂತ ಮೇಲ್ಗೈಯನ್ನು ಪಡೆದವರು ಭಕ್ತ ಕವಿಗಳು. ಕನಕದಾಸರ ಬಗೆಗೆ ಹಾಗೂ ಅವರ ಮುಂಡಿಗೆಗಳ ಬಗೆಗೆ ಬೇಂದ್ರೆಯವರು ಲೇಖನವೊಂದನ್ನು ಬರೆದಿದ್ದಾರೆ. ಬೇಂದ್ರೆಯವರನ್ನು ಕನ್ನಡ ಸಾಹಿತ್ಯ ವಿಮರ್ಶಕರನ್ನಾಗಿ ನಾವಿನ್ನೂ ಪೂರ್ತಿಯಾಗಿ ಗ್ರಹಿಸಿಲ್ಲ. ಯಾಕೆ ಅಂತಂದ್ರೆ ಅವರು ತಮ್ಮ ಚಿಂತನೆಗಳನ್ನು ಹೇಳೋದರ ಜೊತೆಗೆ ಆವರೆಗೂ ಪ್ರಕಟ ಆಗ್ತಾ ಇದ್ದ ಸಾಹಿತ್ಯ ಚಿಂತನೆಗಳೆಲ್ಲವನ್ನು ಬುಡಮೇಲು ಮಾಡ್ತಾ ಇದ್ರು. ತಲೆಕೆಳಗು ಮಾಡ್ತಾ ಇದ್ರು. ಅದರಲ್ಲೂ ಕೂಡ ಮೈಸೂರು ವಿಶ್ವವಿದ್ಯಾಲಯದಲ್ಲಿ ನೆಲೆಗೊಂಡಿದ್ದಂತಹ ಚಿಂತನಾ ಪರಂಪರೆಗೆ ಎಲ್ಲೆಲ್ಲಿ ತೊಡರುಗಾಲುಗಳನ್ನು ಕೊಡಬೇಕೋ ಅಲ್ಲೆಲ್ಲಾ ಕೊಟ್ಟಿದ್ದಾರೆ ಬೇಂದ್ರೆಯವರು. ಅದನ್ನು ಬುಡಮೇಲು ಮಾಡ್ಲಿಕ್ಕೆ ಏನೇನು ಮಾಡ್ಬೇಕೋ ಅದನ್ನೆಲ್ಲಾ ಮಾಡಿದ್ದಾರೆ. ಯಾಕೆಂದ್ರೆ ಅವರ ಈ ಚಿಂತನಾ ಪರಂಪರೆ ಬಗ್ಗೆ ಬಹಳ ತೀವ್ರವಾದ ವಿರೋಧ ಮಂಗಳೂರಿನಲ್ಲೂ ವ್ಯಕ್ತವಾಗುತ್ತಿತ್ತು ಮತ್ತು ಧಾರವಾಡದಲ್ಲೂ ವ್ಯಕ್ತವಾಗ್ತಾ ಇತ್ತು. ಈ ಆಸ್ಥಾನ ವಿದ್ವಾಂಸರ ಪರಂಪರೆಗೆ ಆ ಕಡೆ ಕರಾವಳಿಯವರು ಈ ಕಡೆ ಉತ್ತರ ಕರ್ನಾಟಕದಲ್ಲಿ ಬೇಂದ್ರೆಯವರು ಬಹಳ ತಾತ್ವಿಕವಾದ ಪ್ರತಿರೋಧವನ್ನು ಒಡ್ಡಿದ್ದಾರೆ. ಆದರೆ ನಮ್ಮ ಈ ಕಡೆಯ ಚಿಂತಕರು ಬೇಂದ್ರೆಯವರನ್ನು ಆ ರೀತಿಯಾಗಿ ನೋಡದೆ, ಕಾವ್ಯ ಕವಿಗಳು ಮತ್ತು ಭಕ್ತ ಕವಿಗಳ ಈ ಪರಂಪರೆಯನ್ನು ಯಾಕೆ ಮಾಡಿದರು ಮತ್ತು ಭಕ್ತ ಕವಿಗಳಿಗೆ ಯಾಕೆ ಹೆಚ್ಚು ಅಂಕಗಳನ್ನು ಕೊಟ್ರು ಅನ್ನೋ ಬಗ್ಗೆ ನಾವಿನ್ನೂ ಪೂರ್ತಿಯಾಗಿ ಅರ್ಥ ಮಾಡ್ಕೊಂಡಿಲ್ಲ ಅಂತ ಅನ್ಸುತ್ತೆ. ಆ ದೃಷ್ಟಿಯಿಂದ ನೋಡಿದ್ರೆ ಕನಕದಾಸರನ್ನು ನೋಡೋದಕ್ಕೆ ನಮಗೆ ಬೇರೆಯದೇ ಪರಿಕರಗಳು ಸಿಗಬಹುದು ಅಂತ ಅನ್ನಿಸ್ತಾ ಇದೆ.

ಎಲ್ಲಕ್ಕಿಂತ ಮುಖ್ಯವಾಗಿ ನಾನು ಇದುವರೆಗೂ ಕೀರ್ತನೆ ಅನ್ನುವ ಮಾತನ್ನು ಬಳಸಿಲ್ಲ. ಅದು ಸರಿಯಾದ ಬಳಕೆಯಲ್ಲ. ಕನಕದಾಸರ ಮಟ್ಟಿಗೆ ಕೀರ್ತನೆ ಅನ್ನೋ ಪದ – ಯಾಕೆಂದ್ರೆ ಆ ರೀತಿ ರಚನೆಗಳನ್ನು ಮಾಡ್ತೋರು ವಾಗ್ಗೇಯಕಾರರು. ಅವರು ಬೇರೆ ರೀತಿಯವರು. ತ್ಯಾಗರಾಜರ ತರದವರು, ಅನ್ನಮಯ್ಯನ ತರದವರು, ಕ್ಷೇತ್ರಯ್ಯನ ತರದವರು, ಆ ತರದವರೆಲ್ಲ ಸಂಗೀತ ಪರಂಪರೆಗೆ ಅನುಕೂಲಕರವಾಗಿರೋರು. ಆದರೆ ಇವರು ಯಾರೂ ಆ ತರದವರಲ್ಲ. ಕೀರ್ತನೆ ಅನ್ನೋ ಪದ ಇನ್ನೊಂದು ರೀತಿಯಲ್ಲಿ ಕೂಡ ಬಳಸೋದಕ್ಕೆ ಇಷ್ಟ ಪಡೋದಿಲ್ಲ. ಯಾಕೆ ಅನ್ನೋದು ನಿಮಗೆ ಮುಂದೆ ಗೊತ್ತಾಗ್ತದೆ. ಇವುಗಳನ್ನು ಹಾಡುಗಳು ಅಂತ ಇಟ್ಕೊಳ್ಳೋಣ. ಅವರು ಹಾಡುಗಳನ್ನು ಬರೆದಿದ್ದಾರೆ. ಹಾಡೋದಕ್ಕೆ ತಕ್ಕಂತೆ ರಚನೆಗಳನ್ನು ಬರೆದಿದ್ದಾರೆ. ಕನಕದಾಸರು ತಮ್ಮ ಲಿಖಿತ ಪರಂಪರೆಯಲ್ಲಿ ಬರೆದಿರ್ತಕ್ಕಂಥ ಅಥವಾ ಬರಹಗಳಲ್ಲಿ ಇಳಿಸಿರಬಹುದಾದ ಕೃತಿಗಳು ಯಾವುದಿವೆ, ಅವುಗಳಲ್ಲಿ ಮಾಡಿರುವ ಛಂದಸ್ಸಿನ ಪ್ರಯೋಗಗಳಿಗೂ ಉದಾ: ಸಾಂಗತ್ಯದ ಅಂಶ ಲಯದ ಓಟ ಏನಿದೆ ಮತ್ತು ಉಳಿದ ಕೃತಿಗಳಲ್ಲಿ ಕಂಡು ಬರುವ ಷಟ್ಪದಿಯ ಲಯ ಏನಿದೆ, ಮಾತ್ರಾಲಯದ ಛಂದಸ್ಸನ್ನು ಬಳಸಿರ್ತಕ್ಕಂಥ ಲಯ ಏನಿದೆ? ಮತ್ತು ಕೀರ್ತನೆಗಳಲ್ಲಿ ಅಥವಾ ಹಾಡುಗಳಲ್ಲಿ ಅವರು ಬಳಸಿರ್ತಕ್ಕಂಥ ಲಯಗಳು ಇವುಗಳಲ್ಲಿ ಬಹಳ ದೊಡ್ಡ ಪ್ರಯೋಗಗಳನ್ನು ಮಾಡಿದ ಹಾಗೆ ಕಾಣಿಸ್ತದೆ. ಯಾಕೆ ಅಂತಂದ್ರೆ ಈ ಹಾಡುಗಳಲ್ಲವರು ಕನ್ನಡ ಭಾಷೆಗೆ ಸಹಜವಾಗಿರ್ತಕ್ಕಂಥ ಒಂದು ಮ್ಯೂಸಿಕ್ ಅನ್ನು, ಭಾಷೆಗೆ ಸಹಜವಾದ, ಭಾಷೆಯ ಒಳಗಿರುವ ಲಯಗಾರಿಕೆಯನ್ನು, ನಾದ ಶಕ್ತಿಯನ್ನು ತಿಳಿಯೋದಕ್ಕೆ ಪ್ರಯತ್ನ ಪಟ್ಟಂತೆ ಕಾಣಿಸ್ತದೆ. Again ಈ ಮಾತುಗಳನ್ನು ಬೇಂದ್ರೆಯವರು ಕೂಡ ಅವರ ಮುಂಡಿಗೆಗಳ ಬಗ್ಗೆ ಬರೆದಂತಹ ಲೇಖನದಲ್ಲಿ ಹೇಳೋಕೆ ಪ್ರಯತ್ನಪಡ್ತಾರೆ. ಅದನ್ನು ಹೆಚ್ಚು ವಿವರಿಸಿಲ್ಲ, ಆದ್ರೆ ಈ ದಿಕ್ಕಿನಲ್ಲಿ ಆಲೋಚನೆ ಮಾಡಿದ್ರೆ, ಕನಕದಾಸರ ಈ ಹಾಡುಗಳ ಬಗೆಗೆ ಅವು ಕೇವಲ ಏನೋ ಒಂದು ವಿಚಾರವನ್ನು ಹೇಳೋಕೆ ಇವುಗಳನ್ನು ಬಳಸ್ತಾ ಇದ್ರು ಅಂತ ಹೇಳೋದಕ್ಕಿಂತ ಭಾಷೆಯ ಲಯಗಾರಿಕೆಯನ್ನು ಅದು ಕೇವಲ ಅಲಂಕಾರಿಕವಾದದ್ದಲ್ಲ, ಭಾಷೆಯಲ್ಲೇ ಇರುವ ಈ ನಾದಮಯತೆಯನ್ನು ಲಯಗಾರಿಕೆಯನ್ನು ಹಿಡಿಯೋ ಪ್ರಯತ್ನವನ್ನು, ತಿಳಿಯೋ ಪ್ರಯತ್ನವನ್ನು ಮಾಡಿರುವ ಸೂಚನೆಗಳು ನಮಗೆ ಕಾಣಿಸ್ತವೆ ಅಂತ ಅನ್ನೋ ಮಾತನ್ನ ಬೇಂದ್ರೆಯವರು ಹೇಳ್ತಾರೆ. ಆ ದಿಕ್ಕಿನಲ್ಲಿ ಕನಕದಾಸರ ಈ ಹಾಡುಗಳನ್ನು ನಾವು ಮತ್ತೊಮ್ಮೆ ನೋಡಬೇಕಾದ ಪ್ರಸಂಗ ಇದೆ ಅಂತ ಕಾಣಿಸುತ್ತೆ.

ಎರಡನೇದು, ಅವರ ಭಕ್ತಿ ಪಂಥದ ಬಗೆಗೆ ಕನ್ನಡದಲ್ಲಿ ಮತ್ತು ಭಾರತದಲ್ಲೇನೆ ಎರಡು ಬಗೆಯ ಚಿಂತನೆಗಳು ಕಂಡು ಬಂದಿವೆ. ಎರಡು ಕೂಡ ಬಹಳ ವಿಚಿತ್ರ ಅಂದ್ರೆ ಎಡಪಂಥೀಯ ಚಿಂತನೆಗಳಿಂದಲೇ ರೂಪುಗೊಂಡಿರ್ತಕ್ಕಂಥವು. ಒಂದು ಬಗೆಯ ಎಡಪಂಥೀಯ ಚಿಂತನೆ ಒಂದು ವಿಧಿ ವಾದವನ್ನು ನಂಬಿರುವ ಚಿಂತನೆಗಳಿಂದ ಬಂದಿರ್ತಕ್ಕಂಥಾದ್ದು. ಅವರ ಪ್ರಕಾರ ದಾಸಪಂಥದಲ್ಲಿ ಮಂಡನೆಯಾದ, ಭಕ್ತಿ ಪಂಥದ ಕವಿಗಳು ಮಂಡಿಸುತ್ತಾ ಇರುವ ಚಿಂತನೆಗಳ ಕ್ರಮಗಳೆಲ್ಲವೂ ಕೂಡ ಜೀವವಿರೋಧಿ ಯಾಗಿರ್ತಕ್ಕಂಥವು ಅದನ್ನ ನಿರಾಕರಿಸುವ, ತೊಡಗಿಕೊಳ್ಳುವಿಕೆಗೆ ವಿರೋಧವನ್ನು ವ್ಯಕ್ತಪಡಿಸುವ, ವೈರಾಗ್ಯವನ್ನು ಬೋಧಿಸುವ ನೆಲೆಯಲ್ಲಿ ಕೆಲಸ ಮಾಡ್ತಾ ಇವೆ. ಅದರಿಂದ ಅವು ಜನರಿಗೆ ಬೇಕಾದ ನೆಲೆಯಲ್ಲಿಲ್ಲ. ಜನರಿಗೆ ವಿರೋಧಿಯಾದ ನೆಲೆಯಲ್ಲಿವೆ. ಕನ್ನಡದಲ್ಲೂ ಕೂಡ ಈ ಬಗೆಯಲ್ಲಿ ತೀವ್ರವಾದ ವಾದಗಳನ್ನು ಮಂಡಿಸುವಂತಹ ಚಿಂತನೆಗಳಿದ್ದಾವೆ. ಭಜನೆ ಮಾಡ್ತಾನೆ ಅಂತ ಯಾರಾದ್ರೂ ಹೇಳಿದ್ರೆ, ಅವನಿಗೆ ಬೇರೆ ಕೆಲಸ ಇಲ್ದೆ ಇರೋದರಿಂದ ಮಾಡ್ತಾ ಇದಾನೆ ಅಂತ. ವಿಮರ್ಶಕರು ಕೂಡ ಈ ರೀತಿ ಮಾತಾಡ್ತಾರೆ. ಏನಯ್ಯ ಆ ಕನಕದಾಸ, ಪುರಂದರದಾಸ ಏನೇಳಿದಾನೆ ಮಹಾ ಅನ್ನೋ ಧಾಟಿ. ಇನ್ನೊಂದು ಎಡಪಂಥೀಯ ಚಿಂತನೆ ಇನ್ನೊಂದು ರೀತಿಯಲ್ಲಿದೆ. ಇವರನ್ನು ಎಡಪಂಥೀಯ ಚಿಂತನೆಗಳಲ್ಲಿ ಪರಿಷ್ಕರಣವಾದಿಗಳು ಅಂತನ್ನಬೇಕೋ, ಪುನರುತ್ಥಾನವಾದಿಗಳು ಅಂತನ್ನಬೇಕೋ, ಏನನ್ನಬೇಕೋ ನಂಗೆ ಗೊತ್ತಿಲ್ಲ ಅವರ ಪ್ರಕಾರ ಭಕ್ತಿ ಪಂಥ ಅಂತ ಅನ್ನೋದು, ಎರಡನೇ ಸಹಸ್ರಮಾನದಲ್ಲಿ ರಾಜತ್ವಕ್ಕೆ ಅಥವಾ ಊಳಿಗಮಾನ್ಯ ಪದ್ಧತಿಗೆ ಪ್ರತಿರೋಧವನ್ನು ಪ್ರತಿಭಟನೆಯನ್ನು ಸೂಚಿಸಿದ ಪರಂಪರೆ. ಶಕ್ತಿ ಕೇಂದ್ರಗಳನ್ನು ನಿರಾಕರಿಸಿ ಕನ್ನಡ ಭಕ್ತಿ ಪಂಥವನ್ನು ಈ ಚೌಕಟ್ಟಿನಲ್ಲಿ ವಿವರಿಸುವ ಪ್ರಯತ್ನಗಳು ಕಡಿಮೆ ನಡೆದಿವೆ. ಆದರೆ ಭಾರತದ ಇಡೀ ಭಕ್ತಿ ಪರಂಪರೆಯನ್ನು ಅದ್ರಲ್ಲೂ ಕೂಡ ಉತ್ತರ ಭಾರತದ ಹಿಂದಿ ಪ್ರದೇಶದಲ್ಲಿ ಬಂದ ಭಕ್ತಿ ಪಂಥದ ಚಿಂತಕರನ್ನು ಈ ರೀತಿಯಲ್ಲಿ ವಿವರಿಸೋ ಪ್ರಯತ್ನಗಳು ಬಹಳವಾಗಿ ನಡೆದಿವೆ. ತಮಿಳುನಾಡಿನ ಭಕ್ತಿಪಂಥ, ಕರ್ನಾಟಕದ ಹಾಗೂ ಆಂಧ್ರದ ಭಕ್ತಿ ಪಂಥದ ಚಿಂತಕರನ್ನು ಈ ಚೌಕಟ್ಟಿನಲ್ಲಿ ಅಲ್ಲಲ್ಲಿ ವಿವರಿಸುವ ಪ್ರಯತ್ನಗಳಿವೆಯೇ ಹೊರತು ಅವುಗಳು ಎಷ್ಟರಮಟ್ಟಿಗೆ ಈ ಚೌಕಟ್ಟಿಗೆ ಹೊಂದಿಕೊಳ್ಳುವ ಚಿಂತನೆಗಳು–ಅವು ವಚನಕಾರರು ಮತ್ತು ಕನಕದಾಸರಂತಹ ದಾಸ ಪರಂಪರೆಯ ಚಿಂತನೆಗಳನ್ನು ಎಷ್ಟರಮಟ್ಟಿಗೆ ಆ ಚೌಕಟ್ಟಿನಲ್ಲಿಟ್ಟು ನೋಡಬಹುದು ಎನ್ನುವ ಬಗ್ಗೆ ಬಹಳ ಕಡಿಮೆ ಪ್ರಮಾಣದಲ್ಲಿ ಚಿಂತನೆಗಳು ನಡೆದಿವೆ ಅಂತ ಕಾಣ್ಸುತ್ತೆ. ಅಂದ್ರೆ ಅವುಗಳ ಉಗಮ, ಹುಟ್ಟಿನಲ್ಲೇ ಜೀವವಿರೋಧಿ ಅಲ್ಲ–ಅವು ಒಂದು ರೀತಿ ಅಧಿಕಾರ ವಿರೋಧಿ, ಅಧಿಕಾರ ಕೇಂದ್ರಗಳನ್ನು ಪ್ರತಿರೋಧಿಸುವ, ಪ್ರತಿಭಟಿಸುವ, ಅದಕ್ಕೆ ಎದುರಾಳಿಯಾಗಿ ನಿಲ್ಲುವ ಕೆಲಸಗಳನ್ನು ಮಾಡಿಕೊಂಡಿವೆ. ದಾಸಪಂಥದವರು ಅಧಿಕಾರ ಕೇಂದ್ರವನ್ನು ಒಪ್ತಾರೆ ಆದರೆ ರಾಜನನ್ನ, ಪಾಳೇಗಾರನನ್ನ ನಿರಾಕರಿಸುತ್ತಾರೆ, ಸೈನ್ಯವನ್ನು ಒತ್ತಾಯಗಳನ್ನು ನಿರಾಕರಿಸುತ್ತಾರೆ. ಬಹಳ ವಿಚಿತ್ರ ಅಂದ್ರೆ ಕನ್ನಡ ನಾಡಿನಲ್ಲಿ ಈ ಬಗೆಯ ಚಿಂತನೆಗಳು ಕೂಡ ಬಹಳ ಮಿಂಚಿನ ತರದಲ್ಲಿ ಬಂದು ಬೇರೆ ಬೇರೆ ರೀತಿಯಲ್ಲಿ ಮಾಯವಾಗಿ ಹೋಗಿ ಬಿಟ್ಟಿವೆ. 1960ರ ಆಸುಪಾಸಿನಲ್ಲಿ ಪ್ರಜಾವಾಣಿಯ ಒಂದು ಲೇಖನದಲ್ಲಿ ಶ್ರೀಕಂಠ ಶಾಸ್ತ್ರಿಗಳು ಒಂದು ಮಾತು ಬರೆದರು. ವಿಜಯನಗರದ ಪತನಕ್ಕೆ ಪುರಂದರದಾಸರು ಕಾರಣರು ಅಂತ. ಅವಾಗ ಇದ್ದಕ್ಕಿದ್ದಂತೆ ದೊಡ್ಡ ಗಲಾಟೆ ಆಯ್ತು–ಅಂದ್ರೆ ವಾಚಕರ ವಾಣಿಯಲ್ಲಿ–ಅಲ್ಲಿ ಇಲ್ಲಿ. ವಿಜಯನಗರ ಪತನಕ್ಕೆ ಕಾರಣರಾದವರು ಅವರು ಅಂದರೆ ವಿಜಾಪುರದ ಸುಲ್ತಾನರೊಡನೆ ಕೈಜೋಡಿಸಿದರು ಅಂತ ಅಲ್ಲ. ಅಂದ್ರೆ ಅವರು ರೂಪಿಸಿದ ಚಿಂತನಾ ಕ್ರಮಗಳೇ ಯಾವ ರೂಪದಲ್ಲಿ ಇದ್ದವು ಅಂದ್ರೆ ಸಾಮ್ರಾಜ್ಯ ಸ್ಥಾಪನೆಯ ನಿಲುವಿಗೇನೆ ವಿರುದ್ಧವಾಗಿದ್ದವು ಅಂತ. ಆದ್ದರಿಂದಾನೆ ಅವರು ಪರೋಕ್ಷವಾಗಿ ಸಾಮ್ರಾಜ್ಯ ಪತನಕ್ಕೆ ಕಾರಣರಾದರು ಅಂತ. ಇದು

ಕೋಸಾಂಬಿಯವರಂಥ ಚಿಂತಕರನ್ನು ಓದಿದರೆ ಅಥವಾ ರೋಮಿಲಾ ಥಾಪರ್ ಅಂತವರನ್ನು ಓದಿದರೆ ಕರ್ನಾಟಕದ ಬಗೆಗಿನ ಚಿಂತನೆಗಳು ಸಿಗದಿದ್ದರೂ ಒಟ್ಟಾರೆಯಾಗಿ ಭಕ್ತಿ ಪಂಥದ ಬಗ್ಗೆ ಇಂಥ ಚಿಂತನೆಗಳು ಸಿಗುತ್ತವೆ.

ಕರ್ನಾಟಕದಲ್ಲಿ ಯಾಕೋ ಈ ಚಿಂತನೆಗಳು ದಟ್ಟವಾಗಿ ಬೆಳೆದಂತಿಲ್ಲ. ನಾನು ಕೊನೆ ಹಂತಕ್ಕೆ ಬರ್ತಾ ಇದೀನಿ. ಅದು ಏನು ಅಂತ ಅಂದ್ರೆ ಯಾವ ರೀತಿಯಲ್ಲಿ ಕನಕದಾಸರ ಹಾಡುಗಳು ಇತರ ದಾಸರ ಹಾಡುಗಳಿಗಿಂತ ಬೇರೆಯಾಗಿವೆ ಎಂಬುದು. ಎರಡು ಬಗೆಯ ರಚನೆಗಳನ್ನು ನಾವು ಕನ್ನಡದಲ್ಲಿ ನೋಡಬಹುದು. ಒಂದು ಕಂಡದ್ದನ್ನು ಹೇಳುವ ರಚನೆಗಳು, ಇನ್ನೊಂದು ಕಾಣುವ ದಾರಿಗಳನ್ನು ಹೇಳುವ ರಚನೆಗಳು. ಕಾಣುವ ದಾರಿಗಳನ್ನು ಹೇಳಿದಾಗ ಕಂಡುಕೊಳ್ಳುವ ಜವಾಬ್ದಾರಿ ಹೇಳುವವರಿಗೂ ಇರ್ತದೆ. ಅದನ್ನು ಕೇಳಿ ಅವರ ಜೊತೆಯಲ್ಲಿ ಹೋಗುವವರಿಗೂ ಇರ್ತದೆ. ಅಂದ್ರೆ ಒಂದು ರೀತಿಯಲ್ಲಿ co-travellor ಥರ. ನಾನು ಕನಕದಾಸರನ್ನು ಎರಡನೆ ಬಗೆಯ ಹಾಡುಗಾರರು ಅಂತ ಹೇಳೋಕೆ ಪ್ರಯತ್ನ ಪಡ್ತೀನಿ. ಮೊದಲನೆ ಬಗೆಯ ಹಾಡುಗಾರರು ಸ್ವಲ್ಪ ಮಟ್ಟಿಗೆ ತಾವು ತಿಳಿದು ಕೊಂಡದ್ದನ್ನು ಜನ ಬದುಕಬೇಕು ಅಂತೇಳಿ ಮರಳಿ ಅವರಿಗೆ ತಿಳಿಹೇಳ್ತಾ ಇರ್ತಕ್ಕಂಥವರು. ಇದು ಸತ್ಯ. ಈ ಹಾದಿಯಲ್ಲಿ ನೀವು ಬದುಕಿದರೆ ನಿಮ್ಮ ಜೀವನ ಉದ್ಧಾರ ಆಗ್ತದೆ. ನಾನು ಹೇಳ್ತಾ ಇರೋದರ ಬಗ್ಗೆ ನನಗೆ ಸಂದೇಹಗಳಿಲ್ಲ. ಈ ತರದ್ದಕ್ಕೆ ಕನ್ನಡದಲ್ಲಿ Extrem example ಮಂಕುತಿಮ್ಮನ ಕಗ್ಗ. ಅಲ್ಲಿ ಪ್ರಶ್ನೆಗಳಿಲ್ಲ ತೀರ್ಮಾನಗಳಿವೆ. **'ಬದುಕು ಜಟಕಾ ಬಂಡಿ ವಿಧಿಯದರ ಸಾಹೇಬ'** ಅಂತ ಹೇಳಿದರೆ, ಪದ ಕುಸಿಯೆ ನೆಲವಿಹದು, ಅವನು ಯಾವ ಕಡೆ ಹೋಗು ಅಂತಾನೋ ಆ ಕಡೆ ಹೋಗಬಹುದು. ನಾವು ಹೋಗಲ್ಲ ಅಂತೇಳಿದ್ರೆ ನೆಲದ ಮೇಲೆ ಬಿದ್ದು ಬಿಡ್ತೀವಿ. ಆದ್ದರಿಂದ ಆ ಕಡೆ ಹೋಗ್ಬೇಕು. ಇಂಥಾ ನೂರಾರು ಉದಾಹರಣೆಗಳಿವೆ. ಹಿಂದೆ ಡಿಬೇಟ್‌ಗಳಿಗೆ ಹೋಗೋರೆಲ್ಲ ಬಹಳ ಭಯ ಭಕ್ತಿಯಿಂದ ಓದ್ತಾ ಇದ್ದ ಪುಸ್ತಕ ಯಾವುದು ಅಂದ್ರೆ ಮಂಕುತಿಮ್ಮನ ಕಗ್ಗ. ಮಂಕುತಿಮ್ಮನ ಕಗ್ಗವನ್ನು ಯಾರು ಹೇಳ್ತಿದ್ರೋ ಅವರಿಗೇ ಬಹುಮಾನಗಳು ಬರ್ತಾ ಇದ್ವು. ಯಾಕೇಂದ್ರೆ ಅದರಲ್ಲಿ ಸಂದೇಹಗಳು ಇರ್ತಾ ಇರ್ಲಿಲ್ಲ. ನಮ್ಮ ದಾಸ ಪರಂಪರೆಯಲ್ಲಿರುವ ಹಾಡುಗಳಲ್ಲೂ ಈ ರೀತಿಯ ತೀರ್ಮಾನಗಳು ಬರುತ್ತವೆ. ಕನಕದಾಸರ ಹಾಡುಗಳಲ್ಲಿ ಈ ಬಗೆಯ ತೀರ್ಮಾನಗಳಿಲ್ಲ. **"ಎಲ್ಲರೂ ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ"** ಅನ್ನೋದು ತೀರ್ಮಾನದ ತರ ಕಾಣ್ಸುತ್ತೆ. ತೀರ್ಮಾನ ಅಲ್ಲ ಅದು. ಆದ್ರೆ ಮುಂದಕ್ಕೆ ಅವರ ರಚನೆಗಳನ್ನು – **"ತಲ್ಲಣಿಸದಿರು ಕಂಡ್ಯ ತಾಳು ಮನವೆ" ಎಲ್ಲರನು ಸಲಹುವನು ಇದಕ್ಕೆ ಸಂಶಯವಿಲ್ಲ"** ತೀರ್ಮಾನದ ತರ ಕಾಣ್ಸುತ್ತೆ. ಆದರೆ ಇಡೀ ರಚನೆ ಯಾವುದನ್ನು ನಮ್ಮ ಎದುರು ಇಡುತ್ತದೆ ಅಂದ್ರೆ ಎರಡು ಪಕ್ಷಗಳನ್ನು ಕಟ್ಟುತ್ತೆ. ಒಂದು ಕಾಯುವಾತ, ಇನ್ನೊಂದು ಆರ್ತತೆಯಿಂದ ಮೊರೆಯಿಡುವಾತ. ದೈವ ಮಾನವ ಸಂಬಂಧದಲ್ಲಿ ದೈವ ಅಂತಕ್ಕಂಥಾದ್ದು ಕಾಯೋದು. ಇನ್ನೊಂದು ಮನುಷ್ಯ ಆರ್ತನಾದದಲ್ಲಿ ಮೊರೆಯಿಡೋದು. ರಿಯಲ್ ಯಾವುದು ಅಂತ ಅಂದ್ರೆ ಕನಕದಾಸರ ಪ್ರಕಾರ ಆರ್ತನಾದವೇ. ಮೊರೆ ಇಡೋದೇನೆ ನಿಜ. ಮೊರೆ ಇಡಬೇಕಾಗಿ ಬಂದಿರುವ ಮನುಷ್ಯನ ಪ್ರಿಡಿಕೆಮೆಂಟ್ ಇದೆಯಲ್ಲ, ಅಸ್ತಿತ್ವದ ಪ್ರಶ್ನೆಗಳಿವೆಯಲ್ಲ ಅವು ನಿಜ. ಕಾಯ್ತಾನೆ ಅನ್ನುವ ನಂಬಿಕೆ ನಿಮ್ಮನ್ನು ಕಾಯ್ತಾ ಇರಬಹುದು. ನಿಮ್ಮ ಜೊತೆಗಿರಬಹುದು. ಆದ್ರೆ ಕಾಯ್ತಾನೆ ಅನ್ನುವ ನಂಬಿಕೆಯಿಂದ ನೀವು ಆರ್ತನಾದವನ್ನು ಮಾಡ್ದೇ ಇರೋಕಾಗೋದಿಲ್ಲ. ಸಂಕಷ್ಟಗಳನ್ನು ಅನುಭವಿಸ್ದೇ ಇರೋಕಾಗಲ್ಲ. ಏಕೆ ನಿರ್ದಯನಾದೆಯೋ ಹರಿಯೇ ಅಂತ ಪ್ರಶ್ನೆ ಹಾಕಿದಾಗ ಅವರ್ನೆಲ್ಲ ಕಾದೆ ನೀನು, ಅವ್ನ್ಯಾರೋ ಅಜಮಿಳನನ್ನ, ವಿಭೀಷಣನನ್ನು ಕಾಯ್ದೆ, ಅವ್ರೇನ್ ದೊಡ್ಡಪ್ಪ ಚಿಕ್ಕಪ್ಪನ ಮಕ್ಕಳಾ, ನಾನೇನೂ ಅಲ್ವಾ ನಿನಗೆ ಅವರೆಲ್ಲಾ ಹಿತರೇನೋ, ನಾನಿನಗೆ ಅಹಿತನೋ, ಅವ್ರೆಲ್ಲಾರ್ನೂ ಕಾಯ್ದುಬಿಟ್ಟೆ ಆದ್ರೆ ನನ್ನನೇಕೆ ಕಾಯೋದಿಲ್ಲ ಅನ್ನೋದು! ನನ್ನನ್ಯಾಕೆ ಕಾಯ್ತಾಯಿಲ್ಲ ಅಂತ ಅನ್ನೋದಿದ್ಯಲ್ಲ ಅದು ಮನುಷ್ಯನ ಪ್ರಿಡಿಕಮೆಂಟ್! ಕಾಯ್ತಾನೆ ಅನ್ನೋ ನಂಬಿಕೆಯಿಂದ–ಇದು ಸ್ತೋತ್ರದ ಭಾವ.

ಕನ್ನಡದಲ್ಲಿ ಈ ಬಗೆಯ ಸ್ತೋತ್ರದ ಭಾವ ಇರುವ ರಚನೆಗಳು ಬಹಳ ಇವೆ. ಸ್ತೋತ್ರದ ಭಾವದಲ್ಲಿ ಆರ್ತತೆ ಇರೋದಿಲ್ಲ ನಂಬಿಕೆ ತೀವ್ರವಾಗಿರುತ್ತದೆ. ರಕ್ಷಿಸು ನಮ್ಮ ಅನವರತ ಅಂತ ಅವರು ಬರೆದಿರುವ ಷಟ್ಪದಿಯನ್ನು ಎಂಡ್ ಮಾಡಿರುವ ರೀತಿಯನ್ನು ನೋಡಿದ್ರೆ ಎರಡು ಬಗೆಯ ರಚನೆಗಳು ಅವುಗಳೊಳಗಿವೆ. ಒಂದು ಬಗೆಯ ರಚನೆ ಅವು ಸ್ತೋತ್ರದ ಮಾದರಿಯಲ್ಲಿವೆ. ಇನ್ನೊಂದು ಬಗೆಯ ರಚನೆಗಳಲ್ಲಿ ಸ್ತೋತ್ರ ಇಲ್ಲ. ಅವುಗಳನ್ನು ಎಚ್ಚರಿಕೆಯಿಂದ ಗಮನಿಸಿದರೆ ಈ ರೀತಿಯ ರಿಯಾಲಿಟಿ ಯಾವುದು? ಒಂದು ರಕ್ಷಿಸುವ ಅಥವಾ ಪೊರೆಯುವಾತ, ಇದಾನೆ ಅನ್ನುವ ನಂಬಿಕೆಯಲ್ಲಿ ಪ್ರಪತ್ತಿಯನ್ನು ವಿಶಿಷ್ಟಾದ್ವೈತ ಹೇಳುವ ನಂಬಿಕೆಯನ್ನು ಖಂಡಿತ ಪ್ರಪೋಸ್ ಮಾಡ್ತಾ ಇಲ್ಲ ಕನಕದಾಸರು. ಪ್ರಪತ್ತಿ ಮಾರ್ಗದಲ್ಲಿ ಪು.ತಿ.ನ. ಅವ್ರನ್ನು ಓದ್ತಾ ಇದ್ರೆ ಈ ರೀತಿಯ ನಂಬಿಕೆಯ ಜಗತ್ತು ಯಾವ ರೀತಿ ಇರ್ತದೆ ಅಂತ ಅನ್ನೋದು ಬಹಳ ಸ್ಪಷ್ಟ ಗೊತ್ತಾಗುತ್ತೆ. ಅದರರ್ಥ ನಾನು ಪು.ತಿ.ನ. ಅವರನ್ನು ಡಿಗ್ರೇಡ್ ಮಾಡ್ತಾ ಇಲ್ಲ. ಅವರನ್ನು ಅರ್ಥ ಮಾಡ್ಕೋಳೊ ಕ್ರಮಾನೇ ಬೇರೆ ಇದೆ. It is a different question. ಈ ದಾಸ ಪರಂಪರೆಯ ರಚನೆಗಳು ಕೀರ್ತನೆಗಳು ಅಥವಾ ಹಾಡುಗಳು ಜನರಲ್ಲಿ ಒಂದು ವೈರಾಗ್ಯವನ್ನು ಅಥವಾ ದೈವದಲ್ಲಿ ನಂಬಿಕೆಯನ್ನು ಬೆಳೆಸಿಕೊಂಡು ತಮ್ಮ ಕ್ರಿಯಾಶೀಲತೆಯನ್ನು ಕಳೆದುಕೊಳ್ಳಬೇಕು ಅಂತ ಒತ್ತಾಯ ಮಾಡ್ತವೆ ಅಂತ ಚಿಂತನೆಗಳಿವೆ ಅದನ್ನು ನಾನು ಒಪ್ಪೋದಿಲ್ಲ. ಹಾಗೆ ಒಪ್ಪಿದರೆ ನಾವು ಕನಕದಾಸರ ಹಾಡುಗಳನ್ನು ತಪ್ಪಾಗಿ ಓದ್ತಿದೀವಿ ಅಂತ. ಅದಕ್ಕೋಸ್ಕರವಾಗಿಯೇ ನಳಚರಿತ್ರೆಯನ್ನು ಬರೆಯುವಾಗ್ಲಿ, ಮೋಹನ ತರಂಗಿಣಿಯನ್ನು ಬರೆಯುವಾಗ್ಲಿ ಕನಕದಾಸರು ಬೇರೆ ಬೇರೆಯವರಾಗಿದ್ರು ಅಂತ ನನಗನ್ನಿಸೋದಿಲ್ಲ. ಅದು ಒಂದೇ ಒಂದು ವ್ಯಕ್ತಿತ್ವದ ಬೇರೆ ಬೇರೆ ಭಾಗಗಳಾಗಿ ನನಗೆ ಕಾಣ್ಸುತ್ತೆ. ಇದು ನಾನು ನಿಮಗೆ ಪ್ರಪೋಸ್ ಮಾಡ್ತಾ ಇರುವ ಥೀಸಿಸ್. ಇದರ ಬಗ್ಗೆ ನೀವು ಚರ್ಚೆ ಮಾಡಬಹುದು. ಈ ಮೂರು ದಿಕ್ಕುಗಳಲ್ಲಿ ಕನಕರನ್ನು ಕ್ಲೈಮ್ ಮಾಡಿರುವ ಪ್ರಯತ್ನಗಳು 21ನೆ ಶತಮಾನದ ಈ ಘಟ್ಟದಲ್ಲಿ ಯಾವ್ಯಾವ ರೀತಿಯಲ್ಲಿ ಮುಂದಕ್ಕೆ

ಹೋಗಬಹುದು ಗೊತ್ತಿಲ್ಲ. ಆದ್ರೆ ಮೊದಲ್ನೇದರ ಬಗ್ಗೆ ನನಗೆ ನನ್ನದೇ ಆದ ಸಂದೇಹಗಳಿವೆ. ಎರಡನೆಯದು ಬಹಳ ಅದ್ಭುತವಾದದ್ದು–20ನೇ ಶತಮಾನದಲ್ಲಿ ಆದ್ರೆ ಈಗ ಮಾಧ್ಯಮಗಳ ಭರಾಟೆಯಲ್ಲಿ ಕನಕದಾಸರನ್ನು ಯಾವ್ರೀತಿ ರೀಕ್ಲೇಮ್ ಮಾಡ್ತೀವೋ ನನಗೆ ಗೊತ್ತಿಲ್ಲ. ಮೂರ್ನೇದರ ಬಗ್ಗೆ ನಮಗೆ ಹೆಚ್ಚು ಅವಕಾಶಗಳಿವೆ. ಅದ್ರಿಂದ ಈ ಮೂರರಲ್ಲಿ ಅವುಗಳನ್ನು ಬೇರ್ಪಡ್ಸೋದರ ಜೊತೆಗೆ ಯಾವುದು ನನ್ನ ಆಯ್ಕೆ ಅನ್ನೋದನ್ನು ಪರೋಕ್ಷವಾಗಿ ನಿಮಗೆ ಬದಲಿ ಮಾರ್ಗದಲ್ಲಿ ತಿಳ್ಸಿದೀನಿ. ಇದರ ಬಗ್ಗೆ ಚರ್ಚೆಗೆ ತೆರೆದಿದೆ. ನಮ್ಮ ಬಂಜಗೆರೆ ಮತ್ತು ಚಿಕ್ಕಣ್ಣನವರು ಏನ್ ಹೇಳ್ತಾರೆ ಅನ್ನೋದರ ಮೇಲೆ ಮುಂದಿನ ಮಾತುಗಳಿರ್ತವೆ ನಮಸ್ಕಾರ.

## ಆಶಯ ಭಾಷಣ

**ಡಾ. ಬಂಜಗೆರೆ ಜಯಪ್ರಕಾಶ**

ಭಕ್ತಿಪಂಥವನ್ನು ನಾವು ಗ್ರಹಿಸುವುದಕ್ಕೆ ಇರುವ ಸಾಧ್ಯತೆಗಳು ಏನೇನು ಅನ್ನುವುದರ ಬಗ್ಗೆ ಪ್ರೊ. ಕೆ.ವಿ.ಎನ್. ಅವರು ಸತ್ವಪೂರ್ಣವಾಗಿರು ವಂತಹ ಅಂಶಗಳನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಇವತ್ತಿನ ಈ ಚಿಂತನಾ ಶಿಬಿರದಲ್ಲಿ ನಾವು ನಿರೀಕ್ಷೆ ಮಾಡುತ್ತಾ ಇರುವುದು ಏನು ಎಂಬುದರ ಬಗ್ಗೆ ಮಾತ್ರ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಯಾಕೆಂದರೆ ಈ ಗೋಷ್ಠಿಯ ಸಂಚಾಲಕನಾಗಿ ನಾನು ಮಾತನಾಡಬೇಕಿರುವ ಬೇರೆ ಅಂಶಗಳು ಹೆಚ್ಚಿಗೆ ಏನೂ ಇಲ್ಲ.

ಕನಕದಾಸರಿಗೂ ನನಗೂ ಇರುವ ಸಂಬಂಧ ಬಹಳ ಚಿಕ್ಕದು. ರಹಮತ್ ತರೀಕೆರೆಯವರು ಭಕ್ತಿಪಂಥದ ಬಗ್ಗೆ ಒಂದು ಲೇಖನವನ್ನು ಬರೆದಾಗ ಪ್ರಾಸಂಗಿಕವಾಗಿ ಮಧ್ಯ ಪ್ರವೇಶಿಸಿ ಪ್ರತಿಕ್ರಿಯೆಯನ್ನು ಬರೆದಿದ್ದೆ. ಆ ಲೇಖನಕ್ಕೆ ರಹಮತ್ ನೀಡಿದ ಪ್ರತಿಕ್ರಿಯೆ, ಅವರ ಒಂದು ಕೃತಿಯಲ್ಲಿ ಪ್ರಕಟವಾಗಿದೆ. ನನ್ನ ಪ್ರತಿಕ್ರಿಯೆಯಲ್ಲಿ ಭಕ್ತಿಪಂಥವನ್ನು ಗ್ರಹಿಸುವುದಕ್ಕೆ ಇನ್ನೂ ಬೇರೆ ಬೇರೆ ನೆಲೆಗಳು ಇವೆ ಅನ್ನುವುದನ್ನು ಪ್ರತಿಪಾದನೆ ಮಾಡಿದ್ದೆ. ಅದು ಪ್ರೊ. ಕೆ.ವಿ.ಎನ್. ಪ್ರಸ್ತಾಪಿಸಿದ ಮಾತುಗಳಲ್ಲಿ ಹೇಳುವುದಾದರೆ ಎಡಪಂಥೀಯ ಚಿಂತನೆಯ ಎರಡನೆಯ ನೆಲೆ ಅಷ್ಟೇನೆ. ಈ ರೀತಿಯಲ್ಲಿ ಒಂದು ಸನ್ನಿವೇಶದ ಒಳಗಡೆಯೇ ಸಂಭವಿಸುವ ಕೆಲವು ಚಲನೆಗಳನ್ನು ನಾವು ಗ್ರಹಿಸುವುದು ಹೇಗೆ? ಹೆಚ್ಚು ಸೂಕ್ಷ್ಮ ನೆಲೆಗಳಿಂದ ಸಂಸ್ಕೃತಿಯ ಅಧ್ಯಯನದಲ್ಲಿ ನಾವು ಇದನ್ನು ಗ್ರಹಿಸಬೇಕಾದ ಅಗತ್ಯವಿದೆ ಎನ್ನುವುದು ನನ್ನ ಪ್ರತಿಪಾದನೆ.

ಬಹಳ ಸ್ಥೂಲವಾಗಿರುವಂತಹ ಹೋರಾಟದ ಕಲ್ಪನೆಗಳು ಮೊದಲಿನಿಂದಲೂ ನಮಗೆ ಇವೆ. ಹೋರಾಟ ಮಾಡುವುದೇ ಆಗಿದ್ದರೆ, ಸಂಗೊಳ್ಳಿ ರಾಯಣ್ಣನ ರೀತಿ ಸೈನ್ಯವನ್ನು ಕಟ್ಟಿರಬೇಕು. ನಿರ್ಣಾಯಕವಾಗಿ ಬ್ರಿಟಿಷ್ ಸೈನ್ಯವನ್ನು ಎದುರಿಸಿರಬೇಕು ಮತ್ತು ನೇಣಿಗೆ ಹೋಗಿರಬೇಕು. ಆ ರೀತಿ ಇದ್ದರೆ ಮಾತ್ರ ಹೋರಾಟಗಾರನನ್ನು ಸಾಮಾಜಿಕ ಸಂಚಲನೆಯನ್ನು ಉಂಟುಮಾಡಿದ ಹಾಗೂ ಅಧಿಕಾರ ಕೇಂದ್ರವನ್ನು ಪ್ರಶ್ನಿಸಿದ ಪ್ರತೀಕವಾಗಿ ನಾವು ನೋಡುತ್ತೇವೆ. ಆ ರೀತಿಯಾಗಿರುವ ಬಹಳ ಸ್ಪಷ್ಟವಾದ ಪ್ರತೀಕಗಳಲ್ಲದಿದ್ದರೆ, ಮೊದಲಿನಿಂದಲೂ ನಾವು ಬೆಳೆಸಿಕೊಂಡು ಬಂದಿರುವ ಚಿಂತನಾ ನೆಲೆಗಳ ದೋಷವೋ ಅಥವಾ ತೊಡಕೋ ಈ ಬಗೆಯ ನಿರಸನಗಳು ಪ್ರಭುತ್ವ ರಚನೆಯ ವಿರುದ್ಧವಾಗಿ ನಡೆಯುವ ಹಲವು ಬಗೆಯ ಪ್ರತಿಕ್ರಿಯೆಗಳನ್ನು ಗ್ರಹಿಸುವುದಕ್ಕೆ ಸಿದ್ಧರಿರುವುದಿಲ್ಲ. ಒಟ್ಟಾರೆ ಇದೊಂದು ಪ್ರಕ್ರಿಯೆ. ಅದರೊಳಗೆ ಉಂಟಾಗಿರುವ ಬೇರೆ ಬೇರೆ ಪರಿಣಾಮಗಳನ್ನು ನೋಡುವುದಕ್ಕೆ ನಮಗೆ ಭಕ್ತಿಪಂಥವೂ ಸೇರಿದಂತೆ ಬಹಳ ಒಳ್ಳೆಯ ಆಕರಗಳಿವೆ. ಶರಣ ಚಳುವಳಿ ಹಾಗೂ ನಾವು ಮರೆತಿರಬಹುದಾಗಿರುವ ನಿರ್ಲಕ್ಷಿತ ನೆಲೆಯ ಈ ರೀತಿಯಾಗಿರುವ ಹಲವಾರು ಅಧ್ಯಯನ ಸಾಧ್ಯತೆಗಳು ನಮ್ಮ ಮುಂದಿವೆ ಮತ್ತು ಈ ಅಧ್ಯಯನ ಸಾಧ್ಯತೆಗಳ ಮಾರ್ಗ ನಮ್ಮ ಮುಂದೆ ಇನ್ನೂ ತೆರೆದೇ ಇದೆ.

ಸಬಾಲ್ಟರ್ನ್ ಸ್ಟಡೀಸ್‌ನಲ್ಲಿ ಮೀರಾ ಬಗ್ಗೆ ಬರೆದಿರುವ ಒಂದು ಲೇಖನ ನನಗಿಲ್ಲಿ ನೆನಪಾಗುತ್ತಿದೆ. ಮೀರಾ ಕೇವಲ ಭಕ್ತಿ ಕವಯಿತ್ರಿ ಅಲ್ಲ. ಮೇಲ್ನೋಟಕ್ಕೆ ಆಕೆ ಕೇವಲ ಕೃಷ್ಣನ ಭಜನೆಗಳನ್ನು ಮಾಡಿದಂತೆ ಕಾಣಿಸುತ್ತದೆ. ಆದರೆ ಆಕೆಯದು ಬೇರೆಯದೇ ಆದಂತಹ ಒಂದು ಪ್ರತಿಭಟನಾ ನೆಲೆ ಇದೆ. ಅದು ಎಷ್ಟು ಸೂಕ್ಷ್ಮವಾಗಿದೆ ಎಂದು ಹೇಳಿದರೆ, ಕುಲೀನ ರಜಪೂತರು ಈಗಲೂ ಮೀರಾ ಭಜನೆಗಳನ್ನು ಹಾಡುವ ಬಗ್ಗೆ ವಿರೋಧ ವ್ಯಕ್ತಪಡಿಸುತ್ತಾರಂತೆ. ಆ ಭಜನೆಗಳು ಅವರ ಜಾತಿಯ ಅಹಂಗೆ ಹಾಕುವ ಸವಾಲು ಅಂತ ಅವರ ಭಾವನೆ. ಆ ಹಾಡುಗಳಲ್ಲಿ ಆ ಬಗೆಯ ಪ್ರತಿಭಟನೆಯ ಧ್ವನಿಯೇ ಇಲ್ಲ. ಆದರೂ ಮೀರಾ ಬರೆದಿರುವ ಹಾಡುಗಳನ್ನು ಹಾಡಬಾರದು, ಯಾವುದೇ ರಜಪೂತ ಅಧಿಕಾರಸ್ಥ ವಲಯದವರ ಸಮಾರಂಭಗಳಲ್ಲಿ ಮೀರಾ ಭಜನ್‌ಗಳನ್ನು ಹಾಡಬಾರದು ಅಂತ ನಿರ್ಬಂಧಿಸುತ್ತಾರೆ. ಯಾಕೆಂದರೆ ಅವರ ಜಾತಿ ಕಟ್ಟಲೆಗಳಿಗೆ ಹಾಕುವ ಸವಾಲು ಅದು ಅಂತ ಅವರ ಭಾವನೆ. ಮೀರಾ ಭಜನೆಗಳನ್ನು ಹಾಡುವವರು ಬಹಳ ಸಾಮಾನ್ಯ ವರ್ಗದ ಜನರು. ಯಾಕೆಂದರೆ ಅಂದಿನ ರಜಪೂತ ಸಮಾಜ ನಂಬಿದ್ದ ಗಂಡಾಳ್ವಿಕೆಯ ಜಾತಿ ಶ್ರೇಷ್ಠತೆಯ ತತ್ವಗಳಿಗೆ ವಿರುದ್ಧವಾಗಿ ಮೀರಾ ಬಯಲಿಗೆ ಬಂದು ಹಾಡಿದವಳು, ಕುಣಿದವಳು.

ಆದ್ದರಿಂದ ಆ ಭಜನೆ ಕೃಷ್ಣನ ಬಗ್ಗೆಯಾದರೂ ಇರಲಿ ಅಥವಾ ಮತ್ತೊಂದರ ಬಗ್ಗೆ ಇರಲಿ, ಅದನ್ನು ಹಾಡಿದವರು ಊಳಿಗಮಾನ್ಯ ಪುರುಷ ಪ್ರಧಾನ ಸಮಾಜದ ಕೌಟುಂಬಿಕ ಸದಾಚಾರ ಎಂದು ಕರೆಯಲ್ಪಡುವ ಮರ್ಯಾದೆಯ ಉಲ್ಲಂಘನೆಗೆ ಸಂಕೇತ. ಆದ್ದರಿಂದ ಮೀರಾಳ ಭಜನೆಗಳನ್ನು ಹಾಡುವುದೆಂದರೆ ಕುಲೀನ ರಜಪೂತರಿಗೆ ಸಹನೆಯಾಗುವುದಿಲ್ಲ. ಆದ್ದರಿಂದ ಮೀರಾ ಭಜನೆಗಳನ್ನು ಕೇವಲ ಶಬ್ದಾರ್ಥದ ಮೂಲಕ ಮಾತ್ರ ಗ್ರಹಿಸದೆ, ಒಂದು ನಿರ್ದಿಷ್ಟ ಸನ್ನಿವೇಶದೊಳಗೆ ಅವು ಉಂಟು ಮಾಡಿದ ಸಂಚಲನದ ಮುಖಾಂತರ ಗ್ರಹಿಸಿದರೆ ಮಾತ್ರ ನಮಗೆ ಅದರ ಇನ್ನೊಂದು ಮಗ್ಗಲು ಹೊಳೆಯುತ್ತದೆ. ಅಧಿಕಾರಕ್ಕೆ

ಎಸೆಯಲ್ಪಟ್ಟ ಸವಾಲುಗಳು ಯಾವ ಯಾವ ರೂಪದಲ್ಲಿ ಇರಬಹುದೆಂಬುದರ ಸೂಕ್ಷ್ಮ ನಮಗೆ ಗೊತ್ತಾಗುತ್ತದೆ. ಆಗ ಮಾತ್ರ ಒಂದು ನಿರ್ದಿಷ್ಟ ಸಂದರ್ಭದ ಸಮಾಜ ಅದನ್ನು ಸ್ವೀಕರಿಸಿರುವ ವಿಭಿನ್ನ ನೆಲೆಗಳು ನಮಗೆ ಗೋಚರವಾಗುತ್ತವೆ. ಇಂತಹ ಹಿನ್ನೆಲೆಯಲ್ಲಿ ಕನಕದಾಸರನ್ನು ಕುರಿತು ಸ್ವಲ್ಪ ಭಿನ್ನ ನೆಲೆಯಿಂದ, ಈವರೆಗೂ ಆಗಿರುವ ಸಿದ್ಧ ಮಾದರಿಗಳನ್ನು ಬಿಟ್ಟು, ನಾವು ಏನಾದರೂ ಆಲೋಚನೆ ಮಾಡುವುದಕ್ಕೆ ಸಾಧ್ಯವಿದೆಯೇ ಎನ್ನುವುದನ್ನು ಚಿಂತಿಸುವುದಕ್ಕೆ ವಿದ್ವಜ್ಜನರನ್ನು, ಈ ಕ್ಷೇತ್ರದಲ್ಲಿ ಸಾಕಷ್ಟು ಕೆಲಸ ಮಾಡಿರುವ ಚಿಂತನೆ ನಡೆಸಿರುವ ತಜ್ಞರನ್ನು ಸೇರಿಸಿ ಈ ಚಿಂತನಾ ಶಿಬಿರವನ್ನು ಏರ್ಪಡಿಸಲಾಗಿದೆ.

ಚರ್ಚೆಯಲ್ಲಿ ಪಾಲ್ಗೊಳ್ಳುವವರು ಎಂದು ಈ ಆಹ್ವಾನ ಪತ್ರಿಕೆಯಲ್ಲಿ ಮುದ್ರಿಸಲ್ಪಟ್ಟ ಹೆಸರುಗಳು ಕೇವಲ ಸಭಿಕರನ್ನು ಸೇರಿಸುವ ಉದ್ದೇಶವನ್ನು ಇಟ್ಟುಕೊಂಡು ಮಾಡಿರುವ ಪಟ್ಟಿ ಅಲ್ಲ. ಈ ವಿಷಯಕ್ಕೆ ಸಂಬಂಧಪಟ್ಟಂತೆ ಸ್ವಲ್ಪ ಹೊಸ ನೋಟಗಳನ್ನು ಕೊಡಬಹುದು ಅಂತ ನಾವು ಭಾವಿಸಿದವರನ್ನು ಆಹ್ವಾನಿಸಲಾಗಿದೆ. ನಿನ್ನೆ ನನಗೆ ಈ ಬಗೆಯ ಒಂದು ತೊಡಕು ಎದುರಾಯಿತು. ನ್ಯಾಷನಲ್ ಕಾಲೇಜಿನಲ್ಲಿ ಕನಕದಾಸರನ್ನು ಕುರಿತು ಭಾಷಣ ಮಾಡಲು ಹೋಗಿದ್ದೆ. ಕೆಲವರು ಬಹಳ ಪೆಚ್ಚಾಗಿಹೋದರು. ಕನಕದಾಸರ ಜನಪ್ರಿಯ ಕೀರ್ತನೆಗಳನ್ನು ಇಟ್ಟುಕೊಂಡು ಭಾಷಣವನ್ನು ಮಾಡದೆ ಯಾವುದೋ ಭಕ್ತಿಪಂಥ, ಆರೂಢಪಂಥ, ಅವದೂತಪಂಥ ಇವುಗಳ ಹಾದಿ ಹಿಡಿದು ಕಬೀರನ ಬಳಿ ಹೋಗಿ ಚೈತನ್ಯನವರೆಗೆ ಅಲೆದಾಡಿದನಲ್ಲ ಅಂತ. ಇದನ್ನು ಆನಂತರ ಬೇರೆ ಕೆಲವು ಸ್ನೇಹಿತರು ಹೇಳಿದರು. ಅಲ್ಲಿ ವಿದ್ಯಾರ್ಥಿಗಳಿದ್ದುದರಿಂದ ಬೇರೆ ತರದಲ್ಲಿ ನೀವು ಪ್ರೆಸೆಂಟ್ ಮಾಡುತ್ತೀರ ಎಂದು ನಿರೀಕ್ಷಿಸಿದ್ದೆವು ಎಂದು ಹೇಳಿದರು. ಆ ಬಗೆಯದೊಂದು ಜನಪ್ರಿಯ ಮಾದರಿಯ ಭಾಷಣವನ್ನು ಮಾಡದೆ ನಿರೀಕ್ಷೆಗಳನ್ನು ನಾನು ಗೋತ ಹೊಡೆಸಿದೆನೆಂಬುದು ಅವರ ಆಕ್ಷೇಪವಾಗಿತ್ತು. ಈ ಬಗೆಯದೊಂದು ಸಮಸ್ಯೆ ಇರುವುದು ನಮಗೆಲ್ಲ ಗೊತ್ತಿದೆ.
ಭಕ್ತಿಪಂಥದ ಬಗ್ಗೆ ಈಗಾಗಲೇ ಜನಪ್ರಿಯವಾಗಿರುವ ಮಾದರಿಗಳಲ್ಲೆ ಮಾತನಾಡಿಬಿಡುವ ಸಲೀಸು ಕೆಲಸವನ್ನು ವಿದ್ವಾಂಸರು ಕೂಡ ಕೆಲವು ಸಲ ಮಾಡುತ್ತಾರೆ. ಅದರ ಬದಲಾಗಿ ಈ ಬಗೆಯದೊಂದು ತೊಡಕಿನ ಕೆಲಸದಲ್ಲಿ ತೊಡಗುವುದಕ್ಕೆ ಸಾಧ್ಯವಿದೆಯೇ ಅಂತ ಯೋಚಿಸಿ ಇದಕ್ಕೆ ಪೂರಕವಾಗಿರುವ ವಿದ್ವಜ್ಜನರನ್ನು ಸೇರಿಸಿ ಅದಕ್ಕೆ ಬೇಕಾಗಿರುವ ಉಪೋದ್ಘಾತವನ್ನು ಸಹ ಸಮರ್ಥ ಸೇನಾನಿಯಿಂದಲೇ ಮಾಡಿಸಿ, ಅದಕ್ಕೆ ಬೇಕಾಗಿರುವ ಚೌಕಟ್ಟನ್ನು ಒದಗಿಸುವುದಕ್ಕೆ ಚಿಕ್ಕಣ್ಣನವರು ಪ್ರಯತ್ನ ಪಟ್ಟಿದ್ದಾರೆ. ಅದಕ್ಕೋಸ್ಕರವಾಗಿ ಈ ಚಿಂತನಾ ಶಿಬಿರವನ್ನು ಏರ್ಪಡಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಉಪನ್ಯಾಸಕಾರರನ್ನು ನಾವು ಟಿಪ್ಪಣಿಕಾರರು ಎಂದು ಮಾತ್ರ ಹೆಸರಿಸಿದ್ದೇವೆ. ಬಹಳ ದೀರ್ಘ ಉಪನ್ಯಾಸಗಳನ್ನು ಅವರಿಂದ ನಾವು ನಿರೀಕ್ಷಿಸುತ್ತಿಲ್ಲ. ಉದ್ಘಾಟನಾ ಭಾಷಣವೊಂದನ್ನು ಹೊರತುಪಡಿಸಿ. ಅದೊಂದು ಬಗೆಯಲ್ಲಿ ನಮ್ಮ ಹುಡುಕಾಟದ ನೆಲೆಗಳು ಏನೇನಾಗಿರಬಹುದು ಎಂಬುದನ್ನು ಸೂಚಿಸುವ ಆಶಯ ಭಾಷಣವೂ ಕೂಡ ಆಗಿರುವುದರಿಂದ – ಅಲ್ಲಿ ಪ್ರಸ್ತಾಪಿತವಾದ ಆಶಯಗಳಿಗೆ ಮಾತ್ರ ಸೀಮಿತವಾಗಿರ ಬೇಕೆಂದೇನೂ ಇಲ್ಲ–ಅವೂ ಸೇರಿದಂತೆ ಅವುಗಳಲ್ಲದೆಯೂ, ನಾವು ವಿಷಯದ ಒಳಹೋಗಲು ಏನೇನು ದಾರಿಗಳಿವೆಯೋ ಅವುಗಳನ್ನು ಗುರುತು ಮಾಡಿದರೆ ನಾವು ವಿಷಯ ಪ್ರವೇಶ ಮಾಡಬಹುದು. ಈ ದಿಸೆಯಲ್ಲಿ ಪ್ರತಿಯೊಬ್ಬರೂ ಕೂಡ ಸಕ್ರಿಯವಾಗಿ ಚಿಂತನೆಯಲ್ಲಿ ಪಾಲ್ಗೊಳ್ಳಬೇಕು, ಮಾತನಾಡಬೇಕು ಅಂತ ವಿನಂತಿ.

## ಕನಕ ಕಂಡರಿಸಿದ ಜೀವನ ಗ್ರಹಿಕೆಗಳು

**ಡಾ. ಮೇಟಿ ಮಲ್ಲಿಕಾರ್ಜುನ**

**ಕೆ.**ವಿ.ಎನ್. ಮೇಷ್ಟ್ರು ಬಹಳ ಲೂಸಿಡ್ಡಾಗಿ ಈ ಚಿಂತನೆಯ ಎಲ್ಲ ಆಯಾಮಗಳನ್ನು ಖಚಿತವಾಗಿ ಮಂಡಿಸಿದ್ದಾರೆ. ಅವರು ಮಂಡಿಸಿದ ಚಿಂತನೆಗಳನ್ನು ಹೊರತುಪಡಿಸಿ ನಾನೇನು ಮಾತನಾಡಬಲ್ಲೆ ಅನ್ನುವ ಒಂದು ಸವಾಲಿದೆ. ಆದರೂ ಮಾಡಲೇಬೇಕಾದ ಒಂದು ಹೊಣೆಗಾರಿಕೆ ಇದು. ಕನಕ ಕಂಡರಿಸಿದ ಲೋಕ ಗ್ರಹಿಕೆಗಳು ಅನ್ನುವುದು ನನ್ನ ವಿಷಯ. ನಂತರ ಆಹ್ವಾನ ಪತ್ರಿಕೆಯಲ್ಲಿ ಜೀವನ ಗ್ರಹಿಕೆಗಳು ಅಂತ ಮಾರ್ಪಡಿಸಲಾಗಿದೆ. ಈ ಲೋಕ ಗ್ರಹಿಕೆಗಳು ಮತ್ತು ಜೀವನ ಗ್ರಹಿಕೆಗಳು ಎರಡೂ ಬೇರೆ ಬೇರೆಯವೇ ಅಥವಾ ಎರಡು ಒಂದೇನೇ, ಅವರು ಮೊದಲು ಸೂಚಿಸಿದ ಹಾಗೂ ನಂತರ ಆಲೋಚಿಸಿದ ವಿಷಯ ಎರಡು ಒಂದೇನೇ ಅಂತ ತಿಳಿದು ನಾನು ವಿಷಯ ಮಂಡಿಸುತ್ತೇನೆ.

ಜೀವನದ ಗ್ರಹಿಕೆಗಳಿಗೆ ಲೋಕದ ಗ್ರಹಿಕೆಗಳು ಅಂತ ಅಂದುಕೊಳ್ಳಬಹುದು ಎನ್ನುವ ಒಂದು ಒಪ್ಪಂದದಿಂದ ನಾನು ಕನಕ ಕಂಡರಿಸಿದ ಲೋಕ ಗ್ರಹಿಕೆಗಳು ಎನ್ನುವ ವಿಷಯದ ಬಗ್ಗೆ ನನ್ನದೇ ಆದ ಕೆಲವು ಗ್ರಹಿಕೆಗಳನ್ನು ಮಂಡಿಸುತ್ತೇನೆ.

ನಾವು ಪದಗಳನ್ನು ಬಳಸುತ್ತಾ ಇರುತ್ತೇವೆ. ಪದಗಳನ್ನು ಹೆಚ್ಚು ವ್ಯಾಪಕವಾಗಿ ಚರ್ಚಿಸುತ್ತಾ ಇರುತ್ತೇವೆ. ಆದರೆ ಪದಗಳು ಕಟ್ಟಿಕೊಡುವ ತಿಳುವಳಿಕೆಯಲ್ಲಿ ಏನಾಗಿರುತ್ತದೆ, ಆ ಪದಕ್ಕೆ ಒಂದು ತಿಳುವಳಿಕೆ ಇರುತ್ತದಾ, ಇದ್ದರೆ ಆ ತಿಳುವಳಿಕೆ ಯಾವ ಬಗೆಯದು ಮತ್ತು ಅದು ಹೇಗಿರುತ್ತದೆ ಅನ್ನುವುದರ ಬಗ್ಗೆ ಹೆಚ್ಚು ಚರ್ಚೆ ಮಾಡುವುದಿಲ್ಲ. ಆ ಬಗೆಗೆ ನಾವು ಯಾವ ಗಮನವನ್ನೂ ಹರಿಸುವುದಿಲ್ಲ. ಒಂದು ಪದ ಇದೆ, ನಾವು ಏನಾದರೂ ಕಥೆ ಕಟ್ಟಬಹುದು, ಅದಕ್ಕೆ ಏನಾದರೂ ವಿಷಯಗಳನ್ನು

ತುಂಬಬಹುದು ಅನ್ನುವ ನಿಟ್ಟಿನಲ್ಲಿ ನಾವು ಚರ್ಚೆ ಮಾಡುತ್ತಾ ಇರುತ್ತೇವೆ. ಇಲ್ಲಿ ಜೀವನ ಗ್ರಹಿಕೆ ಅಥವಾ ಲೋಕ ಗ್ರಹಿಕೆ ಅಂದರೇನು? ಆ ಬಗ್ಗೆ ನಮ್ಮ ತಿಳುವಳಿಕೆ ಏನು? ಪ್ರತೀ ಸಮುದಾಯಗಳಿಗೂ ಅವರದೇ ಆದಂತಹ ಗ್ರಹಿಕೆ ಇರುತ್ತದೆ. ಆ ಸಮುದಾಯಗಳಲ್ಲಿ ಲೋಕ ಗ್ರಹಿಕೆ ಇರುತ್ತದೆ. ಲೋಕ ಗ್ರಹಿಕೆಗಳು ರೂಪ ಪಡೆದುಕೊಳ್ಳುವ ಮತ್ತು ಆ ಲೋಕ ಗ್ರಹಿಕೆಗಳು ಅವರ ಬದುಕಿನಲ್ಲಿ ದಾರಿಯಾಗುವ ಅಥವಾ ಅವರಲ್ಲಿ ತಿಳುವಳಿಕೆಯನ್ನು ಮಂಡಿಸುವುದಕ್ಕೆ ಪೂರಕವಾಗಿರುವ ನೆಲೆಗಳಾಗಿರುತ್ತವೆ. ಹಾಗಾಗಿ ಕನಕ ಇರುವ ಸನ್ನಿವೇಶದ ಗ್ರಹಿಕೆಗಳು, ಕನಕ ಬದುಕಿದ ಸನ್ನಿವೇಶದಲ್ಲಿನ ಗ್ರಹಿಕೆಗಳು ಮತ್ತು ಅಲ್ಲಿರುವಂತಹ ಬಿರುಕುಗಳು, ತಿಕ್ಕಾಟಗಳು ಮತ್ತು ಸಂಘರ್ಷಗಳು ಏನಾಗಿದ್ದವು, ಕನಕ ಅವುಗಳನ್ನು ಹೇಗೆ ಪಡೆದುಕೊಂಡ ಮತ್ತು ಅವುಗಳನ್ನು ಮಂಡಿಸುವಾಗ ಅವುಗಳನ್ನು ಹೇಗೆ ಮರು ಮಂಡಿಸಿದ, ಮಂಡಿಸಬೇಕಾದ ತುರ್ತು ಏನಿತ್ತು, ಯಾಕಾಗಿ ಮಂಡಿಸುವ ಪ್ರಯತ್ನ ಕನಕ ಮಾಡಿದ ಅನ್ನುವ ನೆಲೆಯಲ್ಲಿ ನೋಡಿದಾಗ ಲೋಕ ಗ್ರಹಿಕೆ ಅನ್ನುವಂತಹದ್ದು ಒಂದು ಮಾನಸಿಕ ಚೌಕಟ್ಟು. ಅವು ಯಾವಾಗಲು ಏನಾಗಿರುತ್ತೆ ಅಂದರೆ, ಒಂದು ಸಾಮೂಹಿಕವಾಗಿ ಅಥವಾ ಕಲೆಕ್ಟಿವ್ ರೂಪದಲ್ಲಿದ್ದರೆ ಮತ್ತೊಂದು ವೈಯಕ್ತಿಕವಾದ ರೂಪದಲ್ಲಿರುತ್ತದೆ.

ಅದನ್ನು ನಾನು ನನ್ನ ನುಡಿ ಅರಿಮೆಯ ಹಿನ್ನೆಲೆಯಿಂದ ಹೇಳುವುದಾದರೆ ನಮ್ಮಲ್ಲಿ ಒಬ್ಬ ವಿದ್ವಾಂಸ ಮಹಾನ್ ಚಿಂತಕನ ಪರಿಕಲ್ಪನೆ ಒಂದು ಇದೆ. ಅದು ಲಾಂಗ್ ಮತ್ತು ಪರೋಲ್ ಅನ್ನುವ ಪರಿಕಲ್ಪನೆ. ಲಾಂಗ್ ಅನ್ನುವಂತಹದ್ದು ಒಟ್ಟು ನುಡಿಯ ರಚನಾ ಚೌಕಟ್ಟನ್ನು ಹೊಂದಿಕೊಂಡಿದೆ. ಆ ಮೂಲಕ ಪರೋಲ್ ಅನ್ನುವಂತಹ ಒಂದು ವ್ಯಕ್ತಿಗತ ಮತ್ತು ವ್ಯಕ್ತಿನಿಷ್ಠವಾದಂತಹ ಮಾತುಗಳನ್ನು ಹೊರಡಿಸುವಂತ ನೆಲೆಯಾಗಿದೆ. ಆದರೆ ಇವೆರಡೂ ಬೇರೆ ಬೇರೆಯಲ್ಲ. ಅವೆರಡೂ ಪ್ರತ್ಯೇಕವಾದಂತಹವುಗಳಲ್ಲ. ಅವು ಒಂದಕ್ಕೊಂದು ಪೂರಕವಾಗಿರುತ್ತವೆ. ಒಂದು ಸಮಗ್ರವಾಗಿರುವಂತಹ ಚಿಂತನೆಯನ್ನು ಆ ರಚನೆಯನ್ನು ಏರ್ಪಡಿಸುವುದಕ್ಕೆ ಬೇಕಾಗಿರುವ ನೆಲೆ ಯಾವುದಾಗಿರುತ್ತೆ ಅಂದರೆ ಅದು ಪರೋಲ್ ಆಗಿರುತ್ತದೆ. ಒಬ್ಬ ವ್ಯಕ್ತಿ ಆಲೋಚನೆ ಮಾಡುವುದು ಚಿಂತಿಸುವುದು ಜೀವನವನ್ನು ನೋಡುವುದು ಮತ್ತು ಜೀವನ ಕ್ರಮಗಳನ್ನು ಮಂಡಿಸುವುದು ಯಾವಾಗಲೂ ಏನಾಗಿರುತ್ತದೆ ಅಂದರೆ ಈ ತರಹದ ಒಂದು ಸಮುದಾಯದ ಅಂತರ್ಗತಗೊಂಡಿರುವ ಜೀವನಾನುಭವ ಅಥವಾ ಲೋಕಗ್ರಹಿಕೆಯ ಸೂಚಕವಾಗಿ ಕೆಲಸ ಮಾಡುತ್ತಾ ಇರುತ್ತದೆ. ಹಾಗೆ ಕೆಲಸ ಮಾಡುವ ನೆಲೆಯಲ್ಲಿ ನಾವು ಲೋಕ ಗ್ರಹಿಕೆಗಳನ್ನು ವಿವರಿಸುವ ಪ್ರಯತ್ನ ಮಾಡಿದರೆ ಒಬ್ಬ ವ್ಯಕ್ತಿ ಸಮುದಾಯದ ಅನುಭವವನ್ನು ಕಟ್ಟಿಕೊಡುವ ಆ ಒಂದು ನೆಲೆ, ಅದು ಆ ಒಬ್ಬ ವ್ಯಕ್ತಿಯ ನೆಲೆಯಾಗಿರುತ್ತಾ ಅಥವಾ ಅದು ಇಡೀ ಸಮುದಾಯದ ನೆಲೆಯಾಗಿರುತ್ತಾ? ಯಾಕೆಂದರೆ ನಾವು ಕಾವ್ಯವನ್ನು ಓದುವ, ಸಾಹಿತ್ಯವನ್ನು ಓದುವ ಪ್ರತಿ ಸಂದರ್ಭದಲ್ಲು ಕೂಡ ಯೋಚನೆ ಮಾಡುವ ನೆಲೆಗಳು ಹೇಗಿರುತ್ತವೆ ಎಂದರೆ, ಈಗ ಕುವೆಂಪು ಹೇಳ್ತಾಯಿರುವಂತಾದ್ದು ಏನು ಅಂತ ಅಂದ್ರೆ ಕುವೆಂಪು ಸ್ವತಃ ತಾವೇ ಆ ಒಂದು ಲೋಕ ಗ್ರಹಿಕೆಗಳನ್ನು ಕಟ್ಟಿಕೊಡುತ್ತ ಇದಾರೇನೋ ಅಂತ ಅನ್ನಿಸುತ್ತದೆ ಅಥವಾ ಹರಿಹರ ಹೇಳ್ತಾಯಿರುವಾಗ ಸ್ವತಃ ಹರಿಹರ ಮಾತ್ರ ಆ ಲೋಕ ಗ್ರಹಿಕೆಗಳನ್ನು ಕಟ್ಟಿಕೊಡುತ್ತ ಇದಾರೇನೊ – ಈ ತರದ ಚರ್ಚೆಗಳನ್ನು ನಾವು ಬಹಳ ಸರಳವಾಗಿ ಸರಾಗವಾಗಿ ಮಾಡ್ತಾ ಇರ್ತೀವಿ.

ಆದರೆ ಆ ಒಂದು ತಿಳಿವಳಿಕೆಯನ್ನು ಆ ಸಮುದಾಯದ ಒಟ್ಟು ಆಲೋಚನಾ ಕ್ರಮವನ್ನು ಒಳಗೊಂಡಿರುವ ನೆಲೆ ಅನ್ನುವ ಬಗೆಯಲ್ಲಿ ಹೆಚ್ಚು ಚರ್ಚೆ ಮಾಡ್ತಾ ಇರಲ್ಲ. ಈ ಹಿನ್ನೆಲೆಯನ್ನು ಇಟ್ಟುಕೊಂಡು ನಾವು ಕನಕ ಮಂಡಿಸಿರುವ ತಿಳಿವಳಿಕೆಗಳನ್ನು ನೋಡುವುದಾದರೆ ಕನಕ ಏನನ್ನು ಮಂಡಿಸುತ್ತಾ ಇದಾನೆ? ಯಾವ ಬಗೆಯ ತಿಳಿವಳಿಕೆಯನ್ನು ನಮ್ಮ ಮುಂದೆ ಇಡ್ತಾ ಇದಾನೆ? ಅಲ್ಲಿ ಎರಡು ತರದ ತೊಡಕುಗಳಿವೆ. ಕನಕನನ್ನು ನಾವು ಒಂದು ಸಾರ್ವತ್ರಿಕ ನೆಲೆಯನ್ನಿಟ್ಟು ಚರ್ಚೆ ಮಾಡ್ತಾ ಇದೀವಾ? ಅಥವಾ ಒಂದು ನಿರ್ದಿಷ್ಟ ನೆಲೆಯನ್ನಿಟ್ಟು ಚರ್ಚೆ ಮಾಡ್ತಾ ಇದೀವಾ? ಅಥವಾ ಅವನು ಕೇವಲ ಚಾರಿತ್ರಿಕ ವ್ಯಕ್ತಿಯಾಗಿ ನಾವು ಚರ್ಚೆ ಮಾಡ್ತಾ ಇದೀವಾ? ಅಥವಾ ಅವನ ತಿಳಿವಳಿಕೆಯನ್ನು ಕೂಡ ಒಂದು ಚಾರಿತ್ರಿಕ ಸನ್ನಿವೇಶಕ್ಕೆ ಮೀಸಲಾಗಿದ್ದು ನಿಗದಿಪಡಿಸಿ ಚರ್ಚೆ ಮಾಡ್ತಾ ಇದೀವಾ ಅಥವಾ ಅದನ್ನು ಇವತ್ತಿನ ಸಮಕಾಲೀನ ನೆಲೆಯಾಗಿ ನಮ್ಮ ಸಮಕಾಲೀನ ಸವಾಲುಗಳಿಗೆ, ತೊಂದರೆಗಳಿಗೆ, ಬೇರೆ ಬೇರೆ ಇಕ್ಕಟ್ಟುಗಳಿಗೆ ಹೋಲಿಸಿಕೊಂಡು ಆ ಮೂಲಕ ಏನಾದರು ಒಂದು ದಾರಿಯನ್ನು ಕಂಡುಕೊಳ್ಳುವುದಕ್ಕೆ ಪ್ರಯತ್ನವನ್ನು ನಾವು ಮಾಡ್ತಾ ಇದೀವಾ ಅನ್ನೋ ನೆಲೆಯಲ್ಲಿ ಕೂಡ ನಾವು ತಿಳಿವಳಿಕೆಯನ್ನು ಗುರುತಿಸಬಹುದು. ಹಾಗಾಗಿ ಇಲ್ಲಿ ಲೋಕಗ್ರಹಿಕೆ ಅನ್ನುವಂತಹದ್ದು ಒಂದು ಸಾಮುದಾಯಿಕ ಪ್ರಜ್ಞೆಯಾಗಿ ಅಥವಾ ಸಮುದಾಯದ ಒಂದು ಜೀವಾನಾನುಭವವಾಗಿ ನಮಗೆ ದಕ್ಕಿದಲ್ಲಿ ಸಮುದಾಯದ ಆ ಗುರುತುಗಳು ಅಥವಾ ರಚನೆಗಳು ಆ ಚೌಕಟ್ಟುಗಳು ಏನಾಗಿರುತ್ತವೆ ಅಂದರೆ ಬಹಳ ಅಮೂರ್ತವಾಗಿ ಇರುತ್ತವೆ. ಅದು ಒಬ್ಬ ಚಿಂತಕ ಅಥವಾ ಒಬ್ಬ ಕವಿ ಅಥವಾ ಒಬ್ಬ ಸಂತ ಅಥವಾ ಯಾವುದೋ ಒಂದು ಚಿಂತನೆಯನ್ನು ನಡೆಸುವ ವ್ಯಕ್ತಿಗೆ ರಚನೆಗಳನ್ನು ತೋರ್ಪಡಿಸಲು ಅಥವಾ ರಚನೆಗಳನ್ನು ಜಾಗೃತಗೊಳಿಸುವ ವಿವೇಕ ಸಿಗುತ್ತದೆ.

ಹಾಗಾಗಿ ಇಲ್ಲಿ ಕನಕ ಮಾಡುತ್ತಿರುವ ಯೋಚನೆಗಳು ಏನಾಗಿದಾವೆ ಅಂತ ಅಂದರೆ ನಾವು ನಂಬಿಕೊಂಡಿರುವ ಜಗತ್ತು ಒಂದಿದೆ. ನಂಬಿಸುವ ಜಗತ್ತು ಒಂದಿದೆ. ಯಾವುದು ನಾವು ನಂಬಿರುವ ಜಗತ್ತು? ಮತ್ತು ಅದನ್ನು ನಂಬಿಸಲ್ಪಟ್ಟಿರುವಂತಹದ್ದು ಅಥವಾ ನಾವಾಗಿಯೇ ಅದನ್ನು ನಂಬಿಕೊಂಡಿದ್ದು ಆ ರೀತಿಯಾಗಿ ನಂಬಿಸುವುದಕ್ಕೆ ಏನಾದರೂ ಒತ್ತಡಗಳಿದ್ದಾವಾ? ಆ ಒತ್ತಡಗಳು ಯಾರಿಂದ ಬರ್ತಾ ಇದ್ದಾವೆ? ಯಾಕೆ ಬರ್ತಾ ಇದ್ದಾವೆ? ಅನ್ನುವಂತ ತೊಡಕು ಕೂಡ ಇಲ್ಲಿದೆ. ಹಾಗಾಗಿ ಚಿಂತನೆ, ನಂಬಿದ ಜಗತ್ತಿನ ಚಿಂತನೆ ಅಂದರೆ ಯಾವುದನ್ನು ಕೆ.ವಿ.ಎನ್. ಮೇಷ್ಟ್ರು ಅವರ ಮಾತುಗಳಲ್ಲಿ ಹೇಳಿದರು ಈ ಜನಪದರ ಒಂದು ಆಲೋಚನಾ ಕ್ರಮ ಅಥವಾ ಜನಪದರ ಆಲೋಚನಾ ಕ್ರಮದಲ್ಲಿ ಹುದುಗಿರುವಂತಹ ತಿಳಿವಳಿಕೆ ಚೌಕಟ್ಟನ್ನು ಅವರು ಮತ್ತೆ ಅದನ್ನು ಬೇರೆಯದಾಗಿ ಅಥವಾ ಮತ್ತೆ ಅದನ್ನ ಮತ್ತೊಂದು ಸ್ವರೂಪದಲ್ಲಿ ನಮ್ಮೆದುರಿಗೆ ನೀಡ್ತಾ ಇದಾರೆ.

ಇಲ್ಲಿ ಕುಲದ ಪ್ರಶ್ನೆ, ಜಾತಿಯ ಪ್ರಶ್ನೆ ಅಥವಾ ಧರ್ಮದ ಪ್ರಶ್ನೆಗಳು ನಮಗೆ ಎದುರಾದಾಗ ಅವುಗಳನ್ನು ನಿಭಾಯಿಸುವುದು ಹೇಗೆ? ಆ ಪ್ರಶ್ನೆಗಳನ್ನು ನಾವು ಎದುರಿಸುವುದು ಹೇಗೆ? ಅನ್ನುವಂತಹ ಒಂದು ತೊಡಕು ಇದ್ದೇ ಇರುತ್ತೆ. ನಾವು ಜಾತಿಯನ್ನುವಂತಹದ್ದು ಒಪ್ಪಿ ನಡೆಯಬೇಕಾದ ಸಂಗತೀನಾ? ಅಥವಾ ಜಾತಿಯನ್ನು ವಂತಹದ್ದನ್ನು ನಿರಾಕರಿಸಿ ನಡೆಯಬೇಕಾದ ಒಂದು ಸಂಗತೀನಾ? ಯಾಕೆ ಅಂತ ಅಂದ್ರೆ ಸಂವಿಧಾನ ಬದ್ಧವಾಗಿರುವಂತಹ ನಿಯಮಗಳು ಮತ್ತು ನಮ್ಮ ಪ್ರಜಾಪ್ರಭುತ್ವದ ನೀತಿಗಳು ಜಾತಿ ಅನ್ನುವುದನ್ನು ನಿರಾಕರಿಸಿ ಅದನ್ನು ಆದರ್ಶವಾದಂತಹ ರಾಜ್ಯವನ್ನು ಕಟ್ಟಬೇಕು ಅನ್ನುವ ಆಶಯವನ್ನು ಇಟ್ಟುಕೊಂಡಿದ್ದರೆ ಅದನ್ನು ನಿಭಾಯಿಸುವಂತಹ, ಅದನ್ನು ಮುಂದೆ ಸಾಗಿಸುವಂತಹ ವ್ಯಕ್ತಿಗಳು, ಅಲ್ಲಿ ಪಾಲ್ಗೊಂಡಂತ ವ್ಯಕ್ತಿಗಳು ಯಾವಾಗಲು ಕೂಡ ಏನು ಮಾಡುತ್ತಾರೆ ಅಂದರೆ ಒಂದು ಜಾತಿ ಅನ್ನುವ ಚೌಕಟ್ಟಿಗೆ ಬದ್ಧರಾಗಿ ಜಾತಿಗಳನ್ನು ಮತ್ತೆ ಬಲಗೊಳಿಸುತ್ತಾ, ಮತ್ತೆ ಗಟ್ಟಿಗೊಳಿಸುತ್ತಾ ಆ ಮೂಲಕ ಜಾತಿಯನ್ನು ನಿರಾಕರಿಸಬೇಕು ಅನ್ನುವಂತಹ ಒಂದು ಹಿಪಾಕ್ರಸಿ ವಾದವನ್ನು ಮುಂದಿಡುತ್ತಿರುವ ಈ ಸಂದರ್ಭದಲ್ಲಿ ನಾವು ಕನಕರು ಹೇಳಿರುವಂತ ಜಾತಿಯ ಪ್ರಶ್ನೆಗಳನ್ನು ಇವತ್ತಿಗೆ ಹೇಗೆ ಎದುರಾಗುತ್ತಾ ಇರುತ್ತೀವಿ? ಆ ಪ್ರಶ್ನೆಗಳನ್ನು ನಾವು ಹೇಗೆ ನಿಭಾಯಿಸುತ್ತಾ ಇದೀವಿ? ಹೇಗೆ ಮುಖಾಮುಖಿಯಾಗುತ್ತಾ ಇದೀವಿ? ಅನ್ನುವುದು ಬಹಳ ಮುಖ್ಯವಾಗಿರುವಂತಹ ಒಂದು ಸಂಗತಿ.

ಬನ್ನಂಜೆ ಗೋವಿಂದಾಚಾರ್ಯರವರು ಹೇಳ್ತಾ ಇದ್ರು ಕನಕರಿಗೆ ಜಾತಿಯ ಬಗ್ಗೆ ತಿರಸ್ಕಾರ ಇರಲಿಲ್ಲ. ಜಾತಿಯ ವ್ಯವಸ್ಥೆ ಬಗ್ಗೆ ತಿರಸ್ಕಾರ ಇರಲಿಲ್ಲ. ಜಾತಿಯನ್ನು ಒಪ್ಪಿಕೊಂಡು ಇನ್ನೊಂದು ಜಾತಿಯನ್ನು ನೀವು ಹಿಯಾಳಿಸಬಾರದು. ಅನ್ನುವುದರ ಬಗ್ಗೆ ಮಾತ್ರ ಅವರಿಗೆ ಒಂದು ಕಾಳಜಿ ಇತ್ತು. ಅದರಾಚೆ ಜಾತಿಗಳ ಬಗ್ಗೆ ಅವರಿಗೆ ಯಾವ ಭಿನ್ನಾಭಿಪ್ರಾಯ ಇರಲಿಲ್ಲ ಅಂತ. ಅಂದರೆ ಜಾತಿ ವ್ಯವಸ್ಥೆ ಏನಿದೆ? ಜಾತಿಗಳು ಹೇಗೇಗೆ ಈಗ ನೆಲೆಗೊಂಡಿದಾವೊ, ಅಲ್ಲಿ ಏಣಿಶ್ರೇಣಿ ಒಂದು ರಚನೆ ಹೇಗಿದೆಯೋ? ಹಾಗೇ ಇರಬಹುದು ಸಮಸ್ಯೆ ಇಲ್ಲ ಅವರಿಗೆ. ಆದರೆ ಸಮಸ್ಯೆ ಆಗುತ್ತಿರುವುದು ಎಲ್ಲಿ ಅಂತ ಅಂದ್ರೆ ಒಂದು ಜಾತಿಯವರು ಇನ್ನೊಂದು ಜಾತಿಯವರ ಬಗ್ಗೆ ಏನನ್ನು ಅಪಪ್ರಚಾರ ಮಾಡಬಾರದು, ಮಾತನಾಡಬಾರದು ಅನ್ನೋದರ ಬಗ್ಗೆ ಮಾತ್ರವೇ ಕನಕರಿಗೆ ಕಾಳಜಿ ಇದೆ ಅಂತ – ಅಂದರೆ ನಂಬಿಸಲ್ಪಡುವಂತಹ ಲೋಕ ಗ್ರಹಿಕೆಗಳು ನಮ್ಮ ಜೀವನದ ಕ್ರಮದಲ್ಲಿ ಜಾತಿಯೆನ್ನುವಂತಹದ್ದು ಒಂದು ಸಾಮಾಜಿಕ ವ್ಯವಸ್ಥೆ ಅದನ್ನು ಒಪ್ಪಿಕೊಳ್ಳಲೇ ಬೇಕು. ಜಾತಿಗಳನ್ನು ನಿರಾಕರಿಸಿ ಒಂದು ಸಮುದಾಯವಾಗಲೀ, ಒಂದು ಸಮಾಜವಾಗಲೀ ಅಥವಾ ಒಂದು ಸಂಸ್ಕೃತಿಯಾಗಲೀ ಇರಲಾರದು. ಅದನ್ನು ಒಪ್ಪಿಕೋಬೇಕು ಹಾಗೆ ಒಪ್ಪಿಕೊಂಡು ಕೂಡ ಜಾತಿಯೊಂದಿಗೆ ನಾವು ಸಹಬಾಳ್ವೆ ಮಾಡಬೇಕಾಗಿರುತ್ತದೆ.

ನಾವೆಲ್ಲ ಒಟ್ಟೊಟ್ಟಿಗೆ ನಡೀತಾ ಇರ್ತೀವಿ ಅನ್ನುವಂತಹ ಮಾತುಗಳೇನು ಹೇಳ್ತಾ ಇರ್ತಾರೆ. ಆದರೆ ಇದು ನಿಜವಾಗಿ ನಡೆಯುವಂತಹ ಸಂಗತೀನಾ? ಒಟ್ಟೊಟ್ಟಿಗೆ ನಡೆಯಬೇಕು ಅನ್ನುವಂತಹದ್ದು ಸಹಬಾಳ್ವೆ ಮಾಡುತ್ತಿದ್ದೇವೆ ಅನ್ನುವಂತಹದ್ದು ಯಾವುದದು? ಅಲ್ಲಿ ಯಾವ ಬಗೆಯ ಏರುಪೇರುಗಳಾಗಲಿ, ಏಣಿಶ್ರೇಣಿಗಳಾಗಲಿ ಇರೋದಿಲ್ವಾ? ಅಂದರೆ ಈ ಬಗೆಯ ಬಿಕ್ಕಟ್ಟುಗಳನ್ನು ಎದುರಿಸುವ ಒಂದು ಸನ್ನಿವೇಶ ಯಾಕೆ ನಮಗೆ ಯಾವಾಗಲೂ ಎದುರಾಗುತ್ತದೆ? ಅದನ್ನು ಬಸವಣ್ಣನವರು ಹೇಳಿದರು ಅಂತೀವಿ. ಅಲ್ಲಮ ಹೇಳಿದ್ರು ಅಂತೀವಿ. ಅಂಬಿಗರ ಚೌಡಯ್ಯ ಹೇಳಿದ್ರು ಅಂತೀವಿ. ಬೇರೆ ಬೇರೆ ಸುಮಾರು ಚಿಂತಕರನ್ನು ಯಾವಾಗಲೂ ನಾವು ಪಟ್ಟಿ ಮಾಡುತ್ತಾ ಇರುತ್ತೇವೆ. ಅವರು ಹಾಗೆ ಹೇಳಿದರು. ಇವರು ಹೀಗೆ ಹೇಳಿದರು, ನಮ್ಮ ಸಂಸ್ಕೃತಿಯಲ್ಲಿ ಇದು ಇದೆ. ಅದು ಇದೆ. ಎಲ್ಲವೂ ಇದೆ. ಆದರೆ ಯಾವುದು ಇದೆ ಅನ್ನೋದನ್ನ ಹೇಗಿದೆ ಅಂತ ಹೇಳ್ತಾ ಇರ್ತೀವಿ. ಇರೋದು ಸತ್ಯ, ಆದರೆ ಅದು ಹೇಗಿದೆ? ಯಾವ ಸ್ವರೂಪದಲ್ಲಿದೆ? ಯಾರ ಪರವಾಗಿದೆ? ಅದು ಯಾಕೆ ಹಾಗಿದೆ? ಹಾಗಿರುವುದಕ್ಕೆ ಏನಾದರು ಕಾರಣಗಳಿದಾವಾ? ಇದ್ರೆ ಅವು ಹೇಗಿದಾವೆ? ಈ ಬಗ್ಗೆ ಯಾವ ತಕರಾರುಗಳನ್ನೂ ಎತ್ತುವುದಿಲ್ಲ. ಅಂದರೆ ನಾವು ನಂಬಿಕೊಂಡು ಬಂದಿರುವ ಸಮುದಾಯದ ರಚನೆಗಳು ಯಾವಾಗಲೂ ಏನಾಗಿರುತ್ತವೆ ಅಂದರೆ ನಂಬಿಸಲ್ಪಟ್ಟಿರುತ್ತವೆ. ಅದನ್ನು ಬಲವಂತವಾಗಿ ನಮಗೆ ಒಪ್ಪಿಸಲ್ಪಟ್ಟಿರುತ್ತದೆ. ನಾವು ಒಪ್ಪಿಕೊಂಡಿರ್ತೀವಿ. ಅದನ್ನು ಒಪ್ಪಿ ನಡೀತಾ ಇರ್ತೀವಿ. ಒಪ್ಪಿ ನಡೆಯಬೇಕಾದಾಗ ಆಗುವಂತಹ ಬಿಕ್ಕಟ್ಟುಗಳೇನು? ಅನ್ನುವುದಕ್ಕೆ ಪೂರಕವಾಗಿ ನಮ್ಮ ಕನಕರು ಮಂಡಿಸುವಂತಹ ಚಿಂತನೆಗಳನ್ನು ನಾವು ನೋಡಿದರೆ ಅವುಗಳನ್ನು ಮರು ವಿಶ್ಲೇಷಣೆಗೆ ಒಳಪಡಿಸಿದರೆ ಅಲ್ಲಿ ಎದುರಾಗಬಹುದಾದಂತಹ ತೊಡಕುಗಳೇನು ಮತ್ತು ಅಲ್ಲಿ ಎದುರಾಗಬಹುದಾದಂತಹ ಬಿಕ್ಕಟ್ಟುಗಳೇನು? ಆ ಬಿಕ್ಕಟ್ಟುಗಳು ಯಾಕೆ ಹಾಗೆ ಇರ್ತಾವೆ ಅನ್ನೋದಕ್ಕೆ ಮುಖ್ಯವಾಗಿ ನಮ್ಮ ಲೋಕ ಗ್ರಹಿಕೆಯಲ್ಲೇನೆ ಆ ತರದ ಬಿರುಕು ಇದೆ. ನಾವು ಯಾವ ಅನುಭವವನ್ನು ಪಡೆದುಕೊಳ್ತಾ ಇರ್ತೀವಲ್ಲಾ. ಅನುಭವವನ್ನು ಗ್ರಹಿಸ್ತಾ ಇರ್ತೀವಲ್ಲಾ ಆ ಅನುಭವವನ್ನು ನಾವು ಒಂದು ಆಲೋಚನಾ ಕ್ರಮವಾಗಿ ರೂಪಿಸಿ ಕೊಳ್ಳುತ್ತಾ ಇರ್ತೀವಲ್ಲ. ಆ ರೂಪಿಸಿಕೊಳ್ಳುವ ಸನ್ನಿವೇಶದಲ್ಲೇನೆ ಬಿರುಕುಗಳು ಕೂಡಾನು ಸೇರಿರುತ್ತವೆ. ಅದರ ಒಳಗಡೆನೇ ಅದನ್ನು ಕೂಡ ಒಂದು ಲೋಕ ಗ್ರಹಿಕೆ ಭಾಗವಾಗಾನೇ ನಮಗೆ ಕಲಿಸಿಕೊಟ್ಟುಬಿಟ್ಟಿರುತ್ತಾರೆ. ಅದನ್ನು ತಿಳಿಸಿಕೊಟ್ಟುಬಿಟ್ಟಿರುತ್ತಾರೆ. ಹಾಗಾಗಿ ನಾವು ಈ ಎಲ್ಲವನ್ನು ಒಪ್ಪಿಕೊಂಡು ಏನ್ ಮಾಡ್ತಾ ಇರ್ತೀವಿ ನಮ್ಮ ಬದುಕನ್ನು ಸಾಗಿಸ್ತಾ ಇರ್ತೀವಿ. ಹಾಗಾಗಿ ಹೀಗೆ ಒಪ್ಪಿಕೊಂಡಿರುವ ಬದುಕಿನಲ್ಲಿರುವ ನ್ಯೂನ್ಯತೆಗಳೇನು? ಬಿರುಕುಗಳೇನು? ಬಿಕ್ಕಟ್ಟುಗಳೇನು? ಅನ್ನುವುದನ್ನು ತೋರಿಸಿಕೊಡುವ ಒಂದು ಹೊಣೆಗಾರಿಕೆ ಏನಾಗಿದೆ ಅಂತ ಅಂದ್ರೆ ಈ ತರದ ಕವಿಗಳಾಗಲಿ ಅಥವಾ ಸಂತರಾಗಲಿ ಅಥವಾ ದಾರ್ಶನಿಕರಾಗಲಿ ನಿರಂತರವಾಗಿ ಮಾಡಿಕೊಂಡು ಬಂದಿದ್ದಾರೆ. ಹಾಗೆ ಮಾಡುವ ಪ್ರಕ್ರಿಯೆಯಲ್ಲಿ ಕನ್ನಡ ಅನ್ನುವಂತಹದ್ದು ಅಥವಾ ಕನ್ನಡದ ಒಟ್ಟು ಅದರ ಅಂತಃಸತ್ವ ಏನು ಅನ್ನುವುದನ್ನು ಕೂಡ ಅವರು ನಮಗೆ ತೋರಿಸಿಕೊಟ್ಟಿದ್ದಾರೆ.

ಆ ನೆಲೆಯಲ್ಲಿ ನಾವು ಕನಕದಾಸರನ್ನು ಪರಿಚಯ ಮಾಡಿಕೊಳ್ಳೋದಾದರೆ, ಓದುವುದಾದರೆ ನಮಗೆ ಲೋಕ ಗ್ರಹಿಕೆಗಳು ರೂಪಗೊಳ್ಳುವ ಬಗೆ ಮತ್ತು ಲೋಕ ಗ್ರಹಿಕೆಗಳನ್ನು ರೂಪಿಸುವ ಬಗೆ ಇವೆರಡರ ನಡುವಿರುವ ಒಂದು ಕಂದರ ಅಥವಾ ಅಂತರ ಏನು ಅನ್ನುವುದು ಕೂಡ ಮನವರಿಕೆ ಆಗುತ್ತದೆ. ಆ ಚೌಕಟ್ಟನ್ನು ನಾವು ಹೇಗೆ ಬೇರ್ಪಡಿಸಬೇಕು, ಹೇಗೆ ಗ್ರಹಿಸಬೇಕು

ಅನ್ನೋದು ಕೂಡ ಇಲ್ಲಿ ಬಹಳ ಮುಖ್ಯವಾಗಿರುವ ಸಂಗತಿಯಾಗಿದೆ. ಹಾಗಾಗಿ ನಾನು ಈಗ ಪ್ರಾರಂಭದಲ್ಲಿ ಹೇಳಿದ ಹಾಗೆ ನುಡಿಯ ಒಂದು ರಚನೆ ಅನ್ನೋದನ್ನ ಒಂದು ಸಾಮೂಹಿಕವಾಗಿರುವಂಥದ್ದು, ಲಾಂಗ್ ಅಥವಾ ವ್ಯಕ್ತಿಗತವಾಗಿರತಕ್ಕಂಥ ಪರೋಲ್– ಇವೆರಡರ ನಡುವೆ ಇರ್ತಕ್ಕಂಥ ನಂಟು ಏನು? ಅವೆರಡರ ನಡುವಿನ ಸಂಬಂಧ ಏನು, ಸಂಬಂಧ ಯಾವ ಬಗೆಯದು? ಅದು ಹೇಗಿರುತ್ತೆ ಅನ್ನೋದನ್ನ ಗುರುತಿಸಿಕೊಂಡರೆ, ಇಲ್ಲಿ ಸಮುದಾಯದ ತಿಳಿವಳಿಕೆಗೂ ಮತ್ತು ಒಬ್ಬ ವ್ಯಕ್ತಿಯ ತಿಳಿವಳಿಕೆಗೂ ನಂಟು ಎಂಥದು ಅನ್ನುವಂಥಾದ್ದು ಕೂಡ ನಮಗೆ ಗೊತ್ತಾಗುತ್ತದೆ. ಹಾಗಾಗಿ ಇಲ್ಲಿ ಅವರು ಮಾತನಾಡುವ ಈ ಊಳಿಗಮಾನ್ಯ ಪದ್ಧತಿಯ ವಿರುದ್ಧದ ದನಿಯಿರಬಹುದು ಅಥವಾ ಜಾತಿ ವಿರುದ್ಧದ ದನಿಯಿರಬಹುದು ಅಥವಾ ಸಮಾಜದಲ್ಲಿರುವಂಥ ಏರುಪೇರುಗಳ ಕುರಿತಂತೆ ಮಾತನಾಡುವ ದನಿ ಇರಬಹುದು ಇದು ಎಲ್ಲವೂ ಕೂಡ ಏನಾಗಿತ್ತು ಅಂತಂದ್ರೆ, ಕನಕರು ತಾವು ಮಂಡಿಸಿರುವ ತಮ್ಮ ವ್ಯಕ್ತಿಗತವಾದ ಚಿಂತನೆ ಮಾತ್ರ ಆಗಿರಲಿಲ್ಲ, ಸಮುದಾಯದಲ್ಲಿ ನೆಲೆಗೊಂಡಿರುವಂಥ ಈ ಚಿಂತನೆಗಳನ್ನು ಅವರು ಒಂದು ಚೌಕಟ್ಟಾಗಿ ಒಂದು ಆಲೋಚನಾ ಕ್ರಮವಾಗಿ ನಾವು ಲೋಕವನ್ನು ಅಥವಾ ಬದುಕನ್ನು ನೋಡುವ ಬಗೆಗಳು ಯಾವುವು ಅನ್ನುವ ರೂಪದಲ್ಲಿ ಅವರು ನಮಗೆ ಕಟ್ಟಿಕೊಡ್ತಾ ಇದ್ದರು. ಹಾಗೆ ಕಟ್ಟಿಕೊಡುವ ಸಂದರ್ಭದಲ್ಲಿ ಅವರ ಹಾಡುಗಳಿರಬಹುದು ಅಥವಾ ಅವರ ಕಾವ್ಯಗಳಿರಬಹುದು ಅವೆರಡೂ ಕೂಡ ನಮಗೆ ಪೂರಕವಾಗಿದಾವೆ. ಈಗ ಅದಕ್ಕೆ ಬಹಳ ಮುಖ್ಯವಾಗಿರುವಂಥಾದ್ದು ಏನೆಂದರೆ ಒಂದು conflict oriented ಆದಂಥ ಒಂದು ವರ್ಲ್ಡ್ ವ್ಯೂ ಅಂದ್ರೆ ಒಂದು ಸಂಘರ್ಷದ ನೆಲೆಯ ಮೂಲಕ ರೂಪಗೊಂಡಿರುವ ಒಂದು ಆಲೋಚನಾ ಕ್ರಮ ಇರಬಹುದು ಅಥವಾ ಒಂದು ಲೋಕಗ್ರಹಿಕೆ ಇರಬಹುದು, ಅದು conflict oriented ಅಂದ್ರೆ ನಾವು ಮಾತನಾಡುವ ಮಾತುಗಳಲ್ಲೇನೆ ಒಂದು ಒಪ್ಪುವ ಮತ್ತು ಇನ್ನೊಂದನ್ನು ವಿರೋಧಿಸುವ ನೆಲೆ ಕೂಡ ಇರುತ್ತೆ. ಅಂದ್ರೆ ಯಾವ್ದು ಒಂದನ್ನ ಪ್ರತಿರೋಧದ ನೆಲೆ ಅಂತ ಕರಿತೀವಿ ಮತ್ತು ಯಾವುದು ಇನ್ನೊಂದನ್ನು ಯಜಮಾನ್ಯದ ನೆಲೆ ಅಂತ ಕರೀತೀವಿ ಇವೆರಡೂ ಕೂಡ ಒಟ್ಟೊಟ್ಟಿಗೆ ಇರುತ್ತವೆ. ಆದ್ರೆ ನಾವು ಎರಡೂ ಬೇರೆ ಎರಡೂ ಭಿನ್ನ, ಎರಡೂ ಪ್ರತ್ಯೇಕವಾದಂತಹ ವ್ಯವಸ್ಥೆಗಳು ಅಂತ ಗುರುತಿಸುತ್ತಾ ಇರ್ತೀವಿ. ಆದರೆ ಇವುಗಳ ನಡುವಿನ ಸಂಘರ್ಷವನ್ನು ಮಾತ್ರ ನಾವು ಗುರುತಿಸೋದಿಲ್ಲ, ಇವುಗಳ ನಡುವೆ ಇರುವಂಥ ತಿಕ್ಕಾಟವನ್ನು ನಾವು ಗುರುತಿಸುತ್ತಾ ಇರೋದಿಲ್ಲ, ಎರಡೂ ಬೇರೆ ಬೇರೆ, ಅದು ಒಂದು ವರ್ಗ, ಇನ್ನೊಂದು ಅದನ್ನು ವಿರೋಧಿಸುವ ವರ್ಗ ಮತ್ತೊಂದಿದೆ.

ಇವೆರಡೂ ಬೇರೆ ಅನ್ನೋದಿದೆ. ಆದರೆ ಇವೆರಡು ಬೇರೆ ಅನ್ನೋದಕ್ಕೆ ಪೂರಕವಾಗಿ ನಾವು ಏನು ಮಾಡ್ತೇವೆ ಈ ಲೌಕಿಕ ಮತ್ತು ಅಲೌಕಿಕ ಅನ್ನುವಂಥ ಆ ಪರಿಕಲ್ಪನೆಗಳನ್ನು ಕೂಡ ಕಟ್ಟಿಕೊಳ್ತಾ ಇದೀವಿ. ಯಾವುದು ಲೌಕಿಕ, ಯಾವುದು ಅಲೌಕಿಕ, ಇವೆರಡೂ ಬೇರೆ ಹೇಗೆ? ಅವೆರಡೂ ಪ್ರತ್ಯೇಕವಾಗಿ ಹೇಗಿರ್ತವೆ ಅಂತ. ಸಮುದಾಯದಲ್ಲಿ ಒಂದು ನಿರ್ದಿಷ್ಟ ನೆಲೆಯ ತಿಳಿವಳಿಕೆ ಮತ್ತೊಂದು ನಿರ್ದಿಷ್ಟ ಬಗೆಯ ತಿಳಿವಳಿಕೆಯನ್ನು ರೂಪಿಸಿಕೊಂಡು ಅವು ಪ್ರತ್ಯೇಕವಾಗಿ ವ್ಯವಹರಿಸುತ್ತವೆ ಅನ್ನುವಂಥ ಒಂದು ಆಲೋಚನಾ ಕ್ರಮವೇ ಬಹಳ ಅಪಾಯಕಾರಿಯಾಗಿ ನಮಗೆ ಕಾಣಿಸುತ್ತಾ ಇರುತ್ತೆ. ಹಾಗಾಗಿ ಈ ಎರಡು ತುದಿಗಳಲ್ಲಿ ನಿಂತುಕೊಂಡು ನಾವೇನು ಮಾಡ್ತಾ ಇರ್ತೀವಿ ಅಂದ್ರೆ ಒಂದು ಪಠ್ಯವನ್ನ ಅಥವಾ ಸಾಹಿತ್ಯ ಕೃತಿಯನ್ನ ಅಥವಾ ಒಂದು ಓದಿನ ಕ್ರಮವನ್ನು ಯಾವಾಗಲೂ ನಾವು ರೂಪಿಸುತ್ತಾ ಇರ್ತೀವಿ. ಹಾಗೆ ರೂಪಿಸುವುದರ ಮೂಲಕವೇ ನಾವು ಕಟ್ಟಿಕೊಡ್ತಾ ಇರುವಂಥ ಒಂದು ಲೋಕದೃಷ್ಟಿ ಯಾವಾಗಲೂ ಏನಾಗಿರುತ್ತೆ – ನೋಡಿ ಇದು ಹೀಗಿದೆ, ನಮ್ಮ ಪಂಪ ಹೇಳ್ತಾ ಇರೋದು ಹೀಗಿದೆ, ಕನಕದಾಸರು ಹೇಳ್ತಾ ಇರೋದು ಹೀಗಿದೆ, ಕನಕದಾಸರು ಅವರು ಸಂಪೂರ್ಣವಾಗಿ ತಮ್ಮನ್ನು ತಾವು Submit ಮಾಡ್ಕೊಂಡು ಬಿಟ್ಟಿರುತ್ತಾರೆ. ಅಂದ್ರೆ ಅಲ್ಲಿ ಹರಿ ಅನ್ನೋದು ಮಾತ್ರ ultimate ಆಗಿರೋದರಿಂದ, ದಾಸ ಪರಂಪರೆಯಲ್ಲಿ ಅಥವಾ ದಾಸ ಪರಂಪರೆಯ ಸಾಹಿತ್ಯದಲ್ಲಿ ಹರಿಗೆ ಎಲ್ಲರೂ ಶರಣಾಗತರಾಗಿ ತಮ್ಮನ್ನು ತಾವು ಸಂಪೂರ್ಣವಾಗಿ ಒಪ್ಪಿಸಿಬಿಟ್ಟಿರುತ್ತಾರೆ, ಅಂದ್ರೆ ಅಲ್ಲಿ ಅವನೇ ultimate, ಅವನನ್ನು ಬಿಟ್ಟು ಇನ್ನೇನು ಇಲ್ಲ ಪ್ರಪಂಚದಲ್ಲಿ. ಹಾಗಾಗಿ ಅವನ ದೈವಲೀಲೆಗಳನ್ನು ಮತ್ತು ಅವನನ್ನು ಬಣ್ಣಿಸುವ, ವರ್ಣಿಸುವ, ಅವನ ಬಗ್ಗೆ ಅಗಾಧವಾದ ಒಂದು ಮಮತೆಯನ್ನು, ಮೋಹವನ್ನು ಇಟ್ಟುಕೊಂಡು ಇವರು ತಮ್ಮ ಹಾಡುಗಳನ್ನು ರಚಿಸುತ್ತಾ ಇರುವಾಗ, ಅದರ ಒಳಗಡೇನೆ ಹರಿಯನ್ನು ನಂಬಿ ಬದುಕಿದವರಾರು ಎನ್ನುವ ಪ್ರಶ್ನೆಗಳನ್ನು ಕೂಡ ಕನಕ ಕೇಳ್ತಾ ಇರ್ತಾನೆ. ಅಂದ್ರೆ ಅವನು ಪ್ರಶ್ನೇನು ಮಾಡ್ತಾ ನಿನ್ನನ್ನು ನಂಬಿ ಬದುಕಿದವರಾರು ಅಷ್ಟು ತೀವ್ರವಾಗಿ ಒಂದು ಪ್ರಶ್ನೆ ಮಾಡುವ ಕೆಚ್ಚು ಅಥವಾ ತಾಕತ್ತು ಕೂಡ ಅವನಿಗಿದೆ ಅಂದ ಮೇಲೆ ಅವನು ಹೇಗೆ ತನ್ನನ್ನು ತಾನು ಸಂಪೂರ್ಣವಾಗಿ ಅರ್ಪಿಸಿಕೊಂಡಿದ್ದಾನೆ ಹೀಗೆ ಪ್ರಶ್ನೆ ಮಾಡುವ ಒಂದು ತಿಳಿವಳಿಕೆ ಕೂಡ ಅವನಿಗೆ ಬರುವುದು ಹೇಗೆ ಸಾಧ್ಯ? ಸಮರ್ಪಣ ಭಾವ ಅನ್ನುವ ಪದಕ್ಕಿರುವ ಅರ್ಥ ಬೇರೆ ಏನೋ ಇದೆ ಅಂತ ಆಯ್ತು. ಅಲ್ಲಿ ನಮ್ಮನ್ನು ನಾವು ಸಂಪೂರ್ಣವಾಗಿ ಅರ್ಪಿಸಿಕೊಳ್ಳಬೇಕು ಅನ್ನುವಂತ ಒಂದು ತಿಳಿವಳಿಕೆಯಲ್ಲೇ ಒಂದು ಗೊಂದಲ ಇದೆ ಅಥವಾ ಗೋಜಲು ಇದೆ ಅನ್ನುವಂಥ ಒಂದು ನೆಲೆ ಕೂಡ ಅಲ್ಲಿ ಅಡಕವಾಗಿದೆ ಅನ್ನುವಂಥಾದ್ದನ್ನು ಕೂಡ ನಾವು ಅರ್ಥ ಮಾಡಿಕೊಳ್ಳಬೇಕು. ಅಂದರೆ ನಾವು ಯಾವಾಗಲೂ ಮಾತನಾಡುವ ಸಂದರ್ಭದಲ್ಲಿ ಬಹಳ ಸರಳವಾಗಿ ಹೇಳ್ತೀವಿ, ಅದೃಷ್ಟವಶಾತ್ ನಾವು ಪುರಂದರದಾಸರು ಕನಕದಾಸರ ಬಗ್ಗೆ ಒಂದು ಮಾರ್ಜಿನ್ ಇಟ್ಟುಕೊಂಡು ಮಾತಾಡ್ತಾ ಇದ್ರೂ ಸಹ ಎಷ್ಟೋ ಸಂದರ್ಭದಲ್ಲಿ ಆ ಎಡಪಂಥೀಯ ಎರಡೂ ಪಂಥಗಳಲ್ಲಿ ಈ ತರದ ತೀವ್ರವಾದ ಆರೋಪಗಳು ಕೂಡ ಕೇಳಿ ಬಂದಿದಾವೆ. ಅಲ್ಲಿ ಕನಕದಾಸರು ಅನ್ನುವಂತಹವರಾಗಲಿ, ಪುರಂದರದಾಸರು ಅನ್ನುವಂತಹವರಾಗಲಿ, ಅವರಿಬ್ಬರೂ ಕೂಡ ಮಾಡಿದ್ದೇನೆಂದರೆ, ಈ ದಾಸ ಪರಂಪರೆಯ ಅಥವಾ ಮಾಧ್ವ ಮತ ಆಗಲೀ

ಅಥವಾ ವೈಷ್ಣವ ವೈದಿಕ ಪರಂಪರೆಯಾಗಲಿ ಅಲ್ಲಿಯ ಆಲೋಚನಾ ಕ್ರಮಗಳನ್ನು ಅಲ್ಲಿಯ ತಿಳಿವಳಿಕೆಗಳನ್ನು, ಅಲ್ಲಿಯ ಚಿಂತನೆಗಳನ್ನೇ ಅವರು ಮರು ಮಂಡಿಸುತ್ತಾ ಇದ್ದರು, ಮರು ರೂಪಿಸುತ್ತಾ ಇದ್ದರು, ಅದನ್ನೇ ಜಗತ್ತಿಗೆ ಹೇಳುತ್ತಾ ಇದ್ದರು, ಆ ಮೂಲಕ ಅವರು ವೈದಿಕ ಪರಂಪರೆಯ ವೈದಿಕ ಆಲೋಚನಾ ಕ್ರಮದ ಮುಂದುವರಿದ ತಿಳಿವಳಿಕೆಯಾಗಿ ಕನಕರನ್ನು ನಾವು ಹೆಚ್ಚು ಓದಿಕೊಂಡದ್ದು ಮತ್ತು ಹಾಗೆ ಪಡೆದುಕೊಂಡದ್ದೇ ನಿಜ. ನನಗೆ ಒಂದು ಘಟನೆ ನೆನಪಾಯಿತು, ನಾವು ಸ್ಕೂಲು ಅಥವಾ ಕಾಲೇಜ್ ಡೇಸ್‌ನಲ್ಲಿ ಇದ್ದಾಗ ಮೇಷ್ಟ್ರೊಬ್ಬರು 'ನಾನು ಹೋದರೆ ಹೋಗಬಹುದು ವೈಕುಂಠಕೆ' ಏನಿದಕ್ಕೆ ಅರ್ಥ ಅಂತ ಕೇಳಿದರು. ಸಾವಿರಾರು ಉತ್ತರಗಳು ಬಂದವು ಅಲ್ಲಿ. ಆದರೆ ಅವರು ಹೇಳಿದರು, ಇದೆಲ್ಲಾ ತಪ್ಪು. ನಾನು ಹೋದರೆ ಹೋಗಬಹುದು ವೈಕುಂಠಕೆ, ಯಾಕೆ ಅಂತಂದ್ರೆ If anybody can go to heaven that's me only. ಯಾರಾದ್ರೂ ಹೋಗಬಹುದು ಅಂದ್ರೆ ನಾನು ಮಾತ್ರ ಹೋಗಬಹುದು, ಇನ್ನು ಬೇರೆ ಯಾರೂ ಹೋಗೋಕೆ ಆಗೋದಿಲ್ಲ ಅಂತ. ಅಂದ್ರೆ ಅಲ್ಲಿ ವಿದ್ಯಾರ್ಥಿಗಳ ಮಧ್ಯೆ ಒಂದು ಅಭಿಪ್ರಾಯ ಏನಿತ್ತು ಅಂದ್ರೆ, ನಾನು ಅನ್ನುವ ಅಹಂ ಹೋದರೆ ಹೋಗಬಹುದು ವೈಕುಂಠಕೆ ಅಂತ. ಅಂದ್ರೆ ಇದರಲ್ಲಿ ಯಾವುದು ಸರಿ ಅಥವಾ ಯಾವುದು ತಪ್ಪು ಅನ್ನುವ ಬಗ್ಗೆ ತಕರಾರಿಲ್ಲ, ಆದ್ರೆ ಇದು ತಪ್ಪು ಇದು ಸರಿ ಅನ್ನುವ ನಿರ್ಧಾರಕ್ಕೆ ಬರುವಂತಹ ನಮ್ಮ ಶಿಕ್ಷಣ ಕ್ರಮದಲ್ಲಿ, ಯಾವ ಲೋಕ ಗ್ರಹಿಕೆಗಳು ಸರಿಯಾದದ್ದು, ಯಾವ ಲೋಕ ಗ್ರಹಿಕೆಗಳು ತಪ್ಪಾದದ್ದು ಯಾವ ಲೋಕ ಗ್ರಹಿಕೆ ಮೂಲಕ ನಾವು ಒಂದು ಚಿಂತನೆಯನ್ನು ತಿಳಿವಳಿಕೆಯನ್ನು ಹೇಗೆ ರೂಪಿಸಿಕೊಳ್ಳಬೇಕು ಅಂತ ಅನ್ನುವ ಗೋಜಲುಗಳಿವೆಯಲ್ಲ ಅವನ್ನು ಹೇಗೆ ನಿಭಾಯಿಸುವುದು ಅಂತ, ಆ ಬಿಕ್ಕಟ್ಟುಗಳನ್ನು ಪರಿಹಾರ ಮಾಡೋದು ಹೇಗೆ ಇದುವೇ ಸರಿಯಾದದ್ದು ಅಂತ, ಇದು ಅಲ್ಲ ಅಂತ, ಈ ತರದ ತಿಳಿವಳಿಕೆಯನ್ನು ನಾವು ಹೇಗೆ ಪರಿಹರಿಸಬೇಕು, ನಮ್ಮದು ಯಾವುದು? ಹಾಗಾದರೆ ನಾವು ನಂಬಿಕೊಂಡ ತಿಳಿವಳಿಕೆಯ ಪ್ರಪಂಚ, ನಾನು ನಂಬಿಕೊಂಡು ಬರ್ತಾ ಇರುವ ಅಥವಾ ನನಗೆ ಒಂದು ಪರಂಪರೆ ರವಾನಿಸಿರುವಂತ ಒಂದು ತಿಳಿವಳಿಕೆ ಯಾವುದು? ಅದು ಸರಿಯಾದದ್ದಾ? ಅಥವಾ ಆ ಮೂಲಕ ನಾನು ಬದುಕನ್ನು ಸಾಗಿಸಲಾರೆನಾ? ಅಥವಾ ಆ ಮೂಲಕ ನಾನು ಬದುಕನ್ನು ಸಾಗಿಸುವುದಾದರೆ ಒಳಿತಾದ ಬದುಕನ್ನು ಸಾಗಿಸಲು ನನ್ನಿಂದ ಆಗೋದಿಲ್ವ? ಈ ತರದ ಸವಾಲುಗಳು ನಮಗೆ ಎದುರಾಗಿದಾವೆ. ಈ ಸವಾಲುಗಳನ್ನು, ಈ ಬಗೆಯ ಚಿಂತನೆಗಳ ಮೂಲಕ ಕನಕರನ್ನ ಅಥವಾ ಅವರ ರಾಮಧಾನ್ಯ ಚರಿತ್ರೆ ಇರಬಹುದು ಅಥವಾ ಮೋಹನ ತರಂಗಿಣಿ ಇರಬಹುದು ಅಥವಾ ಹರಿಭಕ್ತಿಸಾರ ಇರಬಹುದು, ಈ ತರದ ಒಟ್ಟು ಅವರ ಕಾವ್ಯಗಳಲ್ಲಿ ಮಂಡಿತವಾಗಿರುವ ಚಿಂತನೆಗಳು ಹೊರಮೈ ಲಕ್ಷಣದಲ್ಲಿ ಅವುಗಳ ಭಾಷಿಕ ರಚನೆಗಳ ಮೂಲಕ ನಮಗೆ ದೊರಕುವುದೇನೆಂದರೆ ಅವರು ಸ್ವತಃ ಹರಿಯಲ್ಲಿ ತಲ್ಲೀನರಾಗಿ, ಹರಿಗೆ ಶರಣಾಗತರಾಗಿ, ಹರಿಯಲ್ಲಿ ತಮ್ಮನ್ನು ತಾವು ಸಮರ್ಪಿಸಿಕೊಂಡು, ಹರಿಯೇ ನೀ ಮಾತ್ರ ನನಗೆ ಸತ್ಯ, ಅನ್ನುವಂತ ಒಂದು ಕಲ್ಪನೆಯಲ್ಲಿ ನಾವು ಕನಕರನ್ನು ಓದಿಕೊಂಡು ಬಂದು ಈವತ್ತು ಅವರ ಬಗೆಗೆ ಮರು ದರುಶನ ಮಾಡಬೇಕು, ಮರು ಚಿಂತನೆ ಮಾಡಬೇಕು ಅಂತಂದ್ರೆ, ಯಾವ ಆಲೋಚನೆ ಮಾಡಬೇಕು? ಯಾವ ಉಪಕರಣಗಳನ್ನು ನಾವು ಬಳಸಬೇಕು, ಹತಾರಗಳನ್ನು ನಾವು ಬಳಸಬೇಕು? ಹೇಗೆ ಬಳಸಿಕೋಬೇಕು, ಯಾವ ಸಂದರ್ಭದಲ್ಲಿ ನಾವು ಕನಕರನ್ನು ಗ್ರಹಿಸಬೇಕು–21ನೇ ಶತಮಾನದಲ್ಲಿ ಕರ್ನಾಟಕದ ಸಮುದಾಯಗಳು ತಮ್ಮ ಬಿಕ್ಕಟ್ಟುಗಳನ್ನು ಹೇಗೆ ನಿಭಾಯಿಸಿಕೊಳ್ಳಬೇಕು, ಎದುರಿಸಬೇಕು ಎನ್ನುವ ಬಗ್ಗೆ ಮುಖ್ಯವಾಗಿ ಕನಕದಾಸರ ಚಿಂತನೆಗಳು ಏನಾದರೂ ನಮ್ಮ ಸಹಾಯಕ್ಕೆ ಬರುತ್ತವಾ? ಬಂದ್ರೆ ಹೇಗೆ ಬರ್ತವೆ? ಮತ್ತೂ ನಾವು ಆಲೋಚನೆ ಮಾಡುವ ಸಂದರ್ಭದಲ್ಲಿ ನಮಗೆ ನಂಬಿದ ಜಗತ್ತು ಮತ್ತು ಒಪ್ಪಿಸಲ್ಪಟ್ಟ ಜಗತ್ತಿನ ಬಗ್ಗೆ ನಡುವೆ ಇರುವ ಬಿಕ್ಕಟ್ಟು, ಅಂತರ, ಕಂದಕಗಳನ್ನು ಸರಿಯಾಗಿ ಗ್ರಹಿಸಿಕೊಂಡರೆ ಕನಕ ಏನು ಹೇಳ್ತಾ ಇದಾರೆ? ಯಾರನ್ನು ಕುರಿತು ಹೇಳುತ್ತಿದ್ದಾರೆ, ಯಾರಿಗಾಗಿ ಹೇಳುತ್ತಿದ್ದಾರೆ ಅನ್ನುವ ತಿಳಿವಳಿಕೆ ಕೂಡ ನಮಗೆ ಮನವರಿಕೆ ಆಗಬೇಕು.

## ಕನಕ ಮರುದರ್ಶನ ಆಯಾಮಗಳು–ಚರ್ಚೆ – 1

**ಚರ್ಚೆ**

**ಕೆ.ವಿ.ಎನ್.:** You will be redefining the reading politics itself. ಅಂದ್ರೆ ಕನಕರ ವಿಚಾರಕ್ಕೂ ಈ ತರ ಆಗ್ಬೇಕಾಗ್ಬರ್ತದೆ. ಗುರುತು, ಚಹರೆಗಳಿಲ್ಲದ ಜಾತಿಗಳು 70ರ ದಶಕದ ನಂತರದಲ್ಲಿ ಕರ್ನಾಟಕದಲ್ಲಿ ಈ ರೀತಿ ತನ್ನ ನಾಯಕರುಗಳನ್ನು ಮತ್ತು ಪುರಾಣವನ್ನು ಕಟ್ಟಿಕೊಳ್ಳುವ, ಕಂಡುಕೊಳ್ಳುವ, ಹುಟ್ಟಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿದ್ದು, They felling in to a Trap. ಆ Trap ಯಾವ್ದೂ ಅಂತ ಅಂದ್ರೆ ಒಂದು ನೇರವಾದ ಸಂಬಂಧ ಇರ್ತದೆ. ವೃತ್ತಿ ಜೊತೆ Identify ಮಾಡ್ಕೊಂಡ್ರೆ ಹೆಸರಿನ ಜೊತೆ Identify ಮಾಡ್ಕೊಂಡ್ರೆ every thing will be ok. Trap ಇಂದ ನೀವು

ಹೊರಗಡೆ ಬಂದಿಲ್ಲ ಅಂತ ಕಾಣ್ತದೆ. Identify politics ಅಂತ ಅನ್ನೋದು ಇದಕ್ಕಿಂತ ಹೆಚ್ಚು complex ಆಗಿರೋ ಅಂತಾದ್ದು.

ಅದು ನನಗೂ ಮತ್ತು ಅದಕ್ಕೂ ಇರುವ ಸಂಬಂಧವನ್ನು ಆರಾಧನೆ ಮತ್ತು ಆರಾಧಿಸೋದು ಲೋಕ ಸಂಬಂಧ ನಿರಂತರವಾಗಿ ಬೆಳೆಯುವ ಪ್ರಕ್ರಿಯೆ ಅಂತ ತಿಳಿದುಕೊಂಡರೆ we will be redefining the Process. ಅದಕ್ಕೆ ನಮ್ಮ ಸಾಂಸ್ಕೃತಿಕ ಪರಿಸರ ಇನ್ನೂ ಸಿದ್ಧ ಆಗಿಲ್ಲ ಅಂತ ಅನ್ಸುತ್ತೆ. ಅದರಿಂದಾಗಿ ಈ ಇಕ್ಕಟ್ಟುಗಳು ಕಾಣಸಿಕೊಳ್ಳುತ್ತಿವೆ ಮತ್ತು failure ಆಗ್ತಾ ಇದೆ.

**ಪ್ರಶ್ನೆ – ಸುಮಾ ಬಿ.ಯು.**

ಈ ರೀತಿಯ ಚರ್ಚೆಗಳೂ ಕೂಡ ಅದರ ಇನ್ನೊಂದು ಮುಖನಾ? ಈ ರೀತಿಯ ಚರ್ಚೆಗಳು ಮರು ದರ್ಶನದ ಆಯಾಮಗಳು...... Identity politics ಮುನ್ನೆಲೆಗೆ ಬರ್‍ತಿರುವ ಎಲ್ಲ ಬೇರೆ ಬೇರೆ constructiveಗಳು ಅಂತ ಕಾಣ್ಲಲ್ವ?

**ಉತ್ತರ – ಕೆ.ವಿ.ಎನ್.**

Its for you to reconstruct. Identity ಪಾಲಿಟಿಕ್ಸ್‌ನ re-define ಮಾಡ್ಬೇಕು processನೇ redefine ಮಾಡ್ಬೇಕು. ಇರೋದನ್ನ ಹೇಳೋದು ಇದ್ದುದರ ಹೊಣೆಗಾರಿಕೆ. ಹಾಗ್ಮಾಡ್ತಾ ಇದೀವಿ ಅಂತ ಹೇಳೋದು ಒಂದು discription ಅಷ್ಟೆ. ನೀವು ಹೇಳ್ತೀರಿ–ನಾನೂ ಅದನ್ನೇ ಹೇಳ್ತೇನೆ. ಅದು ಹಾಗೇ ಮಾಡ್ಬೇಕಾ? ಅದು ಮಾಡೋದ್ರಿಂದ ಯಾವ Trapನಲ್ಲಿ ಹೋಗಿ ಬೀಳ್ತಾ ಇದೀವಿ ಅಥವಾ ಬೀಳ್ತಾ ಇದಾರೆ ಜನರು. ಅಂದ್ರೆ ಒಂದು ಜಾತಿಯಲ್ಲಿ almost all ಕರ್ನಾಟಕದ ಎಲ್ಲ ಮಧ್ಯಜಾತಿಗಳು, ಕೆಳಜಾತಿಗಳು ಕೂಡ ಈ Trapನಲ್ಲಿ ಬಿದ್ದಿದಾವೆ.

**ಪ್ರಶ್ನೆ :** ಮೇಲ್ವರ್ಗದ ಜಾತಿಗಳನ್ನು ಅವು ಅನುಕರಿಸುತ್ತಾ ಇವೆ. ಅಧಿಕಾರ, ರಾಜ್ಯಾಧಿಕಾರ, ಕೋಶಾಧಿಕಾರ ಎಲ್ಲಾ ಇದ್ದಾಗಲೂ ಅವನ್ನು ಹಂಚಿಕೊಳ್ಳೋಕೆ ಅವರೂ ಇದೇ ದಾರಿ ಹಿಡಿದಿದ್ದಾರೆ?

**ಉತ್ತರ – ಕೆ.ವಿ.ಎನ್.**

ಇದು ಉತ್ತರ ಆಗೋದಿಲ್ಲ. ಅವ್ರು ಅದೇ ರೀತಿ ಮಾಡ್ತಿದ್ದಾರಾದ್ರಿಂದ ಇವ್ರು ಈ ರೀತಿ ಮಾಡೋದು ಸರಿ ಅಂತ ಅನ್ನೋಕಾಗಲ್ಲ.

**ಪ್ರಶ್ನೆ :** ಅದು ಹಾಗಲ್ಲ, ಕೆಳವರ್ಗದವರಿಗೆ ಅದರ ಅವಶ್ಯಕತೆ ಇರ್‍ತದೆ. ಕನಕದಾಸರ ವಿಚಾರನೇ ತಗೊಂಡ್ರೆ 90ರ ನಂತರಾನೇ ಕನಕದಾಸರ ಒಂದು ಪೂರ್ಣ ಚಿತ್ರಣ ಕರ್ನಾಟಕಕ್ಕೆ ಗೊತ್ತಾದದ್ದು. ಅಲ್ಲೀತನಕ ಗೊತ್ತೇ ಇರಲಿಲ್ಲ.

**ಕೆ.ವಿ.ಎನ್.**

ನೀವು ನನ್ನ ಮಾತನ್ನ ತಪ್ಪಾಗಿ ಅರ್ಥ ಮಾಡ್ಕೊತಿದ್ದೀರಿ. I am not against ಐಡೆಂಟಿಟಿ ಪಾಲಿಟಿಕ್ಸ್. Identity politics trap ಏನಿದೆ ಅದನ್ನ ಅರ್ಥಮಾಡ್ಕೊಂಡು re-define ಮಾಡ್ಬೇಕು ಅಂತ ಹೇಳ್ತಾ ಇದ್ದೀನಿ.

**ಪ್ರಶ್ನೆ – ಶಿವಪ್ರಸಾದ್**

ಭಕ್ತ ಕನಕನ ಅನೇಕ ಕೀರ್ತನೆಗಳು ವಿಸ್ಮಯದಿಂದಲೇ ಹುಟ್ಟತ್ತೆ, ಪ್ರಶ್ನೆಗಳಿಂದ್ಲೇ ಹುಟ್ಟುತ್ತೆ. ಆ ಪ್ರಶ್ನೆಗಳೇ ನಮಗೆ ನಿಜವಾದ ಆಧಾರಗಳು. ಅದಿಲ್ದೇ ಹೋದ್ರೆ ಹೇಗೆ ಸಾಧ್ಯ ಅದು?

**ಉತ್ತರ – ಮಲ್ಲಿಕಾರ್ಜುನ ಮೇಟಿ**

ಅದು ನಾನು ಹೇಳ್ತಾ ಇರೋದಲ್ಲ. ಹಾಗೆ ಹೇಳಲ್ಪಟ್ಟಿದೆ. ಈಗ ಅವರಿಗೆ ಹರಿಯೇ ultimate ಆಗಿರುವಾಗ ಆಸೆ ಇನ್ನೇನೂ ಇಲ್ಲ ಅಂದಾಗ ಅದನ್ನ ಒಪ್ಕೊಬೇಕನ್ನೋ ಬಲವಂತ ಇದೆ – ಅದನ್ನ ಪ್ರಶ್ನೆ ಮಾಡಬಾರದು. ಪ್ರಶ್ನೇನ ಕನಕರೇ ಮಾಡಿದ್ದಾರೆ. ಅಂದ್ರೆ ಅವ್ರು ಮಾಡಿಲ್ಲ, ಮಾಡೋಕೆ ಸಾಧ್ಯ ಇಲ್ಲ. ಮಾಡ್ಕೂಡ್ದು ಅನ್ನುವಂತ ಬಲವಂತ ನಮ್ಮ ಮೇಲಿದೆ ಅಂತ ನನಗನ್ಸುತ್ತೆ. ಭಕ್ತ ಮತ್ತು ದೇವರ ನಡುವೆ ಇರುವ ನಂಟನ್ನ ನಾವು ವ್ಯಾಖ್ಯಾನ ಮಾಡುವ ಕ್ರಮ ಹೇಗಿದೆ ಅಂತ ಅಂದ್ರೆ ಭಕ್ತನ ಅಸ್ತಿತ್ವವನ್ನ ನಾಶ ಮಾಡಿ ಕೇವಲ ದೈವತ್ವದ ಅಸ್ತಿತ್ವವನ್ನ ಮಾತ್ರ ರೂಪಿಸ್ತಾ ಇದ್ದೇವೆ. ಈಗ ನೀವು ಅಸ್ತಿತ್ವದ ಬಗ್ಗೆ ಮಾತಾಡುವಾಗ ಕನಕರ ಬಗ್ಗೆ ಮಾತಾಡೋದಿಲ್ಲ. ಯಾಕಂದ್ರೆ ಅವ್ರು ತಮ್ಮನ್ನ ತಾವು ಅರ್ಪಿಸ್ಕೊಂಬಿಟ್ಟಿದ್ದಾರೆ ಈಗ ಅರ್ಪಿಸಿಕೊಂಡ್ಮೇಲೆ ಅಸ್ತಿತ್ವದ ಪ್ರಶ್ನೆ ಎಲ್ಬಂತು.

**ಪ್ರಶ್ನೆ – ತಾರಿಣಿ ಶುಭದಾಯಿನಿ**

ಸಮರ್ಪಣೆಯ ಮೂರು ನೆಲೆಗಳನ್ನ ವೈದಿಕ ನೆಲೆಯಲ್ಲಿ ನೋಡ್ತೀವಲ್ಲ, ಅದ್ವೈತ, ವೈಷ್ಣವ ಮತ್ತು ಶ್ರೀವೈಷ್ಣವ ಪ್ರಪತ್ತಿಗಳಿದಾವಲ್ಲ, ಅದರಲ್ಲೇನೆ ಸಮರ್ಪಣೆಯ ಬೇರೆ ಬೇರೆ ನೆಲೆಗಳಿರ್‍ತವೆ. ಒಂದು complete ಆಗಿ ಸೇರ್‍ಕೊಳ್ಳೋ ಅಂತಾದಾದ್ರೆ ಇನ್ನೊಂದು ಡಿಸ್ಟೆನ್ಸ್ ಇಟ್ಟುಕೊಂಡಿರುತ್ತೆ. ಇನ್ನೊಂದು ನೀವು ಎತ್ತಿದಂಥ ಎಡಪಂಥೀಯ ಒಂದು ಹೆಜಮೊನಿಕ್ ಆಗಿರ್‍ತಾಕ್ಕಿಂತ ರೀತಿಯಲ್ಲಿ ಇರ್‍ತದೆ. ಇದರಲ್ಲಿ ನೀವು ನಿಜವಾಗ್ಲು ಕನಕರನ್ನ ಯಾವ ಸಮರ್ಪಣೆಯ ಭಾವದಲ್ಲಿ ಇರಿಸಲಿಕ್ಕೆ ಇಷ್ಟ ಪಡ್ತೀರ?

ಅವರು complete ಆಗಿ ಮಾಧ್ವ ಮತಾನುಯಾಯಿಯೂ ಅಲ್ಲ. ವೈಷ್ಣವ ಮತಾನುಯಾಯಿಯೂ ಅಲ್ಲ. ಆಗ ವೈಷ್ಣವ ಧರ್ಮದಲ್ಲಿರುವ ಪ್ರಕಾರ ಪ್ರಪತ್ತಿಯ ಸಮರ್ಪಣೆಯ ಭಾವ ಬೇರೆ. ಅದು ಸಂಪೂರ್ಣ ಶರಣಾಗತಿ. ಅದರ ಜೊತೆಗೆ ಒಂದು ಹಂತದಲ್ಲಿ ಅಲೌಕಿಕದಲ್ಲಿ ನೆಲೆಯಾಗಿ ನಾವು ಭಕ್ತ ಮತ್ತು ಆತ್ಮದ ಸಮ್ಮಿಲನ, ಆತ್ಮ ಮತ್ತು ಪರಮಾತ್ಮ ಸಮ್ಮಿಲನ ಅಂತೀವಲ್ಲ ಆ ಅಲೌಕಿಕ ನೆಲೆಯ ಗ್ರಹಿಕೆಯಲ್ಲಿ ಒಂದು ರೀತಿಯಾಗುತ್ತೆ. ಇನ್ನೊಂದು ನೀವು ಎತ್ತಿದಂಥ ಹೆಜಮೊನಿಕ್ ಪರಿಸ್ಥಿತಿ. ಈ ಒಂದು

ನೆಲೆಯ ಸಮರ್ಪಣೆ ಎಷ್ಟರ ಮಟ್ಟಿಗೆ ಸಮರ್ಪಣೆಯಾಗಿ ಹೊಂದುತ್ತೆ, ಸಂಪೂರ್ಣವಾಗಿ ಅಲ್ಲ ಅದು ಭಕ್ತ ಅಂತ ಪ್ರಶ್ನೆ ಬರದಿದ್ದಾಗ ಹೆಜಮೊನಿಕ್ ಹೇಗೆ ಆಗುತ್ತೆ.

**ಉತ್ತರ – ಮೇಟಿ**

Bit confused. ನೀವು ಹೇಳ್ತಾ ಇರುವ ಮಾತುಗಳು ನಾನು ಹೇಳಿದ್ದು ಅಲ್ಲ. ಸಮರ್ಪಣೆ ಅನ್ನೋದನ್ನ ಯಾವ ಪಂಥಕ್ಕೆ ಅನ್ವಯಿಸಿಕೊಂಡು ಹೇಳ್ತಾ ಇದ್ದೀರ ಅನ್ನೋದು ಕೂಡ... ಆ ರಚನೆಗಳನ್ನ ಒಡೀತಾ ಇದ್ದಾನೆ ಅಂತ ನಾನು ಹೇಳ್ತಾ ಇದ್ದೇನೆ. ಈಗ ನೀವು ಜಾತಿ ಅನ್ನುವ ಹೆಜಮೊನಿಕ್ Structure ಇದೆಯಲ್ಲ, ಆ ರಚನೆಯನ್ನೇ ಅವ್ನು ಒಡೀತಾ ಇರೋದು.

ಈಗ ನೀವು ಕುಲಕುಲವೆಂದು ಏತಕಯ್ಯಾ...... ನನಗೆ ಅದು ಕೋಟ್ ಮಾಡೋಕೆ ಆಗಲ್ಲ. ಹೇಳುವಾಗ ನೆನಪಿರುತ್ತೆ. ಆದ್ರೆ ಯಥಾವತ್ತಾಗಿ ಆ ಹಾಡುಗಳನ್ನು ಕೋಟ್ ಮಾಡೋಕೆ ಆಗಲ್ಲ. ಆವಾಗ ಅವ್ನು ಕೇಳ್ತಾ ಇರೋದೇನು? ಎತ್ತುತ್ತಾ ಇರೋ ಪ್ರಶ್ನೆ ಏನು? ಅಲ್ಲಿರುವ ಯಜಮಾನಿಕೆ ನೆಲೆಯನ್ನೆ ಅವ್ನು ಪ್ರಶ್ನೆ ಮಾಡ್ತಾ ಇದ್ದಾನೆ ಅಲ್ವಾ. ನೀವು ಇಲ್ಲಿ, ಕನಕ ತನ್ನನ್ನು ಸಮರ್ಪಿಸಿಕೊಂಡು ಹರಿಯೇ ultimate ಅನ್ನೋದನ್ನ ಮಂಡಿಸುತ್ತಿರುವ ಸಂದರ್ಭದಲ್ಲಿಯೇ ಅವ್ನು ಇನ್ನೊಂದು ನೆಲೆಯಲ್ಲಿ ಇದನ್ನ ಈ ವ್ಯವಸ್ಥೆಯನ್ನ ಪ್ರಶ್ನೆ ಮಾಡ್ತಾ ಇದ್ದಾನೆ.

ಪ್ರಶ್ನೆ : ಅಷ್ಟೊಂದ್ strong ಆಗಿ ಮಾಡ್ತಿದ್ದಾನಾ?

**ಉತ್ತರ : ಕೆ.ವಿ.ಎನ್.**

ಮಲ್ಲಿಕಾರ್ಜುನ್ ಮಾತನ್ನ ಹೀಗೆ ಅರ್ಥಮಾಡ್ಕೊಳ್ಳಿ. ಕನಕನನ್ನ ಕನಕ ಸಮರ್ಪಣಾ ಭಾವದಲ್ಲಿ ಹೇಳ್ತಿದ್ದಾನೆ ಅಂತ ಅಲ್ಲ. ಕನಕನನ್ನ present ಮಾಡೋ ಒಂದು ವಿಧಾನ ಇದ್ಯಲ್ಲ ಅವರ ಬಗ್ಗೆ ವ್ಯಾಖ್ಯಾನ ಮಾಡೋದು, ಅವ್ರ ಬಗ್ಗೆ ನಮ್ಮ ತಿಳಿವಳಿಕೆಯನ್ನ ಕಟ್ಟಿಕೊಡೋರು ಅವ್ರು. ದೈವ ಮತ್ತು ದಾಸ ಈ ಸಂಬಂಧದಲ್ಲಿ ದಾಸನ ದಾಸ್ಯ ಭಾವವನ್ನ ಹೇಳುವ ಹಾಡುಗಳನ್ನ ಬರ್ದಿದ್ದಾರೆ – ಅಂತ ನಮ್ಗೆ ಕಟ್ಟಿಕೊಡ್ಲಾಗ್ತದೆ. ಕನಕನಿಗೆ ಆಟ್ರಿಬ್ಯೂಟ್ ಮಾಡಲಾಗ್ತದೆ. ಆ ರೀತಿ atribution (ಆಟ್ರಿಬ್ಯೂಷನ್) ಅನ್ನ ಆ ಲಿಂಗ್ವಿಸ್ಟಿಕ್ structure ನಿಂದ ಪಡೆಯೋಕಾಗಲ್ಲ. ಪಡಿಕೂಡ್ದು. ಅದು ಸರಿಯಾದ ಅನುಸಂಧಾನ ಅಲ್ಲ.

**ಪ್ರಶ್ನೆ – ಟಿ. ಯಲ್ಲಪ್ಪ**

ಮಲ್ಲಿಕಾರ್ಜುನ ಅವರ ಮಾತು ಮತ್ತು ತಾರಿಣಿಯವರ ಮಾತುಗಳಿಗೆ ಪೂರಕವಾಗಿ ನನ್ನ ಕೆಲವು ಅನಿಸಿಕೆಗಳನ್ನ ಹೇಳೋಕೆ ಇಷ್ಟಪಡ್ತೀನಿ.

ಕನಕದಾಸರು ಲೌಕಿಕವನ್ನ ಎಲ್ಲೂ ಗೌಣವಾಗಿ ಗ್ರಹಿಸೋದೇ ಇಲ್ಲ. ಮತ್ತು ಭಕ್ತಿಯ ಭಾವದಲ್ಲಿ ಸಂಪೂರ್ಣವಾಗಿ ಮುಳುಗಿ ಹೋಗದ ಒಂದು ರೀತಿ ಎಚ್ಚರಿಕೆಯ ಲೌಕಿಕದ ಪ್ರಕ್ರಿಯೆಯನ್ನು ಕನಕದಾಸರ ಈ ಸಾಮಾಜಿಕ ಚಿಂತನೆಯ ಪರವಾದ ಎಲ್ಲಾ ನೆಲೆಗಳಲ್ಲೂ, ಕೃತಿಗಳಲ್ಲೂ ಕಾಣಬಹುದು. ಇದಕ್ಕೆ ಪೂರಕವಾಗಿ ಇನ್ನೊಂದು ಗಮನಿಕೆ ಏನು ಅಂತ ಅಂದ್ರೆ ಮುಖ್ಯವಾಗಿ ನಾವು ವಚನ ಚಳುವಳಿ ಮತ್ತು ದಾಸಪಂಥದ ನಡುವಿನ ತಾತ್ವಿಕತೆಯ ನಡುವಿನ ಭಿನ್ನತೆಯನ್ನ ಅವು ಭಕ್ತಿಯ ಮೂರ್ತ ಮತ್ತು ಅಮೂರ್ತತೆಗಳ ನಡುವಿನ ಕದನವಾದ ಈ ಚಿಂತನೆಯ ಹಿನ್ನೆಲೆಯಲ್ಲಿ ಗ್ರಹಿಸಬೇಕು ಅನ್ನುತ್ತೆ. ಹಾಗೆ ನೋಡಿದರೆ ಈ ವಚನ ಚಳುವಳಿ ಮೂರ್ತ ರೂಪವನ್ನ ಧಿಕ್ಕರಿಸಿ ಭಕ್ತಿಯ ಆತ್ಮೀಕರಣಕ್ಕೆ ತುಡಿದರೆ ನಮ್ಮ ದಾಸ ಪಂಥ ಏನ್ಮಾಡುತ್ತೆ ಅಂದ್ರೆ ಭಕ್ತಿಯ ಮೂರ್ತ ರೂಪದೊಡನೆಯೇ ಭಕ್ತಿಯ ಸಾಕ್ಷಾತ್ಕಾರಕ್ಕೆ ತುಡಿಯುವ ಒಂದು urge ಅನ್ನು ಇಟ್ಕೊಂಡಿರುವಂತಹ ಒಂದು ಕನಕದಾಸರು ಹೇಳಿರುವಂತದ್ದನ್ನ ಕೂಡ ನೋಡ್ಬಹುದು. ಹಾಗೇನೇ ಲೌಕಿಕವನ್ನ ಕುರಿತ ಒಂದು ಅತೃಪ್ತಿ ಸಂತ ಕವಿಯಾದ ಕನಕದಾಸನಲ್ಲಿ ಸದಾ ಜಾಗೃತವಾಗಿರೋದನ್ನ ನಾವು ನೋಡ್ಬಹುದು. ಹಾಗಾಗಿ ಕರ್ಮ ಮತ್ತು ವೈದಿಕ ಸಿದ್ಧಾಂತಗಳ ಸಂಘರ್ಷಗಳ ನಡುವೆ ಕರ್ಮ ಸಿದ್ಧಾಂತವನ್ನ ಪ್ರಜ್ಞಾಪೂರ್ವಕವಾಗಿ ಬಿತ್ತರಿಸುವ ಮೂಲಕವೇ ಅದರ ಸಾಮಾಜಿಕ ಆಯಾಮವನ್ನು ಒಟ್ಟು ಕನಕ ಕೃತಿಗಳ ನೆಲೆಗಳಲ್ಲಿ ಸೇರಿಸ್ಕೊಂಡು ಚರ್ಚೆಗೆ ಒಳಪಡಿಸ್ಕೋಬೇಕು ಅಂತ ನನಗನ್ನುತ್ತೆ.

**ಚರ್ಚೆ : ಬಂಜಗೆರೆ ಜಯಪ್ರಕಾಶ್**

ಈಗ ಕನಕದಾಸರು ಅಕಸ್ಮಾತ್ ಅವರ ವಚನಗಳಲ್ಲಿ, ಕೀರ್ತನೆಗಳಲ್ಲಿ ಲೌಕಿಕತೆಯನ್ನ ನಿರಾಕರಿಸಿಯೇ ಇದ್ದಾಗ್ಲೂ ಕೂಡ ಅದು ಬೇಕೆ? ಆ ರೀತಿಯಾಗಿರುವ ಒಂದು ಇದನ್ನ ತಗೊಳ್ಬೇಕಾ? ಆ ರೀತಿ ಯಾಕೆಂದರೆ ನಮಗೆ ಎಡಪಂಥೀಯ ಚಿಂತನೆಯ ಹಿನ್ನೆಲೆ ಬಂದೋಗಿರೋದ್ರಿಂದ ನೀವು ಕೀರ್ತನೆಯನ್ನ ಓದ್ಬೇಕಾದ್ರೆ ಅದ್ರೊಳಗಡೆ ಲೌಕಿಕತೆಯ touch ಏನಿದೆ ಅನ್ನೋದು ನೋಡೇ ಆಮೇಲೆ ಓಕೆ ಪರ್ವಾಗಿಲ್ಲ ಅದು ಒಂದು ಲೈನಲ್ಲಿ ಹೇಳೇ ಹೇಳಿದ್ದಾನೆ ತಾನೆ ಸಮಾಜದ ಬಗ್ಗೆ. ಆದ್ರಿಂದ ಅವನೇನು ತೀರ ಬಿಟ್ಹೋಗ್ಬೇಕಾದೋನಲ್ಲ ಅನ್ನೋ ತರ ಯೋಚಿಸ್ತೀವಿ. ಇನ್ನೂ ಸ್ವಲ್ಪ ಆಳವಾಗಿ ಯೋಚನೆ ಮಾಡಿದರೆ ಲೌಕಿಕತೆಯನ್ನ ನಿರಾಕರಣೆಯೇ ಮಾಡಿರಲಿ ಅದು ಅವನ ನೆಲೆಗಟ್ಟು. ಅದು ಅವನ ತಾತ್ವಿಕ ನೆಲೆಗಟ್ಟು. ಆದ್ರೆ ಅಂತಿಮವಾಗಿ ಆ ಸಾಮಾಜಿಕ ಪ್ರಕ್ರಿಯೆಯಲ್ಲಿ ಆ ನಿರಾಕರಣೆಯೂ ಮತ್ತು ಆತನ ವ್ಯಕ್ತಿತ್ವವೂ ಏನು ಪಾತ್ರ ನಿರ್ವಹಿಸಿತು ಅಂತ ಗ್ರಹಿಸೋಕೆ ಸಾಧ್ಯ ಇದೆಯಾ ನಮಗೆ ಅಂತ.

**ಪ್ರಶ್ನೆ – ಮಲ್ಲಿಕಾರ್ಜುನ**

ನನ್ನ ಪ್ರಶ್ನೆ ಇರೋದು ಲೌಕಿಕ ಅಲೌಕಿಕ ಅನ್ನುವ ವಿಂಗಡಣೆಯಲ್ಲೇ ಸಮಸ್ಯೆ ಇದೆ.

**ಬಂಜಗೆರೆ :** ಆದ್ರಿಂದ ಅದನ್ನ ಅದು ಅಲೌಕಿಕವೇ ಆಗಿರಲಿ ಭಯ ಯಾಕೆ ನಮ್ಗೆ?

**ಚರ್ಚೆ: ಡಾಮ್ನಿಕ್**

ತಲ್ಲಣಿಸದಿರು ಕಂಡ್ಯ ಹಾಡಿನಲ್ಲಿ ಎಲ್ಲ ಜೀವಸಂಕುಲಕ್ಕೂ ಸಾಂತ್ವನ ಹೇಳುವ confidence ಕೊಡುವ ಒಂದು ಸಂದೇಶ ಇದೆ. ಅದೇ ತರ ಎಲ್ಲಾ ಮಾಡುವುದು ಹೊಟ್ಟೆಗಾಗಿ ಇದೆಲ್ಲ ತಗೊಂಡ್ರೆ ಸಂಪೂರ್ಣ ನಿರಾಕರಿಸ್ತಾ ಇದಾರೆ ಅಂತ ಅನ್ನಲ್ಲ. ಇನ್ನೊಂದು ಜೀವನ ಗ್ರಹಿಕೆ ಅಂದಾಗ ಅಂದಿನ ಕಾಲದಲ್ಲಿ ಯಾವ ಯಾವ ಮಾದರಿಗಳು ಇದ್ವು. ಪ್ರಭುತ್ವ ಆಗ್ಬಹುದು ಒಂದ್ಕಡೆ ಶಿವ ಸಂಸ್ಕೃತಿ ಆಗ್ಬಹುದು ಇನ್ನೊಂದ್ಕಡೆ ದಾಸ ಪಂಥ ಆಗ್ಬಹುದು ಇವುಗಳಲ್ಲಿ ತುಂಬ ಆದರ್ಶ ಅಂತ ಯಾವುದನ್ನ ಜನ ನೋಡ್ಬೇಕು ಅಂತ ಬಯಸ್ತಾರೆ? ಅದನ್ನ ಕನಕ ಸಾಹಿತ್ಯ ಏನ್ ಪ್ರತಿಪಾದ್ಸುತ್ತೆ ಅಂತಾನೂ ನಾವು ಯೋಚಿಸ್ಬೇಕು ಅನ್ಸುತ್ತೆ. ಯಾಕೆಂದ್ರೆ ಇವಾಗ ಇದ್ಯಲ್ಲ, ಸಂಸ್ಕೃತಾನುಕರಣದ ಮಾದರಿ, ಬಹುಶಃ ಅವಾಗೂ ಕೂಡ ಆರ್ಥಿಕವಾಗಿ ಚೆನ್ನಾಗಿದ್ದಂತಹ ಸಮುದಾಯಗಳು ಅದನ್ನೆಲ್ಲಾ ಬಿಟ್ಕೊಟ್ಟು ದಾಸ ಪಂಥಕ್ಕೆ ಬಂದಂಥ ಉದಾಹರಣೆ ಬಹುಶಃ ಪುರಂದರ ಮತ್ತು ಕನಕರಿಬ್ರೇ ಸಿಗೋದು ಅಂತ ಅನ್ಸುತ್ತೆ ಅಲ್ವಾ. ಅದ್ರ ಹಿಂದೆ ಏನಾದ್ರೂ ಕಲ್ಚರಲ್ ಪಾಲಿಟಿಕ್ಸ್ ಇದ್ಯಾ.

**ಮಲ್ಲಿಕಾರ್ಜುನ ಮೇಟಿ:**

ಖಂಡಿತಾ ಅದೊಂದು cultural politics. Conflict oriented world view. ರಾಗಿ ಮತ್ತು ಭತ್ತ ಸಂಕೇತಗಳ ಮೂಲಕ ಅವತ್ತಿನ ಸಂಘರ್ಷಗಳನ್ನ ಮತ್ತು ಬಿಕ್ಕಟ್ಟನ್ನ ಮುಖಾಮುಖಿ ಮಾಡ್ವಾಗ ಅಂದ್ರೆ ಅವತ್ತಿನ ಸಮುದಾಯಕ್ಕೆ ಅಗತ್ಯವಾಗಿರುವ ಒಂದು ತಿಳಿವಳಿಕೆಯಲ್ಲಿ ಅವನು ಯಾವ ರೀತಿ ಗ್ರಹಿಸಿಕೊಳ್ತಾ ಇದಾನೆ ಅಂತ.

**ಪ್ರಶ್ನೆ–**

ವೈದಿಕ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿದ್ದಾನೆ ಅನ್ನುವ ಬಗ್ಗೆ.

**ಉತ್ತರ – ಮೇಟಿ**

ಆ ತರದ ಅಭಿಪ್ರಾಯಗಳಿವೆ. ಪುರಂದರದಾಸರ, ಕನಕದಾಸರ ಒಟ್ಟು ಅವರ ಚಿಂತನೆಗಳಲ್ಲಿ ಕೇವಲ ವೈದಿಕ ಪರಂಪರೆಯ ಆಲೋಚನೆಗಳನ್ನ ಮುಂದುವರಿಸಿಕೊಂಡು ಬಂದಿದ್ದಾರೆ ಅನ್ನುವಂತ ಪ್ರತಿಪಾದನೆಗಳಿದಾವೆ. ಮತ್ತದು ಅಲ್ಲ ಬೇರೆ ತರದ ಆಲೋಚನೇನೂ ಅಲ್ಲಿದೆ. ಮತ್ತದನ್ನೂ ನಾವು ನೋಡ್ಬೇಕಾದ ಅಗತ್ಯತೆ ಇದೆ ಅನ್ನುವ ಪ್ರತಿಪಾದನೆಗಳೂ ಇದಾವೆ.

**ಬಿ.ಯು. ಸುಮಾ**

ರಾಗಿ ಮತ್ತು ಭತ್ತದ ನೆಲೆಯಲ್ಲಿ ನೋಡ್ದಾಗ ನಾವಿವತ್ತು traditional ಆಗಿ ಏನು ವ್ಯಾಖ್ಯಾನ ಕೊಟ್ಕೋ ಬಂದಿದ್ದೀವಿ ಅದಕ್ಕಿಂತ ಒಂದು ಭಿನ್ನವಾದ ವ್ಯಾಖ್ಯಾನನ ಡಾಮ್ನಿಕ್ ಕೊಟ್ರು. ಆರು ತಿಂಗಳ ಹಿಂದೆ ಇದೇ ವಿಷಯವಾಗಿ ಚರ್ಚೆ ಮಾಡ್ತಿದ್ವಿ.

**ಡಾಮ್ನಿಕ್**

ಲೌಕಿಕ ಅಲೌಕಿಕ ಅನ್ನೋ ಭಯದಲ್ಲಿ ನಾವು ಎದುರು ನಿಂತುಕೊಂಡ ತಕ್ಷಣನೇ ನಾವು ಒಂದನ್ನ ಇನ್ನೊಂದರ ಮೂಲಕ define ಮಾಡ್ತಾ ಹೋಗ್ತೇವೆ. ಹಾಗೆ define ಮಾಡ್ವಾಗ್ಲೇ ಇನ್ನೊಂದರ ಅಸ್ತಿತ್ವವನ್ನ ನಿರಾಕರಿಸ್ತೀವಿ ಇಲ್ಲ ಅಂದ್ರೆ ಅದನ್ನ ಪ್ರತಿಪಾದಿಸ್ತಾ ಇರ್ತಿವಿ. ಹೀಗೆ ಮಾಡ್ವಾಗ ಅಧಿಕಾರ ಸಂರಚನೆ ಎಲ್ಲಿ ರೂಪುಗೊಳ್ತಾ ಇದೆ ಅಂತ ಹೇಳ್ವಾಗ ಈ ರಾಮಧಾನ್ಯ ಚರಿತೆಯನ್ನ ನಾನು ಇನ್ನೊಂದು ಕ್ರಮದಲ್ಲಿ ನೋಡಿದ್ದೇನೆ. ರಾಗಿ ಬೆಳೆಯೋದು ಒಣ ಬೇಸಾಯ ಪದ್ಧತಿಯಲ್ಲಿ. ಭತ್ತ ನೀರಾವರಿ ಪ್ರದೇಶದಲ್ಲಿ. ಹಾಗಾಗಿ ಇಲ್ಲಿ ಎರಡು ಸಮುದಾಯಗಳು ಅಥವಾ ಬಹುರೂಪಿ ಸಮುದಾಯಗಳು ಇಲ್ಲಿ ರಾಗಿಯನ್ನ ಆಧರಿಸಿವೆ ಅನ್ನೊಂಡಾಗ ಇನ್ನೊಂದು ಸಮುದಾಯ ಭತ್ತವನ್ನ ಆಧರಿಸಿದೆ ಅನ್ಕೊಂಡಾಗ ಅವರಿಬ್ಬರ ಜೀವನ ಕ್ರಮನೂ ಸಹ ಬೇರೆ ಬೇರೆ ಇರುತ್ತೆ. ಹಾಗಾದ್ರೆ ಈ ಎರಡು ಜೀವನ ಕ್ರಮಗಳು ವಿಜಯನಗರ ಸ್ಥಾಪನೆಯ ಸಂದರ್ಭದಲ್ಲಿ ಎಂತ ಅಧಿಕಾರವನ್ನು ಹಂಚ್ಕೊಂಡ್ವು ಅನ್ನೋದಕ್ಕೆ ಕೆಲವೊಂದು ಸಣ್ಣ ಸುಳುಹುಗಳು ಸಿಕ್ತಾ ಹೋಗ್ತವೆ. ಹಾಗಾಗಿ ಈ ಅಧಿಕಾರ ಸಂರಚನೆಗಳು ಅಂತಿಮವಾಗಿ ಏನಾಯ್ತು ಅಂತ? ಅದು ಮತ್ತೆ ಒಂದನ್ನ ನಿರಾಕರಿಸ್ತಾ ಅಥವಾ ಒಣಬೇಸಾಯ ಪದ್ಧತಿಯ ಜೀವನ ಕ್ರಮಗಳನ್ನ ಮತ್ತಷ್ಟು ತೀವ್ರವಾಗಿ ಅಡಿಯಾಳಾಗಿಸ್ತಾ ಹೋದ್ವಾ? ಇವತ್ತಿನ ವರ್ತಮಾನನೂ ಸಹ ನಮ್ಮನ್ನ ಅದೇ ರೀತಿ ಕಾಡ್ತಾ ಇದಾವೆ. ಇವಾಗ ಕಾವೇರಿ ನೀರಿನ ಸಮಸ್ಯೆ ತೆಗೆದುಕೊಂಡ್ರೂನು ಅಲ್ಲಿರುವಂತ ಭೂಮಿ, ಭೂಮಿ ಹಿಡುವಳಿದಾರರು ಮತ್ತೆ ಅವರವರ ಮಧ್ಯೆ ಈ ಚರ್ಚೆಗಳು ನಡೀತಾವೆ ಹೊರತು ಕೃಷಿ ಕೂಲಿ ಕಾರ್ಮಿಕರು ಅವ್ರು ಯಾವ ಬದುಕನ್ನ ಆಶ್ರಯಿಸಿದ್ದಾರೆ? ಆ ಆಶ್ರಿತ ಬದುಕಲ್ಲಿ ಅವ್ರು ಪಡೆದುಕೊಳ್ಳುವಂತ ನೆಲೆಗಟ್ಟುಗಳ್ಯಾವ್ವು? ಅವರ ಬದುಕಿನ ಅಸ್ತಿತ್ವ ಯಾವ್ದು? ಇದನ್ನ ನಾವು ಎಲ್ಲೂ ಚರ್ಚೆಗೆ ತೆಗೆದುಕೊಳ್ಳಲಾಗಿಲ್ಲ. ಆದ್ರೆ ಈ ಅಧಿಕಾರ ಸಂರಚನೆಗಳಲ್ಲೇನೇ ಈ ಚರ್ಚೆಗಳು ನಡೀತಾ ಹೋಗ್ತಾ ಇರ್ತವೆ. ಹಾಗಂದ್ರೆ ಭಕ್ತಿ ಅನ್ನೋದು ಅಧಿಕಾರ ಸಂರಚನೆಗಳನ್ನ ಅಡ್ಡಿಪಡಿಸುವ ಮಾನದಂಡನೂ ಆಗ್ತದಲ್ವ. ಇದನ್ನ ವಿವರಿಸಿಕೊಳ್ಳುವ ಸಲುವಾಗಿ ನಾನು ಅಲ್ಲಿ ಇನ್ನೊಂದು ರೀತಿಯಾದ interpretation ಕೊಟ್ಟದ್ದೂ ಇದೆ.

**ವಸು ಎಂ.ವಿ.**

ಅದನ್ನ ಮುಂದುವರಿಸಿ How the concept of Bhakti has taken. ಭಾರತದ ಒಟ್ಟು ಹಿತಾಸಕ್ತಿಯಲ್ಲಿ ಭಕ್ತಿ ಪರಿಕಲ್ಪನೆ ಹೇಗೆ ಆರಂಭ ಆಯ್ತು ಅಂತ ಶುರು ಮಾಡ್ಕೊಂಡು ಬಹುಶಃ ಇಲ್ಲಿಗೆ ಬಂದು ನಿಂತ್ಕೊಬಹುದು ಅನ್ಸುತ್ತೆ. ಅದು ಬಹಳ ದೀರ್ಘವಾದ ಒಂದು ಪರಂಪರೆನೇ ಇದೆ. So ಭಕ್ತಿ ಪರಂಪರೆ ಹುಟ್ಟುವಾಗ್ಲೂ ವೈದಿಕ ವಿರೋಧದ ಮೇಲೆಯೇ ಹುಟ್ಕೊಂಡಿರ್ಬಹುದು ಅಂತ ಅನ್ಸುತ್ತೆ. ಈಗ ಮುಕ್ತಿ ಅಥವಾ ಏನನ್ನ moksha ಅಂತೀವಿ, ಮೋಕ್ಷ ಸಾಧನೆಯೇ ವೈದಿಕ ಪರಂಪರೆಯ ಬಹಳ ಮುಖ್ಯವಾದ ಗುರಿಯಾಗಿತ್ತು. So ಅಲ್ಲಿ ಮೋಕ್ಷ ಸಾಧನೆಗೆ ಜ್ಞಾನ ಮಾರ್ಗವನ್ನ ಪ್ರತಿಪಾದಿಸ್ತಾರೆ. ಯಾವ

ಸಮುದಾಯಗಳಿಗೆ ಮೋಕ್ಷ ಸಾಧ್ಯ ಇಲ್ಲಿಲ್ವೋ ಅದಕ್ಕೆ ಆ ಸಂದರ್ಭದಲ್ಲಿ ಹುಟ್ಕೊಂಡಂತ ಹಲವು ಹೆಟ್ರೊಡಾಕ್ಸ್ ಅಥವಾ ವೈದಿಕ ವಿರೋಧದ ನೆಲೆಯಲ್ಲಿ ಬಂದಂತಹ ಹಲವು ಪಂಥಗಳಲ್ಲಿ ಬೌದ್ಧ, ಜೈನ ಅವುಗಳ ಜೊತೆಗೆ ಭಕ್ತಿ ಪಂಥವನ್ನೂ ಕಾಣ್ತೇವೆ. ಅಂದ್ರೆ ಭಕ್ತಿಯ ಮೂಲಕ ನನಗೆ ಬೇಕಾಗಿಲ್ಲ, ಭಕ್ತಿಯ ಮೂಲಕ ನಾನು ದೇವರನ್ನು ತಲುಪಬಲ್ಲೆ. ಹೀಗೆ ಭಕ್ತಿ ಹುಟ್ಕೊಂಡಾಗ ಅಂದ್ರೆ ಮುಂದೆ ವೈದಿಕ ಅದನ್ನ ತನ್ನೊಳಗಡೆನೂ ಸೇರಿಸ್ಕೊಳ್ತಾ ಹೋಯ್ತು. ಇವೆರಡರನ್ನೂ ಪೂರ್ಣವಾಗಿ contradictoryಯಾಗಿ ನಿಲ್ಸಿಕೊಳ್ಳೋದಕ್ಕೆ ಸಾಧ್ಯ ಇಲ್ಲ. ಅದು ಪರಂಪರೆಯ ಬೆಳವಣಿಗೆ ನೋಡಿದ್ರೆ ವೈದಿಕರ ಜೊತೆಗೂ ಹೋಗ್ತಿರುತ್ತೆ ವೈದಿಕವನ್ನು ವಿರೋಧ ಮಾಡ್ತನೂ ಹೋಗುತ್ತೆ. ಈಗ ನಾಯನಾರರು, ಆಳ್ವಾರರು ಅವ್ರನ್ನ ನೋಡ್ವಾಗ ಭಕ್ತಿ ಪಂಥದಲ್ಲಿ ತಮಿಳು ನಾಡಿನ ಶೈವಪಂಥ ಅಥವಾ ಅದು ವೈಷ್ಣವ ದೇವಸ್ಥಾನದ ಹೊರಗಡೆ ನಿಂತು ದೇವರನ್ನ ಹಾಡ್ತಾ ಹೋಗ್ತಾರೆ. ದೇವಾಲಯಕ್ಕೆ ಪ್ರವೇಶವಿಲ್ಲದಂತ ಕೆಳ ಸಮುದಾಯಗಳೆಲ್ಲ ಇದೇ ಭಕ್ತಿಯನ್ನ ಬೆಳೆಸ್ತಾ ಹೋಗ್ತವೆ. ಅಂದ್ರೆ ಯಾವ ದೇವಸ್ಥಾನಕ್ಕೆ ಪ್ರವೇಶ ಇಲ್ಲ ಅದೇ ದೇವ್ರನ್ನ ಇವ್ರು ಹೊರಗಡೆ ನಿಂತ್ಕೊಂಡು ಹಾಡ್ತಾಯಿದ್ದಾರೆ. ಎಷ್ಟೋ ಬಾರಿ ಹೇಗಾಗಿದೆ ಅಂದ್ರೆ ಯಾವ ದೇವಾಲಯವನ್ನ ವಿರೋಧ ಮಾಡ್ತಾರೆ ಆ ದೇವರುಗಳ ಪ್ರಚಾರ ಸಹ ಭಕ್ತಿಪಂಥದ ನೆಲೆಯಲ್ಲೇ ನಡೀತಾ ಹೋಗುತ್ತೆ. ಅವ್ರ conciousness ಅಲ್ಲ. ಆದ್ರೆ ಅದು ಒಟ್ಟಾರೆಯಾಗಿ ಆ processನಲ್ಲಿ ಬೆಳೀತಾ ಬಂದಂಥ ಒಂದು ಹಂತ ಅಂತ ನನಗನ್ನುತ್ತೆ. ವಚನ ಚಳುವಳಿಯಲ್ಲೂ ವೈದಿಕವನ್ನ ವಿರೋಧ ಮಾಡ್ತ ಭಕ್ತಿಯನ್ನ ಸ್ವೀಕರಿಸ್ತಾ ಯಾವ ಶೈವವನ್ನ, ದೇವಾಲಯವನ್ನ ವಿರೋಧ ಮಾಡ್ಬೇಕಾಗಿತ್ತೋ ಅದೇ ಶಿವನನ್ನು ಆರಾಧಿಸುವ ಮೂಲಕ ಮುಂದೆ ಶೈವ ದೇವಾಲಯಗಳು ಬೆಳೆದು ನಿಲ್ಲೋದಕ್ಕೆ ಕಾರಣ ಆಗುತ್ತೆ. ಈಗ ಕಡೇದಾಗಿ ಇಲ್ಲಿಗೆ ಬಂದ್ರೆ ದಾಸ ಪಂಥಕ್ಕೆ ಬರೋ ಹೊತ್ತಿಗೆ ಅದರಲ್ಲೂ ಈಗ ಕನಕರನ್ನೇ ಇಟ್ಕೊಂಡು ದೇವಾಲಯಕ್ಕೆ ಪ್ರವೇಶ ಇಲ್ಲದ ಒಂದು ಕೃಷ್ಣನ ದೇವಾಲಯದ ಉದಾಹರಣೆ ತಗೊಂಡು ದೇವಾಲಯವನ್ನ ನಿರಾಕರಿಸ್ತಾ ಆದ್ರೆ ಅದೇ ಕೃಷ್ಣನನ್ನ, ಅದೇ ವಿಷ್ಣುವನ್ನ ಹೊರಗಡೆ ನಿಂತು ಹಾಡ್ತಾ ಇದ್ದಾರೆ.

ಹಾಗಾಗಿ ಕೆಲವು ಬಾರಿ Totally rejecting of temples also is a very big question. ಯಾಕಂದ್ರೆ ಭಕ್ತಿಪಂಥ ಪರೋಕ್ಷವಾಗಿ ದೇವಾಲಯಗಳ ಬೆಳವಣಿಗೆಗೆ ಅಥವಾ ಅದನ್ನ ಅನುಭವಿಸಿದಂತಹ ವೈದಿಕ ನೆಲೆಗೆ ಅದು ನೆಲೆಗಟ್ಟನ್ನೇ ಹಾಕಿಕೊಟ್ಟಂತಹ ಸಾಧ್ಯತೆ ಸಹ ಇರುತ್ತೆ. ಇನ್ನೊಂದು ಹಂತದಲ್ಲಿ ನನಗೆ ಭಕ್ತಿಯ ಬೆಳವಣಿಗೆ ಹೇಗೆ ಕಾಣ್ಸುತ್ತೆ ಅಂದ್ರೆ ಒಟ್ಟು ಫ್ಯೂಡಲಿಸಂನ ಹಿನ್ನೆಲೆಯಲ್ಲಿ ಸಹ ಆಲೋಚನೆ ಮಾಡ್ಬಹುದು. ಫ್ಯೂಡಲಿಸಂ ಪದ ಒಪ್ಕೊಳ್ತೀವೊ ಬಿಡ್ತೀವೊ ಅನ್ನೋದಕ್ಕಿಂತ್ಲೂ ಭಾರತದ ಮಟ್ಟಕ್ಕೆ ಒಂದು ಫ್ಯೂಡಲಿಸಂ ಇದೆ ಅನ್ನೋದಾದ್ರೆ ಜಾತಿ ವ್ಯವಸ್ಥೆ ಇತ್ಯಾದಿಯನ್ನೇ ಫ್ಯೂಡಲಿಸಂ ಅನ್ನೋ ಪದದಲ್ಲಿ ನಾನು ಒಪ್ಕೊಳ್ತಾ ಹೇಳ್ತಾ ಇದ್ದೇನೆ. ಒಬ್ಬ ಫ್ಯೂಡಲ್ lordನ್ನ ಜಾತಿ ಕಾರಣಕ್ಕಾಗಿರ್ಬಹುದು, ರಾಜಕೀಯದ ಕಾರಣಕ್ಕಾಗಿರ್ಬಹುದು, ಯಜಮಾನಿಕೆಯನ್ನ, ಪ್ರಭುತ್ವವನ್ನ ವಿರೋಧಿಸಲಿಕ್ಕೆ ಆಗ್ದಲೇ ಇದ್ದ ಸಂದರ್ಭದಲ್ಲಿ ಭಕ್ತಿಯ ನೆಪದಲ್ಲಿ ರಾಜನನ್ನ ಮೀರಿದವನನ್ನ ನಾನು ನನ್ನ ಅಧಿಪತಿಯಾಗಿ ಒಪ್ಕೊಳ್ತೀನಿ. ರಾಜನನ್ನ ನೇರವಾಗಿ ಪ್ರತಿರೋಧಿಸೋಕಾಗಲ್ಲ. ಆದ್ರೆ ನಿನಗಿಂತಲೂ ದೊಡ್ಡವನಾದವನನ್ನ ನಾನು ಪೂಜೆ ಮಾಡ್ತೀನಿ. ಅಲ್ಲಿ rejection of hegemony is possible through Bhakti. ಹಾಗಾಗಿ ಲೌಕಿಕ, ಅಲೌಕಿಕ ಅನ್ನುವ ಪದಗಳ ಬಹಳ ಸರಳವಾದ ಕಲ್ಪನೆಗಿಂತ ಇಲ್ಲಿ ಅಲೌಕಿಕವನ್ನ ಪ್ರವೇಶ ಮಾಡುವ ಮೂಲಕ ಲೌಕಿಕದ ಯಜಮಾನಿಕೆಯನ್ನ ಬಡಿಯೋದಕ್ಕೆ ಅವನ್ಗೆ ಸಾಧ್ಯ ಆಗುತ್ತೆ. ಒಬ್ಬ ಊರ ಗೌಡನನ್ನ ಪ್ರತಿಭಟಿಸೋಕೆ ಆಗ್ದೇ ಇದ್ದಾಗ ನೀನ್ಯಾವ ಮಹಾ, ದೇವ್ರೇ ನನಗೆ ಒಲಿತಾನೆ ಅಂತ ಒಬ್ಬ ಬಡವ ಹೇಳೋದಕ್ಕೆ ಸಾಧ್ಯ ಆಗುತ್ತೆ. ಇದನ್ನ ಭಕ್ತಿಪಂಥ ಸಾಧಿಸ್ತಾ ತೋರ್ಸುತ್ತೆ. ಅದ್ರಲ್ಲೂ ಯಾವ ದೇವ್ರು ಯಾವಾಗ್ಲೂ ನಿರಂತರವಾಗಿ ಪೂಜೆ ಮಾಡುವ ಪುರೋಹಿತನ ಮನೆನಲ್ಲಿ ಕಾಣ್ಸಲ್ಲ. ಐಶ್ವರ್ಯ ಇರುವ ರಾಜನ ಮನೆನಲ್ಲಿ ಕಾಣ್ಸಲ್ಲ. ಏನೂ ಇಲ್ಲದ ಒಬ್ಬ ಬಡವನ ಮನೆನಲ್ಲಿ ದೇವ್ರು ಕಾಣ್ಸ್ಕೊಳ್ತಾನೆ. ಅಂದ್ರೆ ಇದನ್ನ ಭಕ್ತರು ಹುಟ್ಹಾಕ್ತಾ ಹೋಗ್ತಾರೆ. ಭಕ್ತಿಪಂಥ ಹುಟ್ಹಾಕೊಳ್ತಾ ಹೋಗುತ್ತೆ. ಅಂದ್ರೆ ನಾವು ನೋಡ್ಬಹುದಾಗಿರೋದು Is it not an answer to fight against ಫ್ಯೂಡಲಿಸಂ. ಭಕ್ತಿಯ ಹೆಸರಿನಲ್ಲಿ ಭಕ್ತಿಯ ಮುಖವಾಡದಲ್ಲಿ ಇದು ಪ್ರತಿಭಟನಾ ಹೋರಾಟವಾಗಿ ಬೆಳೆದು ಬಂದಿದೆ ಅಂತ ನನಗನ್ನುತ್ತೆ. ಅದ್ರಿಂದ ಅಲೌಕಿಕದ strength ಇರೋದು ಲೌಕಿಕದ ಯಜಮಾನಿಕೆಯನ್ನು ಒಡೆದು ಹಾಕಲಿಕ್ಕೆ ಅದು ಸಾಧ್ಯತೆಯನ್ನ ಮಾಡ್ಕೊಡುತ್ತೆ. ಇದು ಅಕ್ಕಮಹಾದೇವಿಯನ್ನ ಸರ್ ಮಾತಾಡ್ತಾ ಎತ್ಕೊಂಡ್ರು. ಆ ಅಕ್ಕಮಹಾದೇವಿ ಗಂಡನನ್ನ reject ಮಾಡೋದು ಅಥವಾ ಅಲೌಕಿಕದ ಗಂಡನನ್ನ ಒಪ್ಕೊಳ್ಳುವಾಗ್ಲೂ ನನಗನ್ನಿದ್ದು ಅವ್ಳು ಪತಿಯನ್ನೇ ನಿರಾಕರಿಸ್ತಾ ಇಲ್ಲ. ಆದ್ರೆ ಒಬ್ಬ ಗಂಡನಲ್ಲಿ ದೇವರನ್ನ ಕಾಣೋಕೆ ಸಾಧ್ಯ ಆಗ್ದೇ ಇದ್ದಾಗ ಅವನನ್ನ ಮೀರಿದ ದೇವರನ್ನೇ ಗಂಡನನ್ನಾಗಿ ಕರೆದುಕೊಳ್ಳುವಂತಹ ಒಂದು ಸಾಧ್ಯತೆಯನ್ನ ಅವಳು ಕಲ್ಪಿಸಿಕೊಳ್ತಾಳೆ. So ಒಂದು ವಾಸ್ತವದ ಲೌಕಿಕದ ಯಜಮಾನಿಕೆಯನ್ನ ಒಡೆದು ಹಾಕಿ ತನಗೆ ಬೇಕಾದ ಯಜಮಾನನನ್ನ ಅಲೌಕಿಕದ ಮೂಲಕ ಕಂಡುಕೊಳ್ತಾ ಇದ್ದಾಳೆ. ಹಾಗಾಗಿ ನನಗೆ ಅನ್ನೋದು 100ಕ್ಕೆ 100 ಅಲೌಕಿಕ, ಲೌಕಿಕ, ಆಧ್ಯಾತ್ಮ ಇದನ್ನೆಲ್ಲವನ್ನೂ ಪ್ರತ್ಯೇಕಿಸಿ ನೋಡೋದಕ್ಕಿಂತಲೂ ಒಟ್ಟು ಸಾಮಾಜಿಕ ಸಂರಚನೆಯ ಮೂಲಕ ಬೆಳವಣಿಗೆಯ ಮೂಲಕ ಈ ಎಲ್ಲಾ ಪದಗಳನ್ನ ಬೇಕಾದಲ್ಲಿ ಭಕ್ತಿ ಅಂತ ಬೆಳೆಸಿಕೊಳ್ತಾ ಬಂದಿದ್ದಾರೆ. ಕನಕನಲ್ಲೂ ನನಗದೇ ಕಾಣಿಸ್ತಾ ಇದೆ. ಯಾವ ದೇವ್ರನ್ನ ಜಾತಿಯ ನೆಲೆಗಾಗಿ ಮುಟ್ಟೋಕೆ ಸಾಧ್ಯ ಆಗ್ಲಿಲ್ಲ ಅಲೌಕಿಕದ ಭಾಷೆ ಮೂಲಕ ಆ ದೇವ್ರನ್ನ ಮುಟ್ಟೋದಕ್ಕೆ ಸಾಧ್ಯ ಆಯ್ತು.

**ಚರ್ಚೆ:**

ಭಕ್ತಿಪಂಥ ಅನ್ನುವಂತದ್ದು ಪ್ರಭುತ್ವಕ್ಕೆ Alternate ಆಗಿ ಹೇಗೆ ವಿರೋಧಿ ನೆಲೆಯಾಗಿ ಹುಟ್ಕೊಳ್ತು ಅನ್ನುವುದನ್ನು ನಾವು ಚರ್ಚೆ ಮಾಡ್ತಾ ಇರೋವಾಗ ಮಧ್ಯಕಾಲೀನ ಕರ್ನಾಟಕದಲ್ಲಿ ವಿಶೇಷವಾಗಿ ಕಂಡುಬಂದಂತಹ ಈ ರಾಜರಿಗೆ ಅತ್ಯಂತ ನಿಷ್ಠವಾದಂತಹ ಏನು ವೀರ ಪಡೆಗಳಿದ್ವು ಅದರ ಬಗೆಗೆ ಈಗ ನಾನು ಅಧ್ಯಯನ ಮಾಡ್ತಿರುವಂತದ್ದು.

ಭಕ್ತಿ ಪಂಥದ ಹಿನ್ನೆಲೆಯಲ್ಲಿ ಇದ್ದಕ್ಕಿದ್ದ ಹಾಗೇನೇ ಈ ಎಲ್ಲ ವೀರಪಡೆಗಳು ಒಂದು ಹಂತದಲ್ಲಿ ಒಕ್ಕಲುಗಳಾಗುವ, ವೈಷ್ಣವ ಅಥವಾ ಶೈವ ಒಕ್ಕಲುಗಳಾಗುವ ಪ್ರಕ್ರಿಯೆಗೆ ತಮ್ಮನ್ನ ತಾವು ತೆರೆದುಕೊಂಡಿದ್ದು ವಿಶೇಷವಾಗಿ ಕಾಣಿಸ್ತಾ ಇದೆ. ಅದು ಎಕ್ಕಟಿಗರು ಅನ್ನುವಂತಹ ಒಂದು ವೀರಪಡೆ, ಬೇರೊಂದು ಕೂಸರು ಎನ್ನುವಂತ ವೀರಪಡೆ, ಮೈನೇಕಿಗಳು ಅನ್ನುವಂತಾದ್ದು ಈ ರೀತಿಯ ಸಣ್ಣ ಸಣ್ಣ ಪಡೆಗಳು ಹೊಯ್ಸಳರ ಕಾಲದಲ್ಲಿದ್ದಂತಹ ವಿಶೇಷವಾದಂತಹ ವೀರ ಪಡೆಗಳು. 10 ರಿಂದ 13ನೇ ಶತಮಾನದ ವರೆಗೆ ಕಂಡುಬರುವ ಎಲ್ಲ ವೀರಪಡೆಗಳು ರಾಜ ಅನ್ನೋನು ultimate ಅಂತ ಒಪ್ಪಿಕೊಂಡು ಅತ್ಯಂತ ನಿಷ್ಠೆಯಿಂದ ಅವರಿಗೆ ಸೇವೆ ಮಾಡಿರುತ್ತವೆ. ಇವುಗಳನ್ನ ಇದ್ದಕ್ಕಿದ್ದ ಹಾಗೆ ಅವರಿಗೊಂದು ಬಿಡುಗಡೆಯ ಅನುಭವ ಅಥವಾ ಅದೊಂದು ಬದಲಾವಣೆ ಎನ್ನುವ ಹಾಗೆ ಎಲ್ಲರೂ ಕೂಡ ಆ ಮುದ್ರೆಯನ್ನ ಹಾಕಿಸ್ಕೊಳ್ತಾ ಅಥವಾ ನಾಮವನ್ನ ಅಥವಾ ಯಾವುದೋ ಲಾಂಛನವನ್ನು ಪಡೆದುಕೊಳ್ತಾ ಇದ್ದಕ್ಕಿದ್ದಂತೆ ತಮಗೆ ಅಂತ ಕೊಟ್ಟಂತಹ ಬದುಕಿಗೆ ತಮ್ಮ ಊರುಗಳನ್ನೇ ಅಗ್ರಹಾರ ಮಾಡುತ್ತಾ ತಮಗೆ ಕೊಟ್ಟಂತಹ ಜೀತದ ಹಣ ಏನಿದೆ ಅದರಿಂದ ದೇವಾಲಯಗಳನ್ನ ಕಟ್ಟಿಸುವ ಎಲ್ಲವನ್ನು ಅವರಿಗೆ ಸಮರ್ಪಿಸುವ ರೀತಿಯಲ್ಲಿ ತೆರ್ಕೊತಾ ಇರೋದು ಹನ್ನೆರಡು ಮತ್ತು ಹದಿಮೂರನೆ ಶತಮಾನದಲ್ಲಿ ಇದ್ದಕ್ಕಿದ್ದ ಹಾಗೆ ವಿಶೇಷವಾಗಿ ಕಾಣ್ಸುತ್ತದೆ.

ಈ ವೈಷ್ಣವ ದೀಕ್ಷೆಯನ್ನು ಪಡೆದಂತ ಕೆಲವು ವೀರಪಡೆಗಳನ್ನ ನಾವು ಕಾಣ್ತೇವೆ. ಕನಕರನ್ನ ಈ ಹಿನ್ನೆಲೆಯಲ್ಲಿ ನಾನು ಮತ್ತೆ ಓದೋಕೆ ಶುರುಮಾಡಿದ್ದೀನಿ. ಅವರ ಕೃತಿಗಳ ಒಳಗೆ ಕಂಡು ಬರ್‍ತಾ ಇರುವ ಒಬ್ಬ ವೀರ ಇದ್ದಾನಲ್ಲಿ. ರಾಜನಿಗಾಗಿ ಅಥವಾ ಆ ಪ್ರಭುತ್ವಕ್ಕೆ ತನ್ನನ್ನ ನಿಷ್ಠೆಯಿಂದ ಕೊಟ್ಕೊಂಡಂತಹ ಒಬ್ಬ ವ್ಯಕ್ತಿ ಬದುಕಿನ ಯಾವುದೋ ಒಂದು ಹಂತದಲ್ಲಿ ಅದು ನಿರರ್ಥಕ ಅಂತ ಅನ್ನಿಸುವ ಒಂದು ಭಾವನೆಗೆ ಒಳಗಾಗಿ ತನ್ನನ್ನ ತಾನು ಮತ್ತೊಂದು ರೀತಿಯ ನಿಷ್ಠೆಗೆ, ಅದು ದೈವ ಎನ್ನುವ ಹೆಸರಿನ, ಯಾಕಂದ್ರೆ ಈಗ ಹೇಳಿದ ಹಾಗೆ ಲೌಕಿಕದ ಪ್ರಭುತ್ವಕ್ಕಿಂತ ಎತ್ತರದ ಒಂದು ದೈವಕ್ಕೆ ಕೊಟ್ಕೊಳ್ಳುವುದು. ಅದವರ ಕೃತಿಯಲ್ಲೇ ಹೇಳ್ತಾ 'ಮೊನೆಗಾರ ಧಣಿಯೆಂಬ ಧೈರ್ಯವ ಬಿಡಿಸಿ ದೇವರನ ನಿನ್ನ ದಾಸನ ಸೇವಕನ ಮಾಡಿದೆ' ಅಂತ ಹೇಳಿರೋದು. ಊಳಿಗಮಾನ್ಯತೆ ಬಗ್ಗೆ ಯೋಚ್ನೆ ಮಾಡ್ವಾಗ ಅದು ಈ ಪ್ರಭುತ್ವ ಅನ್ನೋದು polictial ಆಗಿರಲಿ ಅಥವಾ religious ಆಗಿರಲಿ ಎರಡೂ ಕೂಡ ನನಗೆ ಒಂದರ್ಥದಲ್ಲಿ ಇವರ ನಿಷ್ಠೆಯನ್ನೇ encash ಮಾಡ್ಕೊಂಡು ಅವನ್ನ ಪೂರ್ಣವಾಗಿ ಒಳಕ್ಕೆ ತಗೊಂಡು ಅದು ಒಂದು trend ಆಗಿ ಅನೇಕರು ಬೇಕಿತ್ತೋ ಬೇಡ್ವಾಗಿತ್ತೋ ಆ ಮುದ್ರೆ ಒತ್ತಿಸ್ಕೊಳ್ಳುವಂತಾದ್ದು. ಇಂತಹ ಅನೇಕ ಉದಾಹರಣೆಗಳಿವೆ. Whole sale ಆಗಿ ಎಲ್ಲರೂ ಕೂಡ ಅದಕ್ಕೆ ಒಳಗಾದಂತದ್ದೆಲ್ಲ ಕಾಣಿಸ್ತದೆ. ಹೀಗಾಗಿ ಜನ್ರಿಗಾಗಿ ಇದ್ದಂತಹ ಒಂದು trend ಒಳಗಡೆ ನುಗ್ಗಿ ಬಂದಂತಹವನಿಗೆ ಈ ಒಂದು ಹೊಸ ವಿಚಾರಗಳೇನಿರುತ್ತೆ, ಅದು ಅವನಿಗೆ sink ಆಗ್ದೇ ಇರೋ ಸಾಧ್ಯತೆಗಳಿರುತ್ತದೆ. ಸಮುದಾಯ ಕೊಟ್ಟಂತ ಒಂದು identity ಇರುತ್ತೆ. ಅದರಲ್ಲಿ ಕೆಲವು ಸಂವೇದನೆ ಗಳಿರುತ್ತೆ. ಆ ಸಂವೇದನೆಗಳು ಇತ್ತೀಚೆಗೆ ತಾನು ಆವಾಹಿಸಿಕೊಂಡಿರಬಹುದಾಗಿರುವಂತ ಹೊಸ ಸಂವೇದನೆಗಳು. ಅಲ್ಲಿ ಜನಪ್ರಿಯ ಮತ್ತು ಅದೊಂದು ತರದ ವೇದಿಕೆಯನ್ನು ಕೊಡ್ಬಹುದು. ಒಂದು ಹೊಸ identityಯನ್ನ ಕೊಡ್ಬಹುದು. ಅದಕ್ಕಾಗಿ ಅವ್ನು ಹಪಹಪಿಸಿದ್ದಾನಾ? ಅಥವಾ ಅದು ಹಾಗೆ ಬಂದಿದ್ದೋ? ಈ ಎರಡರ ನಡುವಿನ ದೊಡ್ಡ ಸಂಘರ್ಷವನ್ನ ಈ ರೀತಿಯ ಕೆಲವು ವೀರರುಗಳು ವೀರಪಡೆಗಳು ಅನ್ನುವ ಬದುಕಿನಲ್ಲಿ ಅದನ್ನ ನಾನು identify ಮಾಡ್ತಾ ಇದ್ದೀನಿ. ಕನಕದಾಸರ ಮೋಹನ ತರಂಗಿಣಿ ಅಥವಾ ನಳಚರಿತ್ರೆಯನ್ನ ಓದ್ತಾ ಹೋಗ್ವಾಗ ಮತ್ತವರ ಕೃತಿಗಳಲ್ಲೇ ಬರುವಂಥಾದ್ದು, ಸಾಕು ಇನ್ನು ಈ ರಾಜರುಗಳ ಸೇವೆ ಮಾಡಿದ್ದು, ದಾಸರ ಮನೆಯಲ್ಲಿ ದಾಸನಾಗಿರುವುದಕ್ಕೆ ನಾನು ಸಿದ್ಧ ಆಗ್ತಿದ್ದೀನಿ ಅಂತ ಹೇಳುವಂತಾದ್ದು. ಸಿದ್ಧ ಆಗ್ತಾ ಇದ್ದೀನಿ ಅಂತ ಹೇಳುವುದನ್ನ ಅವರ ಮನಸ್ಸಿಗೆ ತೆಗೆದುಕೊಳ್ತಾ ಇರ್‍ವಾಗ್ಲೂ ಕೂಡ ಅಲ್ಲಿ ಇರುವ ಬಿರುಕು ಅವರನ್ನ ತಲ್ಲಣಗೊಳಿಸ್ತಾ ಇದೆ. So ಹೊಸದಾದಂತದ್ದು, ಒಪ್ಪಿಕೊಳ್ಳದೇ ಇರುವಂತಾದ್ದು, ಹಳೆಯದನ್ನ ಪೂರ್ಣವಾಗಿ ಬಿಡಲಾಗದ ಒಳಗಿನ ಆ ಒಂದು ತಳಮಳ ಈ ಎರಡರ ಮಧ್ಯದ ಸಂಘರ್ಷದ ನೆಲೆಯಲ್ಲಿ ನಾವು ಕನಕನನ್ನ ನೋಡೋದಾದ್ರೆ ಇದು ನನಗೆ ತುಂಬ ಮುಖ್ಯ ಅಂತ ಅನಿಸುತ್ತದೆ. ಇನ್ನೊಂದು ಸರ್ ಹೇಳಿದ ಹಾಗೆ ಕನಕನ ವೇಷಭೂಷಣದ ಕಲ್ಪನೆ ಏನಿದ್ಯಲ್ಲ ಮೂಲವಾಗಿ ಅವನಲ್ಲಿ ಒಬ್ಬ ಯೋಧನನ್ನಾಗಿ ಕಂಡುಕೊಂಡಾಗ ಯಾಕಂದ್ರೆ ಅವರ ಕೃತಿಗಳೊಳಗಡೆ ಸ್ಪಷ್ಟವಾಗಿ ತಾನು ಯಾರು? ತನ್ನ ದೈವ ಯಾವ್ದು, ಏನಾಗಿತ್ತು ಅನ್ನೋದರ ಬಗೆಗೆಲ್ಲ ವಿವರ ಕೊಡ್ತಾನೆ. ವೀರಗಾಸೆಯ ತರಹದ ಅವರ ಪಂಚೆ ಈ ಮೊಣಕಾಲ ಮೇಲಕ್ಕಿರುವುದು ಮತ್ತು ಬಿಡಲಾಗದ ಅವರ identity ಏನಿದೆ ನಾನಿಂಥವನು, ನನ್ನ ದೈವ ಇಂತದ್ದು, ನಮ್ಗೆ ಗೊತ್ತಾ... ಸಾಮಾನ್ಯವಾಗಿ ಏನಾಗುತ್ತೆ ಅಂತ ಅಂದ್ರೆ ಈ ವೀರಗಾರರಲ್ಲಿ ಒಬ್ಬ ವೀರಗಾರ ಸತ್ತ ತಕ್ಷಣ ವೀರಗಾರರ ಗುಡಿ ಒಳಗೆ ಒಂದು ಕಲ್ಲು ಅವನ ರೂಪದಲ್ಲಿ ಬರುತ್ತೆ. ಅವನ ನೆನಪಾಗಿ. ಅವನ ಪರಂಪರೆಯ ನೆನಪಾಗಿ, ಅವನ ಹಿರಿಯರ ನೆನಪಾಗಿ. ಅದನ್ನ ಬಿಟ್ಟಿದ್ದೇನೆ ಈಗ ಹರಿಯೆಂಬ ದೈವವನ್ನ ನಾನು ಆರಾಧನೆ ಮಾಡೋಕೆ ಶುರು ಮಾಡ್ತೀನಿ ಅಂದಾಗ ಹಳೆಯ ಬಂಧುತ್ವವನ್ನ ಅವ್ನು ಕಳ್ಕೊಂಡಿರ್‍ತಾನೆ.

ಹಳೆಯ ನೆನಪುಗಳನ್ನ ಹಳೆಯ ಬಂಧುತ್ವವನ್ನು ಸಮುದಾಯದ ಸಂವೇದನೆಗಳನ್ನ ಬಿಟ್ಕೊಡ್ಬೇಕಾದ ಸಂದರ್ಭ, ಹೊಸದಾಗಿ ನನಗೆ ಮುದ್ರೆಯೇ ಅಲಂಕಾರ, ಹರಿದಾಸರು ನನಗೆ ಬಂಧುಗಳಾಗ್ತಿದ್ದಾರೆ. ಈ ತರದ ಸಂಘರ್ಷಗಳ ನಡುವೆ ನಾನು ಇತ್ತೀಚೆಗೆ ನೋಡೋಕೆ ಪ್ರಯತ್ನ ಮಾಡ್ತಿದ್ದೀನಿ.

**ಚರ್ಚೆ – ಮೇಟಿ**

ಕನಕರು ಶೂದ್ರದೇವತೆಗಳನ್ನ ಕುರಿತು ನಿಷ್ಠುರವಾಗಿ... ಕಾಣಲೇಬೇಕಾದ ಒತ್ತಡ ಇದ್ಯಲ್ಲ ಈ ಮಾರ್ಗದ ದೇವತೆಗಳನ್ನ ಒಪ್ಕೊಂಡಾಗ ಮಾತ್ರವೇ ನಿಮಗೆ ಭಕ್ತಿಪಂಥದ ಒಳಗೆ ನಿನ್ನನ್ನ ನೀವು identify ಮಾಡ್ಕೊಂಡಾಗ ಮಾತ್ರ.... ಆಮೇಲೆ

ಕನಕದಾಸರ ಬಗೆಗೆ ಕೆಲವು ಸಲ ದಾಸಸಾಹಿತ್ಯ projectಗಳಲ್ಲಿ, ಕ್ವಿಜ್, ಕಾಂಪಿಟೇಶನ್ಸ್, ಹಾಡುಗಳು, essayಗಳು ಈ ತರದ್ದೆಲ್ಲ ನಾನು ಹತ್ತಿರದಲ್ಲಿ ಕಂಡಾಗ ಕನಕದಾಸರಿಗೆ ಅವರೊಂದು ಅವತಾರ ಪುರುಷ ಅನ್ನುವಂತದ್ದನ್ನ, ಯಮನ ಸ್ವರೂಪ. ಹಾಗಾಗಿ ಅವರಿಗೆ ಇಷ್ಟೆಲ್ಲಾ ಸಾಧ್ಯ ಆಯ್ತು. ಸಾಮಾನ್ಯನಾಗಿ ಹುಟ್ಟಿದ್ರೆ ಅವನ್ನ ಬಿಡ್ತಾ ಇರ‍್ಲಿಲ್ಲ. ಅವರ ಮುಂಡಿಗೆಯನ್ನೇ ಒಂದು example ಕೊಡ್ತಾ ಯಮನಿಗೆ ಯಾವುದೋ ಒಂದು ಋಷಿಯಿಂದ ಬಂದಂತ ಒಂದು ಶಾಪ, ಎರಡು ಸಲ ನೀನು ಯೋನಿಯಲ್ಲಿ ಜನಿಸಬೇಕೆನ್ನುವ ಶಾಪ, ಒಂದು ಸಲ ಅವ್ನು ವಿದುರನಾಗಿ ಹುಟ್ದ. ಇನ್ನೊಂದು ಸಲ ಕನಕನಾಗಿ ಹುಟ್ದ ಅನ್ನುವಂತದ್ದರಲ್ಲಿ ಕನಕನನ್ನ ಅವರು ಪರಿಭಾವಿಸುತ್ತಿರುವ ರೀತಿ.

**ಚರ್ಚೆ : ಕೆ.ವಿ.ಎನ್.**

ಚಿಂತನೆಯಲ್ಲಿ ನಡೀತಾ ಇರುವ ಒಂದು ಬಿಕ್ಕಟ್ಟು ಕಾಣಿಸ್ತಾ ಇದೆ. ಅಂದ್ರೆ ಕನಕನನ್ನ ಅರ್ಥ ಮಾಡ್ಕೊಳ್ಳೋಕೆ ನಾವು ಚಾರಿತ್ರಿಕ ನೆರವನ್ನು ಪಡಿತೀವೋ, ಚಾರಿತ್ರಿಕ ಘಟನೆಗಳ ನೆರವಿನಿಂದ ಕನಕನನ್ನು ಅರ್ಥ ಮಾಡ್ಕೊಳ್ತೀವೋ. ಅದು ಎರಡೂ ಒಂದಕ್ಕೊಂದು contribute ಮಾಡ್ತಾ ಇರ್ತವೆ. ಸಧ್ಯಕ್ಕೆ ನಿಮಗೆ ಕನಕ ಚಾರಿತ್ರಿಕವಾಗಿ ನಿಜ ಆಗ್ತಾನಷ್ಟೆ. ಅಂದ್ರೆ ಅವನ ಕಾಲಕ್ಕೆ ಅವನ್ನ ಸೀಮಿತ ಮಾಡ್ತಾರೆ. ಅವನ ಕಾಲದ ಚರಿತ್ರೆಯ ಘಟನೆಗಳಲ್ಲಿ ನೀವು ಹೇಳುತ್ತಿರುವ ಪರಿವರ್ತನೆಯ ಕಾಲ ಇದ್ಯಲ್ಲ, ಅದರ ಮುಖಾಂತರ ಕನಕನನ್ನ ಅರ್ಥಮಾಡ್ಕೊಳ್ಳೋಕೆ ಪ್ರಯತ್ನ ಮಾಡ್ಬೇಕು. ಆ ಕನಕನಿಂದ ದೊರೆಯುವ ಕೆಲವು ಪರಿಕರಗಳ ನೆರವಿನಿಂದ ಆ ಕಾಲವನ್ನ ವ್ಯಾಖ್ಯಾನ ಮಾಡ್ಬೇಕು. ಈ ಎರಡೂ ಪರಿಕರಗಳು ಆದರೆ ಸಂಸ್ಕೃತಿ ಬಿಕ್ಕಟ್ಟು ನಮಗೆ ನನ್ನ ಕಾಲಕ್ರಮಕ್ಕೆ ಹೇಗೆ ರವಾನಿಸ್ಕೋಬೇಕು. ಈಗ actually.... ವಸು ಅವರು ಎತ್ತಿದ ಪ್ರಶ್ನೆಯಲ್ಲಿ ಆಗ಼್ೇ ದೇವಾಲಯ ನಿರ್ಮಾಣದ ಪ್ರಶ್ನೆ ಇತ್ತಲ್ಲ ಭಕ್ತ ಮತ್ತು ಭಕ್ತಿ ಇವೆರಡರನ್ನೂ ಒಟ್ಟಿಗೇ ಸೇರಿಸಿಕೊಂಡಾಗ ಈ ಸಮಸ್ಯೆ ಉಂಟಾಗ್ತದೆ. 20ನೇ ಶತಮಾನದಲ್ಲಿ ಕನಕನನ್ನ ಓದ್ತಾ ಇರುವಾಗ ನಾನು ಭಕ್ತನೂ ಅಲ್ಲ, ಭಕ್ತಿ ನನ್ನ ಪದ್ಧತಿಯೂ ಅಲ್ಲ. ಕನಕ ಇರಬಹುದು, ಆಳ್ವಾರ್ ಇರಬಹುದು, ನಾಯನ್ಮಾರ್ ಇರಬಹುದು, ವಚನಕಾರರಿರಬಹುದು ಅವ್ರು ಭಕ್ತಿಯೂ ಆಗಿದ್ರು. ಅವರು ಯಾಕೆ ಈ ಬಗೆಯ ಭಾಷಿಕ ರಚನೆಗಳ ಮೂಲಕ ತಮ್ಮನ್ನು ಮಂಡಿಸಿದರು. ತಮ್ಮ ಕಾಲದ ಆಚೆಗೆ ಯಾಕೆ ಬರ್ತಾವೆ ಅವು. ನಾವ್ಯಾಕೆ ಅದರ ಮುಖಾಂತರ ಅದನ್ನು ಹಿಡಿಯೋಕೆ ಪ್ರಯತ್ನ ಪಡ್ತೀವಿ? ಇದು ಬಹಳ ದೊಡ್ಡ ಪ್ರಶ್ನೆ.

Pan Indian question, ಕರ್ನಾಟಕದಲ್ಲಿ ಮಾತ್ರ ಅಲ್ಲ, ನಾಯನ್ಮಾರಲ್ಲಿರ್ಬೋದು. ಆಳ್ವಾರರಲ್ಲಿರ್ಬೋದು, ಶಂಕರ ದೇವ ಇರ್ಬಹುದು, ಚೈತನ್ಯ ಇರ್ಬಹುದು, ಮೀರ, ಈ ಕಡೆ ಬಂದ್ರೆ ತುಕಾರಾಮ ಇರ್ಬಹುದು. ಎಲ್ಲರಲ್ಲೂ ಈ ಪ್ರಶ್ನೆ ಇದೆ. ಯಾಕೆ ಈ ರೀತಿ ಆಗುತ್ತೆ. ನಾವೀಗ ಓದ್ತಾ ಇರ್ತಕ್ಕಂತದ್ದು ನಾವು ಕನಕನ ಶೂ ಒಳಗಡೆಗೆ ಕಾಲಿಡೋಕಾಗೋದಿಲ್ಲ. ಕನಕನ ರೀತಿ ಯೋಚ್ನೆ ಮಾಡಕಾಗಲ್ಲ ನಾವು. ಯೋಚ್ನೆ ಮಾಡ್ದೇ ಇದ್ದಾಗ ಕೇವಲ reality ಏನು ಅಂದ್ರೆ ಆ ಭಾಷಿಕ ರಚನೆಗಳನ್ನು ಕಾಣೋದು. ಇದು ಬೇರೆಯ tools ನ್ನ ನಮ್ಮಿಂದ ಕೇಳುವಂತದ್ದು. ನಿಮ್ಮ ಪ್ರಯತ್ನಗಳನ್ನ ನಾನು ನಿರಾಕರಿಸ್ತಾ ಇಲ್ಲ. ನೀವು ಏನನ್ನ present ಮಾಡಿದ್ರಿ ಅದನ್ನ ಖಂಡಿತ ನಾನು ನಿರಾಕರಿಸ್ತಾ ಇಲ್ಲ. ನಮ್ಮ ಸಂಸ್ಕೃತಿ ಅಧ್ಯಯನದ ಬಿಕ್ಕಟ್ಟುಗಳು ಬೇರೆಯೇ ಆಗಿವೆ ಅನ್ನೋದನ್ನ ನೋಡುವ ಪ್ರಯತ್ನ. Let me come back to my old question. ಈ ರಾಮಧಾನ್ಯ ಚರಿತೆ ಒಳಗಡೆ ಈ ನೀರಾವರಿ ಪದ್ಧತಿ, ಒಣ ಬೇಸಾಯ ಪದ್ಧತಿಗೂ ಮೊದ್ಲು ಬೇರೆಯೇ ಒಂದು ಪ್ರಶ್ನೆ ಇದೆ. ಕನಕ ಬೆಳೆದ ಅಥವಾ ಹುಟ್ಟಿದ ಪ್ರದೇಶ ಇದೆಯಲ್ಲ, ಬಾಡ, ಬಂಕಾಪುರ, ಕಾಗಿನೆಲೆ ಇವತ್ತೂ ರಾಗಿ ಬೆಳೆಯೋ ಪ್ರದೇಶ ಅಲ್ಲ ಅದು, ಕರ್ನಾಟಕದಲ್ಲಿ ರಾಗಿ ಯಾವತ್ತೂ ಕೂಡ ತುಂಗಭದ್ರದಿಂದ ದಕ್ಷಿಣದಲ್ಲಿ ಬೆಳೆಯುವ ಬೆಳೆ. ತುಂಗಭದ್ರ ಉತ್ತರದಲ್ಲಿ ರಾಗಿಯ ಪ್ರಭುತ್ವವನ್ನು ಸ್ಥಾಪಿಸುವ ಪ್ರಯತ್ನವನ್ನ ಯಾಕೆ ಮಾಡ್ತಾ ಇದಾನೆ. That is a question, ಜೋಳ is ok. ಒಂದು ಸಣ್ಣ ಕುತೂಹಲದ ಪ್ರಶ್ನೆ, 20 ವರ್ಷದಿಂದ ನನ್ನ ತಲೆಯಲ್ಲಿ ಹಾಕಿಕೊಂಡಿದೀನಿ, ಯೂನಿವರ್ಸಿಟಿ ಕ್ಯಾಂಪಸ್ ಪಕ್ಕದಲ್ಲಿ ಒಂದು ಬತ್ತಿಹೋಗಿರೋ ಕೆರೆ ಇದೆ. ಅಲ್ಲಿ ಮೊದಲು ಕೆರೆ ಇತ್ತು ಎಂದು ಹೇಳಲಾಗಿದೆ. ಅಲ್ಲಿ ಒಬ್ಬ ಸಂಶೋಧಕರು ಬಂದಿದ್ದಾರೆ. ಅವರ research ಪದ್ಧತಿ ಭಿನ್ನವಾದುದು. ಒಂದಡಿ ಉದ್ದ, ಒಂದಡಿ ಅಗಲದ ಗುಂಡಿಗಳನ್ನು ತೋಡ್ತಾರೆ. ಅಲ್ಲಿ ಬೇರೆ ಬೇರೆ Layerಗಳಲ್ಲಿ ಏನೇನು ವಸ್ತುಗಳು ಸಿಗುತ್ತೆ ಎಂದು ಪರಿಶೀಲಿಸುತ್ತಾರೆ. ಅದರ ಮೂರು ಅಡಿ ಒಳಗಿನ ಲೇಯರ್‌ನಲ್ಲಿ ರಾಗಿ ಬೆಳೆಯುವಾಗ ಕಂಡುಬರೋ ಕುರುಹುಗಳು ಕಂಡುಬಂದಿವೆ. ಕಂಡು ಬಂತು ಅಂತ ಅವರು ನಮಗೆ ಹೇಳಿದ್ರು. ಇದ್ದಿರಬಹುದು. ಯಾವುದೋ ಕಾಲಘಟ್ಟದಲ್ಲಿ ರಾಗಿ ಉತ್ತರ ಕರ್ನಾಟಕದ, ತುಂಗಭದ್ರೆಯ ಉತ್ತರದ ಕಡೆಗೂ ಇದ್ದದ್ದು ಆಮೇಲೆ, ದಕ್ಷಿಣದ ಕಡೆಗೆ Push ಮಾಡಿರಬಹುದು ಅಂತ. ಇಷ್ಟೆಲ್ಲಾ ಆಗಿಯೂ ಕೂಡ ರಾಗಿ ಕರ್ನಾಟಕದ Staple food ಆಗಿದ್ರೂ ಕೂಡ basically ಕರ್ನಾಟಕದ್ದಲ್ಲ ಅದು. ಅದು ಆಫ್ರಿಕಾದಿಂದ ಬಂದಂತಾದ್ದು ಅನ್ನುವುದು ನಮಗೆ ಗೊತ್ತಾಗಿದೆ.

**ವಸು ಎಂ.ವಿ.:**

ಕನಕನನ್ನು ಅಷ್ಟಕ್ಕೇ confine ಮಾಡ್ಬೇಕಾಗಿಲ್ಲ. ಅವರ Travel ಬಹಳ ವಿಸ್ತಾರವಾಗಿದೆ.

**ಕೆ.ವಿ.ಎನ್.:**

ಇವತ್ತಿನ ಕರ್ನಾಟಕವನ್ನು ಕಲ್ಪಿಸಿಕೊಂಡು ರಾಗಿಯನ್ನು ಕಲ್ಪಿಸಿಕೊಳ್ಳಲಾಗಲ್ಲ.

**ಮಾನಕರಿ ಶ್ರೀನಿವಾಸಾಚಾರ್** – ಸರ್, ಪ್ರವಾಸಿ ಕಂಡ ವಿಜಯನಗರ ಪುಸ್ತಕದಲ್ಲಿ, ಅಲ್ಲಿ ರಾಗಿ ರಾಜ್ಯದ ಪ್ರಧಾನ ಬೆಳೆಯಾಗಿತ್ತು ಮತ್ತು ಅದು ಖುಷ್ಕಿ ಭೂಮಿಯ ಪ್ರಧಾನ ಬೆಳೆಯಾಗಿತ್ತು. ಅಂತ ಇದೆ.

**ಕೆ.ವಿ.ಎನ್.:**

ನ್ಯೂನಿಜ್‌ಗೆ ರಾಗಿ ವಿಜಯನಗರ ಸಾಮ್ರಾಜ್ಯದ ಮುಖ್ಯ ಬೆಳೆಯಾಗಿತ್ತು ಅಂದರೆ, ವಿಜಯನಗರ ಪಟ್ಟಣ ಅಲ್ಲ ಸಾಮ್ರಾಜ್ಯ ಎಲ್ಲಿಯವರೆಗಿತ್ತು ನೋಡಿ. ದಕ್ಷಿಣ ಭಾರತದ ವ್ಯಾಪ್ತಿ ಹೊಂದಿತ್ತು. ನ್ಯೂನಿಜ್ ಹೇಳುವಾಗ ದಾಖಲೆಗಳಲ್ಲಿ ಏನು ಸಿಗ್ತದ್ದೋ, ಜನ ಏನು ಹೇಳುತ್ತಾರೋ ಅದನ್ನು ಬರೆದಿರಬಹುದು. Evidence ಏನು ಹೇಳುತ್ತೆ, ಇದು ನಮಗೆ ಬೇಡದಿರುವ ಪ್ರಶ್ನೆ.

**ಡಾಮ್ನಿಕ್:**

ಈಗ ಅದು ಬೇಡದಿರುವ ಪ್ರಶ್ನೆ ಅಲ್ಲ ಸರ್.

**ಕೆ.ವಿ.ಎನ್:**

ಅವರ ವಿಜಯನಗರ ಕಾಲದಲ್ಲಿ ಪೋರ್ಚುಗೀಸ್ ಇವರಿಂದ irrigation ಪದ್ಧತಿಯನ್ನು ಜಾರಿಗೊಳಿಸುತ್ತಾರೆ. ಇದರಿಂದ ಏನಾಗುತ್ತೆ ನೀರಾವರಿ ಬೆಳೆಗಳ ಪದ್ಧತಿ ಬಹಳ ದೊಡ್ಡ ಪ್ರಮಾಣದಲ್ಲಿ ಬೆಳೀತು. ಇದರ ಪರಿಣಾಮವಾಗಿ ನೀವು ಹೇಳುವ ಹಾಗೆ ಒಣ ಬೇಸಾಯ ಪದ್ಧತಿ ಹಿಂದಕ್ಕೆ ಸರಿದಿರಬಹುದು. ಆದರೆ ಸಾಮ್ರಾಜ್ಯದ ಗಡಿ ಒಳಗಡೆ ಜನ ಮಾನಸದಲ್ಲಿ ಅಧಿಪತಿಯಾಗಿದ್ದ ಕುಮಾರ ರಾಮ ಹೋಗಿ ಚರಿತ್ರೆ ಯಾಕೆ ಕೃಷ್ಣ ದೇವರಾಯನನ್ನು ಮೇಲಕ್ಕೆ ತಗೊಂಬರ್ತದೆ ಅನ್ನೋದಕ್ಕೆ ಇದು ಉತ್ತರ ಇರಬಹುದೇನೋ! ಅವನು represent ಮಾಡ್ತಿರುವ ಪದ್ಧತಿ ಒಣ ಬೇಸಾಯದ ಪದ್ಧತಿ ಇದ್ದಿರಬಹುದು. ಇದರ ಬಗ್ಗೆ ಹೆಚ್ಚಿನದಾಗಿ ತಲೆಕೆಡಿಸಿಕೊಂಡಿರುವ ವ್ಯಕ್ತಿ ಕರ್ನಾಟಕದಲ್ಲಿ ಇದ್ದಾರೆ. ಜಿ.ಎನ್.ನಾಗರಾಜ್. ಅವರ ಬಳಿ ಹೋಗಿ ಹೆಚ್ಚಿನ ಮಾಹಿತಿ ತಗೊಳ್ಳಿ. ಅವರು ಈ ಬಗ್ಗೆ ಬಹಳ ಅಧ್ಯಯನ ಮಾಡಿದ್ದಾರೆ.

**ಡಿ.ಸಿ.ಗೀತಾ:**

ಒಂದು ಗಂಡು ಅಥವಾ ಯಜಮಾನಿಕೆಯನ್ನ ಒಪ್ಕೊಂಡು, ಕನಕರಾಗಲಿ ಅಥವಾ ಭಕ್ತಿಪಂಥವಾಗಲಿ ತನ್ನನ್ನು ತಾನು ಅರಿತುಕೊಂಡು ಅಥವಾ ತನ್ನ ಸೊಸೈಟಿಗೂ ಎಲ್ಲೋ ಒಂದು ಕಡೆ ಉತ್ತರ ಕೊಡುತ್ತಾ ಆತ್ಮಾವಲೋಕನ ಕ್ರಮದಲ್ಲೇ ಬೆಳೆದೂ ಬೆಳೆದು ಕೊನೆಗೆ ಈ ಎಲ್ಲವನ್ನೂ ಬಿಟ್ಟು ಸಮರ್ಪಣಾ ಭಾವಕ್ಕೆ ತಲುಪಿದಾರೇನೋ. ಯಾಕೆಂದ್ರೆ ಒಂದು ಗಂಡು ಅಥವಾ ಯಜಮಾನಿಕೆಯನ್ನ ಒಪ್ಕೊಳ್ಳೋಕ್ಕಿಂತ, ತಂದೆಯಾಗೋ ಅಥವಾ ಗಂಡನಾಗೋ ಅಥವಾ ಕಡೆಗೆ ಅವನು ಆತ್ಮಸಂಗಾತ ಎನ್ನುವ ನೆಲೆ, ಇವೆರಡೂ ಬೇರೆ ಬೇರೆ ಅಲ್ಲವೇ ಅಲ್ಲ, ಅವನ ಇಡೀ ಬದುಕಿನ ಆಲೋಚನಾ ಕ್ರಮ, ತನ್ನೊಳಗೆ ತಾನು–ಪ್ರತಿಭಟಿಸುತ್ತಾ ಕಡೆಗೆ ಒಂದು ಕಡೆ ಯಾವುದೋ ಒಂದು ಕಡೆ ತನ್ನದೇ ಏಕಾಂತದಲ್ಲಿ.......

**ಬಿ.ಯು.ಸುಮ** : ಇದರಲ್ಲಿ ಮೊದಲ್ಯಾವುದು ಕಡೆ ಯಾವುದು ಅನ್ನೋ cronoligical order ಏನಾದರೂ ಇದೆಯಾ?

**ಶಿವರಾಮಯ್ಯ** : ಡಾಮ್ನಿಕ್ ಹೇಳ್ತಾ ಇದ್ರು, ಕನಕದಾಸರು ಜೋಳ, ನವಣೆ, ಸಾಮೆ, ಸಜ್ಜೆ ಇವುಗಳೆಲ್ಲದರ ಪ್ರತಿನಿಧಿಯಾಗಿ ರಾಗೀನೇ ಮಾತಾಡುತ್ತಾ ಅಂತ. ಈ ಬಗ್ಗೆ ಇವತ್ತಿನ ಸಂದರ್ಭಕ್ಕೆ ಯಾವುದೇ ಕತೆ, ಕಾವ್ಯ ಆಗ್ಲಿ ನಮಗೆ ಸಂಬಂಧ ತಾನೇ? ಅನ್ನುವುದನ್ನು ಮುಖ್ಯವಾಗಿ ಒತ್ತಿ ಹೇಳ್ತಾ, ರಾಮಧಾನ್ಯ ಚರಿತೆ ನಮಗೆ ಇವತ್ತು ಯಾಕೆ ಬಹಳ ಮುಖ್ಯ ಅನ್ನೋದು ನೋಡಬೇಕು. ಯಾಕೆ ಆ ಬಗ್ಗೆ ಮುಖ್ಯ ಚರ್ಚೆ ಎಂದರೆ, ಸಂವಿಧಾನಾತ್ಮಕವಾಗಿ ಕೂಡ ಇವತ್ತು ಶ್ರೀಸಾಮಾನ್ಯನಿಗೆ ನಾವು ಸಮಪಾಲು ಸಮಬಾಳು ಇತ್ಯಾದಿಗಳ ಮಾತು ಬಂದಾಗ ಕನಕನ ಕಾಲಜ್ಞಾನ ಎಲ್ಲಿವರೆಗೂ ಇತ್ತು ಅನ್ನೋದಕ್ಕೂ ಕೂಡ ಇದು ಮಾಹಿತಿ ಆಗ್ತದೆ. ಅವನು ರಾಗಿಯನ್ನ ಮತ್ತು ಭತ್ತವನ್ನ ಒಂದು ಮೆಟಫರ್‌ನಲ್ಲಿ ತೆಗೆದುಕೊಂಡು, ಅದನ್ನೊಂದು ದೃಷ್ಟಾಂತ ಕಾವ್ಯ–ರಾಗಿಯನ್ನು ಸಮರ್ಥಿಸುತ್ತಾ ಭತ್ತದ ಒಂದು ಅಹಂಕಾರವನ್ನು ನಿರಸನ ಮಾಡುತ್ತಾ ಹೋಗುವ ಸಂದರ್ಭ. ಹಾಗಾಗಿ ಭತ್ತ ಕೊನೆಗೆ ಮತ್ತು ರಾಗಿಯನ್ನ ರಾಮ ರಾಘವ ಧಾನ್ಯ ಅಂತ ರಾಜಿ ಮಾಡಿಸ್ತಾನೆ. ಎಷ್ಟೊಂದು ಡೆಮಾಕ್ರಟಿಕ್ ಆಗಿ ಅದು ನಡೀತದೆ ಅಂದ್ರೆ ರಾಮನ ಓಲಗದಲ್ಲಿ ನಡೆಯುವ ಚರ್ಚೆ. ಇದೆಲ್ಲ ಅಷ್ಟೊಂದು ಜನತಾಂತ್ರಿಕವಾದ ಒಂದು ಸಂದರ್ಭದಲ್ಲಿ ಕನಕದಾಸ ಮಾತುಗಳನ್ನು ಹೇಳಿಸ್ತಾನೆ. ನನಗೆ ಮುಖ್ಯವಾಗುವುದು ಏನು ಅಂತ ಅಂದ್ರೆ ಇತ್ತೀಚೆಗೆ ನಾವು ವೀರಸಂಗಯ್ಯ ರೈತ ಚಳುವಳಿಯ ಮುಖ್ಯಸ್ಥರು ಅವರನ್ನು ಭೇಟಿ ಆದಾಗ ರೈತಸಂಘ ಕರ್ನಾಟಕದಲ್ಲಿ ಯಾತಕ್ಕೋಸ್ಕರ ಹಿನ್ನಡೆ ಕಂಡಿತು ಅಂದಾಗ ಅವರು ಬಹಳ ಕರೆಕ್ಟಾಗಿ ವಸ್ತುನಿಷ್ಠವಾಗಿ ಹೇಳಿದರು–ರೈತ ಸಂಘವನ್ನು ಆರಂಭದಲ್ಲಿ ಮೊದಲು ಶುರು ಮಾಡಿದವರು ಕಬ್ಬು ಬೆಳೆಗಾರರು, ಕಾಫಿತೋಟ, ಎಸ್ಟೇಟ್ ಇತ್ಯಾದಿ. ಅವರೆಲ್ಲರೂ ಆ ಸಂಘಟನೆಯನ್ನು ಕಟ್ಟಿ ಅವರ ಭಾಗದ ಈ ಕೂಲಿ ಬೆಳೆಗಾರರನ್ನು ಒಳಗೊಂಡು ಒಣ ಬೇಸಾಯ ಮಾಡುತ್ತಿದ್ದವರೆಲ್ಲ ಹೋಗಿ ಒಂದು ಮಟ್ಟಿಗೆ ಬೆಂಬಲ ನೀಡಿದರು. ಆಮೇಲೇನಾಯಿತು ಅಂತ ಅಂದ್ರೆ ಮುಖ್ಯವಾಗಿ ಅವರಿಗೆ ಅರ್ಥ ಆಯಿತು ನಾವು ನಮ್ಮ ಕೆಲಸಗಳನ್ನ, ಕೂಲೀನ, ದನಕರುಗಳನ್ನ ಬಿಟ್ಟು ಅಲ್ಲಿ ಹೋಗಿ ಅವರಿಗೆ ಯಾಕೆ ಅನುಕೂಲ ಮಾಡಿಕೊಡಬೇಕು? ಎನ್ನುವಂತಹ ಪ್ರಜ್ಞೆ ಸಾಮಾನ್ಯ ರೈತರಿಗೆ ಬಂದಾಗ–ಒಣ ಬೇಸಾಯಗಾರರಿಗೆ (ರೈತ ಚಳವಳಿಯವರು)– ಅವರು ಬೆಂಬಲ ಕೊಡಲಿಲ್ಲ. ಹಾಗಾಗಿ ಅವರವರೆ ಪ್ರತಿಷ್ಠೆ ಮಾಡಿಕೊಂಡು ದೊಡ್ಡ ನೀರಾವರಿ ಮತ್ತು ಎಸ್ಟೇಟ್ ಓನರ್‌ಗಳು ನಾವು ರೈತರು ಅಂತ ಅವರೆಲ್ಲ ಬೆಂಬಲ ಇಲ್ಲದೆ ಸುಮ್ಮನಾದರು. ಈ ಕಾರಣದಿಂದಾಗಿ ರೈತಸಂಘ ನಿಸ್ತೇಜಗೊಂಡಿತು ಅಂತ ಕರಾರುವಕ್ಕಾಗಿ ಹೇಳಿದರು. ಆಗ ನೋಡಿದರೆ ಒಣ ಬೇಸಾಯ ಪದ್ಧತಿಯಲ್ಲಿ ನೂರು ನೂರೂ ಚಿಲ್ಲರೆ ಧಾನ್ಯಗಳಿವೆ. ಆ ಧಾನ್ಯಗಳ ಪ್ರತಿನಿಧಿಗಳಾಗಿ ಈ ರೈತರು ಕೆಲಸ ಮಾಡುತ್ತಿದ್ದರಲ್ಲ ಅವರಿಗೆ ಏನೂ ಅನುಕೂಲ ಆಗಲಿಲ್ಲ. ಇವತ್ತಿಗೂ ಆಗ್ತಾ ಇಲ್ಲ. ಇದೆಲ್ಲವೂ ದಿನನಿತ್ಯ ಪೇಪರ್‌ನಲ್ಲಿ ಬರ್ತಾ ಇದೆ. ನಮಗೆ ಗೊತ್ತಾಗ್ತಿದೆ ಯಾವ ಯಾವ ಬೆಳೆ ಎಲ್ಲೆಲ್ಲಿ ಜಾಸ್ತಿ ಆಗ್ತಾ ಇದೆ. ಎಲ್ಲೆಲ್ಲಿ ಕಡಿಮೆ ಆಗ್ತಾ ಇದೆ? ರಾಗಿ ಮತ್ತು ಭತ್ತ ಇದರ ಬಗೆಗೆ. ಇವತ್ತು ಅಷ್ಟು ಜನ ಉಪಯೋಗಿಸುವಂತ ಭಾಗ ಅಂತ ಅಂದ್ರೆ ತಮಿಳುನಾಡು, ದಕ್ಷಿಣ ಕರ್ನಾಟಕದಲ್ಲಿ ಇದನ್ನ ತೆಗೆದುಕೊಂಡು ಕನಕದಾಸ ಮುಂದೊಂದು ದಿನ ಈ ರೀತಿಯ ಸಾರ್ವಜನಿಕ ಚರ್ಚೆ ಆಗುತ್ತೇ ಅಂತ ಅವನ ಪ್ರಶ್ನೆ ಅಲ್ಲ, ಆದರೆ ಅಂತದ್ದೊಂದು ಕಾಲಜ್ಞಾನ ಸಾಮಾನ್ಯನಿಗೂ ಒಂದು ಹಕ್ಕು ಬಾಧ್ಯತೆ ಸಿಗಬೇಕು ಸವಲತ್ತುಗಳು ಸಿಗಬೇಕು ಅಂತ ಸರ್ಕಾರಾನೇ ಹೇಳ್ತಾ ಇದೆ. 5 ಎಕರೆ 2 ಎಕರೆ ಇರೋನಿಗೆ ಸಾಲಮನ್ನಾ ಮಾಡ್ತೀವಿ ಇತ್ಯಾದಿ. ಇದು ಆಗ್ಬೇಕು ಅನ್ನುವಂತ ಆಶಯ ಬಹುಶಃ ಅವನ ದೃಷ್ಟಿ ತ್ರಿಕಾಲ ಜ್ಞಾನ ದೃಷ್ಟಿಯಲ್ಲಿ ಇದ್ದಿರಬೇಕು.

ಅದರಿಂದ ನಾವು ಕನಕನನ್ನ ಹೆಚ್ಚು ಚರ್ಚೆಗೆ ತೆಗೆದುಕೊಳ್ತೀವೆ ಹೊರತು ಅವನು ಯಾವುದೋ ಒಂದು ಚರ್ಚೆ ಮಾಡಿಬಿಟ್ಟು ಒಂದು ರಾಮಧಾನ್ಯ ಚರಿತೆ ಅಥವಾ ಶೃಂಗಾರ ಕಾವ್ಯವನ್ನು ಬರೆದ ಅಥವಾ ನಳಚರಿತ್ರೆ, ಪ್ರೇಮಕಾವ್ಯ ಇತ್ಯಾದಿಗಳನ್ನು ಕೈಬಿಟ್ಟು ಇದನ್ಯಾಕೆ ಇವತ್ತು ಚರ್ಚೆ ಮಾಡ್ತಾ ಇದೀವಿ ಅನ್ನೋದಕ್ಕೆ ಈ ಮಾತನ್ನು ಹೇಳ್ತಾ ಇದೀನಿ.

**ವಸು ಎಂ.ವಿ:**

ನನಗೆ ಕನಕನ ಸಾಹಿತ್ಯದಲ್ಲಿ ವಿಜಯನಗರ ಮತ್ತು ಅದರ ಸಂಬಂಧ ಎಲ್ಲವನ್ನು ಗಮನಿಸಿದರೆ, ಸೂಫಿಯಿಸಂ ಹಾಗೂ ಅದರ ಸಂಬಂಧ ಬಹಳ ಜಾಸ್ತಿ ಇದ್ದ ಕಾಲ. ಆದರೆ ಅದನ್ನು ಬಹಳ ಕಡಿಮೆ ಮೆನ್ಷನ್ ಮಾಡಲಾಗಿದೆ. ಸೂಫಿ ಕಲ್ಚರ್ ಇತ್ಯಾದಿ. ಅದು ಅಷ್ಟೇ ಇತ್ತಾ? ಆಮೇಲೇನಾದರೂ ಬಿಟ್ಟು ಹೋಯ್ತಾ?

**ಸಿ. ಬಸವಲಿಂಗಯ್ಯ:**

ಇದೇ ಸಮಯದಲ್ಲಿ ಕಬೀರನ ಚಳುವಳಿಯು ಉತ್ತರದಲ್ಲಿ ನಡೆಯುತ್ತಿರುತ್ತೆ. ಅವನು ಹಾಡ್ತಾ ಇರ್ತಾನೆ. ಕನಕದಾಸರು ಹಾಡ್ತಾ ಇರ್ತಾರೆ. 15ನೇ ಶತಮಾನದಲ್ಲಿ ರವಿದಾಸ ಮತ್ತು ಕಬೀರ್‌ದಾಸ ದೊಡ್ಡ ಚಳುವಳಿಯನ್ನು ಕಟ್ತುತ್ತಾರೆ. ದೆಹಲಿಯ ಸುಲ್ತಾನ ಬಂದು ಅದನ್ನ ನಿಲ್ಲಿಸಬೇಕಾಗುತ್ತದೆ. ಅವರು ವ್ಯವಸ್ಥೆ ಕಲ್ಪನೆ ಮಾಡುವಂತ ಆಧ್ಯಾತ್ಮ ಅಥವಾ ದೇವರನ್ನ ಒಂದು ಪ್ರಭುತ್ವ ಶಕ್ತಿಯನ್ನಾಗಿ ಬಳಸಿಕೊಳ್ತಾರೆ ಅಂತ. ಅದಕ್ಕೆ ವಿರುದ್ಧವಾಗಿ ಇವರು ತಮ್ಮ ದೇವರನ್ನ ಕಂಡುಕೊಳ್ಳುತ್ತಾರೆ ತಮ್ಮ ನೆಲೆಯಲ್ಲಿ. 12ನೇ ಶತಮಾನದಲ್ಲಿ ವಚನಕಾರರು ದೇವಾಲಯವನ್ನು ದೇಹಕ್ಕೆ ರೂಪಕವನ್ನಾಗಿ ಬಳಸಿಕೊಂಡರು, ಇಲ್ಲಿ 15ನೇ ಶತಮಾನದಲ್ಲಿ ಈ ಭಕ್ತಿಪಂಥ ಇಡೀ ದೇಶದಲ್ಲಿ ಚಳುವಳಿಯ ಒಂದು ರೂಪವನ್ನು ಕಟ್ಟಿಕೊಡಲು ಸಾಧ್ಯವಾಯಿತು. ದೆಹಲಿ ಸುಲ್ತಾನ ಬರ್ಬೇಕಾಗುತ್ತೆ. ಹಿಂದುಗಳು ತಿರುಗಿ ಬೀಳ್ತಾರೆ. ಮುಸ್ಲಿಮರು ತಿರುಗಿ ಬೀಳ್ತಾರೆ. ಕನಕನ ಈ ಜರ್ನಿ ಇದೆಯಲ್ಲಾ ಬಾಡದಿಂದ ಉಡುಪಿ ಆ ರೀತಿಯಾಗಿ ಇದು ಕಾಣ್ತಾ ಇಲ್ಲಾ ಅನ್ಸುತ್ತೆ. ಇನ್‌ಡಿವಿಜುವಲ್ ಆಗಿ ಯಾಕೆ ಕನಕದಾಸನನ್ನ ಒಬ್ಬನಾಗಿ–ಕಾಯಕ ಜೀವಿಗಳ ರೀತಿ ಯಾಕೆ ರೂಪಿಸಲಿಲ್ಲ. ಈ ನಿಟ್ಟಿನಲ್ಲಿ ಯಾಕೆ ಆಲೋಚನೆ ಮಾಡಬಾರದು.

**ಕೆ.ವಿ.ಎನ್.:**

ಮಾಡ್ಬೇಕು ನಿಜ. ಈ ಎರಡನ್ನೂ ಬೇರೆ ರೀತಿಯಲ್ಲಿ ನಾವು ನೋಡಬೇಕಾಗಿದೆ.

# ಕನಕ ಭಕ್ತಿಯ ವಿಭಿನ್ನ ನೆಲೆಗಳು

**ಮಾನಕರಿ ಶ್ರೀನಿವಾಸಾಚಾರ್ಯ**

ಇದೊಂದು ಗಂಭೀರವಾದ ಚಿಂತನ ಶಿಬಿರ. ಇಂದು ಇಲ್ಲಿ ನಡೆಯುತ್ತಿರುವ ಚಿಂತನೆ–ಸಂವಾದಗಳು ಈವರೆಗೆ ನಡೆದಿರುವ ಅಧ್ಯಯನ ಮತ್ತು ಸಂಶೋಧನೆಗಳ ನೆಲೆಯನ್ನು ಮತ್ತಷ್ಟು ವಿಸ್ತರಿಸುವ ಹಾಗೂ ಅದರ ಹೊಸದಿಕ್ಕುಗಳನ್ನು ಗುರುತಿಸುವ ಪ್ರಯತ್ನವಾಗಿದ್ದು ಮುಂದಿನ ಸಂಶೋಧನೆಯ ಗುಣಮಟ್ಟವನ್ನು ನಿರ್ಧರಿಸುವುದರಿಂದ, ಇಲ್ಲಿ ನಮ್ಮೆಲ್ಲರ ಹೊಣೆಗಾರಿಕೆ ಮುಖ್ಯವೆಂದು ಭಾವಿಸಿದ್ದೇನೆ.

ಕನಕದಾಸರ ಭಕ್ತಿಯ ವಿಭಿನ್ನ ನೆಲೆಗಳನ್ನು ಕುರಿತ ನನ್ನ ಹೊಸನೋಟಗಳನ್ನು 'ಅಧ್ಯಯನಪೂರ್ಣ ಆಕರಗಳ ನಿರ್ಮಾಣದ ಅವಶ್ಯಕತೆ', 'ಭಕ್ತಿಯ ವಿಭಿನ್ನ ನೆಲೆಗಳ ಆಧುನಿಕ ಅಧ್ಯಯನ ಸಾಧ್ಯತೆಗಳು' ಎಂಬ ಎರಡು ಭಾಗಗಳಲ್ಲಿ ಮಂಡಿಸಲು ಬಯಸುತ್ತೇನೆ.

**1. ಅಧ್ಯಯನಪೂರ್ಣ ಆಕರಗಳ ನಿರ್ಮಾಣದ ಅವಶ್ಯಕತೆ:**

ಇದುವರೆಗೆ ರಾಜ್ಯದ ಒಳಹೊರಗೆ ಕನಕರ ಬಗ್ಗೆ ಅನೇಕ ಬರಹಗಳು ಪ್ರಕಟವಾಗಿದ್ದರೂ, ಆ ಎಲ್ಲ ಗ್ರಂಥಗಳು ಹಾಗೂ ಲೇಖನಗಳು ಆಸಕ್ತರಿಗೆ ದೊರಕುತ್ತಿಲ್ಲ. ಆದ್ದರಿಂದ ಕನಕ ಪುನರ್ದರ್ಶನಕ್ಕೆ ಅಗತ್ಯವಾದ ಎಲ್ಲ ಪ್ರಾಥಮಿಕ ಮಾಹಿತಿಗಳು ಏಕತ್ರ ಲಭ್ಯವಾಗುವಂತೆ ಅವುಗಳನ್ನು ಸುಸಂಬದ್ಧವಾಗಿ ಒದಗಿಸುವ 'ಅಧ್ಯಯನಪೂರ್ಣ ಆಕರ'ಗಳನ್ನು ನಿರ್ಮಿಸಬೇಕಾಗಿದೆ. ಅಂತಹ ಆಕರಗಳ ರಚನೆಗೆ ಮುನ್ನ ಕನಕರ ಎಲ್ಲ ಕೃತಿಗಳ ಪಠ್ಯವನ್ನು ನಾವೇ ಸ್ವತಃ ಚೆನ್ನಾಗಿ ಓದಬೇಕು. ಕನಕರ ರಚನೆಗಳನ್ನು ಸಮಗ್ರವಾಗಿ ಓದದೆ, ಅಲ್ಲಿಯ ವಸ್ತುವಿನ ನೇರ ಪರಿಚಯವಿಲ್ಲದೆ ಒಂದೆರಡು ಪಲ್ಲವಿ ಅಥವಾ ನುಡಿಗಳನ್ನೇ ಬಂಡವಾಳ ಮಾಡಿಕೊಂಡು ಬಡಾಯಿ ಕೊಚ್ಚುವವರು ಹೆಚ್ಚುತ್ತಿದ್ದಾರೆ. ಕೆಲವು ಪುಸ್ತಕಗಳ ಮುನ್ನುಡಿ ಬೆನ್ನುಡಿಗಳಿಂದ, ಇತರರ ಹೇಳಿಕೆಗಳಿಂದ ಅಭಿಪ್ರಾಯವನ್ನು ರೂಪಿಸಿಕೊಳ್ಳುವ ಭಾವುಕತೆ ಅಥವಾ ಅಕ್ರಮವನ್ನು ತಡೆಯಲು ಮತ್ತು ಸ್ಪಷ್ಟತೆಯನ್ನು ರೂಪಿಸಿಕೊಳ್ಳಲು ಕನಕರ ಎಲ್ಲ ಕೃತಿಗಳ ಪಠ್ಯವನ್ನು ನಾವೇ ಸ್ವತಃ ನಮ್ಮ ಚಾಳೀಸಿನಲ್ಲಿ ಚೆನ್ನಾಗಿ ಅನೇಕ ಬಾರಿ ಓದಬೇಕು. (ಇತರ ವಿಮರ್ಶಕರ ಅಭಿಪ್ರಾಯವನ್ನು ಅನಂತರ ಪರಿಶೀಲಿಸಬಹುದು.)

ಕನಕದಾಸರ ವ್ಯಕ್ತಿತ್ವಕ್ಕೆ ಆಶಯಗಳಿಗೆ ಯುಗಧರ್ಮಗಳಿಗೆ ಹೊಂದುವ (ಲೋಪ ಬರದಿರುವ) ಆಧುನಿಕ ವಿಶ್ಲೇಷಣೆಗಳನ್ನು ಕೈಗೊಳ್ಳಬೇಕು. ಕನಕದಾಸರ ವ್ಯಕ್ತಿತ್ವಕ್ಕೆ ಆಶಯಗಳಿಗೆ ಯುಗಧರ್ಮಗಳಿಗೆ ಒಗ್ಗದ ವಿಶೇಷಾರ್ಥಗಳನ್ನು ಆರೋಪಿಸುವ ವಿಮರ್ಶೆಗಳನ್ನು (ಅವು ಎಷ್ಟೇ ಸ್ವಾರಸ್ಯವಿದ್ದರೂ) ಕೈಬಿಡಬೇಕು. ಓದುಗರನ್ನು ಅನವಶ್ಯಕ ಗೊಂದಲದಿಂದ ಪಾರುಮಾಡುವ 'ಪಾರದರ್ಶಕ ಚಿಂತನೆ', 'ನಿರುದ್ವಿಗ್ನ ನಿರೂಪಣೆ' ಬಹುಮುಖ್ಯ. 'ವ್ಯಕ್ತಿಪೂಜೆ', 'ಆರಾಧಕ ಭಾವ', 'ಪುರಂದರರ ಪ್ರತಿಸ್ಪರ್ಧಿ ಎಂಬಂತೆ ಚಿತ್ರಿಸುವುದು' ಮುಂತಾದ ಅತಿರೇಕದ ಬರಹಗಳನ್ನು ಬಿಡದಿದ್ದರೆ ಕನಕರ ನೈಜ ಸತ್ವವನ್ನೇ ಸಂದೇಹಿಸಿದಂತಾಗುತ್ತದೆ, ಅವಮಾನಿಸಿದಂತಾಗುತ್ತದೆ ಎಂಬ ವಿವೇಕವೇ ಮಾನದಂಡ ವಾಗಬೇಕು. ಇಂತಹ ಮೌಲಿಕ 'ಅಧ್ಯಯನಪೂರ್ಣ ಆಕರ' ಸಂಪುಟಗಳ ಸಂಪಾದನೆಗಾಗಿ ಸಮಾನಮನಸ್ಕರಾದ ವಿವಿಧ ಶಿಸ್ತುಗಳ ತಜ್ಞ ವಿಶ್ಲೇಷಕರ ಒಂದು ತಂಡ ಬೇಕಾದೀತು. ಸದರಿ ಅಧ್ಯಯನಪೂರ್ಣ ಆಕರ ಸಂಪುಟಗಳ ಸ್ವರೂಪ ಮತ್ತು ವಿನ್ಯಾಸದ ಬಗ್ಗೆ ನನ್ನ ಅನಿಸಿಕೆಗಳು ಹೀಗಿವೆ:

## I ಕನಕ ಮಾಹಿತಿ ಸಂಪುಟ:

**1. ಕನಕ : ಕಾರ್ಯಕ್ಷೇತ್ರಗಳು :** ವ್ಯಕ್ತಿ–ವ್ಯಕ್ತಿತ್ವ–ಪ್ರಭಾವಗಳನ್ನು ಕುರಿತು ಅವರ ಕಾರ್ಯಕ್ಷೇತ್ರಗಳಾದ ಬಾಡ, ಬಂಕಾಪುರ, ಕಾಗಿನೆಲೆ, ತಿರುಪತಿ, ಕನಕಗಿರಿ, ಶ್ರೀರಂಗ, ಬೇಲೂರು, ಹಂಪಿ, ಕಂದಕೂರು, ಉಡುಪಿ, ಕಾಗಿನೆಲೆ ಇತ್ಯಾದಿ ಕಡೆಗಳಲ್ಲಿ ವ್ಯಾಪಕವಾದ ಕ್ಷೇತ್ರಕಾರ್ಯ ನಡೆಯಬೇಕು. ಆ ಸ್ಥಳಗಳ ರೂಟ್‌ಮ್ಯಾಪ್, ಕನಕರ ಕೃತಿಗಳಲ್ಲಿ, ಇತರರ ಬರಹಗಳಲ್ಲಿ, ಆ ಸ್ಥಳಗಳ ಪ್ರಸ್ತಾಪ, ಅಲ್ಲಿಯ ಶಿಲ್ಪಗಳ ಅಥವಾ ಚಿತ್ರಗಳ ಫೋಟೋಗಳು, ಐತಿಹ್ಯಗಳು, ರಾಷ್ಟ್ರೀಯ ಸಂತಕವಿ ಕನಕದಾಸ ಸ್ಮಾರಕಗಳ ಅವಶ್ಯಕತೆ ಇತ್ಯಾದಿಗಳ ಮಾಹಿತಿ ಸಂಗ್ರಹ ಮತ್ತು ವಿಶ್ಲೇಷಣೆ.

**2. ಕನಕ : ಮೌಖಿಕ ಚರಿತ್ರೆಗಳು** : ಆಧುನಿಕ ತಿಳುವಳಿಕೆಯ ಪ್ರಕಾರ ಬರೆದದ್ದಷ್ಟೇ ನಂಬಲರ್ಹ ದಾಖಲೆಯೇನಲ್ಲ. ಅಲಿಖಿತ ಮಾಹಿತಿಗಳು ಸಹ ಜನಮಾನಸದ ದಾಖಲೆಗಳು ಎಂದು ಪರಿಗಣಿಸುವ ಪದ್ಧತಿಗಳು ಚಾಲ್ತಿಯಲ್ಲಿವೆ. ಕನಕರ ಸಮಕಾಲೀನ ವ್ಯಕ್ತಿಗಳ ಉದ್ಗಾರಗಳು, ಇತರ ಎಲ್ಲ ಹರಿದಾಸರಿಗಿಂತ ಕನಕರ ಬಗ್ಗೆ ಮಾತ್ರ ಸಿಗುವ ಹೆಚ್ಚಿನ ಸಂಖ್ಯೆಯ ಐತಿಹ್ಯಗಳು ಮತ್ತು ದಂತಕಥೆಗಳನ್ನು ಮೌಖಿಕ ದಾಖಲೆಗಳೆಂದು ಪರಿಗಣಿಸಬಹುದು. ಈ ಹಿನ್ನೆಲೆಯಲ್ಲಿ ಅಲಿಖಿತ ಮಾಹಿತಿಗಳನ್ನು ಪ್ರಶಂಸೆ, ಪವಾಡ ಇತ್ಯಾದಿ ಪ್ರಾಚೀನ ಪರಿಭಾಷೆ ಮತ್ತು ವಿಶ್ಲೇಷಣಾ ದೃಷ್ಟಿಯಿಂದ ಹೊರತಂದು ಇಂತಹ ಐತಿಹ್ಯಗಳು ಹುಟ್ಟುವ ಕಾರಣಗಳು ಮತ್ತು ಅದಕ್ಕೆ ಹಿನ್ನಲೆಯಾಗಿ ದುಡಿಯುವ ಮನಃಸ್ಥಿತಿಗಳನ್ನು ವ್ಯಾಖ್ಯಾನಿಸುವ ನೂತನ ಅಧ್ಯಯನ ವಿಧಾನಗಳನ್ನು ಈ ಭಾಗದಲ್ಲಿ ಅಳವಡಿಸಬಹುದಾಗಿದೆ. ಇವಲ್ಲದೆ ಕನಕ : ಇತಿಹಾಸ ಕಂಡಂತೆ, ಕನಕ:ಆತ್ಮ ಸಂಕಥನ ಮುಂತಾದ ವ್ಯವಸ್ಥಿತ ವಿಭಾಗಗಳಲ್ಲಿ ಕನಕರ ವ್ಯಕ್ತಿತ್ವ, ಪ್ರೇರಣೆ–ಪ್ರಭಾವಗಳನ್ನು ಕುರಿತ ಬೃಹತ್ ಸಂಪುಟ ಅಗತ್ಯ.

**3. ಕನಕ ಕಾವ್ಯ ಸಂಪುಟ**: ಇಲ್ಲಿ ಕನಕರ ಪ್ರತಿಯೊಂದು ಕಾವ್ಯದ ರಸಗ್ರಹಣಕ್ಕೆ ಪೂರಕವಾದ ಪಠ್ಯ, ಪಠ್ಯ ವಿವರಣೆ, ಪೂರಕ ಟಿಪ್ಪಣಿ, ವಿಭಿನ್ನ ತಾತ್ವಿಕ ಹಿನ್ನೆಲೆಯಲ್ಲಿ ಆ ಕಾವ್ಯದ ಬಗ್ಗೆ ಇದುವರೆಗೆ ಬಂದ ಎಲ್ಲ ವಿಮರ್ಶೆಗಳ ಕ್ರೋಢೀಕೃತ ನಿರೂಪಣೆ, ಅನ್ಯಶಿಸ್ತೀಯ ಅನುಸಂಧಾನದ ಹಿನ್ನೆಲೆಯಲ್ಲಿ ಪ್ರಸ್ತುತತೆ – ಇತ್ಯಾದಿಗಳನ್ನು ಒಳಗೊಂಡ ಸಮಗ್ರ ವಿವೇಚನೆ ನೀಡಬೇಕು.

**4. ಕನಕ ಕೀರ್ತನ ಸಂಪುಟ** : ಅನುಪಲಬ್ಧ ಕೀರ್ತನೆಗಳ ಸಂಗ್ರಹ, ಅಪ್ರಕಟಿತ ಕೀರ್ತನೆಗಳನ್ನು (ಪ್ರಕಟಿತ ಸಂಪುಟದ) ಪುನರ್‌ಮುದ್ರಣದ ಸಂದರ್ಭದಲ್ಲಿ ಸೇರಿಸುವುದು: [ಉದಾ: 1.ಕನಕರ ಅದ್ಭುತ ಚಿತ್ರಕ ಶಕ್ತಿಯ ಕುರುಹಾದ ಸುಂದರೀ, ರಂಗಾನ ತಂದು ತೋರ, ಒಂದಾರು ಘಳಿಗ್ಯಾರ ಎಂಬ ದಶಾವತಾರ ಸ್ತುತಿ ರೂಪವಾದ ಕೀರ್ತನೆ, 2. ಆತ್ಯಂತಿಕ ಕ್ಷಮೆಯನ್ನು ಪ್ರತಿಪಾದಿಸುವ ಏನೂ ಒಲ್ಲೆ ಶ್ರೀಹರಿ ನಿನ್ನ ಸ್ತುತಿಸಿ ಕೇಳುವುದು (ಅದರಲ್ಲಿ ಹಿಂದೆ ಎನ್ನ ಬೈದವರೆಲ್ಲ ಚೆಂದಾಗಿರಲಿ, ಮುಂದೆ ಎನ್ನ ಬೈವವರೆಲ್ಲ ಅಂದಣವೇರಲಿ. ಕುಂದು ಇಟ್ಟವರೆಲ್ಲ ಕುದುರೆ ಕಟ್ಟಿ ಬಾಳಲಿ. ಬಂದು ಒದ್ದವರಿಗೆ ಭತ್ತದ ಗದ್ದೆ ಬೆಳೆಯಲಿ. ಜನರೊಳಗೆ ಮಾನಭಂಗ ಮಾಡಿದವರಿಗೆ ಜೇನುತುಪ್ಪ ಸಕ್ಕರೆ ಊಟ ಆಗಲಿ ಅವರಿಗೆ ಇತ್ಯಾದಿ ಮಹಾಮಾನವತಾವಾದದ ಆಶಯಗಳಿವೆ) – ಮುಂತಾದ ಕೀರ್ತನೆಗಳು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಕಟಿತ ಸಂಪುಟಗಳಲ್ಲಿ ಸೇರಿಲ್ಲ. ಸೇರಬೇಕು.]

ಸರಳ–ನೇರ ವಸ್ತುಗಳುಳ್ಳ ಕೀರ್ತನೆಗಳ ವರ್ಗೀಕರಣ ಸುಲಭ. ಆದರೆ ಬಹುಮುಖ ಆಯಾಮಗಳನ್ನು ಹೊಂದಿರುವ ಕೀರ್ತನೆಗಳ ವರ್ಗೀಕರಣ ಕಷ್ಟಸಾಧ್ಯ. ಆದ್ದರಿಂದ ಕನಕರ ಕೀರ್ತನೆಗಳನ್ನು ಆಧುನಿಕ ಜ್ಞಾನಗಳ ಹಿನ್ನೆಲೆಯಲ್ಲಿ ಪುನರ್‌ವ್ಯಾಖ್ಯಾನಿಸಲು ಅನುಕೂಲವಾಗುವಂತೆ ಪುನರ್ ವರ್ಗೀಕರಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಕನಕರ ಭಕ್ತಿ ಪ್ರತಿಪಾದಕ ಕೀರ್ತನೆಗಳ ವಿಭಿನ್ನ ನೆಲೆಗಳ ಆಧುನಿಕ ಸಾಧ್ಯತೆಗಳನ್ನು ವಿವೇಚಿಸಲಾಗಿದೆ.

## II ಭಕ್ತಿಯ ವಿಭಿನ್ನ ನೆಲೆಗಳ ಆಧುನಿಕ ಅಧ್ಯಯನ ಸಾಧ್ಯತೆಗಳು:

ಕನಕರು ಮೂಲತಃ ಹರಿಭಕ್ತ–ಸಂತಕವಿಯಾಗಿದ್ದು, ಕೇಶವ ಭಕ್ತಿಯು ಅವರ ಎಲ್ಲ ಕೀರ್ತನೆಗಳ ಸ್ಥಾಯೀಭಾವದಂತಿದೆ. ಭಕ್ತಿಯು ಕೆಲವರ ಪ್ರಕಾರ ಭಾವವಾದರೆ ನಿರೀಶ್ವರವಾದಿಗಳಲ್ಲಿ ಕೆಲವರ ಪ್ರಕಾರ ಅಭಾವ. ಭಕ್ತಿ ಕೆಲವರಲ್ಲಿ ಸ್ಥಾಯಿ (ನಿರಂತರ), ಮತ್ತೆ ಕೆಲವರಲ್ಲಿ ಸಂಚಾರಿ (ಚಲನಶೀಲ), ವಿವೇಕಿಗಳಲ್ಲಿ ಅದು ವಿಚಾರಿಯೂ (ಔಚಿತ್ಯ ಜ್ಞಾನಸಹಿತವೂ) ಹೌದು.

**1. ಪೌರಾಣಿಕ ನೆಲೆ** : ಹರಿದಾಸ ಸಂಸ್ಕೃತಿಯ ವಿಶ್ವಕೋಶಗಳಂತಿರುವ ರಾಮಾಯಣ, ಮಹಾಭಾರತಗಳನ್ನು; ವಿಷ್ಣುಭಕ್ತಿ ಶಾಸ್ತ್ರಗಳೆಂದೇ ಪರಿಗಣಿತವಾದ ಭಾಗವತ, ಹರಿವಂಶ, ವಿಷ್ಣುಪುರಾಣಗಳನ್ನು; ಅಲ್ಲಿ ಚಿತ್ರಿತವಾದ ಭಕ್ತಿಯ ಭಾವವೈವಿಧ್ಯಗಳನ್ನು ದೇಸೀ ಮನಸ್ಸಿಗೆ, ದೇಸೀನುಡಿಗಟ್ಟು ಹಾಗೂ ದೇಸೀಲಯಗಳಲ್ಲಿ ತಲುಪಿಸಿದ್ದು ಹರಿದಾಸ ಪರಂಪರೆ. ಅದರ ಹೆಚ್ಚಿನ ಕೀರ್ತಿ ಕನಕರಿಗೆ ಸಲ್ಲುತ್ತದೆ.

ಆ ಪುರಾಣಗಳ ಪಾತ್ರಗಳು, ಘಟನೆಗಳು, ಮನೋಭಾವ, ಮೌಲ್ಯ, ಸಂಕೇತಗಳನ್ನು ಜನಸಾಮಾನ್ಯರ ಮಟ್ಟಕ್ಕೆ ತಂದು ಹೇಳುವ ಹೊಣೆಗಾರಿಕೆಯನ್ನು ನಿರ್ವಹಿಸಿದ ರೀತಿ; ಎಲ್ಲವನ್ನೂ ತಿಳಿದಿರುವೆವೆಂದು ಬೀಗುವ, ಎಲ್ಲ ವರ್ಗದ ದುರಹಂಕಾರಿಗಳ ಪ್ರತಿಭೆಗಳಿಗೆ ಸವಾಲನ್ನೊಡ್ಡುವ ಮುಂಡಿಗೆಗಳನ್ನು ರಚಿಸುವ ಮೂಲಕ ಪುರಾಣ ಜ್ಞಾನಕ್ಕೆ ಒಂದು ಘನತೆ ಹಾಗೂ ಜನಪ್ರಿಯತೆಯನ್ನು ತಂದುಕೊಟ್ಟ ಹಿರಿಮೆ ಕನಕ–ಪುರಂದರರಿಗೆ ಸಲ್ಲುತ್ತದೆ. ಈ ನೆಲೆಗೆ ಹೊಂದುವ ಕನಕರ ಕೃತಿಗಳನ್ನು ರಾಮಾಯಣ, ಮಹಾಭಾರತ, ಭಾಗವತ, ವಿಷ್ಣುಪುರಾಣ, ಹರಿವಂಶ, ಗರ್ಗಸಂಹಿತೆಗಳೊಂದಿಗೆ ತೌಲನಿಕ ಅಧ್ಯಯನ, ಭಾರತೀಯ ಇತಿಹಾಸ ಮತ್ತು ಸಾಮಾಜಿಕ ಮನಃಶಾಸ್ತ್ರ (Socio-Psychology)ಗಳ ಹಿನ್ನೆಲೆಯಲ್ಲಿ ವಿವೇಚಿಸಬಹುದು.

2. **ಭಾವನಾತ್ಮಕ ನೆಲೆ** : ಭಕ್ತಿ ಎಂಬುದು ನೇರವಲ್ಲ, ಸರಳವಲ್ಲ, ಪೂರ್ವ ನಿರ್ಧಾರಿತವಲ್ಲ; ಅದು ಪ್ರತಿಯೊಬ್ಬ ಸಾಧಕನ ನೆಲೆಯಲ್ಲಿ ನಿರಂತರ ಹುಡುಕಾಟವೇ ಆಗಿರುತ್ತದೆ. ಸರ್ವ ಸಮರ್ಪಣೆಯಂತೂ ಒಂದು ಆದರ್ಶ ಮಾತ್ರ. ಭಕ್ತಿಯು (ಅನನ್ಯ ಶ್ರದ್ಧೆ–ಸಂದೇಹ, ಪ್ರೀತಿ–ನಸುಕೋಪ, ತಿಳಿವಳಿಕೆ–ಮರೆಯುವಿಕೆ, ನಾಮಸ್ಮರಣೆ–ವಿಸ್ಮರಣೆ, ಸ್ತುತಿ–ನಿಂದಾಸ್ತುತಿ, ಶರಣಾಗತಿ–ಆತ್ಮಪ್ರತ್ಯಯ, ತೀರ್ಥಕ್ಷೇತ್ರ ಯಾತ್ರೆಯ ಧನ್ಯತೆ–ವೈಫಲ್ಯ; ಶಾಸ್ತ್ರ, ಪುರಾಣ ಜ್ಞಾನದ ಪ್ರಶಂಸೆ–ವಿಡಂಬನೆ; ಇತ್ಯಾದಿ) ದ್ವಂದ್ವಗಳ ಮಧ್ಯೆ ತುಯ್ದಾಡುತ್ತದೆ. ಆದ್ದರಿಂದಲೇ ಅದು ಸಂಕೀರ್ಣ ಭಾವವಾಗಿದೆ. ಬಹುಮುಖಿಯಾಗಿದೆ. ಕನಕರು ಈ ಎಲ್ಲ ನೆಲೆಗಳಲ್ಲಿ ರಚಿಸಿರುವ ಕೀರ್ತನೆಗಳನ್ನು ವ್ಯವಸ್ಥಿತ ವರ್ಗೀಕರಣ ಮಾಡಿ, ಸಮಗ್ರ ಅಧ್ಯಯನಕ್ಕೆ ಒಳಪಡಿಸುವ ಕಾರ್ಯ ಇದುವರೆಗೂ ಆಗಿಲ್ಲ. ಈ ನೆಲೆಗೆ ಹೊಂದುವ ಕೃತಿಗಳನ್ನು ಭಕ್ತಿಪಂಥದ ಇತರ ಸಂತರ ರಚನೆಗಳೊಂದಿಗೆ ತೌಲನಿಕ ಅಧ್ಯಯನಕ್ಕೊಳಪಡಿಸಬೇಕು.

3. **ವೈಚಾರಿಕ ನೆಲೆ**: ಭಕ್ತಿ ಮೂಢಭಕ್ತಿ ಆಗಬಾರದು, ಸುಧಾರಣೆ ಸ್ವೇಚ್ಛಾಚಾರವಾಗಬಾರದು ಎಂದಾದರೆ ವೈಚಾರಿಕವಾಗಿರಲೇಬೇಕು. ಕನಕರು ಕುಲದ ಬಡಿದಾಟಗಳನ್ನು ತಪ್ಪಿಸಲು ಆತ್ಮ ಯಾವ ಕುಲ? ಜೀವ ಯಾವ ಕುಲ? ತತ್ವೇಂದ್ರಿಯಗಳ ಕುಲ ಪೇಳಿರಯ್ಯ ಎಂಬ ಬಹಿರಂಗ ಸವಾಲೆಸೆದದ್ದು ದೇಹ–ಜೀವ–ಪರಮಾತ್ಮರ ಸಂಬಂಧಗಳನ್ನು ಕುರಿತ ಜಿಜ್ಞಾಸೆಯ ರಾಜಮಾರ್ಗದ ಮೂಲಕ. ಕೆಲವು ಕೀರ್ತನೆಗಳಲ್ಲಿ ಅವರು ಜನ್ಮಾಂತರವನ್ನು ಪ್ರತಿಪಾದಿಸುತ್ತಾರೆ. ಕನಕರು ದೇಹದ ಅನಿತ್ಯತೆ, ಪ್ರಾಚೀನ ಕರ್ಮಫಲ ಭೋಗದ ಅನಿವಾರ್ಯತೆಗಳನ್ನು ತಿಳಿಸಲು ರಚಿಸಿರುವ ಹತ್ತಾರು ಕೀರ್ತನೆಗಳನ್ನು ಇಂದಿನ ವೈಚಾರಿಕ ಮನಸ್ಸುಗಳು ಒಪ್ಪುತ್ತವೆಯೆ? ಎಂಬ ಮುಕ್ತ ಸಂವಾದ ನಡೆಯಬೇಕಾಗಿದೆ. ಈ ನೆಲೆಗೆ ಹೊಂದುವ ಅವರ ಕೃತಿಗಳನ್ನು ತತ್ವಶಾಸ್ತ್ರದ (Philosophy) ಹಿನ್ನೆಲೆಯಲ್ಲಿ ವಿವೇಚಿಸಬಹುದು. ಹಾಗೆಯೇ ಕೌಟುಂಬಿಕ ಆಪ್ತಸಲಹೆ ಮತ್ತು ಖಿನ್ನತೆಗೆ ಆಪ್ತಸಲಹೆ ನೀಡುವ ಮನೋವೈದ್ಯ ವಿಧಾನಗಳ ಜೊತೆಗಿಟ್ಟು ವಿವೇಚಿಸಬಹುದು.

4. **ಆಚರಣಾತ್ಮಕ ನೆಲೆ** : ಕನಕರು ತಮ್ಮ ಕೆಲವು ರಚನೆಗಳಲ್ಲಿ ಸದಾಚಾರ, ಹರಿನಾಮಸ್ಮರಣೆ, ತೀರ್ಥಕ್ಷೇತ್ರಯಾತ್ರೆ, ಧ್ಯಾನ, ಯೋಗ, ಉಪಾಸನೆಗಳ ಅಗತ್ಯವನ್ನು ಒತ್ತಿ ಹೇಳಿದ್ದಾರೆ. ಈ ನೆಲೆಗೆ ಹೊಂದುವ ಕೃತಿಗಳನ್ನು ಹರಿದಾಸ ಸಂಸ್ಕೃತಿ ಮತ್ತು ಆಧ್ಯಾತ್ಮ ಶಾಸ್ತ್ರಗಳ ಹಿನ್ನೆಲೆಯಲ್ಲಿ ವಿವೇಚಿಸಬಹುದು. ಆಧುನಿಕ ಜೀವನದಲ್ಲಿ ಇವುಗಳನ್ನು ನಿರಾಕರಿಸುವವರ ಸಂಖ್ಯೆಯಷ್ಟೇ, ಒಪ್ಪಿ ಅನುಸರಿಸಿ ಆ ಮೂಲಕ ಧನ್ಯತೆಯನ್ನು ಅನುಭವಿಸುವವರ ಸಂಖ್ಯೆಯೂ ಇರುವಾಗ ಆಚರಣಾತ್ಮಕ ನೆಲೆಯ ಕೀರ್ತನೆಗಳ ಪ್ರಸ್ತುತತೆಯನ್ನು ಧನಾತ್ಮಕ ಆಲೋಚನೆಯ (positive thinking) ಮೂಲಕ ಪುನರ್ ವ್ಯಾಖ್ಯಾನಿಸುವ ಅಗತ್ಯವಿದೆ.

5. **ಅನ್ವಯಿಕ ನೆಲೆ**: ಸದ್ವರ್ತನೆ–ದುರ್ವತನೆಗಳ ವಿಂಗಡಣೆಯ ಖಚಿತ ವಿವೇಕವೇ ವೈಚಾರಿಕತೆಯ ಅಡಿಗಲ್ಲು. ಕನಕರ ಮೌಲ್ಯ ಪ್ರತಿಪಾದಕ ಕೀರ್ತನೆಗಳು; (ಭಕ್ತ ಜೀವನದ ಹಿನ್ನೆಲೆಯಲ್ಲಿ ದುರ್ವರ್ತನೆಯ ವಿಡಂಬನೆ, ಖಂಡನೆ; ಸದ್ವರ್ತನೆಯ ಪ್ರತಿಪಾದನೆ, ನೀತಿ–ಪ್ರೀತಿ, ಮಾನವೀಯ ಮೌಲ್ಯಗಳ) ಉಪದೇಶ ರೂಪದಲ್ಲಿವೆ. ಕನಕರ ಇಂತಹ ರಚನೆಗಳನ್ನು ಮಧ್ಯಕಾಲೀನ ಜೀವನ ಸಂದರ್ಭಗಳು, ಪ್ರಾಚೀನ ದಂಡಶಾಸ್ತ್ರ, ನೀತಿಶಾಸ್ತ್ರ ಮತ್ತು ಸ್ಮೃತಿಗಳೊಂದಿಗೆ ತೌಲನಿಕವಾಗಿ ಚರ್ಚಿಸುವುದು ಉಪಯುಕ್ತ. ನಮ್ಮ ಸಮಕಾಲೀನ ಬದುಕಿಗೆ ಕನಕರ ಮೌಲ್ಯ ಪ್ರತಿಪಾದಕ ಕೀರ್ತನೆಗಳು ಏಕೆ ಪ್ರಸ್ತುತ? ಎಂಬ ಪ್ರಶ್ನೆಗೆ ಉತ್ತರವನ್ನು ಶೋಧಿಸಲು, ಆ ಕೀರ್ತನೆಗಳನ್ನು ಮಾನವ ವರ್ತನಾಶಾಸ್ತ್ರ (Human Behaviorology), ಸಾಮಾಜಿಕ ನಿಯಂತ್ರಣ (Social controle), ವ್ಯಕ್ತಿತ್ವ ವಿಕಸನ ಕೌಶಲ್ಯ (Personality Development Techniques), ವ್ಯವಸ್ಥಾಪನಾಶಾಸ್ತ್ರ (Management Science) ಆಧುನಿಕ ಕಾನೂನು, ಆಧುನಿಕ ದಂಡಶಾಸ್ತ್ರ ಮೊದಲಾದ ಹತ್ತಾರು ಮಾನವಿಕ ಶಾಸ್ತ್ರಗಳ ಬಹುಮುಖೀ ಅಧ್ಯಯನಕ್ಕೆ ಒಳಪಡಿಸಬಹುದಾಗಿದೆ.

**೬. ಅಭಿವ್ಯಕ್ತಿಯ ನೆಲೆ :**

ಅ. **ಭಾಷಿಕ ಅಭಿವ್ಯಕ್ತಿ ವಿಶೇಷತೆ** : ಭಾಷೆ ಸಮಾಜ ರೂಪಿಸಿಕೊಟ್ಟದ್ದು. ಆದ್ದರಿಂದ ಸಾಮಾಜಿಕ ಉಪಭಾಷೆಯ ಮತ್ತು ಪ್ರಾಂತೀಯ ಉಪಭಾಷೆಗಳ ಹಿನ್ನೆಲೆಯ ವಿಶಿಷ್ಟ ಪ್ರಯೋಗಗಳ ಈ ನೆಲೆಗೆ ಹೊಂದುವ ಕನಕರ ಕೃತಿಗಳನ್ನು ಸಾಮಾಜಿಕ ಭಾಷಾ ವಿಜ್ಞಾನದ (Socio-linguistic) ಹಿನ್ನೆಲೆಯಲ್ಲಿ ವಿವೇಚಿಸಬೇಕು.

ಆ. **ಭಾವಾಭಿವ್ಯಕ್ತಿಯ ತಂತ್ರಗಳು** : ಕನಕರ ಕೃತಿಗಳ ಉದ್ದಗಲಕ್ಕೂ ಭಕ್ತಿ ಇದೆ. ಅದು ಭಾಷೆಯ ಮೂಲಕ ಹೊರಹೊಮ್ಮಿದೆ. ಈ ಭಕ್ತಿ ಕನಕದಾಸರಲ್ಲಿ ಹೆಚ್ಚು ಸಶಕ್ತ ಅಭಿವ್ಯಕ್ತಿಯೂ ಆಗಿದೆ. ಭಾಷೆಯ ಭಾವದ (ಮನಃಸ್ಥಿತಿಯ) ಅಭಿವ್ಯಕ್ತಿ. ಆದ್ದರಿಂದ ಈ ನೆಲೆಗೆ ಹೊಂದುವ ಕೃತಿಗಳನ್ನು ಮನೋ ಭಾಷಾಶಾಸ್ತ್ರದ (Psycho-linguistics) ಹಿನ್ನೆಲೆಯಲ್ಲಿ ವಿವೇಚಿಸಬೇಕು.

ಕನಕರ ಕಾವ್ಯ ತಂತ್ರಗಳ ನೂತನ ಪ್ರಯೋಗಗಳನ್ನು ಹೇಳಲು ಕಾವ್ಯಮೀಮಾಂಸೆ ಮತ್ತು ಅದು ಸಾಲದೆನಿಸಿದರೆ ಆಧುನಿಕ ಕಾವ್ಯ ವಿಮರ್ಶೆಯ ಪರಿಭಾಷೆಗಳನ್ನು ಬಳಸಬಹುದು. ಕನಕನನ್ನು ಕೆಣಕಬೇಡ, ಕೆಣಕಿ ತಿಣುಕಬೇಡ ಎಂಬ ವ್ಯಾಸರಾಯರ ಉದ್ಗಾರದಂತೆ, ಸವಾಲಿನ (challenging) ಕವಿಯಾದ ಇವರ ಭಕ್ತಿಕಾವ್ಯದ ಎಲ್ಲ ವೈಶಿಷ್ಟ್ಯಗಳನ್ನು ಗ್ರಹಿಸಲು, ಆಸ್ವಾದಿಸಲು,

ಹೊಸ ಪರಿಭಾಷೆಗಳ ಅಗತ್ಯವಿದೆ. ಅಂತಹ ಕಡೆಗಳಲ್ಲಿ ಹೊಸ ಪರಿಭಾಷೆಗಳನ್ನು ರೂಪಿಸಿ, ನೂತನ ಪಾರಿಭಾಷಿಕ ಪದಗಳನ್ನು ಟಂಕಿಸಿ, ಅನ್ವಯಿಸಿ, ಪರಿಚಯಿಸುವ ಕಮ್ಮಟ ವಿಮರ್ಶೆಯ (Workshop Criticism)ನ ಹೊಣೆಗಾರಿಕೆಯನ್ನು ನಿಭಾಯಿಸಬೇಕಾಗಿದೆ.

7. **ಪುನರ್ ವ್ಯಾಖ್ಯಾನದ ನೆಲೆ** : ಕನಕರ ಕೀರ್ತನೆಗಳಿಗೆ ನಮ್ಮ ಪ್ರತಿಕ್ರಿಯೆ ಸಹಜವಾಗಿ ಹಿಂದಿನ ತಲೆಮಾರುಗಳ ಪ್ರತಿಕ್ರಿಯೆಗಿಂತ ಭಿನ್ನವಾಗಿರುತ್ತದೆ. ಆಧುನಿಕ ಅಧ್ಯಯನ ವಿಧಾನಗಳು ವಿಕಾಸಗೊಂಡಿರುವ ಇಂದಿನ ದಿನಮಾನಗಳಲ್ಲಿ; ಮಾಹಿತಿ ತಂತ್ರಜ್ಞಾನದ ಈ ದಶಕದಲ್ಲಿ; ಸಾಕಷ್ಟು ಗ್ರಂಥಗಳು, ಪ್ರಕಟವಾಗಿರುವ ಹಿನ್ನೆಲೆಯಲ್ಲಿ, ಹಿರಿಯ ತಲೆಮಾರಿನ ವಿದ್ವಾಂಸರ ಬರಹಗಳನ್ನು ಆಧರಿಸಿ, ನೂತನ ಜ್ಞಾನಶಾಖೆಗಳ ಹಿನ್ನೆಲೆಯಲ್ಲಿ ಹೊಸ ರೀತಿಯಲ್ಲಿ ಅಧ್ಯಯನ ಮಾಡಲು ಅವಕಾಶಗಳಿವೆ. ಇವುಗಳನ್ನು ಉಪಯೋಗಿಸಿಕೊಂಡು ಕನಕರ ಭಾಷಿಕ ರಚನೆಗಳ ವೈಶಿಷ್ಟ್ಯ ಹಾಗೂ ಉಪಯುಕ್ತತೆಗಳನ್ನು ಗುರುತಿಸುವ ಅಗತ್ಯವಿದೆ. ಕೆಲವು ನಿದರ್ಶನಗಳು ಇಲ್ಲಿವೆ:

1. **ದೂರು ಬಂದಿದೆ ಪಾಂಡವರಿಗೆ** – ಈ ಕೀರ್ತನೆಯನ್ನು ಇದುವರೆಗೆ ಮಹಾಭಾರತದ ಎಲ್ಲ ಘಟನೆಗಳಿಗೆ ಜಗನ್ನಾಟಕ ಸೂತ್ರಧಾರನಾದ ಶ್ರೀಕೃಷ್ಣನೇ ಕಾರಣ ಎಂಬ ದೃಷ್ಟಿಯಿಂದ ನೋಡಲಾಗಿದೆ. ಆದರೆ ವ್ಯಕ್ತಿಗಳ ಚರ್ಯೆಗಳನ್ನು ಸರಿ ಅಥವಾ ತಪ್ಪು ಎಂದು ನಿರ್ಧರಿಸುವುದು ಸುಲಭವಲ್ಲ ಅದು ಬಹು ಸಂಕೀರ್ಣ ಸವಾಲು. ತಪ್ಪಿತಸ್ಥರಂತೆ ಕಾಣುವವರು ಎಷ್ಟೋ ಘಟನೆಗಳಲ್ಲಿ ನಿಜವಾದ ತಪ್ಪಿತಸ್ಥರಾಗಿರುವುದಿಲ್ಲ ಎಂಬ ವೈಚಾರಿಕ ನೆಲೆಯಲ್ಲೂ ಈ ಕೀರ್ತನೆಯನ್ನು ವಿಶ್ಲೇಷಿಸಬಹುದಾಗಿದೆ. ಹೀಗಾಗಿ ಇದನ್ನು ವ್ಯಕ್ತಿಯ ವರ್ತನೆಗಳ ಮೌಲ್ಯಮಾಪನದ ಹೊಣೆಗಾರಿಕೆಯನ್ನು ಪ್ರತಿಪಾದಿಸುವ ನಿಟ್ಟಿನಿಂದ ನೋಡಿದರೆ ಹೆಚ್ಚು ಜೀವನ ಮುಖಿಯಾದ ಸಂಗತಿಗಳು ಅನಾವರಣಗೊಳ್ಳಲಿವೆ.

2. **ಮಗುವಿನ ಮರುಳಿದು ಬಿಡದಲ್ಲ** – ವಾಸ್ತವವಾಗಿ ವಿಷ್ಣುವಿನ ದಶಾವತಾರಗಳನ್ನು ಹುಚ್ಚು ಮಗುವಿಗೆ ಹೋಲಿಸಿದಂತೆ ಕಂಡು ಬರುವ ನಿಂದಾಸ್ತುತಿಯಾಗಿದೆ. ಆದರೆ ಈ ಕೀರ್ತನೆಯನ್ನು ಅಸಹಜ ಮಕ್ಕಳ ವರ್ತನೆಗಳ ಪಟ್ಟಿ ಎಂಬ ದೃಷ್ಟಿಯಿಂದ ನೋಡಬಹುದು. ನೀರನ್ನು ಕಂಡರೆ ಮುಳುಗುವುದು, ಜನರಿಗೆ ಮೋರೆ ತೋರಿಸದೆ ಮುಖ ಮರೆಸಿಕೊಳ್ಳುವುದು, ನೆಲ, ಗೋಡೆ, ಕಲ್ಲುಗಳನ್ನು ಕಚ್ಚುವುದು, ವಿನಾಕಾರಣ ದೊಡ್ಡ ಧ್ವನಿಯಲ್ಲಿ ಕಿರುಚುವುದು, ಕೈ ಅಥವಾ ಪಾದಗಳಿಂದ ನೆಲವನ್ನು ಅಳೆಯುತ್ತ ಕೂಡುವುದು, ಆಯುಧಗಳಿಂದ ದೊಡ್ಡವರನ್ನು ಹೊಡೆಯುವುದು, ಪ್ರಾಣಿಗಳೊಂದಿಗೆ ಹೆಚ್ಚು ಸಮಯ ಕಳೆಯುವುದು, ಮಹಿಳೆಯರೊಂದಿಗೆ ಅಸಭ್ಯವಾಗಿ ವರ್ತಿಸುವುದು, ಉಟ್ಟ ಬಟ್ಟೆಯನ್ನು ಬಿಚ್ಚಿಕೊಳ್ಳುವುದು, ಕಂಡ ಕಂಡ ವಾಹನಗಳನ್ನು ಹತ್ತುವುದು, ಈ ರೀತಿಯ ವರ್ತನೆಗಳು ಕಂಡು ಬಂದರೆ ಅಂತಹ ಮಕ್ಕಳನ್ನು ಭಾಷಾ ನಿಪುಣರಾದ ಧಾರ್ಮಿಕ ಪಂಡಿತರ ಬಳಿ ಕರೆದೊಯ್ಯದೆ, ಮನೋವೈದ್ಯಶಾಸ್ತ್ರ ಪಂಡಿತರನ್ನು ಸಂಪರ್ಕಿಸಬೇಕು. ಮಗುವಿನ ಮರುಳನ್ನು ಮನಃಶಾಸ್ತ್ರ ಪಂಡಿತರು ಬಿಡಿಸಬೇಕು. ಆದ್ದರಿಂದ ಈ ಕೀರ್ತನೆಯನ್ನು ಮನಃಶಾಸ್ತ್ರದ ಹಿನ್ನಲೆಯಲ್ಲಿ ವಿಶ್ಲೇಷಿಸಬೇಕು.

3. **ಬಲ್ಲೆ ಬಲ್ಲೆ ನಿನ್ನ ಬಹಳ ಪರಾಕ್ರಮ** – ಈ ಕೀರ್ತನೆಯು ಶನಿಸ್ತುತಿ ರೂಪದಲ್ಲಿದೆ. ಆದರೆ ನಾವು ಈ ಕೀರ್ತನೆಯನ್ನು ಶನಿಕಾಟ ಎಂದರೇನು? ಎಂಬ ಪ್ರಶ್ನೆಗೆ ಉತ್ತರ ರೂಪವಾಗಿ, ಟಿ.ವಿ.ಯ ವಿವಿಧ ಚಾನಲ್‌ಗಳಲ್ಲಿ ಬೆಳಗ್ಗೆ 6 ರಿಂದ 9, 10, 11ರವರೆಗೆ ಬರುವ ಜ್ಯೋತಿಷಿಗಳ ವಿವಿಧ ವಿಚಿತ್ರ ವಿಶ್ಲೇಷಣೆಯ ದೃಷ್ಟಿಯಿಂದ ನೋಡಲು ಸಾಧ್ಯವಿಲ್ಲ, ಪ್ರಯೋಜನವೂ ಇಲ್ಲ. ಬದಲಾಗಿ ಮನುಷ್ಯ ಜೀವನದಲ್ಲಿ ಎಷ್ಟೆಲ್ಲಾ ಕಷ್ಟಗಳು (ಪ್ರತಿಕೂಲ ಪರಿಸ್ಥಿತಿಗಳು) ಬರಲು ಸಾಧ್ಯ, ಎಂಬ ಮುನ್ನೆಚ್ಚರಿಕೆ ಮತ್ತು ಅವುಗಳನ್ನು ಎದುರಿಸಲು ಬೇಕಾದ ಆಂತರಿಕ ಸ್ಥೈರ್ಯವನ್ನು ಹರಿಭಕ್ತಿಯ ಮೂಲಕ ತುಂಬುವ ಕೃತಿಯನ್ನಾಗಿ ನೋಡಬೇಕು.

4. **ನರಕ ವರ್ಣನೆ** ಇರುವ ಕೀರ್ತನೆಗಳನ್ನು ಅಸಮರ್ಪಕ ಅಥವಾ ಅಪಾಯಕಾರಿ ಮಾನವ ವರ್ತನೆಗಳ ಸಮೀಕ್ಷೆ ಎಂದು ನಿರ್ಧರಿಸಿ ಅಂತಹ ಕೀರ್ತನೆಗಳನ್ನು ವರ್ತನಾಶಾಸ್ತ್ರ ಅಥವಾ ದಂಡ ಸಂಹಿತೆಯ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸಬಹುದು.

5. **ಕಲಿಯುಗದ ಮಹಿಮೆಯನು ಕಂಡಷ್ಟು ಪೇಳುವೆನು** ಮತ್ತು ಕಲಿ ಹೆಚ್ಚಿ ಬಂದಿತೆಲ್ಲ, ರಂಗಯ್ಯ ಇವುಗಳನ್ನು ಕಲಿಯುಗದ ಲಕ್ಷಣಗಳು, ಕಾಲಜ್ಞಾನ ಅಥವಾ ಕನಕರ ಸಮಕಾಲೀನ ಸಮಾಜದ ಅಧಃಪತನಗಳ ನಿರೂಪಣೆಯನ್ನಾಗಿ ಮಾತ್ರ ನೋಡದೆ, ಎಲ್ಲ ಕಾಲದ ಮನುಷ್ಯರ ಅನಪೇಕ್ಷಿತ ವರ್ತನೆಗಳು ಎಂಬ ಹಿನ್ನೆಲೆಯಲ್ಲಿ ಪುನರ್ ವ್ಯಾಖ್ಯಾನಿಸಬಹುದಾಗಿದೆ.

6. **ಗೋವಿಂದ ಗೋವಿಂದ ಎನ್ನಲರಿಯದೆ** ಎಂಬ ಕೀರ್ತನೆಯನ್ನು ಗ್ರಾಮದೇವತೆಗಳ ನಿರಾಕರಣೆ ಮತ್ತು ವಿಷ್ಣುಭಕ್ತಿಯ ಪ್ರಸಾರ ಎಂಬ ಹಳೆಯ ಧಾಟಿಯಲ್ಲಿ ಓದಿಕೊಳ್ಳದೆ, ದೇವರ ಹೆಸರಲ್ಲಿ ವೇಶ್ಯಾಪದ್ಧತಿ, ದೇವರ ಹೆಸರಲ್ಲಿ ಪ್ರಾಣಿಬಲಿ–ನರಬಲಿ ಇತ್ಯಾದಿ ವಿಕೃತ ಆಚರಣೆಗಳನ್ನು ನಿಷೇಧಿಸುವ ಕನಕರ ವೈಚಾರಿಕ ಪ್ರಜ್ಞೆ ಎಂಬ ನಿಟ್ಟಿನಲ್ಲಿ ಮತ್ತೊಮ್ಮೆ ಓದುವ ಅಗತ್ಯವಿದೆ.

ಕನಕರ ಕೃತಿಗಳು, ಅಧ್ಯಯನಗಳು ಮತ್ತು ಸಂಶೋಧನೆಗಳು ಜನರನ್ನು ತಲುಪಿದಾಗ ಮಾತ್ರ ಸಾರ್ಥಕವಾಗುತ್ತವೆ. ಆದ್ದರಿಂದ ಕನಕ ಚಿಂತನೆಗಳ ವ್ಯಾಪಕ ಪ್ರಸಾರಕ್ಕಾಗಿ ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ ಬಹುಮುಖ ಕಾರ್ಯ ಯೋಜನೆಗಳನ್ನು ಹಮ್ಮಿಕೊಳ್ಳಬಹುದಾಗಿದೆ.

1. **ಕೇವಲ ಹರಿಭಕ್ತಿ ಪ್ರಸಾರ ಸಂಸ್ಥೆಯಾದ ಟಿ.ಟಿ.ಡಿ.ಯ ದಾಸಸಾಹಿತ್ಯ ಪ್ರಾಜೆಕ್ಟನ್ನು ಜೀವನ ಮೌಲ್ಯ ಪ್ರಸಾರಕ್ಕೆ ಈ ಕೆಳಕಂಡ ವಿಧಾನಗಳಲ್ಲಿ ಬಳಸಿಕೊಳ್ಳಬಹುದು.**

- ಜಾತ್ಯಾತೀತ ಶ್ರೀನಿವಾಸ ಭಜನಾ ಮಂಡಳಿಗಳನ್ನು ರಚಿಸಿ ನೋಂದಣಿ, ಭಜನಾ ತಂಡ ಹಾಡುಗಾರರು, ಕುಣಿತ, ಕೋಲಾಟ, ಡೊಳ್ಳುಕುಣಿತ, ಸವಾಲ್–ಜವಾಬ್, ರಸಪ್ರಶ್ನೆ, ಕೀರ್ತನೆಗಳ ಲಿಪ್ಯಂತರ, ಅರ್ಥದ ಭಾಷಾಂತರ, ತಿರುಪತಿ ಯಾತ್ರೆ ಪ್ರಯಾಣ ವೆಚ್ಚ, ಉಚಿತ ವಸತಿ, ಉಚಿತ ಶೀಘ್ರ ದರ್ಶನ, ಅದರಂತೆಯೇ ಜಾತ್ಯಾತೀತ ಕನಕ–ಶ್ರೀನಿವಾಸ ಭಜನಾ ಮಂಡಳಿಗಳ ರಚನೆ, ಭಕ್ತಿ ಪ್ರಧಾನ ಕೀರ್ತನೆಗಳ ಜೊತೆಗೆ ಮೌಲ್ಯ ಪ್ರಧಾನ ಕೀರ್ತನೆಗಳನ್ನೂ

ಹಾಡಿಸಬೇಕು. ಪ್ರತಿ ತಾಲ್ಲೂಕಿಗೆ ಸಹಸ್ರ ಕಂಠಗಾಯನ, ಪ್ರತಿ ಜಿಲ್ಲೆಗೆ ಲಕ್ಷ ಕಂಠಗಾಯನ, ಯೋಜನೆಯ ಮೂಲಕ ಬೃಹತ್ ಪ್ರಸಾರ ಆಂದೋಲನವನ್ನೇ ಕೈಗೊಳ್ಳಬೇಕು.

- ಗ್ರಂಥ ಪ್ರಕಟಣೆ ಹಾಗೂ ಉಪನ್ಯಾಸ ಮಾಲಿಕೆಗಳನ್ನು, ಹರಿಭಕ್ತಿ ಉತ್ಸವಗಳ ರೂಪದಲ್ಲಿ ಪ್ರಾಯೋಜಿಸುತ್ತದೆ. ಅಗತ್ಯವಿದ್ದಲ್ಲಿ ಟಿ.ಟಿ.ಡಿ.ಯ ದಾಸಸಾಹಿತ್ಯ ಪ್ರಾಜೆಕ್ಟ್ ಜೊತೆಗೆ ಸಹಕಾರ ದೊರಕಿಸಿಕೊಂಡರೆ ಅನುದಾನದ ಹೊಳೆಯೇ ಹರಿದು ಬರಲು ಸಾಧ್ಯವಿದೆ.

2. **ಸರ್ಕಾರಿ – ಅರೆಸರ್ಕಾರಿ ಸಂಸ್ಥೆಗಳ ಕಾರ್ಯಕ್ರಮದಲ್ಲಿ ಸಹಭಾಗಿತ್ವ:**
ಕನಕರ ಮೌಲ್ಯ ಪ್ರತಿಪಾದಕ ಕೃತಿಗಳ ಪ್ರಸಾರಕ್ಕೆ ಅವಕಾಶ ಕಲ್ಪಿಸಿಕೊಳ್ಳುವುದು ಮತ್ತು ಪ್ರಾಯೋಜಿಸುವಂತೆ ಕೇಳುವುದು.
3. **ಸಮೂಹ ಮಾಧ್ಯಮಗಳ ಬಳಕೆ**

- ಗಾಯನ, ರೂಪಕ, ನರ್ತನ, ಸಂವಾದ ಗೋಷ್ಠಿಗಳ ಪ್ರಸಾರಕ್ಕಾಗಿ ಆಕಾಶವಾಣಿ ಹಾಗೂ ಸುದ್ದಿ ಮಾಧ್ಯಮಗಳ ಸಹಕಾರ ಪಡೆಯುವುದು.
- ಸ್ವಂತ ಪತ್ರಿಕೆ ನಡೆಸುವ ಜೊತೆಗೆ, ವಿವಿಧ ದಿನಪತ್ರಿಕೆ, ವಾರಪತ್ರಿಕೆ, ಮಾಸ ಪತ್ರಿಕೆಗಳಲ್ಲಿ ಸ್ಥಿರ ಅಂಕಣಗಳನ್ನು ಮೀಸಲಿಡುವಂತೆ ವ್ಯವಸ್ಥೆ ಕಲ್ಪಿಸಿಕೊಳ್ಳುವುದು.
- ಕಾಲಕಾಲಕ್ಕೆ ಇ–ಮೇಲ್ ಗ್ರೂಪ್ಸ್‌ಗೆ ಹಾಗೂ ಮೊಬೈಲ್‌ಗಳಿಗೆ ಕಾರ್ಯಕ್ರಮಗಳ ಹಾಗೂ ಯೋಜನೆಗಳ ಮೆಸೇಜ್ ಅಲರ್ಟ್ಸ್ ಕಳಿಸುವುದು ಇತ್ಯಾದಿ

## ಕನಕ : ಭಕ್ತಿಯ ವಿಭಿನ್ನ ನೆಲೆಗಳು – ಚರ್ಚೆ–2

**ಚರ್ಚೆ : ರವಿಕುಮಾರ್ ಬಾಗಿ**

ವಾಸ್ತವತೆಯನ್ನು ಇಟ್ಟುಕೊಂಡೆ ಕನಕರನ್ನ ನೋಡ್ಬೇಕಾಗುತ್ತದೆ ಮತ್ತು ಭಕ್ತಿಯ ನೆಲೆಗಳು ಅಂತ ನಾವು ಮಾತನಾಡ್ತಾ ಇರುವ ಸಂದರ್ಭದಲ್ಲಿ ಭಕ್ತಿ ಅನ್ನುವಂತಹದ್ದು ಇವತ್ತಿನ ಕಾಲಘಟ್ಟದಲ್ಲಿ ಅದು ನಿರೂಪಿತವಾಗುತ್ತಿರುವಂತಹ ಸ್ಥಾನ ಯಾವುದಿದೆ. ಭಕ್ತಿ ಇವತ್ತು ಒಂದು ತಾರತಮ್ಯವನ್ನು ಸೃಷ್ಟಿ ಮಾಡ್ತಿರುವಂತಹ ಕಾಲಘಟ್ಟದಲ್ಲಿದೆ. ಶೋಷಣೆಯಾಗಿಯೂ ಕೂಡ ಪರಿವರ್ತನೆ ಆಗ್ತಾ ಇದೆ. ಹಾಗಾಗಿ ನಾವು ಇಡೀ ದಾಸಸಾಹಿತ್ಯದಲ್ಲಿ ಸ್ವಲ್ಪ ಬೇರೆ ರೀತಿ ಯೋಚನೆ ಮಾಡಬಹುದಾಗಿರುವಂತಹ ಏಕೈಕ ವ್ಯಕ್ತಿ ಅಂದರೆ ಕನಕದಾಸ ಮಾತ್ರವೇ. ಇಡೀ ವಚನ ಚಳುವಳಿಯ ಮುಂದುವರಿದ ಭಾಗ ದಾಸ ಸಾಹಿತ್ಯ ಅನ್ನುತ್ತಾರೆ ಅದು ಹೇಗೋ ನನಗೆ ಗೊತ್ತಿಲ್ಲ. ಯಾಕೆಂದರೆ ವಚನ ಚಳುವಳಿಯು ಎತ್ತಿದಂತಹ ಅಸ್ಪೃಶ್ಯತೆ ಪ್ರಶ್ನೆ ಆಗಿರಬಹುದು. ಜಾತೀಯತೆ ಪ್ರಶ್ನೆ ಆಗಿರಬಹುದು ಮತ್ತೆ ಈ ಕುಲದ ಪ್ರಶ್ನೆ ಆಗಿರಬಹುದು. ಇವೆಲ್ಲವನ್ನು ಅಷ್ಟು ಬಲವಾಗಿ ದಾಸ ಸಾಹಿತ್ಯ ಎತ್ತಿರುವುದು ಎಲ್ಲಿಯೂ ಕೂಡ ಕಂಡುಬರುವುದಿಲ್ಲ. ಅದರ ಜೊತೆಗೆ ಇನ್ನೊಂದು ಯಾವ ವಚನ ಚಳುವಳಿ ದೇವಾಲಯವನ್ನು ನಿರಾಕರಣೆ ಮಾಡಿತೊ ಅದನ್ನು ಮತ್ತೆ ಮರು ರೂಪಿಸುವಂತಹ ನಿರ್ಮಾಣವನ್ನು ಕೂಡ ದಾಸಸಾಹಿತ್ಯ ಈ ಸಂದರ್ಭದಲ್ಲಿ ಮಾಡುತ್ತದೆ. ಹಾಗಾಗಿ ಯಾವುದು ಈ ವರ್ಣಾಶ್ರಮ ಧರ್ಮ ಕಲ್ಪನೆಯೋ ಅದರ ಮೇಲೇನೆ ದಾಸಸಾಹಿತ್ಯ ಅನ್ನುವಂತಹದ್ದು ರೂಪಿತವಾಗುವುದು ಕಂಡುಬರುತ್ತೆ. ಹಾಗಾಗಿ ಈ ರೀತಿ ಕನಕನನ್ನ ವೈಭವೀಕರಿಸುವ ಮೂಲಕ ನಾವೆಲ್ಲ ಆತನನ್ನು ಮತ್ತೆ ಬೇರೆ ಕಡೆಗೆ ಕಳುಹಿಸಿದ ಹಾಗೆ ಅನ್ನಿಸುತ್ತದೆ.

**ಚರ್ಚೆ : ಬಂಜಗೆರೆ**

ಈಗ ಸಾಮಾನ್ಯವಾದ ಗ್ರಹಿಕೆಯಲ್ಲಿ ಹರಿದಾಸ ಪಂಥ ಅಥವಾ ಭಕ್ತಿಪಂಥ ಅಂದ ತಕ್ಷಣವೇ ನಮಗಿರುವ ಕಲ್ಪನೆ ಏನು ಅಂದ್ರೆ ಮಾಧ್ವಮತ, ಶ್ರೀವೈಷ್ಣವ ಪಂಥ ಇತ್ಯಾದಿ ಏನೋ ಇದೆ. ಮತ್ತು ಅದು ಯಾವ ರೀತಿಯಲ್ಲಿ ಅದಕ್ಕೆ ಕನಕ ಜೋಡಿಸಲ್ಪಟ್ಟಿದ್ದಾನೆ ಅನ್ನೋದರ ಬಗ್ಗೆ ನಾವು ಹೆಚ್ಚು ಹುಡುಕಾಡಿದಂತಿಲ್ಲ. ಆತ ಮಾಧ್ವನೇ? ಶ್ರೀವೈಷ್ಣವನೇ? ಆತನ ಭಕ್ತಿ ಪಂಥದ ನೆಲೆಯೇನು? ಯಾಕೆಂದರೆ ಭಕ್ತಿ ಎನ್ನುವುದು ಒಂದು ಏಕಾಕೃತಿಯೂ ಅಲ್ಲ. ಒಂದು ಚಿಂತನಾ ಪಂಥ ಅಥವಾ ಸಂಘಟನೆ ಅಲ್ಲ. ಬಹಳ ಸಲ ನಮಗೆ ಈ constructs ಏನ್ಮಾಡಿದೆ ಅಂತ ಹೇಳಿದ್ರೆ... ಉದಾ:ನಾನು ಹೇಳೋದಾದ್ರೆ– ಇಡೀ ಶರಣ ಚಳವಳಿಯ ಒಳಗಡೆ ಅಜಗಣ್ಣ ಮತ್ತು ಮುಕ್ತಾಯಕ್ಕನದು ಏನು ಪಾತ್ರ? ಮತ್ತು ಯಾವ ತಾತ್ವಿಕ ನೆಲೆ? ಅವರು ಪ್ರತಿಪಾದಿಸುತ್ತಿರುವ ನೆಲೆಗಳು ಒಟ್ಟು ಶರಣ ಪಂಥ ಅಂತ ಹೇಳುತ್ತಲ್ಲ ಅಂಥ ಸಂಘಟನೆ ಬಸವಣ್ಣನ ನೇತೃತ್ವದಲ್ಲಿದ್ದ ಸಂಘಟನೆ, ಅದಕ್ಕೂ ಇದಕ್ಕೂ ಏನು ನೇರವಾದ ಸಂಬಂಧ ಇದೆ? ಇದನ್ನು ನಾವು ಹೇಗೆ ಗ್ರಹಿಸುತ್ತಾ ಇದೀವಿ? ಶೂನ್ಯ ಸಂಪಾದನೆಯ ಮುಖಾಂತರ ಅಥವಾ ಬೇರೆ ಯಾವುದಾದರೂ ಮುಖಾಂತರ... ಅಲ್ಲಮಪ್ರಭು ಭೇಟಿಯಾಗಿರಬಹುದು ಅಜಗಣ್ಣನನ್ನು ಅಥವಾ ಮುಕ್ತಾಯಕ್ಕನನ್ನು. ಅದರ ಹೊರತಾಗಿ ಶರಣ ಪಂಥದ ಆ ಸಂಘಟನೆಯೊಳಗೆ ಇವರ ಪಾತ್ರ ಏನು? ಹಾಗೇ ಅಲ್ಲಮಪ್ರಭುವಿನದೂ ಕೂಡ.

ಇಡೀ ಅಲ್ಲಮಪ್ರಭು ಆತನ ತಾತ್ವಿಕತೆ ಆತನ ಪ್ರತಿಪಾದನೆ ಮತ್ತು ಆತನ ಚಿಂತನೆ ಯಾವ ಸಾಂಖ್ಯವೋ? ಯಾವ ನಾಥವೋ? ಅನ್ನುವುದನ್ನ ಆ ನಂತರ ನೋಡಬಹುದು. ಶರಣ ಪಂಥವನ್ನು ನಿರ್ಮಿಸುವುದು ಎನ್ನುವ ಕ್ರಿಯೆಯಲ್ಲಿ ಆತ ನಿರ್ವಹಿಸಿದ ಪಾತ್ರ ಏನು? ನಿಜಕ್ಕೂ ಆತ ಅದರಲ್ಲಿನ ಒಬ್ಬ ಭಾಗೀದಾರನೇ? ಪಾತ್ರಧಾರಿಯೇ? ಅದೇ ರೀತಿ ಅಕ್ಕಮಹಾದೇವಿ. ಆ ರೀತಿಯ ಹಲವಾರು ಪಾತ್ರಗಳನ್ನು ಒಟ್ಟು ಶರಣ ಚಳುವಳಿಯ ಸಂರಚನೆಯೊಳಗೆ–ಸೊನ್ನಲಿಗೆ ಸಿದ್ಧರಾಮ ಕೆಲವರ ವಾದದ ಪ್ರಕಾರ

(ಶ್ರೀ ಎಲ್.ಬಸವರಾಜು ಅವರ ವಾದದ ಪ್ರಕಾರ) ಆತ 100 ವರ್ಷ ನಂತರದವನು. ಅದೇ ರೂಪದಲ್ಲೇ ನಮ್ಮ ಕನಕದಾಸರೂ ಕೂಡ ಈ ಮಾಧ್ವ ಮತ ಹಾಗೂ ವಿಶಿಷ್ಟಾದ್ವೈತದ ಹೆಣಿಗೆಯೊಳಗೆ ಸಿಲುಕಿದವರೋ ಅಥವಾ ಶುದ್ಧ ಅನುಯಾಯಿಯೋ, ದೀಕ್ಷೆ ಪಡೆಯುವುದು ಬೇರೆ. ಗೊಂದಲಗಳು ಹೇಗಿರುತ್ತದೆ ಎಂದರೆ, ನಮಗೆ ಗೊತ್ತಿಲ್ಲದಿರುವ ಆಧ್ಯಾತ್ಮಿಕ ವಲಯದ ವಹಿವಾಟಿನಲ್ಲಿ ಒಂದೊಂದು ಸಲ ಶಿಷ್ಯತ್ವವನ್ನು ಪಡೆದಿರುವಾಗಲೂ ಇತರ ಕಡೆ ಹೋದಾಗ ತಾನೂ ಕೂಡ ಹರಿದಾಸನಾದೆ ಅನ್ನುವಾಗ ತಾತಾಚಾರ್ಯನ ಬಳಿಯೋ ಅಥವಾ ವ್ಯಾಸರಾಯನ ಬಳಿಯೋ ಹೋಗಿರಬಹುದು. ಆದರೆ ಮಠದ ಅನುಯಾಯಿಯಾಗಿ ಅದರ ಒಕ್ಕಲಾಗಿ ಓಡಾಡುವುದು ಬೇರೆ. ಒಂದು ಸಾಮಾಜಿಕ ಪ್ರಕ್ರಿಯೆಯಲ್ಲಿ ಭಕ್ತನಾಗಿರುವುದು ಬೇರೆ. ಅದಕ್ಕೆ ಅದರದ್ದೇ ಆದ ಸಾಮಾಜಿಕ ಕಾರಣಗಳು ತನ್ನ ಪಾಡಿಗೆ ತಾನು ಅನುಸರಿಸುತ್ತಾನೇನೋ ಅಂತ. ಆತ ಮಾಧ್ವನೇ ಆಗಿದ್ದಲ್ಲಿ ಆ ಗುಡಿಯೊಳಗಡೆ ಯಾಕೆ ಬಿಟ್ಟುಕೊಳ್ಳುವುದಿಲ್ಲ. ಅಲ್ಲಿ ಬೇರೆ ಏನೋ ಕಾರಣವಿರಬಹುದು. ಈ ಸಂಬಂಧವಾಗಿ ಭೂಕಂಪ ಸಿದ್ಧಾಂತವನ್ನು ಜನ ಕಂಡುಹಿಡಿದಿದ್ದಾರೆ. ಸರಳವಾದ ನಿರ್ಮಾಣಗಳನ್ನು ಅಷ್ಟು ಸುಲಭವಾಗಿ ಕಟ್ಟಿದರೆ ನಮ್ಮ ಶೋಧನೆ ಮುಗಿಯುವುದಿಲ್ಲ. ನಮ್ಮ ಪ್ರೊ॥ ಶಿವರಾಮಯ್ಯನವರೇ ಈ ಲೇಖನಕ್ಕೆ ಪ್ರತಿಕ್ರಿಯೆ ನೀಡುತ್ತಾ ಬರೆದಿದ್ದರು. ಭೂಕಂಪವಾಗಿತ್ತು. ಭೂಕಂಪವಾಗಿದ್ದರಿಂದ ಕಿಂಡಿ ಏರ್ಪಟ್ಟಿತ್ತು ಎಂದು. ಭೂಕಂಪವಾದ್ರೆ ಗೋಡೆ ಬಿದ್ದು ಹೋಗುತ್ತೆ. ಕೃಷ್ಣ ಬೆನ್ನು ತಿರುಗಿ ನಿಲ್ಲುವ ಸಾಧ್ಯತೆ ಇಲ್ಲ. ಭೂಕಂಪವಾದ್ರೆ ಬಿದ್ದು ಹೋಗುತ್ತೆ ಅಷ್ಟೆ. ಇವೆಲ್ಲ ಸರಳವಾದ ತರ್ಕಗಳಿಂದಲೇ ಕೆಲವನ್ನ ಶೋಧಿಸಬೇಕು. ಗೋಡೆ ಬಿದ್ದು ಭೂಕಂಪದಿಂದ ಕಿಂಡಿ ಏರ್ಪಟ್ಟಿತು ಎಂದು ಇಟ್ಟುಕೊಂಡಾಗಲೂ ಕೃಷ್ಣ ಕಿಂಡಿಯ ದಿಕ್ಕಿಗೆ ಮುಖ ಮಾಡಿ ಅವರಿಗೆ ಬೆನ್ನು ತೋರಿಸಿ ನಿಲ್ಲುವುದು ಹೇಗೆ ಸಾಧ್ಯ. ಅದು ಭೂಕಂಪದಿಂದಾಗುವುದಲ್ಲ. ಏನೋ ಒಂದು ಸಾಮಾಜಿಕ ಸಂಘರ್ಷವೋ ಭಿನ್ನ ಭಿನ್ನ ಪಂಥಗಳ ತಿಕ್ಕಾಟವೋ ಏನೋ ಒಂದು ಇರಬೇಕು ಮತ್ತು ಕನಕ ಆ ರೀತಿಯಾದ ಒಂದು ಪ್ರಭಾವವನ್ನ ಬೀರಬೇಕಾದರೆ ನಾವೀಗ ಹೇಳುತ್ತಿರುವ ಹರಿದಾಸ ಪಂಥ ಭಕ್ತಿ ಪಂಥದ ನೆಲೆಗೂ ಭಿನ್ನವಾಗಿರುವ ಒಂದು ನೆಲೆ ಅಲ್ಲೆಲ್ಲೊ ಕ್ರಿಯಾಶೀಲವಾಗಿ ಇರಬೇಕು. ಅದು ಸರಕು ಉತ್ಪಾದಕರ, ಕುಶಲಕರ್ಮಿಗಳ ಅಥವಾ ಕಂಬಳಿ ಮಾರುವಂತಹ ಇತರೆ ವ್ಯಾಪಾರಿಗಳ ನಮಗೀಗಿನ್ನೂ ಸರಿಯಾಗಿ ಗೊತ್ತಿಲ್ಲ. ಏನೋ ಒಂದು ಕಾರಣ ಇರಬೇಕು ಎನ್ನುವಂತಹ ಶೋಧನೆಗಳನ್ನು ಯಾಕೆ ಹುಡುಕಾಡಲು ಆಗುವುದಿಲ್ಲ? ಅದು ಒಂದು ನೆಲೆ. ಈ ಕಬೀರನದೂ ಕೂಡ ಅಷ್ಟೆ. ಮಾಮೂಲಿ ಭಕ್ತಿಪಂಥದ ನಿರ್ವಚನದ ಒಳಗಡೆ ಕಬೀರನನ್ನು ಇಟ್ಟರೆ ಆತನ ಪಂಥ ಯಾವುದು? ಅವನು ಯಾವ ಮತ ಕಟ್ಟಿದ್ದಾನೆ? ಯಾರ ಶಿಷ್ಯತ್ವವನ್ನ ಸಂಪಾದಿಸಿದ್ದಾನೆ? ಅವನ ಗ್ರಂಥ ಯಾವುದು? ನೋಡಿದರೆ ಅಧ್ಯಯನ ಮಾಡುತ್ತಿದ್ದರೆ ಅವನು ನಾಥ ಪಂಥೀಯನಂತೆ ಕಾಣಿಸುತ್ತಿದ್ದಾನೆ. ರಾಮನ ಭಕ್ತಿಯಂತೆ ಕಾಣುತ್ತೆ. ಮತ್ತೆ ನೋಡಿದರೆ ಎಲ್ಲವನ್ನೂ ಹೊರತುಪಡಿಸಿದ ಬಹಳ ಮಾನವೀಯವಾದ ಯಾವುದೋ ಒಂದನ್ನು ಪ್ರತಿಪಾದಿಸುತ್ತಾ ಇದಾನೆ. ಆದ್ದರಿಂದ ವಿಭಿನ್ನ ನೆಲೆಗಳು ಎಂದರೆ, ಅದರಲ್ಲಿ ಬೇರೆ ಏನಾದರೂ ಸ್ತರಗಳು ಇರಬಹುದೇ? ದಾಸ ಪಂಥ ಎಂದು ಗುಂಡಾಗಿ ಕರೆಯಲ್ಪಡುವ ನಾವು ಕತೆಗಳಲ್ಲಿ ಕಟ್ಟಿಕೊಂಡಿರುವ ವಿಷಯಗಳಲ್ಲಿ ಕನಕ ಆ ನಂತರವೂ ಸೇರಿಸಲ್ಪಟ್ಟಿರಬಹುದಾದ ಹೆಣಿಗೆಯೂ ಆಗಿರಬಹುದೇ? ಅವನು ನಿಂತ ನೆಲೆ ಏನಾಗಿರಬಹುದು? ದೇವಸ್ಥಾನವನ್ನು ಕಟ್ಟಿಸುತ್ತಾನೆ, ಕಾಗಿನೆಲೆಯಾದಿ ಕೇಶವ, ಅದು ಬೇರೆ. ಅದು ವಿಜಯನಗರದ ಕಾಲದ ಪ್ರಕ್ರಿಯೆ. ಕೆಳಜಾತಿಗಳು ತಮ್ಮ ಅಧಿಕಾರವನ್ನು ಧಾರ್ಮಿಕ ಮತ್ತು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಸಾಧಿಸುವ ಅಂಗವಾಗಿ ನೇಕಾರರೂ ಗುಡಿ ಕಟ್ಟಿದಾರೆ ಸ್ವಂತಕ್ಕೆ. ಆ ಕಾಲದಲ್ಲಿ ಪಾಂಚಾಳರು ಗುಡಿ ಕಟ್ಟಿಸಿದ್ದಾರೆ. ಅದೇ ರೀತಿ ಕನಕನೂ ಕೂಡ ಕಟ್ಟಿಸಿದಾನೆ. ಗುಡಿಗಳನ್ನು ಕಟ್ಟಿಸುವುದು ಕೆಳಜಾತಿಗಳು ಧಾರ್ಮಿಕ ಅಧಿಕಾರವನ್ನು ಕ್ಲೈಂ ಮಾಡಿಕೊಳ್ಳುವ ಮಾರ್ಗವಾಗಿತ್ತು. ಶರಣರ ಕಾಲದಲ್ಲಿ ಬೇರೆ. ಆದ್ದರಿಂದ ಯಾವಾಗಲೂ ನಾವು ಹೋಲಿಕೆಯಲ್ಲಿ ಅದು ಸರಿ ಇತ್ತು ಇದು ತಪ್ಪಿತ್ತು ಅಂತ ಅಲ್ಲ. ಈ ಕಾಲದ ಪ್ರಕ್ರಿಯೆಯಲ್ಲಿ ಇವರು ಕ್ಲೈಂ ಮಾಡುತ್ತಿದ್ದಾರೆ ನಾವೂ ಕೂಡ ಧಾರ್ಮಿಕವಾಗಿ, ಆಧ್ಯಾತ್ಮಿಕವಾಗಿ ಶ್ರೇಷ್ಠರು. ಕನಕನೇ ಅದರ ಪ್ರತೀಕ. ಅವನು ಯತಿಯಾಗಲಿಲ್ಲ. ಸನ್ಯಾಸಿಯೂ ಅಲ್ಲ. ದಾಸ ಅವನು. ಆದರೆ ಆತನಿಗೆ ಬಂದಂತಹ ಪ್ರಭಾವ ಮತ್ತು ಆತನ ಬಗ್ಗೆ ಹುಟ್ಟಿದಂತ ಕಥೆಗಳು ಮೆಷ್ಟ್ರು ಬೆಳಗ್ಗೆ ಹೇಳುತ್ತಿದ್ದರಲ್ಲ ಜನಪ್ರಿಯಗೊಳಿಸಿದರು ಅಂತ... ನಿಜಕ್ಕೂ ಜನರೊಳಗೆ ಆತನ ಪ್ರೆಸೆನ್ಸ್ ಅಷ್ಟಿಲ್ಲದಿದ್ದರೆ, ಅದು ಕೇವಲ ಸಿನಿಮಾ ಮೂಲಕ ಮಾತ್ರ ಆಯಿತೋ. ಜನರ ನಡುವೆ ಈ ಮೊದಲೇ ಇದ್ದ ಪ್ರತೀತಿಗಳನ್ನ ಪ್ರತೀಕಗೊಳಿಸಿ ಸಿನಿಮಾ ಮಾಡಿದರೋ ಎನ್ನುವುದು ಎರಡನೆಯ ವಿಷಯ. ಆದರೆ ಬೇರೆ ದಾಸರಿಗೆ ಇಲ್ಲದಿರುವಂತಹ, ನಮ್ಮ ಆತ್ಮ ಸಖ ಆತ ಎನ್ನುವಂತ ಯಾವುದೋ ಒಂದು ಭಾವನೆ ಜನರಲ್ಲಿ ಯಾಕೆ ಇದೆ ಕನಕನ ಬಗ್ಗೆ? ಕನಕ ಎಂದರೆ ರೋಮಾಂಚನಗೊಳ್ಳುವ ಬಗೆ ಯಾಕಿದೆ? ಪುರಂದರ ದಾಸರ ಸಿನಿಮಾದಲ್ಲೂ ರಾಜ್‌ಕುಮಾರ್ ನಟಿಸಿದ್ದಾರೆ. ಆದರೆ ಕನಕನ ಸಿನಿಮಾದ ರೀತಿ ಅದು ಯಶಸ್ವಿಯಾಗಲಿಲ್ಲ. ಅಂದರೆ ಈಗಾಗಲೇ ಇರುವ mindset ತಾನೆ ಇದನ್ನ ಸ್ವೀಕರಿಸುತ್ತೆ. ಈ ಅಂಶಗಳನ್ನು ನೋಡೋದಕ್ಕೆ ಬೆಳಗ್ಗೆ ವಸು ಶುರು ಮಾಡಿದರಲ್ಲ. ಭಾರತೀಯ ಭಕ್ತಿಪಂಥದ ನೆಲೆ ಯಾವಾಗಲೂ ಕೂಡ ವಿದ್ರೋಹಾತ್ಮಕವಾದದ್ದೇ. ಭಾಗವತದಿಂದ ಶುರುವಾಗಿದ್ದುದು. ವೈದಿಕರು ಶ್ರೇಷ್ಠತೆ ಪ್ರತಿಪಾದಿಸಿದ ಕಾಲ ಘಟ್ಟದಲ್ಲೇ ಭಾಗವತದ ಉಗಮವೂ ಆಗಿದೆ. ಅದನ್ನ ಯಾವ ಯಾವ ರೀತಿ ಜೀರ್ಣ ಮಾಡಿಕೊಳ್ಳುತ್ತಿದ್ದಾರೆ? ಯಾವ ಯಾವ ರೀತಿಯ ತಿರುಚುವಿಕೆಗಳನ್ನು ತಂದಿದ್ದಾರೆ ಅದು ಬೇರೆ ವಿಷಯ. ಕನಕನನ್ನ ನಾವು ಇಟ್ಟುಕೊಂಡಲ್ಲಿ ಅದನ್ನು ನೋಡುವುದಕ್ಕೆ ಸಾಧ್ಯ ಆಗಬಹುದೇ ಅನ್ನುವುದು ಕನಕನ ಭಕ್ತಿಯ ವಿಭಿನ್ನ ನೆಲೆಗಳು. ಅವನದ್ದೇ ಆದ ಬೇರೆ ನೆಲೆಯನ್ನು ಕಬೀರನ ಹಾಗೆ,

ತುಕಾರಾಮನ ಹಾಗೆ ಅಲ್ಲಮನ ಹಾಗೆ ಕಾಣುವುದಕ್ಕೆ ಸಾಧ್ಯವೇ. ಅವನು ಅದರೊಳಗೇ ಇದ್ದಾನೆ. ಅದರ ಭಾಗವಾಗಿದ್ದಾನೆ. ಅಲ್ಲಮ ಶರಣ ಚಳುವಳಿಯ ಭಾಗವಾಗಿ ಇದ್ದಾನೆ. ಆದರೆ ಅವನು ಅದರೊಳಗಡೆ ಪೂರ್ಣ ಭಾಗವೇ ಅಲ್ಲ. ಆ ರೀತಿ ಇದ್ದಾನೆ ಅಲ್ಲಮ. ಅವನ ನಿಲುವುಗಳೇ ಬೇರೆ. ಈ ರೀತಿ ಏನಾದರೂ ಅಧ್ಯಯನ ಮಾಡುವುದಕ್ಕೆ ಸಾಧ್ಯವೇ ಅನ್ನುವುದು ನನ್ನ ಪ್ರಶ್ನೆ ನಿಮ್ಮ ಮುಂದೆ.

**ಚರ್ಚೆ : ಸುಬ್ರಹ್ಮಣ್ಯ ಸ್ವಾಮಿ**

ಬೆಳಗ್ಗೆ ಕೆವಿಎನ್ ಸರ್ ಹೇಳುತ್ತಾ ಈಗ popular icon ಆಗಿ ನಾವು ಬೆಳಸ್ತಾ ಬಂದಿದೀವಿ ಅಥವಾ ಸಮಾಜದಲ್ಲಿ ಆ ರೀತಿ ಒಂದು ರೂಪ ಪಡೆದುಕೊಂಡಿದೆ ಅಂತ ಹೇಳಿ. ಆದರೆ ಈಗ ಶ್ರೀನಿವಾಸಾಚಾರ್ಯರು ಐತಿಹ್ಯದ ನೆಲೆಯಲ್ಲಿ ಹುಡುಕಬೇಕು ಅಂತ ಹೇಳಿ ಹೇಳ್ತಾ ಇದ್ರು. ಐತಿಹ್ಯಗಳನ್ನ ಹುಡುಕಬೇಕು. ನಿಮ್ಮ ಅಧ್ಯಯನದ ಪಟ್ಟಿಗಳಲ್ಲಿ ಅದೂ ಒಂದಿತ್ತು. ಹಾಗಾಗಿ ಕನಕ ಒಬ್ಬ legend ಆಗಿ ನಮಗೆ ಕಂಡ್ರೂ legendಗಳು ನಮಗೆ ಹೊಸದಾಗೇನೂ ದೊರಕೋದಿಲ್ಲ. ಈಗಿರುವ legendಅನ್ನೇ ಸರಿಯಾಗಿ ಪಡಕೊಂಡು ಅದನ್ನ ಸಮಾಜಕ್ಕೆ ಸರಿಯಾದ ರೀತಿಯಲ್ಲಿ ಕೊಡೋದಕ್ಕೆ ಸಾಧ್ಯವೇ ಅನ್ನೋ ದೃಷ್ಟಿಕೋನದಲ್ಲಿ ನೋಡ್ಬೇಕಾಗಿದೆ. ಆಮೇಲೆ ನೀವು ಇನ್ನೊಂದನ್ನು ಹೇಳಿದಿರಿ. ಅದು ಮಾರ್ಗ ಪುರಾಣಗಳಲ್ಲಿರುವಂತಾದ್ದು. ಅದನ್ನು ದೇಸಿಗೆ ತಲುಪಿಸಬೇಕಾಗಿದೆ. ಭಕ್ತಿ ಅನ್ನೋದು ಮಾರ್ಗ ಪುರಾಣಗಳಲ್ಲಿಲ್ಲ. ದೇಸಿಯಲ್ಲೇ ಈಗಾಗಲೇ ಇದ್ದದ್ದು. ಅದನ್ನೇ ಮತ್ತೆ ನಾವೇನೂ ದೇಸಿಗೆ ತಲುಪಿಸಬೇಕಾದ ಅಗತ್ಯವಿಲ್ಲ. ಅದನ್ನ ಪಟ್ಟಿಯಿಂದ ತೆಗೆದು ಹಾಕ್ಬೇಕು. ಇನ್ನೊಂದು ಬಹಳ ಮುಖ್ಯವಾದದ್ದು ಏನು ಅಂದ್ರೆ, ದೇವ್ರು, ಧರ್ಮ ಮತ್ತು ರಾಜ ಪ್ರಭುತ್ವ ಇವುಗಳ ಗುದ್ದಾಟಗಳು ನಮ್ಮ ಇತಿಹಾಸದಲ್ಲಿ ನಡೆದಿವೆ. ಹಾಗಾಗಿ ಈ ವೈರುಧ್ಯಗಳಲ್ಲಿ ಕನಕನ ಕಾಲದ ಸಂದರ್ಭದಲ್ಲಿದ್ದಂತಹ ಸಾರ್ವಜನಿಕ ಬದುಕು ಬೇರೆಯಾಗಿತ್ತು. ಪ್ರಜಾಪ್ರಭುತ್ವದ ಸಂದರ್ಭದಲ್ಲಿ ನಾವು ನೋಡ್ತಾ ಇರುವ ಸಮಾಜವೇ ಬೇರೆ ಆಗಿರೋದರಿಂದ ಕನಕ ಎದುರಿಸಿದಂತಹ ಸಮಾಜದ ಸವಾಲುಗಳಿಗೂ ನಾವು ಸ್ವಾತಂತ್ರ್ಯ ಅನುಭವಿಸಿದ 65 ವರ್ಷಗಳ ಪ್ರಜಾಪ್ರಭುತ್ವದಲ್ಲಿ ಎದುರಿಸುತ್ತಿರುವ ಸವಾಲುಗಳಿಗೂ ಮಹತ್ತರ ವ್ಯತ್ಯಾಸ ಇದೆ. ಕನಕನ ನಂತರದ 5 ತಲೆಮಾರುಗಳ ನಂತರದಲ್ಲಿ ಕನಕನನ್ನ ಹೇಗೆ ಈ ಸಮಾಜಕ್ಕೆ ಮುಟ್ಟಿಸಬೇಕು ಅನ್ನುವಂತಹ ಪ್ರಶ್ನೆಯನ್ನು ನಾವಿವತ್ತು ಸಂಶೋಧನಾ ಕೇಂದ್ರದ ವತಿಯಿಂದ ಎತ್ತಿದ್ದೇವೆ. ಗುಣಮಟ್ಟವನ್ನು ಎಣಿಸುವಂತಹ ಸಂಶೋಧನೆಯನ್ನು ಶ್ರೀನಿವಾಸಾಚಾರ್ ಹೇಳುತ್ತಿದ್ದರು. ನಾವೆಲ್ಲ ಗುಣಮಟ್ಟ ಪರೀಕ್ಷಕರೇ? ಯಾವ ಗುಣಮಟ್ಟವನ್ನು ನಾವು ಸಮಾಜಕ್ಕೆ ಕೊಡಬೇಕಾಗಿದೆ ಎಂಬುದನ್ನ ಮೊದಲು ಚರ್ಚೆ ಮಾಡಬೇಕಾಗಿದೆ. ಅಂದರೆ ಕನಕನನ್ನ ಈಗಾಗಲೇ ರವಿ ಹೇಳುತ್ತಾ ಕಮ್ಯೂನಿಸ್ಟ್ ಆಗಿ ಕಂಡುಬಿಡುತ್ತಾರೆ ಎನ್ನುವ ಧಾಟಿಯಲ್ಲೋ ಅಥವಾ ಇವತ್ತು ನಾವು ಕನಕನ materialನ್ನು ಮಾತ್ರ ಇಟ್ಟುಕೊಂಡು ನೋಡ್ತಾ ಇದೀವಿ. ಕೆ.ವಿ.ಎನ್ ಸರ್ ಹೇಳಿದ್ರು ಕನಕನ ರೂಪವೂ ಗೊತ್ತಿಲ್ಲ. ಅವನು ಯಾವ ರೂಪದಲ್ಲಿದ್ದ? ತಂಬೂರಿ ಹಿಡಿದುಕೊಂಡಿದ್ದನೋ ಅಥವಾ ಇಲ್ಲವೋ? ಆದರೆ material ಅನ್ನ ಕನಕ ಒಬ್ಬ ಮಾನವತಾವಾದಿ ಅನ್ನುವ ದೃಷ್ಟಿಯಿಂದಷ್ಟೇ ನಾವು ನೋಡೋದಕ್ಕೆ ಹೊರಟಿದ್ದೀವಿ. ಅವನ ಸಮಾಜ ಸುಧಾರಣೆಯ ನೆಲೆ. ರಾಜ ಪ್ರಭುತ್ವದಲ್ಲಿದ್ದಂತಹ ಸವಾಲುಗಳಿಗೂ ಇವತ್ತು ಈಗ ಮಠಗಳ ವಿಚಾರ ಬಂತಲ್ಲ. ಹಾಡುಗಳನ್ನ, ಧರ್ಮಗಳನ್ನ ಕಟ್ಟಿಕೊಂಡು ಆ ರೀತಿಯಲ್ಲಿ ಹೋಗುವುದಾದರೆ ಇನ್ನೊಂದು ಇಸ್ಕಾನ್ ಆಗೋಗುತ್ತೆ.

ಎಲ್ಲ ಧರ್ಮಗಳು, ಎಲ್ಲ ಮಠಗಳು, ಎಲ್ಲ ದೇವರುಗಳು ಇಡೀ ಸಮಾಜವನ್ನು ದಿಕ್ಕು ತಪ್ಪಿಸುತ್ತಿರುವ ಸಂದರ್ಭದೊಳಗಡೆ ಕನಕನ ಆಶಯಗಳನ್ನು, ಕನಕನ ಮಾನವತಾವಾದಿ ನೆಲೆಗಳಲ್ಲ ಇಷ್ಟೆಲ್ಲ ಗೋಜಲುಗಳ ಮಧ್ಯೆ ನಾವು ಏನು ಹೇಳ್ಬೇಕಾಗಿದೆ ಅನ್ನೋದನ್ನ ನಮ್ಮೆಲ್ಲ ಬಹು ಅಭಿಪ್ರಾಯಗಳೊಂದಿಗೆ ಒಂದು ನಿರ್ಧಾರಕ್ಕೆ ಬರ್ಬೇಕಾಗಿದೆ ಅಂತ ನನಗೆ ಅನ್ಸುತ್ತೆ.

**ಚರ್ಚೆ : ಮಾನಕರಿ ಶ್ರೀನಿವಾಸಾಚಾರ್ಯ**

ನನ್ನ ಅಭಿಪ್ರಾಯ ಹಾಗಿಲ್ಲದೇ ಹೋಗಿದ್ದರೆ, ಭಕ್ತಿಗೆ ಸೀಮಿತ ಆಗಬೇಕು ಅಂತಲೇ ನಾನು ಮಾತ್ನಾಡ್ತಾಯಿದ್ದೆ. ಅದನ್ನು ನಾನು ಆರಾಧನಾ ಭಾವ, ವೈಭವೀಕರಣ ಅಂತ ಗುರ್ತಿಸ್ಕೊಂಡಿರೋದು. ಇಷ್ಟೊಂದು ಮುಕ್ತವಾಗಿ ನಾನು ಮಾತನಾಡುವಾಗಲೂ ಕೂಡ ಅದು ವೈಭವೀಕರಣ ಅಂತ ಏನಾದ್ರೂ ಕಂಡಿದ್ರೆ ನನ್ನ ಭಾಷೆಯ communication ದೇನಾದ್ರೂ ತೊಂದರೆ ಆಗ್ತಾ ಇದೆಯಾ ಅಂತ ನಾನು ಪರಿಶೀಲಿಸಬೇಕಾಗಿದೆ.

**ಚರ್ಚೆ : ಸುಬ್ರಹ್ಮಣ್ಯಸ್ವಾಮಿ**

ಅವನು ತನ್ನ ಅಂಕಿತ ನಾಮವನ್ನು ಆದಿಕೇಶವರಾಯ ಅಂತ ಗುರುತಿಸಿಕೊಳ್ಳುತ್ತಾನೆ. ಅದೇನಾದ್ರೂ ಅ ದೀರ್ಘ 'ಆ'ನ ಹ ದೀರ್ಘ 'ಹಾ'ನ, ಶಿವ ಮತ್ತು ವಿಷ್ಣುವನ್ನು ಸೇರಿಸಿಕೊಂಡು ಆದಿಕೇಶರಾಯ ಅನ್ನೋದನ್ನ ಕಟ್ಟಿಕೊಂಡಿದ್ದಾನಾ? ಅನ್ನುವ ಬಗ್ಗೆ ಸಂಶೋಧನೆ ಆಗಬೇಕು ಅಂತ ನನಗನ್ನಿಸುತ್ತೆ.

**ಚರ್ಚೆ :**

ಸಾಹಿತ್ಯ project ಅನ್ನು ಅವರ ಒಂದು ಧನ ಸಹಾಯವನ್ನು ಪಡೆದುಕೊಂಡು ಬೆಳೆಯುವುದರ ಬಗ್ಗೆ ಏನು ನೀವು ಹೇಳ್ತಾ ಇದ್ದಿರಿ, ಅದರಲ್ಲಿ ತುಂಬಾ ಅಪಾಯಗಳು ಕಾಣ್ಸುತ್ತೆ. ಈ sponserಗಳು ಅವರ ಅಜೆಂಡಾಗಳನ್ನು ಮುಂದಿಡೋದೆ ಹೆಚ್ಚಾಗುತ್ತೆ.

ದಾಸಸಾಹಿತ್ಯ ಪ್ರಾಜೆಕ್ಟ್‌ನಲ್ಲಿ ಹನ್ನೆರಡು ವರ್ಷದ ಮಕ್ಕಳು ಅಥವಾ ಹದಿನೆಂಟು ವರ್ಷದ ಮಕ್ಕಳು ಆ ತರದ ಮಕ್ಕಳಿಗೆ ಬೇಕಾದ್ರೆ ಕ್ವಿಜ್ ಸ್ಪರ್ಧೆ ಕಾರ್ಯಕ್ರಮಗಳು, ಸಾಮೂಹಿಕ ಗಾಯನ ಇತ್ಯಾದಿ ಕಾರ್ಯಕ್ರಮಗಳ ಮೂಲಕ ತೀರ್ಪುಗಾರರಾಗಿ ಕಾರ್ಯಕ್ರಮಗಳನ್ನ ಮಾಡಬೇಕಾದಾಗ್ಲೆಲ್ಲ ನಾನು ಗಮನಿಸಿರೋದು ಏನು ಅಂತ ಅಂದ್ರೆ ಹರಿಭಕ್ತಿಸಾರದ ಭಾಗಗಳನ್ನ ಮಾತ್ರ ಅಲ್ಲಿ ಗಮಕವಾಗಿ ಸ್ಪರ್ಧೆಗೆ ಇಡಲಾಗುತ್ತೆ. ಬೇರೆ ತರದ ಕನಕನನ್ನ ಅಲ್ಲಿ accept ಮಾಡಿಕೊಳ್ಳದೇ ಇರುವ ಸಾಧ್ಯತೆಗಳು ಕ್ವಿಜ್‌ನಲ್ಲಿ ಆಗ್ಲೆ ನಾನು ಒಂದು ಪ್ರಶ್ನೆನ ಹೇಳ್ದೆ. ಕನಕದಾಸರು ಯಾವ ಅವತಾರ? ಇಂತಹ ಪ್ರಶ್ನೆಗಳನ್ನ ಬಲವಂತವಾಗಿ ನಾವು ಕ್ವಿಜ್ ಕಾರ್ಯಕ್ರಮದಲ್ಲಿ ತೆಗೀರಿ ಅಂತ ಅಂದಾಗ್ಲೂ ಕೂಡ ತೆಗೆಯದೇ ಅದ್ನ ಇಡ್ಲೇ ಬೇಕು ಅನ್ನುವ ಒತ್ತಡ ತಂದಿರೋವಂತಾದ್ದನ್ನೆಲ್ಲ ನಾವು ನೋಡಿದೀವಿ. ನಾವು ಇಂತಹವರುಗಳಿಂದ ಧನಸಹಾಯವನ್ನ ಪಡೆದುಕೊಂಡಾಗ ಮುಲಾಜಿಗೆ ಸಿಕ್ಕಿ ಅಧ್ಯಯನದ ಉದ್ದೇಶ ಏನಿದೆ ಅದನ್ನೆಲ್ಲೊ ಒಂದು ಕಡೆ ನಾವು ಋಣಕ್ಕೆ ಸಿಕ್ಕಾಕಿಕೊಳ್ಳಬಹುದೇನೋ ಅನ್ನೋದನ್ನ ನೀವು ಹೇಳಿದ್ರಿ, ಅಪಾಯವನ್ನು ಹೇಳಿದ್ರಿ ಆದ್ರೆ ಅದರ ಬಗ್ಗೆ ತೊಂದ್ರೇನೂ ಇದೆ.

**ಚರ್ಚೆ : ಆರ್.ಜಿ.ಹಳ್ಳಿ ನಾಗರಾಜ್**

ಕೊನೇ ಭಾಗ ಅಗತ್ಯ ಇಲ್ಲ ಅಂತ ನಾವೂ ಕೂಡ ಮಾತಾಡ್ಕೊಂಡ್ವಿ. ಆದ್ರೆ ಅದನ್ನ ಕೂತ್ಕೊಂಡು ಬೇಕೋ ಬೇಡ್ವೋ ಅನ್ನೋದ್ನ ಚರ್ಚೆ ಮಾಡ್ಬೇಕು, ಅದು ನನ್ಗೆ ಮುಖ್ಯ ಅಲ್ಲ ಅಂತ ಅನ್ಸುತ್ತೆ. ಒಟ್ಟು ನೀವು ಮಾತನಾಡಿದಂತಹ ಗ್ರಹಿಕೆಗಳಲ್ಲೂ ಕೂಡ ನಮ್ಮ ವಿರೋಧಗಳು ಏನೂ ಇಲ್ಲ. ಕೆಲವು ಭಿನ್ನಾಭಿಪ್ರಾಯಗಳಿವೆ. ನಾವು ನೋಡುವ ದೃಷ್ಟಿಕೋನವನ್ನ ಈಗಾಗ್ಲೇ ಸಿನಿಮಾದಲ್ಲಿ, ಮೇಷ್ಟ್ರು ಕನಕನ ಪಾತ್ರವನ್ನ ರಾಜ್‌ಕುಮಾರ್ ಮೂಲಕ ಗುರ್ತಿಸಿದ್ರು. ಹಾಗೆ ನಾವು ರಂಗಭೂಮಿಯಲ್ಲೂ ಗುರುತಿಸಿದ್ದೀವಿ, ಈಗಾಗ್ಲೇ, ಕಿ.ರಂ. ಅವ್ರು ಕನಕನನ್ನು ಅದ್ಭುತವಾಗಿ ಬೇರೆ ದೃಷ್ಟಿಕೋನದಲ್ಲೇ ತೆಗೆದುಕೊಂಡು ಬಂದಿದ್ದಾರೆ. ಅದರ ಕೆಲವು ಪ್ರದರ್ಶನಗಳನ್ನೂ ಕೂಡ ನಾವು ನೋಡಿದ್ದೇವೆ. ಹಾಗಾಗಿ ನಾವು ಕನಕನನ್ನ ಈಗ ಹೊಸ ದೃಷ್ಟಿಕೋನದಲ್ಲಿ ಸಂಶೋಧನೆ ಮಾಡ್ಬೇಕು ಅನ್ನೋದನ್ನ ಬಾಳ ಮುಖ್ಯವಾಗಿ ಕೂತು ಚರ್ಚೆ ಮಾಡ್ತಾ ಇದೀವಿ. ಬಹುಶಃ ಇವತ್ತು ಕರೆದಿರುವಂತ ಸಭೆಯಲ್ಲಿ ಆ ತರಹದ ಒಟ್ಟು ಒಂದಷ್ಟು ಚರ್ಚೆಗಳಾಗ್ಬೇಕು ಅಂತ ನಾನು ನಿರೀಕ್ಷಿಸಿದ್ದೀನಿ. ಬೆಳಗ್ಗೆ ವಸೂರವರು ಬಹಳ ಚೆನ್ನಾಗಿ ಪ್ರಶ್ನೆಗಳನ್ನ ಹಾಕಿದ್ರು. ಹಾಗೆ ಗೆಳೆಯ ಕುಂಸಿ ಅವರೂ ಕೂಡ ಅದಕ್ಕೆ ಮೌಲ್ಯಯುತವಾದ ಮಾತುಗಳನ್ನ ಸೇರಿಸ್ತಾ ಇದ್ರು. ಬೆಳಗ್ಗೆ ಅವ್ರು ಮಾತನಾಡುವಾಗ ಭಕ್ತಿ ಪರೋಕ್ಷವಾಗಿ ದೇವಸ್ಥಾನದ ಒಂದು ನೆಲೆಯನ್ನು ನೀಡಿತು ಅಂತ ಅವ್ರು ಹೇಳಿದ್ರು. ಬಹುಶಃ 12ನೇ ಶತಮಾನದ ಪ್ರಸ್ತಾಪ ಮಾಡಿದ್ರು. ಶಿವನನ್ನು ಅವ್ರು ನಿರಾಕರಿಸುತ್ತಲೇ ಶಿವನ ದೇವಸ್ಥಾನಗಳನ್ನು ನಿರ್ಮಿಸುವ ದಿಕ್ಕಿಗದು ಹೋಯಿತು ಅನ್ನೋದನ್ನ ಅವ್ರು ಹೇಳಿದ್ರು. ಆದ್ರೆ ಒಂದು ಕಡೆ ವಚನಕಾರರೆ ನಿರಾಕರಿಸಿ ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ ಎನ್ನುವ ಮಾತುಗಳನ್ನು ಕೂಡ ಹೇಳಿದ್ದಾರೆ. ಅದರ ಜೊತೆ ಬಸವಣ್ಣನೂ ಕೂಡ ಮತ್ತೆ ಮತ್ತೆ ಹೇಳಿರೋ ಮಾತುಗಳೂ ಕೂಡ ನಮಗೆ ಗೊತ್ತಿದೆ. ಕಲ್ಲು ದೇವರಲ್ಲ, ಮಣ್ಣು ದೇವರಲ್ಲ, ಮರ ದೇವರಲ್ಲ, ಪಂಚಲೋಹದಿಂದ ಮಾಡಿದ ದೇವರು ದೇವರಲ್ಲ. ಈ ತರದ ಒಂದು ನಿರಾಕರಣೆಯನ್ನೂ ಕೂಡ ಅವರು ಮಾಡಿದ್ದಾರೆ ಅಂದ್ರೆ ಎಲ್ಲೋ ಒಂದು ಕಡೆ ಬಂಜಗೆರೆ ಕೂಡ ಆ ವಿಚಾರಗಳನ್ನ ತಗೊಂಡು ಬಹಳ ಚೆನ್ನಾಗಿ link ಮಾಡಿದ್ರು. ಹಾಗಾಗಿ ಯಾರೋ ಮಾಡಿದ ಎಲ್ಲೋ ಒಂದು ಮಾತಿಗೆ ದೇವಸ್ಥಾನಗಳು ಆಗಿತ್ತು ಅಂದ್ರೆ ನಿಜವಾಗ್ಲು ಕೂಡ ವಚನಕಾರ್ರು ಆ ಕೆಲ್ಸ ಮಾಡಿಲ್ಲ ಅನ್ನೋದಕ್ಕೆ ಅನೇಕ ದಾಖಲೆಗಳು ಸಿಗುತ್ತೆ. ನಮ್ಮ ಈ ಭಕ್ತಿ ಪಂಥದಲ್ಲಿ ಬಂದಾಗ್ಲೂ ನಾವು ಕನಕನನ್ನು ಬೇರೆಯಾಗೇ ನೋಡ್ಬೇಕು ಈಗ. ಮುಖ್ಯವಾಗಿ ಈ ಬಂಜಗೆರೆಯವ್ರು ಅದನ್ನ ಸ್ಪಷ್ಟವಾಗಿ ಗುರ್ತಿಸೋದಕ್ಕೆ ಹೊರಟಿದ್ದಾರೆ. ಏನು ಅಂತ ಹೇಳಿದ್ರೆ ಆ ಸಂದರ್ಭದಲ್ಲಿ ನಮಗೆ ಕನಕದಾಸನನ್ನ ಪುರಂದರದಾಸರ ಮಟ್ಟದಲ್ಲೇ ನೋಡ್ಬೇಕೇ. ಇನ್ನೂ ಬೇರೆ ದಾಸರ levelಗೆ ನೋಡ್ಬೇಕೇ ಬೇಡ್ವೇ ಅನ್ನೋದು ನನ್ನ ಪ್ರಶ್ನೆ. ಈ ನಿಟ್ಟಿನಲ್ಲಿ ನಮ್ಮ ಚರ್ಚೆ ನಡೀಬಹುದು ಅಂತ ಕೂಡ ನನ್ಗೆ ಅನ್ನಿಸುತ್ತೆ.

**ಚರ್ಚೆ : ಕರಿಯಪ್ಪ ಮಾಳಿಗೆ**

ಶ್ರೀನಿವಾಸಾಚಾರಿ ಅವ್ರು ಕನಕನನ್ನ ಈ 21ನೇ ಶತಮಾನದಲ್ಲಿ ಹೇಗೆ ಭಿನ್ನ ಭಿನ್ನವಾಗಿ ನೋಡೋದಕ್ಕೆ ಸಾಧ್ಯ ಅನ್ನುವಂತದ್ದನ್ನ ಬಹಳ ಸ್ಪಷ್ಟವಾಗಿ ಹೇಳಿದ್ದಾರೆ. ಮತ್ತೆ ಆ fieldಲ್ಲಿ ಒಂದಷ್ಟು ಕೆಲ್ಸನೂ ಚೆನ್ನಾಗಿ ಮಾಡಿದ್ದಾರೆ. ನಾವು 20 ಮತ್ತು 21ನೇ ಶತಮಾನದಲ್ಲಿ ಸಾಂಸ್ಕೃತಿಕ ವಲಯದಲ್ಲಿ ಹೆಚ್ಚು ಚರ್ಚೆ ಆಗ್ತಾ ಇರುವಂತದ್ದು ಬುದ್ಧ ಹೆಚ್ಚು ಚರ್ಚೆ ಆಗ್ತಾ ಇದಾನೆ. ಬುದ್ಧನ ತತ್ವಗಳನ್ನಿಟ್ಕೊಂಡು ಸಾಕಷ್ಟು ಚರ್ಚೆಗಳು ನಡೀತಿರೋ ಅಂತ ಈ ಸಂದರ್ಭದಲ್ಲಿ ಕನಕನನ್ನ ಈ 20 ಮತ್ತು 21ನೇ ಶತಮಾನದಲ್ಲಿ ಒಂದಷ್ಟು ಭಿನ್ನವಾಗೇ ನೋಡ್ಬೇಕಾದಾಗ ಬುದ್ಧನ ಫಿಲಾಸಫಿಯನ್ನ ಇಟ್ಕೊಂಡು ನೋಡೋದಕ್ಕೆ ಸಾಧ್ಯನಾ? ನಾನೊಂದ್ಕಡೆ ಮಾತಾಡ್ತಾ ಹೇಳಿದ್ದೆ  ಕನಕನ ಬದುಕಿನಲ್ಲಿ ನಡೀತಕ್ಕಂತ ಈ ಪಲ್ಲಟಗಳು ಮತ್ತು ಪರಿವರ್ತನೆಗಳು ಬುದ್ಧನ ಬದುಕಿನಲ್ಲಿ ನಡೀತಕ್ಕಂತ ಪಲ್ಲಟಗಳು ಮತ್ತು ಪರಿವರ್ತನೆಗಳು ಅದಕ್ಕೆ ಒಂದು ಸಣ್ಣ clue ಅಂದ್ರೆ ಈಗ ರಾಮಧಾನ್ಯ ಚರಿತೆಯ ಒಳಗಡೆ ಭತ್ತ ಎಷ್ಟೆಲ್ಲಾ ಹಂಗ್ಸಿದ್ರೂನೂ ಕೊನೆಗೆ ರಾಗಿ ಏನು ಮೌನ ವಹಿಸ್ತದೆ ಅದಕ್ಕೆ ಒಂದು ಪ್ರತೀಕಾರದ ಮಾತುಗಳನ್ನ ಕನಕದಾಸರು ಆಡ್ತಾ ಇಲ್ಲ. ಅಲ್ಲಿ ಸಹಿಸ್ಕೊಳ್ತಾನೆ ಅಥವಾ ಮೌನವನ್ನ ವಹಿಸ್ತಾನಲ್ಲಿ. ಹಾಗಾಗಿ ಇಂತಹ ಮೌನದ ಗುಣಗಳು ಅಂತಹ ಸಹಿಸಿಕೊಳ್ಳುವ ಗುಣಗಳು ಏನಿದಾವಲ್ಲ ಅವನ್ನ ನಾವು ಒಂದಷ್ಟು ಬುದ್ಧನೊಂದಿಗೆ ಸಮೀಕರಿಸಿ ನಾವಿವತ್ತು ಮಾತಾಡಕೆ ಸಾಧ್ಯನಾ ಅಂತ. ಹೀಗೂ ಕನಕದಾಸನನ್ನ ನಾವು 21ನೇ ಶತಮಾನಕ್ಕೆ ಪ್ರಸ್ತುತವಾಗಿ ನೋಡೋದಕ್ಕೆ ಸಾಧ್ಯ ಇದ್ಯಾ? ಈ ರೀತಿಯಲ್ಲೂ ಸಹ ನೋಡೋದಕ್ಕೆ ಅವಕಾಶ ಇದೆ ಅಂತ ನಾನು ಹೇಳ್ತೇನೆ.

**ಚರ್ಚೆ : ವಸು ಎಂ.ವಿ.**

Relate ಮಾಡ್ಕೊಬೇಕಿದೆ. ಇಲ್ಲಿವರೆಗೆ ಕರಾವಳಿ ಮತ್ತೆ Buddhism ಕುರಿತು ಕಡಿಮೆ ಸಂಶೋಧನೆ ಆಗಿದೆ. ಒಂದು ಥೀಸಿಸ್ ವಸಂತ ಮಾಧವನ್ ಅವರ್ದು ಬಂದಿದೆ. ಹೇಗೆ Buddhism ಕರ್ನಾಟಕಕ್ಕೆ ಮೊದ್ಲು ಪ್ರವೇಶ ಮಾಡ್ತು ಮತ್ತು ಕರ್ನಾಟಕದ ಕರಾವಳಿ ಪ್ರದೇಶದ ಸಾಕಷ್ಟು ದೇವಾಲಯಗಳು ಬೌದ್ಧ ಕೇಂದ್ರಗಳಾಗಿತ್ತು. ನಂತರದಲ್ಲಿ That was taken over by Jainism ಆಮೇಲೆ Shaivism ಹಾಗಾಗಿದೆ. Including ಈಗಿರುವ ಮಂಜುನಾಥನೂ ಮೂಲ ಮಂಜುಶ್ರೀ ಭಗವತಿ. ಅದಕ್ಕೆ ಮೂಲ್ದಲ್ಲಿ ಅದು ಬೌದ್ಧ ಕೇಂದ್ರವೇ ಆಗಿತ್ತು. ಉಡುಪಿಯ ಕೃಷ್ಣ ಮೂಲತಃ ಕೃಷ್ಣ ಅಲ್ಲ. ಐಕನೋಗ್ರಫಿ ಅಧ್ಯಯನ ಮಾಡಿರೋರೆಲ್ರಿಗೂ ಗೊತ್ತಿರೋದು ಅದು ಕೃಷ್ಣನ ವಿಗ್ರಹವೇ ಅಲ್ಲ. ಯಕ್ಷನ ಪ್ರತಿಮೆ ಅದು. ಅವ್ನ ಕೈನಲ್ಲಿರೋದು ಕಡೆಗೋಲ ಕೃಷ್ಣ ಅಂತ ವರ್ಣನೆ ಆಗಿದೆ. ಅದು ವಾಸ್ತವವಾಗಿ ಕೈನಲ್ಲಿರೋದು ದಂಡ. Maison ಅಂತ ಕರಿತೀವಲ್ಲ ಒಬ್ಬ ಯಕ್ಷ ಅಥವಾ ದ್ವಾರಪಾಲಕನ ಕೈನಲ್ಲಿರುವಂತ ದಂಡದ ಶಿಲ್ಪ ಅದು. ಆಮೇಲೆ ಯಾಕೆ ಪಶ್ಚಿಮಕ್ಕೆ ಮುಖ ಮಾಡಿದೆ ಅನ್ವಾಗ ಕರಾವಳಿಯಲ್ಲಿರುವಂತ ಬಹುತೇಕ ಪ್ರತಿಮೆಗಳು, ದೇವಾಲಯಗಳು ಅವು light house ಆಗಿ ಕೆಲ್ಸ ಮಾಡ್ತಿತ್ತು. ದೂರದ ಹಡಗುಗಳಿಗೆ light house ಆಗಿರ್ತಿತ್ತು. ಹಾಗಾಗಿ ಬಾಗಿಲುಗಳನ್ನು ಪಶ್ಚಿಮಕ್ಕೆ ಮುಖ ಮಾಡ್ತಿದ್ರು. ಮೂಲತಃ ಅವೆಲ್ಲ ಪಶ್ಚಿಮಕ್ಕೆ ಮುಖ ಮಾಡುವ ದೇವಾಲಯಗಳು coastalನಲ್ಲಿ ನಮಗೆ ಸಿಗುತ್ತದೆ.

ಹಾಗಾಗಿ ಈ ವಿಗ್ರಹ ಅಥವಾ ದೇವಸ್ಥಾನ ಮೂಲತಃ ಪಶ್ಚಿಮಕ್ಕೆ face ಮಾಡಿರುವ ಬೌದ್ಧ ಶಿಲ್ಪದ ಒಂದು ಕೇಂದ್ರ ಆಗಿದೆ. ಆದರೆ ಅದರ ಮುಂದಿನ ಬೆಳವಣಿಗೆಯಲ್ಲಿ, ವೈದಿಕ ಸಂಪ್ರದಾಯದ ಪ್ರಕಾರ ಅಥವಾ ವಾಸ್ತು ಪ್ರಕಾರ ದೇವಾಲಯಗಳನ್ನ ಕಟ್ವಾಗ ದೇವಾಲಯದ ಬಾಗಿಲನ್ನ ಪೂರ್ವಕ್ಕೆ ತಿರುಗಿಸಿಕೊಂಡಿರುವ ಸಾಧ್ಯತೆ ಇದೆ. ಅದಕ್ಕೆ ಬೆಳವಣಿಗೆ, ಅದರ ಮಧ್ಯದಲ್ಲಿ ಕಥೆಗಳು ಅದರ ಜೊತೆಗೆ ಕನಕನ ಭಕ್ತಿ ಇದು ಬೇರೆ ಬೇರೆ ಹಂತದ ಕಥೆಗಳಾಗಿ ನಮ್ಗೆ ಕಾಣ್ಸುತ್ತೆ. So Buddhism has got something to do with Kanaka also. ಇನ್ನೊಂದು ನೆಲೆನಲ್ಲಿ Buddhism relate ಮಾಡ್ಕೊಳ್ಬಹುದು. ಭಕ್ತಿ ಪಂಥಕ್ಕೆ ನನಗೆ ಬಹಳ intresting ಅಂತ ಅನ್ನಿಸಿದ್ದು ಇತ್ತೀಚೆಗೆ. ಭಿಕ್ಷಾಟನೆ ಒಂದು ಪರಂಪರೆಯಾಗಿ ಇತ್ತೀಚೆಗೆ ಹೇಗೆ Travel ಮಾಡಿದೆ ಅಂತ. It started with Buddha. ಭಿಕ್ಷಾಟನೆಯನ್ನ begging ಅಂತ ಮೊನ್ನೆ ಇತ್ತೀಚೆಗೂ ಮಾತಾಡ್ತಿದ್ದೆ ನಾನು. ಕೇವಲ ನಿರ್ಗತಿಕರ ಭಿಕ್ಷಾಟನೆ ಅಲ್ಲ ಅದು. ಅದರ ಒಳಗಡೆ ಬಹಳ ದೊಡ್ಡ ಒಂದು ಆಧ್ಯಾತ್ಮದ ಹಂಚಿಕೆಗಾಗಿ ರೂಢಿಸಿಕೊಂಡ ಒಂದು ಪ್ರಕ್ರಿಯೆ ಅದು. Buddha introduce ಮಾಡಿದ್ದು then it has travelled to Christianity ಬೇರೆ ಬೇರೆ ಎಲ್ಲಾ ಪರಂಪರೆಗಳು ಅದನ್ನ ಸ್ವೀಕರ್ಸಿದಾವೆ. ಹಾಗೆ ಕಡೇಗೆ ಬಂದು ನಾವು ಮಂಟೇಸ್ವಾಮಿಗೋ, ಮಾದೇಶ್ವರನಿಗೋ ನಿಂತ್ಕೊಂಡ್ರೂ ಭಿಕ್ಷಾಟನಾ ಪರಂಪರೆ ಹೀಗೆ travel ಮಾಡಿರೋದನ್ನ ಗಮನಿಸಬಹುದು. ಇಲ್ಲಿ ಕನಕನ ಭಿಕ್ಷಾಟನೆ ದಾಸ ಪಂಥದಲ್ಲಿ ಇದ್ರಲ್ಲಿ ಕಾಣೋದ್ರಲ್ಲೂ... ಇಂಥ ಒಂದು ಇದ್ರಲ್ಲಿ ಅಂತರ್ಗತವಾದ ಧಾರೆಗಳು ನಮ್ಮ ಸಂಸ್ಕೃತಿಯ ಒಳಗಡೆ ಇದೆ. ಅದನ್ನ ಕಿತ್ತು ಪ್ರತ್ಯೇಕವಾಗಿ ಅಧ್ಯಯನ ಮಾಡಕಾಗಲ್ಲ. That is the beauty of Indian cultural transitions.

**ಚರ್ಚೆ : ಡಾಮ್ನಿಕ್**

ಈಗ ನಿರೀಶ್ವರವಾದಿ ಅಂತ ಪರಿಕಲ್ಪನೆ ಉಪಯೋಗಿಸಿದ್ರು. ಆದ್ರೆ ಭಾರತೀಯ ಸಂದರ್ಭದಲ್ಲಿ ಪಶ್ಚಿಮ ಮಂಡಿಸುವಂತ ನಿರೀಶ್ವರವಾದನೇ ಬೇರೆ ಮತ್ತೆ ಭಾರತೀಯ ಸಂದರ್ಭದಲ್ಲಿ ಭಕ್ತಿ ಪಂಥಗಳು ಮಂಡಿಸುವ ನಿರೀಶ್ವರವಾದ ಅದು ಬೇರೆ. ಆದ್ದರಿಂದ ಇಲ್ಲಿ ಎಲ್ಲವನ್ನೂ ಎಲ್ಲಾ ದೃಷ್ಟಿಕೋನಗಳಿಂದ ಅಧ್ಯಯನ ಮಾಡುವ ಅಂತ ಹೇಳೋವಾಗ ಆಧ್ಯಾತ್ಮಶಾಸ್ತ್ರನೂ ಒಂದು ಡಿಸಿಪ್ಲಿನ್ ಆದ್ರೆ, ಜ್ಯೋತಿಷ್ಯಶಾಸ್ತ್ರನೂ ಒಂದು ಡಿಸಿಪ್ಲಿನ್ ಆದ್ರೆ ನಾವು ಯಾವ ತಿಳಿವನ್ನ ಹುಡುಕ್ತಾ ಇದೀವಿ ಅಂತ ನನ್ಗೆ ತುಂಬ ಗಾಢವಾದ ಪ್ರಶ್ನೆ ಇದೆ. ನಿರೀಶ್ವರವಾದಿಗಳು ಅಂತ ಹೇಳಿದ್ರೆ ಪ್ರತ್ಯಕ್ಷ ಪ್ರಮಾಣಗಳನ್ನ ಕೊಟ್ಟು ತಿಳಿವನ್ನ ಕಟ್ಟುವಂತಹ ಬದುಕಿನ ಕ್ರಮಗಳನ್ನ ನಿರಾಕರಿಸುವಂತಾದ್ದು. ವೇದ ಪ್ರಮಾಣಗಳನ್ನ ನಿರಾಕರಿಸು ವಂತಾದ್ದು. ಪಶ್ಚಿಮದ ಏನು ಅನುಭವ ಜನ್ಯ ಮೀಮಾಂಸೆಗಳು ಕಟ್ಟಿಕೊಡುತ್ತಿರುವಂತಹ ಯಜಮಾನಿಕೆಯ ವರಸೆಗಳಿದಾವೆ ಅದನ್ನ ನಿರಾಕರಿಸುವಂತಾದ್ದು. ಈ ಮೂಲಕ ಬಂದ ಭಕ್ತಿಯನ್ನ ನಂತರದಲ್ಲಿ ಹೇಗೆ ಅದನ್ನ ಮತ್ತೆ ಮತ್ತೆ ಈ ಪ್ರತ್ಯಕ್ಷ ಪ್ರಮಾಣಗಳ ತಿಳಿವನ್ನೇ ಕಟ್ಲಿಕ್ಕೆ ನಾವು ನೀವು ಇವತ್ತೂ ಸಹ ಉಪಯೋಗಿಸ್ತಾ ಇದೀವಿ. ಇದರ ಮೂಲಕ ನಾವು ಕನಕನನ್ನ ನೋಡ್ಬೇಕಾ? ಅದು ನನಗೆ ಗಾಢವಾದ ಪ್ರಶ್ನೆ ಇದೆ. ಅಂತದ್ದು ಅಗತ್ಯನೇ ಇಲ್ಲ. ತತ್ವಶಾಸ್ತ್ರದಲ್ಲೂ ಸಹ ಈ ಅರಿಮೆಗಳನ್ನ ಕಟ್ಟೋದು ಅಥವಾ ತಿಳಿವನ್ನ ಕಟ್ಟೋದು ಅಂತ ಹೇಳುವಾಗ ನಾವು ಆದರ್ಶವಾದಿಯಾಗಿ ಇರುವ ಎಲ್ಲ ಸರ್‌ಪ್ಲಸ್‌ವ್ಯಾಲ್ಯೂನ ಉಪಯೋಗಿಸಿಕೊಳ್ತಾ ಎಲ್ಲವನ್ನೂ ಅದನ್ನ ಕೇಂದ್ರ ಮಾಡ್ತಾ ಎಲ್ಲವನ್ನೂ justification ಮಾಡ್ತಾ ಹೋಗ್ಬಹುದು. ಕೊಲೆಗಡುಕನೂ ಸಹ ತಿರುಪತಿ ತಿಮ್ಮಪ್ಪನಿಗೆ ಅಲ್ಲಿ ಕಿರೀಟ ಮಾಡ್ಸಿಕೊಡ್ತಾ ಇರ್ತಾನೆ. ಕೂಲಿ ಕಾರ್ಮಿಕನೂ ಅಲ್ಲಿ ಹೋಗ್ಬಿಟ್ಟು ಹುಂಡಿಯಲ್ಲಿ 50 ಪೈಸ ಹಾಕಿ ಬರ್ತಾ ಇರ್ತಾನೆ. ಹಾಗಾಗಿ ತಿಳಿವುಗಳು ಮಂಡಿಸುವ ವಿಧಾನಗಳು ಮಾತ್ರ ಅವು ಭಕ್ತಿ ಮಾರ್ಗ ಅಲ್ಲ. ಅವು ಬೇರೇದೇ ಬದುಕಿನ ಕ್ರಮಾನ ಅನ್ವೇಷಣೆ ಮಾಡ್ತಾ ಇದಾವೆ. ಅಂಥದ್ದು ಅರಿವಿನ ಕ್ರಮಗಳು ಸಾಧ್ಯ ಆಗೋದಾದ್ರೆ ಕನಕನನ್ನ ನಾವು ಮತ್ತೊಮ್ಮೆ ಮಗದೊಮ್ಮೆ ಮರು ವ್ಯಾಖ್ಯಾನಿಸ್ಬೇಕು. ಹಾಗೆ ಅರಿಮೆಗಳ್ನ ಕಟ್ಟುವ ಒಂದು ತಂತ್ರವನ್ನಾಗಿ ಬಳಸ್ಬೇಕು ಅಂತ ನನ್ನ ಅಭಿಪ್ರಾಯ.

**ಚರ್ಚೆ : ಪ್ರೊ. ಶಿವರಾಮಯ್ಯ**

ರಾಮಧಾನ್ಯ ಚರಿತೆಯಲ್ಲಿ ರಾಗಿ ಮೌನವಹಿಸೋದಿದೆಯಲ್ಲ, ಎಲ್ಲಿವರೆಗೆ ಅಂತ ಅಂದ್ರೆ ಗೌತಮ ಮುನಿಗಳು support ಗೆ ಬಂದಾಗ ಸಂವಿಧಾನ ಬೆಂಬಲಕ್ಕೆ ಬಂದ ಹಾಗೆ ಆಗುತ್ತಲ್ಲ ಹಾಗೆ. ಇದು ಮತ್ತೆ react ಮಾಡುತ್ತೆ. ನೀನು ಹಾಗೆ ಹೀಗೆ ಅಂತ್ಹೇಳಿ. ಇದುವರೆಗೂ ಮಾತಾಡಿದ್ದು ಸರಿಯಿಲ್ಲ ಅಂತ ಪ್ರತಿಭಟಿಸುತ್ತೆ. ಯಾವಾಗ ಅಂತಂದ್ರೆ ಗೌತಮ ಮುನಿಗಳು supportಗೆ ನಿಂತಾಗ. ರಾಗಿ ಸಹನೆಯಿಂದನೇ ಇರುತ್ತೆ. ಅದು Buddhist ಇದ್ರಲ್ಲಿ ಬುದ್ಧ ಎಲ್ಲ ಮೌನವಾಗಿ ಸಹಿಸ್ಕೊಂಡು ಬಂದ ರೀತಿಯಲ್ಲೇ ಇರ್ಬಹುದು ಅದರ ಇನ್‌ಫ್ಲುಯೆನ್ಸ್ ಆಗಿರಬಹುದು. Shaivism ಮತ್ತು ವೈಷ್ಣವ ಫಿಲಾಸಫಿಗೆ ಬಂದಾಗ 12ನೇ ಶತಮಾನದಲ್ಲಿ ಏನು ವೀರಶೈವರು ಪ್ರಾಬಲ್ಯ ಇದ್ರು ಸಾಮಾನ್ಯ ಜನಗಳು ಆ ಕಡೆಗೆ ಮುಖ ಮಾಡಿದಾಗ ಮತ್ತೆ ಈ ವೈಷ್ಣವ ಧರ್ಮ ಅಥವಾ ಅದರ ರಿವೈವಲ್ ದಾಸ ಪಂಥದ ಮೂಲಕ ಇಡೀ ದೇಶದಲ್ಲಿ ಸುತ್ತಾಡುತ್ತಾ ಮತ್ತೆ ಅದರ ರಿವೈವಲ್‌ಗೆ ಇವರು ಪ್ರಯತ್ನಿಸಿದ್ರು ಅಂತ. ಬಹಳಾ ಡೆಲಿಬರೇಟಾಗಿ ಅಲ್ಲ ನಿಜವಾಗ್ಲು ಅಂತ ಪ್ರಯತ್ನ ಮಾಡಿದಾರೆ ಅನ್ನೋದ್ನ ನಿಮ್ಮ ದಾಸಪಂಥ ನೋಡಿದೋರ್‍ಗೆಲ್ಲ ಗೊತ್ತಾಗುತ್ತೆ.

**ಚರ್ಚೆ : ತಾರಿಣಿ ಶುಭದಾಯಿನಿ**

ಭಕ್ತಿಯ ನೆಲೆಗಳು ಅಂತ ಮಾತಾಡಿದ್ರಿಂದ ಬೆಳಗಿನಿಂದ ನಾವು ಮಾತಾಡಿರೋ ಎಲ್ಲಾ ಇದ್ರಲ್ಲೂ ಕೂಡ ಸ್ಫೂರ್ತಿಯಾಗ್ಬಹುದಾದಂತ ಅವು ಪಡೆದುಕೊಂಡಂತಹ ಆಕರಗಳು, ಅವು ಬಳಸ್ಕೊಂಡಂತ ಕೆಲವು ಫಿಲಾಸಫಿಗಳನ್ನ ಗಮನಿಸಿದ್ವಿ. ಆದ್ರೆ ನನ್ನ ಆಸಕ್ತಿ ಏನು ಅಂದ್ರೆ ಮೊದಲ್ನೇದಾಗಿ ನಾವು ತಗೊಳ್ಬೇಕಾದ ಪ್ರಾಜೆಕ್ಟ್ ಏನು ಅಂತ ಅಂದ್ರೆ ಶಿಷ್ಯತ್ವಗಳ್ಯಾಕೆ ಸಿಗ್ಲಿಲ್ಲ? ಅವರ ಪರಂಪರೆ ಕನಕ ಪರಂಪರೆ ಅಂತ ಯಾಕೆ ಮುಂದೆ ಎಲ್ಲೂ ಬೆಳೀಲಿಲ್ಲ? ಕನಕ ಪರಂಪರೆ ಅನ್ನೋದ್ನೆ ನಾವು ಇವತ್ತೆಲ್ಲ ಹುಡ್ಕಾಡಿದೀವಿ ಏನು ಏನು ಅದು ಅಂತ. ಅದೇನಾದ್ರೂ ಇದ್ರೆ ಅದ್ಯಾಕ್ ಮುಂದುವರಿಲಿಲ್ಲ. ಈಗ ನಾವ್ ಮುಂದುವರಿಸ್ತಾ ಇದೀವಿ. ಆದ್ರೆ ಮಧ್ಯ long gap, after such a big long gap we are continuing. ಯಾಕೆ ಶಿಷ್ಯತ್ವ ಕೊಡಲಿಲ್ಲ? ಒಂದು ಪರಂಪರೆ ಇದ್ಯಲ್ಲ ಆ ಪರಂಪರೆ ಪುರಂದರ ದಾಸರು ಮತ್ತು ಕನಕ ಇವರಿಬ್ಬರನ್ನೂ ಕನಕ ಪುರಂದರ ಅಂತ ಕರೀತಾ ಇರೋ ಸಂದರ್ಭದಲ್ಲೇ ನಾವು ಶಿಷ್ಯರು ಅಂತ ಹೇಳ್ಕೊಳೊ ಎಷ್ಟೋ ಜನ ಬರ್ತಾರೆ. ದಾಸರು ಬರ್ತಾರೆ. ಬೇರೆ ವಯಸ್ಸಿನಲ್ಲಿ ಬರ್ತಾರೆ. ಅದೇ ವಯಸ್ಸಿನಲ್ಲಿ ಬರಲ್ಲ. ಪರಂಪರೆ ಮುಂದುವರಿತಾ ಇದೆ. ಕನಕನ್ನ ಒಬ್ಬನ್ನೇ ನಾವಿಲ್ಲಿಡ್ಕೊಂಡು ಹಿಸ್ಟಾರಿಕಲ್ ಆಗಿ ಮತ್ತು ಹಿಸ್ಟಿರಿಸಿಜಂನ ಇದಾಗಿ ಇಟ್ಕೊಂಡು....

**ಚರ್ಚೆ : ಕಾ ತ ಚಿಕ್ಕಣ್ಣ**

ನಾವು ಪರಂಪರೆಯನ್ನ ಸ್ಮರಿಸುವಾಗ ಎಲ್ಲರೂ ಕೂಡ ಕನಕದಾಸರನ್ನ ಸ್ಮರಿಸ್ಕೊಳ್ಳಲ್ಲ.

**ಚರ್ಚೆ :**

ಭಕ್ತಿಯ ವಿಭಿನ್ನ ನೆಲೆಗಳು ಅಂತ ಅಂದಾಗ ಕೆಲವು ಅಂಶಗಳನ್ನ ಇಲ್ಲಿ ಸ್ಪಷ್ಟಪಡಿಸೋಕೆ ಇಷ್ಟಪಡ್ತೀನಿ. ಭಕ್ತಿಯನ್ನ ಏಕ ಘನಾಕೃತಿಯಲ್ಲಿ ಗ್ರಹಿಸೋದು ತಪ್ಪು. ಕನಕನ ಭಕ್ತಿಯ ಸ್ವರೂಪನೇ ಬೇರೆ. ಪುರಂದರ ದಾಸರ ಭಕ್ತಿಯ ಸ್ವರೂಪನೇ ಬೇರೆ. ನೀವು ಮಾನಕರಿಯವರು ಕೋಟ್ ಮಾಡಿದ ಹಾಡನ್ನ ಇಟ್ಕೊಂಡ್ ಹೇಳೋದಾದ್ರೆ 'ಏನೂ ಒಲ್ಲೆ ಹರಿಯೆ ನಿನ್ನ ಸ್ತುತಿಸಿ ಕೇಳುವುದು ಜ್ಞಾನ, ಭಕ್ತಿ ಕೊಡು'. ನಮಗಿದೊಂದೆ ದೊಡ್ಡದು. ಅಲ್ಲಿ ಜ್ಞಾನಕ್ಕಾಗಿ ತಹತಹ ಇದೆ. ಜ್ಞಾನವನ್ನು ನಿರಾಕರಿಸಲಾದ ಸಮುದಾಯದಿಂದ ಬಂದಿದ್ರಿಂದ ಜ್ಞಾನದ ಬಗ್ಗೆ ಅವರಿಗೆ ನಿಜವಾದ ತುಡಿತ ಇದೆ. 'ಮಾಡಬೇಕಣ್ಣ ಜ್ಞಾನದ ಅಡಿಗೆಯ ಮಾಡಬೇಕಣ್ಣ' ಆ ತರದ್ದು ಅದನ್ನ ಏಕ ಘನಾಕೃತಿಯಲ್ಲಿ ನೋಡಬಾರದು. ಇನ್ನೊಂದು ಕನಕದಾಸರ ಹಾಡುಗಳಲ್ಲಿ ಬರುವ ಅನ್ಯಮತ ಖಂಡನೆಯನ್ನು ಕೂಡ ನಾವು ಗಮನಿಸಬಹುದು.

# ಕನಕರ ಪರಿಸರ ಸ್ಪಂದನ

**ಕೆ.ವೈ. ನಾರಾಯಣ ಸ್ವಾಮಿ**

ಕನಕರ ಪರಿಸರ ಸ್ಪಂದನ ಅಂದರೇನು ಅನ್ನುವುದನ್ನ ನನ್ನ ತಿಳಿವಳಿಕೆಗೆ ತೆಗೆದುಕೊಳ್ಳುವುದಕ್ಕೆ ಈವರೆಗೂ ಪೂರ್ಣ ಸಾಧ್ಯವಾಗಿಲ್ಲ. ಈ ವಿಷಯವಾಗಿ ಸ್ಪಷ್ಟನೆ ಪಡೆಯಲು ಕಾ ತ ಚಿಕ್ಕಣ್ಣನವರನ್ನು ಸಂಪರ್ಕಿಸಿದೆ. ಈ ವಿಷಯ ಶೀರ್ಷಿಕೆ ಅಖೈರುಗೊಳಿಸುವಾಗ ನಿಮ್ಮ ಬಳಿಯೇ ಚರ್ಚೆ ಮಾಡಿ ವಿಷಯ ಪಟ್ಟಿ ಸಿದ್ಧಗೊಳಿಸಲಾಗಿತ್ತು ಎಂದರು. ಮಾಯೆಯನ್ನು ಕುರಿತು ಕನ್ನಡ ಸಾಹಿತ್ಯದೊಳಗೆ ಬಹಳ ದೊಡ್ಡ ಚರ್ಚೆ ನಡೆದಿರುವುದನ್ನು ನೀವೆಲ್ಲ ಕಂಡಿದ್ದೀರಿ. ಹಾಗಾಗಿ ಈ ಪರಿಸರ ಸ್ಪಂದನ ಅನ್ನೋದನ್ನ ನಾನು ಗ್ರಹಿಸಿದ್ದನ್ನು ನಿಮ್ಮ ಜೊತೆ ಹೇಳೋದಕ್ಕೆ ಪ್ರಯತ್ನಿಸುತ್ತೇನೆ. ಕನಕದಾಸರನ್ನು ಕುರಿತು ನಮ್ಮ ಈಗಿನ ವರ್ತಮಾನದಲ್ಲಿ ಎದುರುಗೊಳ್ಳಬೇಕಾಗಿರುವ ಬಗೆ ಮತ್ತು ನಮಗೊಂದು ಸಾಂಸ್ಕೃತಿಕವಾದ ತುರ್ತಿದೆ. ತುರ್ತು ಯಾಕಿದೆ ಅನ್ನುವಂತಾದ್ದನ್ನು

ಬೆಳಗ್ಗೆ ಮೇಷ್ಟ್ರು, ಅದು ಒಂದು ಪೊಲಿಟಿಕಲ್ ಕರೆಕ್ಟ್‌ನೆಸ್ ಕಾರಣದಿಂದಾಗಿ, ಎರಡನೇದು ನಮ್ಮ ವರ್ತಮಾನವನ್ನು ಮುಖ್ಯವಾಗಿ ನಾವು ಅದರ ಜೊತೆ ಒಂದು ಸಂವಾದವನ್ನು ಮಾಡಲೇಬೇಕಾದ ಒತ್ತಾಯ ನಮ್ಮ ಮೇಲೆ ಇರೋದು ಇನ್ನೊಂದು. ಇವುಗಳಿಗೆ ಇರುವ ಅಡ್ಡಿ ಆತಂಕಗಳ ವಿಷಯ ಬೆಳಗ್ಗೆ ಮೇಷ್ಟ್ರು ಮಂಡಿಸಿದ ಮಾತುಗಳಲ್ಲೇ ಇದೆ. ಆ ಮಾತುಗಳನ್ನು ಮುಂದುವರಿಸಿಕೊಂಡು ಮತ್ತೆ ಕೆಲವು ಸಂಗತಿಗಳನ್ನು ಮುಖಾಮುಖಿ ಮಾಡ್ಕೊಂಡು ನಾನು ಕೆಲವು ಆಲೋಚನೆಗಳನ್ನು ಹಂಚಿಕೊಳ್ಳೋದಕ್ಕೆ ಇಷ್ಟ ಪಡ್ತಾ ಇದೀನಿ.

ಈಗ ಬೆಳಗಿನಿಂದ ನಾವು ಕನಕನನ್ನು ಕೇಂದ್ರವಾಗಿಟ್ಟುಕೊಂಡು ಅಥವಾ ದಾಸರನ್ನು ಅಥವಾ ಕೀರ್ತನಕಾರರನ್ನು ಕೇಂದ್ರ ಗಮನವಾಗಿ ಇಟ್ಟುಕೊಂಡು ಮಾತಾಡುತ್ತಿದ್ದೇವೆ. ಅಂದರೆ ಕನಕನನ್ನು ಅಧ್ಯಯನ ಮಾಡುವಾಗ ಭಾರತದಲ್ಲಿರುವಂಥ ದಾಸ ಪರಂಪರೆಗಳು, ಭಕ್ತಿ ಪರಂಪರೆಗಳ ಜೊತೆಗೆ ಓದುವಾಗ ಅಥವಾ ನಾವು ಕನಕನನ್ನು ಓದುವಾಗ ಕನ್ನಡದ ಜೊತೆಗೆ ಎಲ್ಲ ಪರಂಪರೆಗಳು ಅಲ್ಲಿರುತ್ತವೆ. ಪರಿಸರ ಸ್ಪಂದನ ಎಂಬ ಬಗ್ಗೆ ಯೋಚಿಸುವಾಗ, ಪರಿಸರ ಅಂದರೆ ಆ ರೀತಿಯಾಗಿ ಅದನ್ನ ನೋಡುವುದಕ್ಕೆ  ಒತ್ತಾಯಿಸುತ್ತಾ ಇತ್ತು. ಯಾಕೆ ಹೀಗೆ ನನಗೆ ಯೋಚನೆ ಮಾಡೋದಕ್ಕೆ ಸಾಧ್ಯ ಆಯಿತು. ನನಗೆ ಹಾಗೆ ಅನಿಸಿತು ಅಂದರೆ, ಈಗ ನೋಡಿ ಮತ್ತೆ ಮತ್ತೆ ಕನಕರಲ್ಲಿ ಕಾಣುವ ಮಾಯೆಯ ಆವರಣ ಇದೆಯಲ್ಲ ಅದು ಭಾವನಾವಾದಿಗಳು ಮಂಡಿಸುವಂತಹ ಪ್ರಪಂಚವಲ್ಲ. ಅದು ಇರುವ ಪ್ರಪಂಚವಲ್ಲ ಕಂಡ ಪ್ರಪಂಚ ಅದು. ಅದಕ್ಕೆ ಮೇಷ್ಟ್ರು ಹೇಳುವಾಗ ಬೆಳಗ್ಗೆ ಹೇಳ್ತಿದ್ದರಲ್ಲ ಕಂಡ ಮತ್ತು ಕಾಣಿಸಲು, ಕಾಣೋದಕ್ಕೆ ಪ್ರಯತ್ನಿಸುತ್ತಾ ಇರೋದು, ಹಾಗೆ ಈಗ ಪಂಪನ ಪಠ್ಯದಿಂದ, ಅಲ್ಲಮಪ್ರಭುವಿನಿಂದ ಶುರು ಮಾಡಿ ನಂತರ ನೀವು ಕನಕದಾಸರಿಗೆ ಬಂದು ಶಿಶುನಾಳ ಷರೀಫರಿಗೆ ಬಂದು ಅಲ್ಲಿಂದ ತೇಜಸ್ವಿಯವರ ಮಾಯಾಲೋಕದವರೆಗೂ ಕೂಡ ಒಂದು travelನ್ನ ಮಾಡಿದ್ರೆ ಕನಕನನ್ನು ಈಗ ಓದೋದಕ್ಕೆ ಒಂದು ದಾರಿ ತೋರಿಸ್ತಾ ಇಲ್ವೆ ಅಂತ ನನ್ಗೆ ಅನ್ನಿಸ್ತಾ ಇದೆ. ಅಂದ್ರೆ ನಮ್ಮ ಪರಂಪರೆ ಒಳಗೇನೇ ಕನಕನ ಜೊತೆ ನಾವು. ಎರಡು ಹಾಡುಗಳನ್ನು ನಾನಿಲ್ಲಿ ಬರೆದು ತಂದಿದ್ದೇನೆ 'ಅಲ್ಲಾ ಖುದಾ ಎಂಬ ಅರ್ಥವನ್ನು ತಿಳಿಯದೆ ಮುಲ್ಲಾಶಾಸ್ತ್ರದ ನೆಲೆಯ ಮುನ್ನ ಅರಿಯದೆ ಪೊಳ್ಳು ಕೂಗನು ಕೂಗಿ ಬೊಗಳಿ ಬಾಯಾರುವಂತ ಕಳ್ಳಸುಳ್ಳರಿಗೆಲ್ಲ ವೀರ ಸ್ವರ್ಗ ಸಿಗಬಹುದೇ' ಆ ತರದ್ದೊಂದು...

ಮತ್ತೆ 'ಲಿಂಗ ಘನವೆಂದು ಹೆಚ್ಚಿ ಕುಣಿದಾಡುವ ಸಂಗನ ಶರಣರೆಲ್ಲ ಕೇಳಿರಿ' ಆ ತರದ್ದೊಂದಿದೆ. ಆ ತರದ ಒಳಗಿನ ಸಂಕೀರ್ಣತೆಗಳ ಶೋಧ ಕೂಡ ಆಗ್ಬೇಕು ಅನ್ನುವಂತಾದ್ದು ಇಲ್ಲಿ ನನ್ನ ಸೂಚನೆ.

ದಾರಿಯೊಂದನ್ನ ಹುಡುಕಿಕೊಳ್ಳಲಿಕ್ಕೆ ಸಾಧ್ಯ ಇದೆ ಅಂತ ಅನ್ಸುತ್ತೆ. ಆವಾಗ ಕೆಲವು ಇಕ್ಕಟ್ಟುಗಳಿಂದ ನಾವು ಪಾರಾಗೋದಕ್ಕೆ ಸಾಧ್ಯ ಇದೆ. ಯಾವ್ದು ಈಗ ಚರಿತ್ರೆಯ ಓದು ನಮ್ಮನ್ನ ಪ್ರಿಪೇರ್ ಮಾಡ್ಬಿಟ್ಟು ಸಿದ್ಧವಾಗಿ ಕೊಟ್ಟಿರುವಂಥ ಆ ಟೂಲ್ಸ್‌ಗಳ ಮೂಲಕನೇ ನಾವು ಮಾತಾಡೋಕೋದಾಗ ಮತ್ತೆ ವಿಜಯನಗರ ಸಾಮ್ರಾಜ್ಯ ಕೀರ್ತನೆಗಳನ್ನ, ದಾಸರನ್ನ ಅರ್ಥಮಾಡ್ಕೊಳ್ಳೋದಕ್ಕೆ ಸಿದ್ಧಗೊಳಿಸಿಕೊಟ್ಟಿರುವಂಥ ಪದಕೋಶಗಳು. ಅನುಭಾವ ಅನ್ನೋ ಮಾತು, ಆಧ್ಯಾತ್ಮ ಅನ್ನುವಂತ ಮಾತು ಇವೆಲ್ಲದರಿಂದ ಅದು ಒಂದು, ಅದನ್ನ ಬಿಟ್ಟು ಅಂತಲ್ಲ ಅದನ್ನ ಬದಲಿಸಿದ ದಾರಿ ಒಂದ್ರಲ್ಲಿ ಪ್ರಯಾಣ ಮಾಡ್ಲಿಕ್ಕೆ ಸಾಧ್ಯ ಅನ್ಸುತ್ತೆ. ಆಗ ಈ ಕನ್ನಡದ ಒಂದು ಸಂವೇದನಾ ಲೋಕದಲ್ಲಿ ಒಂದು ಪರಂಪರೆ ಶುರುವಾಗುತ್ತೆ ಅಂತ ಕಾಣುತ್ತೆ. ಇದು ಒಂದು ಪರಿಸರವನ್ನು ಸೃಷ್ಟಿಸುವ ದಾರಿ ಅಂತ ನಾನು ಅಂದ್ಕೊಂಡಿದೇನೆ. ಜೊತೆಗೆ ಇನ್ನೊಂದು ಸಂದರ್ಭದಲ್ಲಿ ನೆನಪಾಗ್ತಿರೋದು ಜನಪದ ಲೋಕಗಳಲ್ಲಿರಬಹುದಾದ ತಿಳಿವಳಿಕೆಗಳಿವೆಯಲ್ಲ ಅವುಗಳನ್ನ ನಮ್ಮ ಮುಖಾಮುಖಿಯಾಗಿ ರೆಫ್ರೆನ್ಸ್ ಪಾಯಿಂಟ್ ಆಗಿ ತೆಗೆದುಕೊಂಡು ನಾವಿದನ್ನ ಓದೋದಕ್ಕೆ ಬರುತ್ತೆ. ಮತ್ತೆ ಎಲ್ಲ oral textಗಳನ್ನ ಮರೆತು ನಾವೆಲ್ಲ written textಗಳ ಜೊತೆಗೇನೇ ಕನಕರ ಫಿಲಾಸಫಿಯನ್ನ ಅಥವಾ ಕನಕರು ಕಂಡ ಬದುಕಿನ ದರ್ಶನದ ಸಂಗತಿಗಳನ್ನ ಅಥವಾ ಸಾಮಾಜಿಕವಾದ ಪ್ರಶ್ನೆಗಳನ್ನು ಯಾವ್ದೇ ಪ್ರಶ್ನೆಗಳನ್ನ ಕನಕರನ್ನ ಕೇಂದ್ರವಾಗಿಟ್ಕೊಂಡು ನಾವು ಎತ್ತುತ್ತಿರುವಾಗ ನಾವು referenceನ್ನ ತೆಗೆದುಕೊಂಡು ಯಾವುದೇ ರೀತಿಯಾದ ಮುಖಾಮುಖಿಯಾಗಿಟ್ಟು ಅದನ್ನ qualify ಮಾಡೋದಕ್ಕೋ ಅಥವಾ interpret ಮಾಡೋದಕ್ಕೋ ಅಥವಾ ನಿರೂಪಣೆ ವಿವರಣೆ ಮಾಡೋದಕ್ಕೋ ಪ್ರಯತ್ನಿಸ್ತಾ ಇರ್ತೀವಿ ಅಂತ ಅಂದಾಗ ನಾವು ಜನಪದ ಜಗತ್ತಿನ ತಿಳುವಳಿಕೆಯ ಜೊತೆ ಮುಖಾಮುಖಿಯಾಗಿಸಿ ಓದುತ್ತಿರುವಂತ ಕ್ರಮ ಸಂಪೂರ್ಣವಾಗಿ ಗೈರು ಹಾಜರಿ ಅಲ್ಲದಿದ್ರೂ ಕೂಡ ಅದು ಬಹಳ ಪ್ರಧಾನವಾದಂತಹ ನಮ್ಮ ಶೈಕ್ಷಣಿಕ ಚಟುವಟಿಕೆಯಾಗಿದೆ ಅಂತ ನನಗೆ ಅನ್ಸಿದೆ.

ಈಗ ಕೋಲಾರ ಜಿಲ್ಲೆಯಲ್ಲಿ ಒಂದು ಜನಪದ ಕಾವ್ಯ ಇದೆ. ಅದನ್ನ ಗಂಗ ಭಾರತ ಅಂತ ಕರೀತಾರೆ. ಅದಕ್ಕೆ ಅದರ ಮೊದಲ ಸಾಲು ಶುರುವಾಗೋದೇನೇ 'ಗಂಗ ಭಾರತಂ ಪೋಯಿಂದಿ, ಲಿಂಗ ಭಾರತಂ ಆಯಿಂದಿ'. ಅಂದರೆ ಇಡೀ ವಚನ movement ಮೇಲೆ ಒಂದು ಬಹಳ ದೊಡ್ಡ ತಕರಾರನ್ನ ದಾಖಲಿಸುವುದರ ಮೂಲಕ ಅದು ತನ್ನ ಮಾತನ್ನ ಶುರು ಮಾಡುತ್ತೆ. ಹಂಗೇಳಿದ ತಕ್ಷಣನೆ ನಾವು ಹೇಗೆ vachana movementನ್ನ ನಮ್ಮ ಆರಾಧನಾ ದೃಷ್ಟಿಗೆ ಅದು ನಮ್ಮ ಇವತ್ತಿನ ಅವಶ್ಯಕತೆ ಆಗಿರೋದ್ರಿಂದ ಅಂದ್ರೆ ನಾವು ಪ್ರಜಾಪ್ರಭುತ್ವದ ಹೆಸರಿನೊಳಗೆ ಅಥವಾ ಮನುಷ್ಯನ ನಡುವೆ ಇರಬೇಕಾದ ಸಮಾನತೆಯ ಬಗ್ಗೆ ಜಾತಿಗಳನ್ನ ದಾಟೋದರ ಬಗ್ಗೆ ನಮ್ಮ ಅಪೇಕ್ಷೆಗಳನ್ನು ಪೂರೈಸುವ ಹಾಗೆ ಅಥವಾ ನಮಗೆ ಬೇಕಾದ ಹಾಗೆ ವಚನವನ್ನು interpret ಮಾಡ್ಕೊಳ್ತಾ ಇರೊ ಕಾಲಕ್ಕೆ ಅಂತದ್ದರ ಜೊತೆ ಇದು ಒಂದು ಜನಪದ ಲೋಕದ ಒಂದು ತಿಳುವಳಿಕೆ. ಒಂದಿಷ್ಟು ರ್‍ಯಾಷ್ ಆಗಿ ಒಂದು ಅಭಿಪ್ರಾಯವನ್ನು ದಾಖಲು ಮಾಡಿ ಲಿಂಗ ಭಾರತವಾಗ್ತಿದೆ ಗಂಗ ಭಾರತ ಹೋಗ್ತಿದೆ ಎಂದು ಹೇಳುವಾಗ ಅದು ಯಾವ ತರದ ಪ್ರಶ್ನೆಯನ್ನ ನಮ್ಮ ಮುಂದೆ ಯೋಚ್ನೆ ಮಾಡೋದಕ್ಕೆ ಮಂಡಿಸ್ತಾ ಇದೆ ಅಂತ ಅನ್ನುವುದನ್ನ ತಿಳೀಬೇಕಾಗುತ್ತೆ. ಆದರೆ ಅಂತ ತಿಳಿವಳಿಕೆಯ ನಾವು ಕನಕನ ಸಾಹಿತ್ಯಕ್ಕೆ ತೆಗೆದುಕೊಂಡು ಬಂದು ಇಟ್ಟೆ ಅಲ್ಲಿ ಕೀರ್ತನೆ, ಕಾವ್ಯ ಅಂತ ಎಲ್ಲವನ್ನೂ ಕೂಡ ಅವುಗಳ ಸ್ವರೂಪಗಳನ್ನು ಮೇಲೆ ನಾವು ಗುರ್ತಿಸಿ–ಅವುಗಳನ್ನ ಹಾಗೇ ಪ್ರತ್ಯೇಕವಾಗೇ ಅಧ್ಯಯನ ಮಾಡುವಂತ ಶಿಸ್ತುಗಳಿಗೆ ನಾವು ರೂಢಿ ಬಿದ್ದಿರುವುದರಿಂದಾಗಿ ಅದರೊಳಗೆ ಒಂದು ಸೆನ್ಸಿಬಲಿಟಿಯನ್ನು ಅದೆಲ್ಲದರ ಒಳಗೆ

ಕಾಣಬಹುದಾದ ಒಂದು ಲೋಕವನ್ನ ಕಾಣಲಿಕ್ಕೆ ನಾವು ಒಂದು ಹೊಸ ರೀತಿಯಾದಂತ ತಿಳಿವಳಿಕೆಯ ಚೌಕಟ್ಟನ್ನ, ಚಿಂತನಾ ಚೌಕಟ್ಟನ್ನೇ ಕಟ್ಕೊಬೇಕಾಗಿದೆ ಅಂತ ನನಗೆ ಅನಿಸ್ತಾಯಿದೆ.

ಆದರೆ ಅದು ಆಕಾರಗಳು, ಆಕೃತಿಗಳು ಅಥವಾ ಧಕ್ಕೆ ಬರುವ ಆಕರಗಳು ಯಾವ ಯಾವ ಮೂಲಗಳಿಂದ ಅವುಗಳನ್ನ ನಾವು ರೂಪಿಸ್ಕೊಬೇಕು? ಹಾಗೆ ರೂಪಿಸಿಕೊಳ್ಳುವಾಗ ಇವತ್ತಿನ ವರ್ತಮಾನದ ಅಂದ್ರೆ ನಮ್ಮ ಮೇಲೆ ನುಗ್ಗಿ ಬರ್ತ್ತಿರುವಂತ ಆಲೋಚನಾ ಕ್ರಮಗಳೇನಿವೆ ಅವುಗಳನ್ನು ನಾವು ಸಬಾಲ್ಟರ್ನ್ ಸ್ಟಡಿಯಲ್ಲಿನ ವಿಚಾರ ಇರ್ಬಹುದು ಅಥವಾ ಇತ್ತೀಚಿನ ನವ ಚಾರಿತ್ರಿಕ ವಾದದ ಬಗ್ಗೆ ಮಾತ್ನಾಡ್ತಿರುವ ಮಾತುಗಳಿರಬಹುದು. ಆಗ್ಲೆ ಡಾಮ್ನಿಕ್ ಪ್ರಸ್ತಾಪಿಸಿದಂತ ಸಂಗತಿಗಳಿರ್ಬಹುದು. ಅಂದ್ರೆ ವರ್ತಮಾನದಲ್ಲಿ ನಮಗೆ ಗೊತ್ತಿಲ್ಲದೆ ನಮ್ಮನ್ನ ತುಂಬ influence ಮಾಡ್ತಿರುವ ನಮ್ಮ ತಿಳಿವಳಿಕೆಯನ್ನ ರೂಪಿಸಿರುವ ಅನೇಕ ತಿಳುವಳಿಕೆಯ ಚಿಂತನಾ ಚೌಕಟ್ಟುಗಳು ಈಗ ಯಾವುದನ್ನ ರೂಪಿಸ್ಕೊಳ್ಳೋದಕ್ಕೆ ಪ್ರವೇಶ ಮಾಡೋದಕ್ಕೆ ಕನಕನನ್ನ ಅಡ್ಡಿಪಡಿಸುತ್ತಿರುವಂತ ಸಂಗತಿಗಳೇನು ಅನ್ನುವಂತದ್ದನ್ನ ತಿಳ್ಕೊಬೇಕಾಗುತ್ತೆ. ಆದರೆ ಪರಿಸರ ಅಂದ್ರೆ ಪಠ್ಯವನ್ನ ನಾವಿವತ್ತು ಓದುತ್ತಾ ಕನಕ ಅಂತ ಓದುತ್ತಿದ್ರು ಕೂಡ ಪಠ್ಯವನ್ನು ಓದುತ್ತಿರುವ ಪಠ್ಯ ಅದಕ್ಕೆ ನಿಶ್ಚಿತವಾದ ಚಾರಿತ್ರಿಕ ಗುಣ ಇಲ್ಲ. ಈ ಘಳಿಗೆಯಲ್ಲಿ ನಾನು ಓದುತ್ತಿರುವುದರಿಂದಾಗಿ ಅದು ವರ್ತಮಾನದ ಈ ಕ್ಷಣದ ಪಠ್ಯವಾಗಿಬಿಡುವುದರಿಂದ ಅದು ನೆನ್ನೆಯ ಪಠ್ಯವೋ ಅಥವಾ ಇನ್ಯಾವುದೋ ಚರಿತ್ರೆಯ ಕಾಲಘಟ್ಟಕ್ಕೆ ಸಿಕ್ಕಿ ಹಾಕಿಕೊಂಡಿರುವಂತ ಪಠ್ಯವೋ ಓದುತ್ತಿರುವ ಕ್ರಮದಲ್ಲಿಯೇ ಇದು ಇಂದಿಗೂ ಕನಕನ ಜೊತೆಗೊಂದು  ಅನುಸಂಧಾನವನ್ನು ಸಂಭಾಷಣೆ ಮಾಡೋದಕ್ಕೆ ಸಮಸ್ಯೆ ಇದೆ ಅಂತ ನನಗೆ ಅನಿಸಿದೆ. ಈ ತರದ ತಿಳುವಳಿಕೆಯ ಹಿನ್ನೆಲೆಯಲ್ಲಿ ಕನಕನನ್ನು ರೂಪಿಸಿದ ಪರಿಸರ ಒಂದಿದೆ ಮತ್ತು ಕನಕ ತಾನು ತನ್ನ ಕೃತಿಗಳ ಮೂಲಕ ಅಥವಾ ನಾವಿತ್ತು ಏನು ಕನಕನನ್ನು ಉತ್ಪನ್ನ ಅಂತ ನಾವು ಮನಸ್ಸಿನಲ್ಲಿ ಇಟ್ಕೊಂಡು ಮಾತಾಡ್ತಿದಿವೋ ಅವುಗಳಲ್ಲಿ ರೂಪುಗೊಂಡಿರುವಂತ ಒಂದು ಪರಿಸರ ಇದೆ. ಇವುಗಳ ನಡುವೆ ಇರುವ contrast ಗಳು ಬಹಳ ಆಸಕ್ತಿದಾಯಕವಾದಂತ ಒಳನೋಟಗಳನ್ನು ಕೊಡಬಲ್ಲವು ಅಂತ ನನಗನ್ನುಸ್ತೆ. ಅಂದರೆ, ಕನಕನನ್ನ ರೂಪಿಸಿದ ಒಂದು ಪರಿಸರ ಮತ್ತು ಕನಕ ತನ್ನ ಕೀರ್ತನೆ ಮತ್ತು ಕೃತಿಗಳಲ್ಲಿ ರೂಪಿಸಿರುವಂತ ಪರಿಸರಗಳ ಮಧ್ಯೆ ಇರುವಂತ ಸಂಬಂಧಗಳು ಮತ್ತು ಅವುಗಳನ್ನ ನಾವು ನಿಜಕ್ಕೂ ಅಧ್ಯಯನ ಮಾಡೋದಕ್ಕೆ ಸಾಧ್ಯವಾದ್ರೆ ಕನಕನನ್ನು ಕುರಿತು ಪಡೆಯಬಹುದಾಗಿರುವಂತ ತಿಳುವಳಿಕೆ ಇನ್ನೊಂದು ಮಗ್ಗುಲಿಗೆ ಹೊರಳಬಹುದಾದ ಸಾಧ್ಯತೆಗಳಿವೆ ಅಂತ ನನಗೆ ಅನಿಸಿದೆ.

ಈ ಮಧ್ಯದಲ್ಲಿ ನಾವು ಕನಕನ ಕೃತಿಗಳಿಂದ ಬೇರೆ ಬೇರೆ ಉಲ್ಲೇಖಗಳನ್ನಿಟ್ಟುಕೊಂಡು ಮಾತನಾಡಲಿಕ್ಕೆ ಹೊರಟರೂ ತಿರುಗಿ ಮುಖ್ಯವಾಗಿ ನಮಗೆ ಸಮಸ್ಯೆಯಾಗ್ತಾಯಿರೋದು ಈಗಾಗಲೇ ಕನ್ನಡ ತಿಳುವಳಿಕೆ ರೂಪಿಸಿಕೊಟ್ಟಿರಬಹುದಾದ ದಾಸರದ್ದಿರಬಹುದು, ವಚನಗಳದ್ದಿರಬಹುದು ಅಥವಾ ಕನ್ನಡ ಸಾಹಿತ್ಯವನ್ನೇ ಕುರಿತು ಮಾತನಾಡುವುದಿರ ಬಹುದು – ಸಿದ್ಧಪಡಿಸಿಕೊಟ್ಟಿರುವಂತ ವಿಮರ್ಶೆಯ ಪದಕೋಶ ಇದೆಯಲ್ಲ ಅದು ಬದಲಾಗದೆ ಕನಕನ ಜೊತೆ ಒಂದು ಹೊಸ ಮಾತು ಸಾಧ್ಯವಿಲ್ಲ ಅಂತ ನನಗನಿಸಿದೆ. ಅದು ಅನುಭಾವದ ಬಗೆಗಿನ ಡೆಫಿನಿಷನ್ ಇದ್ದಿರಬಹುದು ಅಥವಾ ಧರ್ಮ ಅನ್ನೋದನ್ನ ಕುರಿತು ನಾವು ಡಿಫೈನ್ ಮಾಡಿಕೊಂಡಿರುವಂತ ಕ್ರಮವಿರಬಹುದು ಅಥವಾ ಅಲ್ಲಿ ಸಂಸಾರ ಅಂದ್ರೆ ಏನು ಅನ್ನುವಂತ ಡಿಫೈನ್ ಮಾಡಿರುವಂತ ಕ್ರಮ ಇರ್ಬಹುದು. ಈಗ ನಮಗೆ ಅಧ್ಯಯನ ಮಾಡುವವರಿಗೆ ಸಂಶೋಧನೆ ಮಾಡುವವರಿಗೆ ಅಥವಾ ಪ್ರಬಂಧ ಬರಿಯೋರಿಗೆ ಒಂದು ವಸ್ತುವನ್ನ ಬರೀತಾ ಇದ್ರು ಕೂಡ ಎಲ್ಲದಕ್ಕೂ interpretationಗೆ ಬೇಕಾಗುವಂತ ಒಂದು Dictionery ರೆಡಿ ಇದೆ. ಅದು ಕನಕದಾಸನಿಗೂ ಅಪ್ಲೈ ಮಾಡಿ ಮಾತನಾಡೋದಾಗಿರಬಹುದು, ಪುರಂದರದಾಸರ ಬಗ್ಗೆ ಅಪ್ಲೈ ಮಾಡಿ ಮಾತ್ನಾಡ್ತಿರಬಹುದು, ಕುವೆಂಪುಗೂ ಅಪ್ಲೈ ಮಾಡಿ ಮಾತಾಡ್ತಿರಬಹುದು. ನಿಜಕ್ಕೂ ಆ ಮಾತುಗಳನ್ನು ಬಳಸ್ತಿರೋದರ ಮೂಲ್ಕನೇ ನಾವು ಈ ಕೃತಿಗಳ ಒಳಗಿನ ಪರಿಸರಕ್ಕೆ ಅಥವಾ ಲೋಕಕ್ಕೆ entry ತಗೊಳ್ಳೋಕೆ ಆಗ್ತಾಯಿಲ್ವೇನೋ ಅಂತ ನನಗನ್ನುಸ್ತೆ. ಇದನ್ನ ನಾವು re-visit ಮಾಡ್ಬೇಕಾದ ಅವಶ್ಯಕತೆ ಇದೆ ಅಂತ ಅನ್ನುಸ್ತೆ. ಹಾಗಾದ್ರೆ ಕನಕ ಹೇಳುತ್ತಿರುವಂತಹ ಲೋಕ ಗ್ರಹಿಕೆ ಅಥವಾ ಲೋಕಾನುಭವ ಈಗಾಗಲೇ ಸಿದ್ಧಗೊಂಡಿರುವಂತ ಕನಕನನ್ನು ಕುರಿತು ಬರೆದಿರುವಂತಹ ಸಾಕಷ್ಟು textಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಮಾತು ಹೇಳ್ತಾಯಿದೀನಿ. ಅವುಗಳ ಮೇಲೆ ಬಂದಿರುವ ವಿಮರ್ಶೆಗಳು, ಸಂಶೋಧನಾ ಪ್ರಬಂಧಗಳು ಎಲ್ಲವನ್ನೂ ಕೂಡ ತಕ್ಕ ಮಟ್ಟಿಗೆ ನಾನು ಓದಿರುವ ಮಾಹಿತಿಯನ್ನ ಆಧರಿಸಿ ಮಾತಾಡ್ತೀನಿ. ಇದರಲ್ಲಿ ಈ ಬಗೆಯ ಸಮಸ್ಯೆಯನ್ನು ನಾನು ಎದುರಾಗಿದೀನಿ. ಕನಕನನ್ನ ಅಥವಾ ಶಿಶುನಾಳನನ್ನ ಇರಬಹುದು ಈ ತರದ ಯಾವುದನ್ನ ನಾವು ಜನರ ಬದುಕಿನ ಜೊತೆ ರೂಪುಗೊಂಡು ಬಂದಂತ ತಿಳಿವಳಿಕೆಯ ಮಾರ್ಗಗಳಿವೆ ಅವುಗಳನ್ನ ಹೇಳೋದಕ್ಕೂ ಅದೇ ಭಾಷ್ಯವನ್ನ ಜನಪದ ಸಾಹಿತ್ಯವನ್ನು ವಿವರಿಸುವುದಕ್ಕೂ ಅದೇ ಭಾಷ್ಯವನ್ನ ಮತ್ತು ನಾವು ಯಾವುದನ್ನ written textಗಳು ಅಂತೀವೋ ಅವನ್ನ ಹೇಳೋದಕ್ಕೂ ಅದೇ ತರ ಭಾಷೆಯನ್ನ ಬಳಸ್ತಿರೋದ್ರಿಂದಾಗಿ ಸಮಸ್ಯೆಯಾಗಿದೆ ಅಂತ ನನಗನ್ನುಸ್ತೆ. ನಾವು ಬಳಸುವ ಪರಿಭಾಷೆಯ ಲೋಕ ನಮ್ಮ ತಿಳಿವಳಿಕೆಯನ್ನ ಈಗ ಭಗ್ನಗೊಳಿಸ್ತಾ ಇರೋದ್ರಿಂದ ತತ್‌ಕ್ಷಣದ ಬಿಕ್ಕಟ್ಟಾಗಿದೆ. ಕನಕದಾಸರನ್ನ ಕುರಿತಾದಂತ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಇದು ಜನರಲ್ ಆಗಿ ಕೂಡ ಇನ್ಯಾರಿಗಾದ್ರೂ ಅನ್ವಯವಾಗುವ ಮಾತಾಗಿ ನನಗೆ ಕಾಣಿಸ್ತಾ ಇದೆ. ಹಾಗಾಗಿ ಕನಕದಾಸರನ್ನ ದಾಸರು ಮತ್ತು ಕೀರ್ತನೆಗಳ ಜೊತೆ ಇಟ್ಟು ಓದುವುದೇ ಒಂದು ಮಿತಿಯನ್ನ ಓದುಗಳ ವಿಸ್ತರಣೆಗೆ ಆ textಗಳು ನಂಟುಗಳನ್ನು ಬೇರೆ ಬೇರೆ textಗಳೊಂದಿಗೆ ಅದು ಪಡೆಯಬಹುದಾದ ಬೇರೆ ಬೇರೆ ತಿಳಿವಳಿಕಾ ಪ್ರಸ್ತಾವನೆಗಳ ಜೊತೆ ಅದು ಪಡೆದುಕೊಳ್ಳಬಹುದಾದ ಕನ್ನಡದಲ್ಲಿ ನಡೆದಿರುವಂತಹ ಬೇರೆ ಬೇರೆ ಶಾಲೆಗಳ ಜೊತೆ ಅದು ಸಂಬಂಧಗಳನ್ನ ಏರ್ಪಡಿಸಿಕೊಳ್ಳಲು ನಾವು ನಿರಾಕರಿಸ್ತಾಯಿದೀವಿ ಅಂತ ನನಗನ್ನುಸ್ತೆ. ಕನಕದಾಸರೇ ಕೈ ಬೆಸೆಯುವುದಕ್ಕೆ ಸಿದ್ಧರಾಗಿರ್ತಕ್ಕಂತ ಅಥವಾ ಕನಕನ ಜೊತೆ ಕೈ ಜೋಡ್ಸೋದಕ್ಕೆ ಸಿದ್ಧವಾಗಿರುವ ತಿಳಿವಳಿಕೆಗಳ ಬಗ್ಗೆ ನಾವು ಅಡ್ಡಿಯಾಗಿ ನಿಂತಿದ್ದೇವೆ

ಅಂತ ನನಗನ್ಸುತ್ತೆ. ಹಾಗೆ ಅಡ್ಡಿಯಾಗಿ ನಿಂತಿರೋದು ನಮ್ಮನ್ನು ರೂಪಿಸಿರುವಂತಹ ನಮ್ಮ ಶೈಕ್ಷಣಿಕ ಚೌಕಟ್ಟುಗಳು ಮತ್ತು ನಮ್ಮ ಸುತ್ತಲಿನ ರಾಜಕಾರಣದ ನೆಲೆಗಳು ಮತ್ತು bargaining politics ಇರಬಹುದು ಅಥವಾ identity politics ಇರಬಹುದು. ಇವೆಲ್ಲವೂ ಕೂಡ ಅದರ ಹಿಂದೆ ಕೆಲ್ಸ ಮಾಡ್ತಾಯಿರೋದ್ರಿಂದ ಅರ್ಥ ಮಾಡ್ಕೊಂಡಿದೀನಿ. ಇದ್ರಲ್ಲಿ ನಾನು ಒಂದು ವಿಲಕ್ಷಣ ಅನಿಸುವಂತ ಒಂದು text ಒಂದು ಪದ್ಯವನ್ನು ಗಮನಿಸಿದೆ. ಅದನ್ನ ಸುಮ್ಮನೆ ನಿಮ್ಮ ಮಾಹಿತಿಗಾಗಿ ಓದ್ತೀನಿ. ಇಂತಾದ್ರಲ್ಲಿ ನಾವು ಅದ್ನ ಇಂಟರ್‌ಪ್ರಿಟ್ ಮಾಡುವಾಗ ವಿಚಾರಕ್ಕೆ ಮನ್ನಣೆ, ವಿಚಾರ ಮತ್ತು ಅವಿಚಾರಕ್ಕೆ ಕೆ.ವಿ.ಎನ್. ಹಿಂದೆ ಒಂದ್ಸಲ ರಾಜಶೇಖರ ಅವರನ್ನ ಕೋಟ್ ಮಾಡಿ ಹೇಳಿದ್ದು ನನಗೆ ನೆನಪಿದೆ. ವಿಚಾರಿತ ಸುಂದರ ಮತ್ತು ಅವಿಚಾರಿತ ರಮಣೀಯ. ಇಲ್ಲಿ ಅವಿಚಾರಿತ ರಮಣೀಯ ಮಾದರಿಯ ಕನಕದಾಸರೇ ಸಜೆಸ್ಟ್ ಮಾಡ್ತಾ ಇರೋದ್ರಿಂದ ಬಹುಶಃ ಇದನ್ನ ಕನಕದಾಸರು ವ್ಯವಹರಿಸಿದ್ದ ಲೋಕ ಎಷ್ಟು ವಿಚಾರವಂತಿಕೆಯ ಲೋಕ ಆಗೋಗಿ ಅವ್ರಿಗೆ ಎಷ್ಟು ಬೇಸರ ಬಂದಿತು ಎನ್ನೋದಕ್ಕೆ ಒಂದು ಕುರುಹಾಗಿ ನಮ್ಗೆ ಇದನ್ನ ಅಂದ್ರೆ ನಮ್ಗೆ ತಿಳಿವಳಿಕೆಯಲ್ಲಿ ಈ ಹಾಡು ಅದು ಅಷ್ಟು ರಿಜಿಡ್ ಆಗಿ ಹೋಗಿದ್ದುದರ ರೀತಿಯನ್ನ ಸಜೆಸ್ಟ್ ಹಂಗಿದೆ. "ಸಹಜವಿದು ಈ ನುಡಿಯು ಸಡಿಯ ಮಾತಲ್ಲ ಮಹಿಮೆಯೊಳಗೆ ಪೇಳುವೆನು ಅಹಿತ ವಾಕ್ಯಗಳ ಶೃತಿ ಶಾಸ್ತ್ರ ಪುರಾಣಗಳ ಓದುವವನೇ ಶೂದ್ರ" – ಅಂದ್ರೆ ಇದು ರಿವರ್ಸ್ ಆಗಿರಬೇಕು. ಶೃತಿ ಶಾಸ್ತ್ರಗಳನ್ನು ಓದದವನು ಶೂದ್ರ ಅಂತಿರಬೇಕು ಇಲ್ಲಿ ಓದಿದವನು ಶೂದ್ರ ಅಂತಿದೆ. ಅತಿಥಿಗಳಿಗೆ ಆದರಿಸುವವನೇ ಅತಿ ಮುಗ್ಧ, ಪ್ರತಿ ದಿವಸ ಸಂಧ್ಯಾವಂದನೆಗಳನ್ನು ಮಾಡುವವನೇ ಪಾಪಿ, ಪತಿಯ ಆಜ್ಞೆಯಿಂದಿರುವವಳೇ ಪರಮ ಪಾತಕಿ, ದಾನಧರ್ಮಗಳನ್ನು ಬಿಡುವವನೇ ಧರ್ಮಾತ್ಮ, ಮಾನಾಭಿಮಾನವನ್ನು ಹಿಡಿದವನೇ ಯೋಗಿ. ಪ್ರಾಣಿಗಳಿಗೆ ಹಿಂಸೆ ಕೊಡುವವನೇ ಸುಜ್ಞಾನಿ, ಸಜ್ಜನರ ಕೆಡಿಸುವವನೇ ಸತ್ಪುರುಷ, ಕೆರೆಕಟ್ಟೆ, ಹೂದೋಟ ರಚಿಸುವವನೇ ದ್ರೋಹಿ, ಗುರುಹಿರಿಯರ ಬೈಯುವವನೇ ಶಿಷ್ಯ, ಶ್ರೀ ಕಾಗಿನೆಲೆಯಾದಿಕೇಶವನ ಚರಣವನು ಸರಸದಲಿ ನಂಬುವವನೇ ಅವಿಚಾರ ಪುರುಷ". ಅಂದ್ರೆ ನಾವು ಈಗಾಗಲೇ ಪೂರ್ವ ತೀರ್ಮಾನ ಮಾಡಿರುವ ತಿಳಿವಳಿಕೆಗಳಿಗೆ, ಅದು ಕನಕರಲ್ಲಿರಬಹುದು ಅಥವಾ ಇನ್ನಾವುದೇ ಪಠ್ಯವನ್ನು ಕೊಟ್ರೂ ಅದರಿಂದ ನಮ್ಮ ಕನ್‌ವಿಕ್ಷನ್‌ಗಳ ಒಂದು ಅನುಭವವನ್ನೂ ಮತ್ತು ನಮ್ಮ ತಿಳಿವಳಿಕೆಯನ್ನೂ ನಾನು ಹೇಳೋದಿಕ್ಕೆ ಪ್ರಯತ್ನಿಸುತ್ತಿರುವಂಥಾ ಒಂದು ಅದರ ಇಂಟೆನ್ಸಿಟಿಯಿದೆಯಲ್ಲ ಅದನ್ನು, ಅಂದರೆ ನನ್ನ ಕಣ್ಣಮುಂದೆ ಅದು ಹಾಜರಿದ್ದು ದಿಕ್ಕು ತಪ್ಪಿಸುತ್ತಿರುವಂತ ಸ್ಥಿತಿ ಒಂದನ್ನು ಇದು ತರ್ಕಕ್ಕೆ ಕಟ್ಟಿ ಬಿದ್ದಿರುವಂತ ಜಗತ್ತಿಗೆ ಈ ತರದಂತಹ ಬಹಳ ವಿಲಕ್ಷಣವಾದ ಅವರು ಬರೆದಿರುವಂತಹ ಕೀರ್ತನೆಗಳ ಜೊತೆ ಇಟ್ಟಾಗ ಅದು ಯಾಕೆ ವಿಲಕ್ಷಣವಾಗಿ ಕಾಣ್ಸುತ್ತೆ? ಅನ್ನೋದು ಗೊತ್ತಾಗುತ್ತೆ. ಇದನ್ನ ನಾವು ಇಲ್ಲ ಇದೊಂದು ಮೆಟಫರ್. ಅವ್ರು ಹಂಗೆ ಹೇಳ್ತಾ ಇದ್ರು ಅದರ ವಿರುದ್ಧವಾಗಿ ನಾವು ತಿಳಿಬೇಕು ಅಂತೆಲ್ಲ ನಾವು ನಮ್ಮ ಜಾಣತನವನ್ನು ಬಳಸಿ ಅದನ್ನ ಮತ್ತೊಂದಾಗಿ ವಿವರಿಸುವುದು ಬೇರೆ. ಆದ್ರೆ ಇರುವ ಹಾಗೇನೇ ಒಂದು textನ ಜೊತೆ ನಾವು ವ್ಯವಹರಿಸಿದ್ರೆ ಒಂದು ತೊಡಕಾಗುತ್ತದೆ. ಆದ್ದರಿಂದ ನನ್ನ ಮಾತುಗಳನ್ನು ಸಂಕ್ಷೇಪಿಸಿ ನಾವು ಹೇಳೋದಾದ್ರೆ ಒಂದು ಕನಕರನ್ನ ಅವರ ದಾಸ ಅಥವಾ ಭಕ್ತಿಪರಂಪರೆ ಅಥವಾ ಕೀರ್ತನೆ ಇವುಗಳ ಚೌಕಟ್ಟಿಗೆ ಮಾತ್ರ ನಿಬಂಧಿಸಿ ಅವನ್ನು ಓದುವ ಕ್ರಮ ನಮ್ಮನ್ನ ಖಂಡಿತವಾಗಿಯೂ ಕೂಡ ಒಂದು ಹೊಸ ತಿಳಿವಿಗೆ ಅಥವಾ ಒಂದು ಹೊಸ ಓದಿಗೆ ಒಡ್ಡುವುದಿಲ್ಲ ಅನ್ನುವುದು ನನ್ನ ತಿಳುವಳಿಕೆ. ಎರಡನೆಯದು ಇಡೀ ಕನ್ನಡ ಪರಂಪರೆಯ ಒಳಗೆ ಕನಕರನ್ನ ಓದೋದಕ್ಕೆ ಹೊರಟರೆ ಒಂದು ನಂಟು ಬೆಳೆಸುವ ಕ್ರಮದೊಳಗೆ ನಮಗೊಂದು ಹೊಸ ಓದಿನ, ತಿಳಿವಿನ ಲೋಕ ಬರಬಹುದು ಅಥವಾ ಕನಕ ಹೇಗೆ ಕೇವಲ ಒಂದು ದಾರಿ, ಆವಾಗ್ಲೇ ಯಾರೋ ಹೇಳ್ತಾ ಇದ್ರು ಪಥವಾಗಿರಬಹುದಾದ ಮಾರ್ಗವೊಂದನ್ನ ಅದು ಸೂಚಿಸುವ ಆ ಮೂಲಕವಾಗಿ ಆ ತರದ ಒಂದು ತಿಳಿವಳಿಕೆಯನ್ನ ಕಟ್ಟಿಕೊಡುತ್ತೆ ಅನ್ಸುತ್ತೆ. ಎರಡ್ನೆಯದು ವಿಚಾರಿತ ಅನ್ನೋ Readingಗಳನ್ನು ಬಿಟ್ಟು ಅವಿಚಾರಿತ ರಮಣೀಯವಾದಂತ ರೀತಿಯಲ್ಲಿ ಓದ್ಬೇಕು ಅಂತ ಆ ಕಾಲಕ್ಕೆ ಮೀಮಾಂಸಕರು ಹೇಳಿದ್ರೂ ಕೂಡ ಇನ್ನೂ ನಾವು ಆ ಮೀಮಾಂಸಕರ ಮಾತನ್ನು ಕೇಳದೇ ಇರುವುದರ ಬಗ್ಗೆ ನಿಮ್ಮ ಗಮನವನ್ನು ಸೆಳೆದು ಈಗ ವರ್ತಮಾನ ಇಷ್ಟೆಲ್ಲ ಮಾತನಾಡ್ತಾ ಇದ್ರೂ ಕೂಡ ಒಂದು ಪಠ್ಯಕ್ಕೆ ಚಾರಿತ್ರಿಕತೆ ಅಂತ ನಾವು ಏನು ಮಾತಾಡ್ತಾಯಿದೀವಿ ಅವುಗಳು ಇನ್ನು ಇರೋದಿಲ್ಲ. ಅವು ಓದುತ್ತಿರುವ ಘಳಿಗೆಯಲ್ಲಿ ಮಾತ್ರ ಆ ಪಠ್ಯ ಇದೆ. ಆದ್ದರಿಂದಲೇ ಅದನ್ನ ನಾವು ನಮ್ಮ ತಿಳುವಳಿಕೆಗೆ ಈಗ ನಾವು ಮುಖಾಮುಖಿಯಾಗಬೇಕಾದಂತ ಅನಿವಾರ್ಯತೆಯನ್ನ ಸೂಚಿಸುತ್ತದೆ ಅಂತ ನನ್ಗೆ ಅನಿಸ್ತದೆ. ಹೀಗೆ ಪರಿಸರ ಕನಕರನ್ನು ರೂಪಿಸಿದ ಪರಿಸರವನ್ನ ಕುರಿತು ಮಾತನಾಡೋಕೆ ಹೋದ್ರೆ ಅದು ಚರಿತ್ರೆ ಈಗಾಗಲೇ ಹೇಳಿರುವಂತ ಚೌಕಟ್ಟುಗಳಿಗೆ ನಾವು ಸಿಕ್ಕಿಕೊಳ್ಳುವ ಮೂಲಕ ಕನಕ ರೂಪಿಸುತ್ತಿರುವ ಕನಕ ಕಂಡರಿಸುತ್ತಿರುವ ಲೋಕ ಏನಿದ್ಯಲ್ಲ ಆ ಲೋಕದ ಜೊತೆಗಿನ ಚರ್ಚೆಗೆ ನಾವು ಮುಂದಾದರೆ ಆ ಮೂಲಕ ನಾವು ಒಂದು ಲೋಕವನ್ನು ತಿಳಿಯುವ, ಗ್ರಹಿಸುವ, ಅನುಸಂಧಾನಿಸುವ ಒಂದು ಮಾರ್ಗ ಅಲ್ಲಿಂದಲೇ ರೂಪುಗೊಂಡುಬಿಡುತ್ತದೆ. ಆ ದಾರಿಯನ್ನ ನಾವು ಹಿಡಿದ್ರೆ ಮುಂದಿನ ಸಂಶೋಧನೆಗಳಲ್ಲಿ ಮತ್ತು ಮುಂದಿನ ತಿಳುವಳಿಕೆಗಳಲ್ಲಿ ನಾವು ಈಗಿನವರೆಗೆ ನಡೆದು ನಡೆದು ಸವೆದಿರುವ ದಾರಿಗಿಂತ ಬದಲಾಗಿ ಒಂದು ಕಾಡಿನ ದಾರಿ ಕಡೆಗೆ ಹೋಗ್ಬಹುದು, ಬೇರೆ ಬೇರೆ ಕಡೆ ಇರುವ ಸಂಗತಿಗಳೆಲ್ಲ ಕಾಣ್ಬಹುದು ಅಂತ ನನಗೆ ಅನ್ಸುತ್ತೆ. ಅದು ಕನಕನನ್ನು ಸೃಷ್ಟಿಸಿದ ಕಂಡರಿಸಿದ ಪರಿಸರಕ್ಕೆ ನಮ್ಮನ್ನು ಕರೆದೊಯ್ಯುತ್ತದೆ ಅಂತ ನನ್ನ ತಿಳಿವಳಿಕೆ.

**ಚರ್ಚೆ : ಕೆ.ವಿ.ಎನ್.**

ನಾನು ಬೆಳಗ್ಗೆ ಮಾತನಾಡಿದ್ದರ ಹಿನ್ನೆಲೆಯಲ್ಲಿ ಸ್ವಲ್ಪ ಅದರ ಜೊತೆಗೆ ಲಿಂಕ್ ಮಾಡ್ಕೊಳ್ಳೋದಕ್ಕೆ ಪ್ರಯತ್ನ ಪಡ್ತೇನೆ. ಮತ್ತೆ ಮಧ್ಯಾಹ್ನದ ಸೆಷನ್‌ನೊಳಗಡೆ ಬುದ್ಧ enter ಆದ. ಬುದ್ಧ enter ಆಗಿ ಬುದ್ಧನನ್ನು ಮತ್ತು ಕನಕನನ್ನು ಒಟ್ಟಿಗೇ ಇಡುವ ಪ್ರಯತ್ನಗಳೂ ಕೂಡ ನಡೆದ್ವು ಮತ್ತು ನಡೀಬಹುದು. ಎಲ್ಲಿ ಸಮಸ್ಯೆ ಬರ್ತಾ ಇದೆ. ನಾನು ಬೆಳಗ್ಗೆ ಎಲ್ಲಿ ಕನಕದಾಸರನ್ನ ನೋಡುವ ಅಥವಾ ಅವರ ಭಾಷಿಕ ರಚನೆಗಳನ್ನ ನೋಡೋದಕ್ಕೆ ನಮಗಿರುವ ಎರಡು ದಾರಿಗಳಲ್ಲಿ ಒಂದು ದಾರಿಯನ್ನು ಆಯ್ಕೆ

ಮಾಡ್ಕೊಳ್ಬೇಕಾಗಿ ಬರ್ತದೆ ಅಂತ ಯಾಕ್ಹೇಳ್ದೆ ಅಂದ್ರೆ, ಕನಕದಾಸರು ಬುದ್ಧನ ತರದಲ್ಲಿ ಕಂಡದ್ದನ್ನ ಹೇಳುವವರಲ್ಲ. ಕಾಣುವ ತವಕದಲ್ಲಿದ್ದು ನಮ್ಮನ್ನವರ ಜೊತೆ ಕರ್ಕೊಂಡು ಹೋಗುವವರು. ಬುದ್ಧನಿಗೆ ಮಿಲಿಂದ ಪ್ರಶ್ನೆ ಇದೆ. ಪ್ರಶ್ನೆಗಳಿಗೆ ಉತ್ರ ಕೊಡೋದಿಲ್ವೆ ಅವ್ನು ಅಂತ ಕೇಳ್ಬಹುದು. ಆದ್ರೆ ಆ ಪ್ರಶ್ನೆಗಳೆಲ್ಲ ಯಾವ್ತರ ಇರ್ತವೆ ಅಂದ್ರೆ, ಮಿಲಿಂದ ಪ್ರಶ್ನೆಯಲ್ಲಿ ನೀವ್ನೋಡಿದ್ರೆ ಯಾವ್ದರ ಉತ್ತರ ಬುದ್ಧನತ್ರ ಇರ್ತದೋ ಅದಕ್ಕೆ ಪ್ರಶ್ನೆಗಳಿರ್ತವೆ ಅಷ್ಟೆ. ಬುದ್ಧನ ತಿಳುವಳಿಕೆಯನ್ನೇ ಪ್ರಶ್ನಿಸುವ ಪ್ರಶ್ನೆಗಳು ಮಿಲಿಂದ ಪ್ರಶ್ನೆಯಲ್ಲಿಲ್ಲ. ಬುದ್ಧ ಅಷ್ಟೊಂದು ದೀರ್ಘವಾಗಿ ತಪಸ್ಸು ಮಾಡಿ ಏನನ್ನು ಕಂಡುಕೊಂಡಿದ್ದ ಅಥವಾ ಕಂಡ್ಕೊಂಡಿದೀನಿ ಅಂತ ತಿಳ್ಕೊಂಡಿದ್ದ ಅದನ್ನ ಬಂದ್ಹೇಳ್ತಾಯಿರ್ವಾಗ ಅದೊಂದು ಡಿಸ್‌ಕೋರ್ಸ್‌ನ ಮೆಥೆಡ್ ಆಗಿ ಮಿಲಿಂದ ಪ್ರಶ್ನೆ ಬರ್ತದೆ. ಸಂಘದಲ್ಲಿ ನಡೀತಾ ಇದ್ದ ಚರ್ಚೆಗಳು ಬರ್ತದೆ. ಆ ಚರ್ಚೆಯಲ್ಲಿ ಪ್ರಶ್ನೆಗಳು ಯಾವ್ತರ ಇರ್ತದೆ ಅಂದ್ರೆ ಬುದ್ಧನ ತಿಳಿವಳಿಕೆಯ ಚೌಕಟ್ಟನ್ನು ನಮ್ಗೆ ರವಾನಿಸುವ ರೀತಿಯಲ್ಲಿರುತ್ತದೆ. ಬುದ್ಧನಿಗೆ ಹೌದಲ್ವ ನನಗಿದು ಗೊತ್ತಿರ್ಲಿಲ್ವಲ್ಲ ಅನ್ನೋ ರೀತಿ ಪ್ರಶ್ನೇನ ಯಾರೂ ಹಾಕಲ್ಲ. ಅದೇ ಕನಕದಾಸರಿಗೆ ಈ ರೀತಿಯಲ್ಲಿ ತಿಳಿವಳಿಕೆಯನ್ನ ರವಾನಿಸುವುದಕ್ಕೆ ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ ಇದು statement. ನೀವ್ಯಾರಾದರೂ ಅದನ್ನ ಬೇರೆ ರೀತಿಯಲ್ಲಿ ವ್ಯಾಖ್ಯಾನ ಮಾಡಬಹುದು. ಹೌದಲ್ವ ಇವ್ರು statement ಕೊಟ್ಟಿದ್ದಾರೆ ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ. ಶಂಬಾ ಅವ್ರೇನೇ ಇದನ್ನೀರೀತಿ ವ್ಯಾಖ್ಯಾನ ಮಾಡಿ, ಇವ್ರು ದಾಸ ಪರಂಪರೆಯನ್ನು ಬೆಳೆಸಿದವರು, ಗುರು ಅನ್ನುವ ಕಲ್ಪನೆಯನ್ನ ಒಪ್ಕೊಂಡವರು ಅಂತ ಅನ್ಕೊಂಡು.

ಆದ್ರೆ ನೀವು ಕನಕರನ್ನ ಕನಕರ ಭಾಷಿಕ ರಚನೆಗಳನ್ನ ಒಟ್ಟಿಗೆ ನೋಡಿದ್ರೆ ಯಾರಿಂದ ಮುಕುತಿ ದೊರೆಯೋದಿಲ್ಲ ಅಂದ್ರೆ ಗುರುವಿನಿಂದಲೂ ಮುಕ್ತಿ ದೊರಕುವುದಿಲ್ಲ. ಅದೊಂದು ಹಂತ ಅಷ್ಟೆ. ಗುರುವಿನ ಗುಲಾಮನಾಗೋದು, ಆಗೋದು ಮೀರೋದಕ್ಕೋಸ್ಕರವೇ. ಗುಲಾಮನಾಗಿ ಉಳಿಯೋದಕ್ಕೋಸ್ಕರ ಅಲ್ಲ. ಅದಕ್ಕೆ ಮುಕುತಿಯ ಮಾತಾಡ್ತಾರವರು. ಅದರಿಂದ ಒಂದು ಕಾಣುವ ದಾರಿಯಲ್ಲಿ ಓದುಗರನ್ನ ಅಥವಾ ಕೇಳುಗರನ್ನ ತೆಕ್ಕೊಂಡೋಗೋ ದಾರಿ ಇದ್ಯಲ್ಲ ಅದು ಬಹಳ ಅವಶ್ಯ. ಕಾಣಿಸುವ ದಾರಿಯದು. ಅಂದ್ರೆ ಜೊತೆಗೆ ಕಾಣುವ ದಾರಿ. ಕಂಡದ್ದನ್ನ ನಮಗೆ ತಿಳಿಸುವ ದಾರಿಯಲ್ಲ ಅದು. ಆ ರೀತಿ ಅನುಸಂಧಾನವನ್ನ ಮಾಡ್ಬೇಕಾಗಿ ಬರ್ತದೆ. ಇದು ಅನನ್ಯವಾದ ದಾರಿ. ನಾರಾಯಣಸ್ವಾಮಿ ಅದನ್ನ ಕನ್ನಡದ ಬೇರೆ ಬೇರೆ ಕವಿಗಳ, ಚಿಂತಕರ ಪರಂಪರೆ ಜೊತೆಗೆ connect ಮಾಡಿದ್ದು ಸರಿಯಾಗೇ ಇತ್ತು. ಯಾಕಂದ್ರೆ ಪಂಪನೂ ಈ ಕೆಲ್ಸ ಮಾಡ್ತಾನೆ, ಬಸವಣ್ಣನೂ ಈ ಕೆಲ್ಸ ಮಾಡ್ತಾನೆ, ಅಲ್ಲಮಪ್ರಭುನೂ ಈ ಕೆಲ್ಸ ಮಾಡ್ತಾನೆ. ಕುಮಾರವ್ಯಾಸ ಮಾಡ್ತಾನೆ, ಎಲ್ಲರೂ ಕೂಡ ಮಾಡ್ಕೊಂಡು ಬಂದಿದಾರೆ.

ಇವತ್ತು textಗಳು ನಿಮ್ಮ ಜೊತೆಗೆ ನಿಂತ್ಕೊಳ್ಳೋದು ದಾರಿಯಲ್ಲಿ ನಮ್ಮನ್ನ ಕರ್ಕೊಂಡೋಗೋದಕ್ಕೋಸ್ಕರ. ಉದಾಹರಣೆಗೆ ಬಯಲು ಆಲಯದೊಳಗೋ, ಆಲಯವು ಬಯಲೊಳಗೋ, ಬಯಲು ಆಲಯಗಳೆರಡು ನಿನ್ನೊಳಗೋ ಇದಕ್ಕೇನುತ್ರ ಕೊಡೋದ್ನಾವು? ದೇವಾಲಯದ ಕಲ್ಪನೆಗಳಲ್ಲಿ ನಾವೆಷ್ಟೇ ತೊಳಲಾಡಿದರೂ ಕೂಡ ಕೊನೆಗೆ ಬಯಲು ಮತ್ತು ಆಲಯಗಳ ಕಲ್ಪನೆಗಳೆರಡೂ ಹೇಗೆ ಒಂದು ಇನ್ನೊಂದನ್ನ ಒಳಗೊಳ್ಳುತ್ತವೆ? ಮತ್ತು ಒಳಗೊಳ್ತನೇ ಒಂದು ಇನ್ನೊಂದನ್ನ ಹೇಗೆ ಕಿತ್ತಾಕ್ತಾ ಇರ್ತದೆ? ಆಲಯವು ಬಯಲೂ ಆಗ್ಬಹುದು. ಬಯಲು ಆಲಯವೂ ಆಗ್ಬಹುದು. ಹಾಗಾಗುವಾಗ ಒಂದನ್ನ ನುಂಗ್ತಾನೂ ಇರ್ಬಹುದು. ನುಂಗಿದ ತಕ್ಷಣ ತನ್ನನ್ನು ತಾನು ಒಡೆದುಕೊಂಡು ಹೊರಗಡೇನೂ ಹಾಕ್ಬಹುದು. ಈ ಕಾಣಿಸುವ, ಕಂಡದ್ದನ್ನು ಹೇಳುವ ಅಲ್ಲ. ಕಾಣಿಸುವ ಹಂತದ ದಾರಿಯಲ್ಲಿ ಕರ್ಕೊಂಡ್ಹೋಗ್ತಾಯಿರ್ತದೆ. ಇದು ಬಹಳ ಒಳ್ಳೆಯ ದಾರಿಯಾಗ್ತದೆ ಕನ್ನಡದ ನಮ್ಮ ಭಾಷಿಕ ದಾಖಲೆಗಳನ್ನ ನೋಡೋದಕ್ಕೆ ಅಂತ ನನಗೆ ಅನ್ನಿಸುತ್ತದೆ.

ನಾನು ಅರ್ಥ ಮಾಡಿಕೊಂಡ ಹಾಗೆ ನಾರಾಯಣಸ್ವಾಮಿ ಅದನ್ನ ಹೇಳಿದ್ದಾರೆ. ಆದ್ರೆ ತುಂಬ ಸಂದರ್ಭಗಳಲ್ಲಿ ನಮಗೆ ಬಹಳ ಪ್ರಿಯವಾದ ದಾರಿ ಯಾವ್ದು ಅಂದ್ರೆ Historical Reconstruction. ನಮ್ಮ ವಿದ್ವತ್ ಪರಂಪರೆ ಚಾರಿತ್ರಿಕವಾಗಿ ಕನಕನನ್ನ ಪುನಾರಚಿಸೋದು ಅಂದ್ರೆ ಅವನ ಕಾಲಕ್ಕೆ ಅವನನ್ನ ಮಿತಿ ಮಾಡ್ತಕ್ಕಂತದ್ದು ಅಥವಾ ಅವನ ಕಾಲದ ಪ್ರತಿನಿಧಿಯಾಗಿ ಅವನನ್ನ ನೋಡ್ತಕ್ಕಂತದ್ದು. ಇದು ತಪ್ಪು ಅಂತ ನಾನು ಹೇಳಲಾರೆ. ಅದ್ರಲ್ಲಿ ದಿಟಗಳು ಇರಲ್ಲ ಅಂತನೂ ನಾನು ಹೇಳಲಾರೆ. ಆದ್ರೆ ನನಗೆ 21ನೇ ಶತಮಾನದಲ್ಲಿ ಕನಕನನ್ನ ಎದುರು ಹಾಕೋಬೇಕಾದ್ರೆ, ನಾನು ಅವನ ಗುಡ್ಡ ಆಗ್ಬೇಕು ಅಂತ ಅಂದ್ರೆ ನನಗೆ ಆ ಕನಕನಲ್ಲಿ ಆಸಕ್ತಿ ಇಲ್ಲ. ನನಗೆ ಕನಕ ನಿಜ ಆಗ್ಬೇಕು ಅಂದ್ರೆ ನನಗೆ ಆಸಕ್ತಿ ಇರ್ತಕ್ಕಂತಾದ್ದು ಈ ರೀತಿ ಕಾಣಿಸುವ ಸಹ ಪ್ರಯಾಣಿಕನ ಹಾಗೆ, ನಾನು ಅವನನ್ನ ನೋಡ್ಬೇಕು. ಅವನ ಜೊತೆಯಲ್ಲಿ ನಾನೂ ನೋಡ್ಬೇಕು. ಆ ರೀತಿಯ ಪಯಣಿಗನಾಗಿ ರೋದಕ್ಕೆ ಕನಕ ಅನುವು ಮಾಡ್ಕೊಡ್ತಾನೆ ಅಥವಾ ಭಾಷಿಕ ರಚನೆಗಳು ಅನುವು ಮಾಡ್ಕೊಡ್ತಾವೆ ಅನ್ನೋದೇ ನಮ್ಮ ಪಾಲಿಗೆ ದೊಡ್ಡದು. ನಾನು ನಾರಾಯಣಸ್ವಾಮಿಯನ್ನ ಸರಿಯಾಗಿ ಅರ್ಥ ಮಾಡ್ಕೊಂಡಿದ್ದೀನಿ ಅಂದ್ಕೊಂಡಿದೀನಿ.

ನಾರಾಯಣ ಸ್ವಾಮಿ ಈಗ ಪ್ರಸ್ತಾಪಿಸಿರುವ ಎರಡೂ ದಾರಿಗಳು ಒಪ್ಕೊಳ್ತಾನೇ ನಮ್ಮೆದುರು ಇರ್ತಕ್ಕಂತ ಅನೇಕ ಬಿಕ್ಕಟ್ಟುಗಳೂ ಕೂಡ ಬಿಕ್ಕಟ್ಟುಗಳು ಅನ್ನೋದಕ್ಕಿಂತ್ಲೂ ಬಹಳ ಮುಖ್ಯವಾಗಿ ಇವುಗಳಿಂದ ಪಾರಾಗುವ ಕ್ರಮಗಳೇನು? ಅನ್ನೋದನ್ನ ಯೋಚ್ನೆ ಮಾಡ್ಬೇಕು ಅನ್ನುವಂತಾದ್ದು ಮುಖ್ಯ ಅನ್ಸುತ್ತೆ. ಕನಕದಾಸನ ಪರಿಸರ ಅನ್ನೋದಕ್ಕಿಂತ ಹೆಚ್ಚಾಗಿ ಕಾಲಘಟ್ಟಗಳ ಪರಿಸರ, ರಾಜಕೀಯ ಪರಿಸರ, ಧಾರ್ಮಿಕ ಪರಿಸರ, ಸಾಮಾಜಿಕ ಪರಿಸರಗಳ ಹಿನ್ನೆಲೆಯಲ್ಲಿ ಕನಕದಾಸರನ್ನ ನಾವು ಎದುರಾಗುವ ಕ್ರಮಗಳೇನು ಅಂತ ಅಂದ್ರೆ ಕನಕದಾಸರ ಸನ್ನಿವೇಶದೊಳಗಡೆನೆ ಕನಕರಿಗೆ ಒಬ್ಬ ಗುರುವಿಲ್ಲ. ಗುರುವಿನ ಗುಲಾಮನಾಗಬೇಕು ಅಂದ ಕ್ರಮದಲ್ಲೇನೆ ಕನಕನನ್ನ ಗುರುವಾಗಿ ಸ್ವೀಕರಿಸಿದ್ದಿರಬಹುದಾದ ವ್ಯಕ್ತಿತ್ವಗಳಿದ್ದು ಕನಕನನ್ನ ಶಿಷ್ಯನಾಗಿ ಸ್ವೀಕರಿಸಲಾಗದ ವ್ಯವಸ್ಥೆಗಳನ್ನು ಕಂಡುಕೊಳ್ಳೋಕೂ ಸಾಧ್ಯತೆಗಳಿದಾವೆ. ಈಗ ವ್ಯಾಸರಾಯರಾಗಬಹುದು. ಆ ಇಡೀ ದಾಸ ಪರಂಪರೆಯ ಒಳಗಡೆ ಅಂತಹದೊಂದು ಕ್ರಮಗಳನ್ನು ಮತ್ತೆ ಉಡುಪಿ ಸಂದರ್ಭದಲ್ಲೇನೆ ಅಲ್ಲಿ ದೇವಾಲಯ ಪ್ರವೇಶ ಇಲ್ದೆ ಇದ್ದಂತ ಸಂದರ್ಭದಲ್ಲಿ ಕನಕ ಮಂಟಪವೊಂದು ಪ್ರತ್ಯೇಕವಾಗಿ ಮತ್ತೆ ಅದೂ ಕೂಡ ನಿಷೇಧಿತಗೊಳ್ತಾ ಇರ್ತಕ್ಕಂತ ಕ್ರಮ. ಮತ್ತೆ ಸೋಸಲೆ ಮಠದ ಒಳಗಡೆ

ಪ್ರವೇಶ ಇಲ್ದೆ ಇರ್ತಕ್ಕಂತ, ಪ್ರವೇಶ ಪಡ್ಕೊಬೇಕಾದಂತ ಸನ್ನಿವೇಶ ಇರ್ಬಹುದು. ಕಾಗಿನೆಲೆ ಮತ್ತು ಅಲ್ಲಿರ್ತಕ್ಕಂತ ಕುಮ್ಮೂರು ಈ ಬೇರೆ ಬೇರೆ ಉಪ ಪ್ರದೇಶಗಳಿದಾವಲ್ಲ ಅವುಗಳನ್ನ ಕನಕನ ಹಿನ್ನೆಲೆಯಲ್ಲಿ ಒಂದು ಪರಿಸರವಾಗಿ ನಾವು ನೋಡ್ತಕ್ಕಂತದ್ದು. ತಿರುಪತಿ, ಉಡುಪಿ, ಬೇಲೂರು ಪ್ರಧಾನವಾಗಿರ್ತಕ್ಕಂತ ಪರಿಸರಗಳ ನಡುವೆ ಈ ಉಪ ಪ್ರಧಾನವಾಗಿರ್ತಕ್ಕಂತ ಪರಿಸರಗಳನ್ನು ಹ್ಯಾಗೆ ಪರಿಭಾವಿಸ್ಬೇಕಾಗುತ್ತೆ? ಇವತ್ತು ಸಮಕಾಲೀನವಾಗಿರಬಹುದಾದಂಥ ಈ ಪ್ರಧಾನ ಮತ್ತು ಅಧೀನ ಸಾಂಸ್ಕೃತಿಕ ವಾಗಿರ್ತಕ್ಕಂತ ಬಿಕ್ಕಟ್ಟುಗಳ ಒಂದು ಸನ್ನಿವೇಶವನ್ನು ಕನಕನೂ ಎದುರಿಸಿರಬಹುದಾದ ಒಂದು ಸನ್ನಿವೇಶಗಳಾಗಿ ಕಾಣ್ತಾ ಇಲ್ಲವೇ? ಇವುಗಳ ಬಗ್ಗೆ ಈ ದಾರಿಗಳಿದಾವಲ್ಲ ಈ ಮುಂದುವರಿದಂತ ದಾರಿಗಳೇ ಅಥವಾ ಎಲ್ಲ ಕಾಲಕ್ಕೆ ಇರಬಹುದಾಗಿರುವ ತೊಡಕುಗಳೇ.

20ನೇ ಶತಮಾನದಲ್ಲಿ ನಾರಾಯಣಸ್ವಾಮಿ ಹೇಳಿದ ಹಾಗೆ ನಮಗೆ ಕೆಲವು ವೈಚಾರಿಕ ಚೌಕಟ್ಟುಗಳು ನಮ್ಮನ್ನ control ಮಾಡ್ತಿವೆ. rule ಮಾಡ್ತಿವೆ. ಶಿಕ್ಷಣ ಕ್ರಮಾನ ರೂಪಿಸಿಕೊಟ್ಟಿವೆ. ಹೀಗೆ ನೋಡೋದ್ರಿಂದ ನಮಗೆ ಉಪಯುಕ್ತವಾದದ್ದು ಸಿಗುತ್ತೆ ಅಥವಾ ಏನ್ ಸಿಗುತ್ತೆ ಅದು ಉಪಯುಕ್ತವಾದದ್ದು. ಎರಡೂ ಬೇರೆ ಬೇರೆಯವು. ಉಪಯುಕ್ತ ವಾದದ್ದೊಂದು ಸಿಗುತ್ತೆ ಅನ್ನೋದೊಂದು ಅಥವಾ ಏನು ಸಿಗುತ್ತೆ ಅದು ಉಪಯುಕ್ತವಾಗಿರ್ತದೆ ಅಂತ ನಂಬ್ಸೋದು ಇನ್ನೊಂದು. ಈ ದಾರಿಗಳು ನಮ್ಮ ಮೇಲೆ ಹೆಚ್ಚು ಒತ್ತಾಯ ಮಾಡಿವೆ. ಯಾಕೆ Historical Reconstruction ಅಥವಾ ಚಾರಿತ್ರಿಕ ಪುನಾರಚನೆ ಮರುಕಟ್ಟೋಣ ಆಪ್ಯಾಯಮಾನವಾಗಿರ್ತದೆ ಅಂದ್ರೆ ನನಗೂ ಅದಕ್ಕೂ ಇರುವ ಭಾವನಾತ್ಮಕವಾದ ಬಂಧ ಕಡಿದು ಹೋಗೋದರಿಂದಾಗಿ ನಾನದಕ್ಕೆ ಹಕ್ಕುದಾರ ಅಲ್ಲ. ಆ reconstruction ನಾನು ಯಾವ್ದೇ ಬೇಕಾದ್ರೂ Research ಮಾಡಿ I can reconstruct the Kanaka. ಕನಕನನ್ನ ಮತ್ತೆ reconstruct ಮಾಡಲು ಅವನನ್ನ ಚಾರಿತ್ರಿಕ ಪರಿಸರವನ್ನ ಮಾಡಿ ಅಲ್ಲಿಯ ಭಾಷಿಕ ದಾಖಲೆಗೂ ನನ್ನ ಬದುಕಿಗೂ ನಂಟು ಇಲ್ದೇ ಇರೋ ತರ ನೋಡ್ಕೊಳ್ಳೋದು. ಇದನ್ನ ಹೆಚ್ಚು, ಶೈಕ್ಷಣಿಕವಾದ ನಿರ್ಭಾವುಕ ರೀತಿ ಇದು.

ಆದ್ರೆ ಇವತ್ತು ಕನಕನ ಜೊತೆಗೆ ನಾವು ಮಾತುಕತೆಯನ್ನ ಯಾವ್ತರ ಆಡ್ಬೇಕು ಅಂತ? ಆ ರೀತಿ ಮಾತಾಡ್ಬೇಕಾ ನಾವು. ಅದು ಪ್ರಶ್ನೆ ಇರೋದು. ಎಲ್ಲ ಕಾಲ್ದಲ್ಲೂ ಅನಿಸಿರಬಹುದಾದ್ರೂ ಕೂಡ ನಮ್ಮ ಕಾಲದಲ್ಲಿ ಹೆಚ್ಚು ತೀವ್ರಗೊಂಡಿದೆ. ಯಾಕಂದ್ರೆ ನಮಗೆ ನೋಡೋದಿಕ್ಕೆ ಬೇರೆ ದಾರಿಗಳನ್ನ ಕೊಟ್ಟಿರೋದ್ರಿಂದ ಮತ್ತು ಆ ದಾರಿಗಳೇ ಹೆಚ್ಚು ಆಪ್ಯಾಯಮಾನವಾಗಿರೋದ್ರಿಂದ ಆ ದಾರಿಗಳನ್ನ ಹುಡುಕಿ ಹೋಗೋದು ಹೆಚ್ಚು ನಿರಪಾಯಕಾರಿಯಾಗಿರೋದ್ರಿಂದ ಹೆಚ್ಚು ಒತ್ತಡಗಳಿಲ್ಲದೇ ಇರೋದ್ರಿಂದ ನಾವು ಆ ಕಡೆಗೆ ಹೆಚ್ಚು ನುಗ್ತೀವಿ. ತಪ್ಪಲ್ಲ ಅದು. ಆದ್ರೆ ಅದಕ್ಕಿಂತಲೂ ಹೆಚ್ಚು ಬೇಕಾದ ದಾರಿ ಅಂತ ಅಂದೆ ಇದು ಅಂತ ಅಂದ್ಕೊಳ್ತೀನಿ. ಈಗ ತಾರಿಣಿ ಎತ್ತಿದ ಪ್ರಶ್ನೆ ಕೇಳೋಕೆ ನಾವು ತಮಾಷೆಯಾಗಿ ಮಾತಾಡಿದ್ರೂ ಕೂಡ ನಮ್ಮ ಮನಸ್ಸಲ್ಲಿ ಸುಪ್ತವಾಗಿತ್ತದು. ಈಗ ಕಿ.ರಂ.ನಾಗರಾಜು ಅವರು ಯಾರ್ಜೊತೇನೋ ಹೇಳ್ತಿದನ್ನ ನನ್ಜೊತೆಗೂ ಹೇಳ್ತಾ ಇರ್ತಿದ್ರು ಆಗ. ಇವತ್ತು ಅಕ್ಕಮಹಾದೇವಿ ಜೊತೆಗೆ walking ಹೋಗಿದ್ದೆ. ಹರಿಹರ ನನ್ಜೊತೆಗೆ ಮಾತಾಡ್ತಾ ಇದ್ದ ಅಂತೆಲ್ಲ ಹೇಳ್ತಾ ಇರ್ವಾಗ ಏನ್ಹೇಳ್ತಾ ಇದ್ರವ್ರು. ಅದೊಂದು ಭ್ರಮೆನೇ? ಭ್ರಮಾತ್ಮಕವಾದ ಜಗತ್ನಲ್ಲಿದ್ರಾ ಅಲ್ಲ. ಕನಕದಾಸನನ್ನ ನಾನು ಓದ್ತಿದೀನಿ ಅಂದ್ರೆ ಕನಕದಾಸನನ್ನ ಪ್ರತ್ಯೇಕವಾಗಿ ಓದ್ಲೋಕಾಗಲ್ಲ. ನಮ್ ತಲೆ ಒಳಗಡೆ ಎಲ್ಲರೂ ಇದಾರೆ. ಯಾರಿದಾರೆ.....? ಪಂಪ ಇದಾನೆ, ಕುಮಾರವ್ಯಾಸ ಇದಾನೆ, ಲಕ್ಷ್ಮೀಶ ಇದಾನೆ, ಬಸವಣ್ಣ ಇದಾನೆ, ಪುರಂದರ ದಾಸರಿದಾರೆ, ಶಿಶುನಾಳ ಶರೀಫ ಇದಾನೆ, ಕಡಕೊಳ ಮಹದೇವಪ್ಪ ಇದಾನೆ ಮತ್ತು ಕುವೆಂಪು, ಬೇಂದ್ರೆ, ಪುತಿನ, ಕೆ.ಎಸ್.ನರಸಿಂಹಸ್ವಾಮಿ ಆ ಬಗೆಯವರು ಹಾಗಲ್ದೇ ಇರೋರೂ ಬೇಕಾದಷ್ಟು ಜನ ಇದಾರೆ. ಅವರೆಲ್ಲರ ಜೊತೆಗೆ ಅವರ ಭಾಷಿಕ ದಾಖಲೆಗಳಲ್ಲಿ ನಾವು ಕನಕನನ್ನ place ಮಾಡ್ಕೊಳ್ತೀವಿ. ಇವರೆಲ್ಲರೂ ಆಯಾ ಕಾಲ್ದವರು ಅಂತ ಓದ್ತೀನೇನು ನಾನು?

ಅದರರ್ಥ ಎಲ್ಲ ಕಾಲ್ದಲ್ಲೂ ಈ ಸಮಸ್ಯೆ ಇರ್ಲಿಲ್ವೆ ಅಂತಲ್ಲ. ಇದ್ದಿರ್ಲೇ ಬೇಕು. ಆದ್ರೆ ನಮ್ಮ ಕಾಲಕ್ಕೆ ಹೆಚ್ಚು ತೀವ್ರವಾಗಿದೆ. ಹೆಚ್ಚು ಗಟ್ಟಿಯಾಗಿ ನಮ್ಮನ್ನ ಕಾಡಿಸ್ತಾ ಇದೆ ಅಂತ ನಾನು ಅಂದ್ಕೊಳ್ತಾಯಿದೀನಿ.

* * *

ಕಾಲುದಾರಿಗಳ ಶೋಧಕನೇ ನಾನು. ಆ ವಿಚಾರದಲ್ಲಿ ಮೊನ್ನೆ ಯಾವತ್ತೋ ಹೇಳ್ತಾ ಇದ್ದೆ ನಾನು. ನನ್ನ ಗುರು ಗುತ್ತಿ. ಗುತ್ತಿಗೆ ದಾರಿಗಳೇ ಇಲ್ಲ. ಅವನು ಕುಡುಗೋಲು ಹಿಡ್ಕೊಂಡು ದಾರೀನ ಮಾಡ್ಕೊಂಡು ಹೋಗೋನು. ಒಂದಿನ ನಡ್ಕೊಂಡೋದ ದಾರೀಲಿ ಇನ್ನೊಂದ್ ದಿನ ನಡ್ಕೊಂಡೋಗಲ್ಲ ಅವ್ನು. ಗುತ್ತಿ ಗೊತ್ತಾಯ್ತಲ್ಲ ಯಾರು ಅಂತ? ಅವ್ನು ನನ್ನ ಗುರು ನನಗೆ ಯಾವ ದಾರಿಯಲ್ಲಿ ಬೇಕಾದ್ರೂ ಕುಡುಗೋಲು ಎಷ್ಟೊತ್ನಲ್ಲಿ ಯಾವ ರಾತ್ರಿಯಲ್ಲಿ ಬೇಕಾದ್ರೂನೂ ಕಟ್ ಮಾಡ್ಕೊಂಡು ರಸ್ತೆ ಮಾಡ್ಕೊಂಡು ಹೊರಟು ಹೋಗ್ತಾನವನು. ಬೇರೆ ಬೇರೆ ಕಾರಣಗಳಿಂದ ಆ ರೀತಿ ಮಾಡ್ತಾನೆ. ಯಾರಿಗೂ ಗೊತ್ತಾಗ್ಬಾರ್ದು ಅಂತ ತನ್ನ trace ಮಾಡ್ಬಾರ್ದು ಅಂತ, ಅದಕ್ಕೋಸ್ಕರ ಕಳ್ಳದಾರಿಗಳನ್ನ ಹಿಡೀತಾ ಇರ್ತಾನವನು ಆ ಮಾತು ಬೇರೆ. ಹೆದ್ದಾರಿಗಳನ್ನ ನಿರ್ಮಾಣ ಮಾಡ್ತಾ ಇದ್ರೂ ಕೂಡ ಜನರು ಒಳ ದಾರಿಗಳನ್ನ ಹಿಡೀತಾನೇ ಇರ್ತಾರೆ. ಕಳ್ಳ ದಾರಿಗಳನ್ನ ಹಿಡೀತಾ ಇರ್ತಾರೆ. ಸಂದಿಗಳನ್ನ ಹಿಡೀತಾ ಇರ್ತಾರೆ. ಅವರು ಏನ್ಮಾಡ್ತಾ ಇದಾರೆ ಅದು ಬಹಳ ಮುಖ್ಯ. ನೀವು 8 line highwayಗಳನ್ನ ಮಾಡ್ತಾ ಇರಬಹುದು. ಜನ ಏನ್ಮಾಡ್ತಾ ಇರ್ತಾರೆ. ಅದು ಬಹಳ Important.

**ಚರ್ಚೆ : ಕೆ.ವೈ. ನಾರಾಯಣಸ್ವಾಮಿ**

ಕಾಗಿನೆಲೆಯಲ್ಲಿ ಬಾಡದಲ್ಲೆಲ್ಲ ಕನಕದಾಸರ ಅರಮನೆ, ಕನಕದಾಸರ ಇದ್ನೆಲ್ಲ Reconstruct ಮಾಡ್ತಾ ಇದಾರೆ. ಮೊನ್ನೆ ಆಕಸ್ಮಿಕವಾಗಿ ಅಲ್ಲಿ ಚಿತ್ರಕಲೆಗಳನ್ನೆಲ್ಲ ಹಾಕ್ಬೇಕು ಅಂತ ಹೇಳಿ ಅನೇಕ ಕೆಲವು ಚಿತ್ರಕಲಾವಿದರನ್ನು ಕೇಳಿದ್ರು. ಅವ್ರು ಕೆಲವು ಚಿತ್ರಗಳನ್ನ ಮಾಡ್ಕೊಬಂದಿದ್ರು. ನನ್ನ ಪ್ರಶ್ನೆ ಇರೋದೇನು ಅಂತ ಅಂದ್ರೆ ಇದು ಎಷ್ಟು ಅಪಾಯಕಾರಿಯಾಗಿರುತ್ತೆ ಅಂತ ಅಂದ್ರೆ

ಅವ್ರು ಅಲ್ಲಿ ಚಿತ್ರಿಸಿದ ಚಿತ್ರಗಳಿವ್ಯಲ್ಲ ಅವು ಕನಕರು ವಚನಗಳನ್ನ, ಕೀರ್ತನೆಗಳನ್ನ ಮತ್ತು ಅವರ ಬರಹದ ರೂಪಗಳೇನಿವೆ ಅದನ್ನ ಓದುವುದರ ಮೂಲಕ ಬಂದ ಚಿತ್ರಗಳೋ ಅಥವಾ ಈಗಾಗಲೇ ಲೋಕ ಕನಕನನ್ನ ಒಂದು ಸಿದ್ಧ ಮಾದರಿಯಲ್ಲಿ ಗ್ರಹಿಸಿದ ರೀತಿಯಲ್ಲಿ ಮಂಡಿಸಿರುವ ಚಿತ್ರಗಳೋ ಅಂತ. ಅಂದ್ರೆ ನನಗೆ ಬಹಳ ದೊಡ್ಡ ಶಾಕ್ ಆಗ್ಬಿಡ್ತು. ಕಾಗಿನೆಲೆಯ ಅಭಿವೃದ್ಧಿ ಪ್ರಾಧಿಕಾರದ ಹೆಸರಿನಲ್ಲಿ ಮತ್ತೆ ಇಲ್ಲಿ ಸಂಶೋಧನೆಯ ಹೆಸರಲ್ಲಿ ಎಲ್ಲಿವರೆಗೆ ನಾವು ಆ ಮೆಟಾಫರ್ಸ್‌ನ್ನ ಮತ್ತೆ ಬಳಸ್ತಾ ಇರ್ತೀವೋ, ನಾವದನ್ನ continue ಮಾಡ್ತಾ ಇರ್ತೀವೋ ಅಂದ್ರೆ ನಾವು ಯಾವ್ದನ್ನ ತೋರೀಬೇಕು ತೋರೀಬೇಕು ಅಂತ ಹೇಳ್ತಾ ಇರ್ತೀವೋ ಅದನ್ನ ನಾವೇ ಮತ್ತೆ ಪುನಾನಿರ್ಮಾಣ ಮಾಡ್ಕೊಂಡು, ನಮಗೆ ನಾವೇ ಕಾಲ್ದಾರಿಯಲ್ಲಿ ಹೋಗೋದಕ್ಕೆ ಅಡ್ಡಿಗಳನ್ನ ನಿರ್ಮಾಣ ಮಾಡ್ಕೊತಾ ಇದೀವಿ. ತುಂಬ ಅಪಾಯಕಾರಿಯಾದ ಸ್ಥಿತಿ ಅದು ಅನ್ನುವಂಥಾದ್ದು ಅದನ್ನ ನೋಡಿದ್ರೇ ನನಗಿನ್ನೂ ಸ್ಪಷ್ಟ ಆಯ್ತು.

**ಚರ್ಚೆ : ಸುಬ್ರಹ್ಮಣ್ಯಸ್ವಾಮಿ**

ಕನಕದಾಸರು ಅವರ ಯುದ್ಧ ವಿರೋಧಿ ನಿಲುವಿದ್ಯಲ್ಲ, ಇದು ಇವತ್ತಿಗೂ ಕಾಡ್ತಾ ಇರ್ತಕ್ಕಂತ ಒಂದು ದೊಡ್ಡ ಸಮಸ್ಯೆ ಇಡೀ ಜಗತ್ನಲ್ಲಿ. ಹಾಗಾಗಿ ಅವತ್ತಿನ ಕಾಲ್ದಲ್ಲೇನೇ ಒಂದು ರಾಜ ಮನೆತನ ಇನ್ನೊಂದು ರಾಜಮನೆತನದ ಮೇಲೆ ಯುದ್ಧ ಮಾಡಿ ಮನುಷ್ಯರನ್ನ ಕಗ್ಗೊಲೆ ಮಾಡ್ತಾ ಇದ್ದಂತದ್ದು ಅವರಿಗೆ ಬೇಸರ ತರುತ್ತೆ. ಅದನ್ನ ನಿರಾಕರಣೆ ಮಾಡುವಂತಾ ಒಂದು ನೆಲೆ ಇದ್ಯಲ್ಲ ಕನಕದಾಸರದು ಅದು ಬಹುಶಃ ಇಡೀ ಜಗತ್ತಿಗೇ ಒಂದು ಸಂದೇಶವನ್ನ ಕೊಡ್ತಾ ಇರ್ತಕ್ಕಂತ ಒಂದು ಉತ್ತರ ಅದು. ಹಾಗಾಗಿ ಇವತ್ತು ಕನಕದಾಸರ ನಿಲುವನ್ನು ನೋಡ್ದಾಗ ನಾವು ಇನ್ನೂ ಕೂಡ ಇಲ್ಲಿ ಮರುದರ್ಶನ ಅಂತ ಹಾಕೊಂಡಿದೀವಲ್ಲ–ಇನ್ನೂ ದರ್ಶನವೇ ಆಗ್ದೇ ಇರ್ತಕ್ಕಂತ ಸ್ಥಿತಿ ಒಳಗಡೆ ನಾವಿದೀವಿ. ದರ್ಶನವೇ ಇಲ್ಲದೆ ಮರುದರ್ಶನ ಎಲ್ಲಿ ಸಾಧ್ಯ? ದರ್ಶನ ಅನ್ನೋದು ನನ್ನ ಕತ್ತಲನ್ನ ನನ್ನ ಬೆಳಕಿನ ಕಡೆಗೆ ಕೊಂಡೊಯ್ಬೇಕು. ಅದಕ್ಕೆ ಹರಿಹರ ಭಕ್ತಿಯನ್ನ ಮಾಡ್ಕೊ ಬಂದಿದಾನೆ. ವಚನಕಾರರಾಗಿದಾರೆ, ದಾಸರಾಗಿದಾರೆ, ಇನ್ನೂ ಕತ್ಲಲ್ಲೇ ಕೊಳೀತಾ ಇರ್ತಕ್ಕಂತ ಸ್ಥಿತೀಲಿದೀವಿ. ಆದ್ರೆ ಮರುದರ್ಶನ ಅಂತ ಹಾಕ್ಕೊಂಡಿದೀವಿ. ಆದ್ರೆ ದರ್ಶನಾನೇ ಇನ್ನೂ ಆಗ್ದೇ ಇರ್ತಕ್ಕಂತ ಸ್ಥಿತಿನಲ್ಲಿದೀವಿ. ಹಾಗಾಗಿ ಕನಕನ ನಿಜವಾದ ದರ್ಶನ ನಮಗೆ ಯಾವ ನೆಲೆ ಒಳಗಡೆ ಆಗ್ಬೇಕಾಗಿದೆ? ಅಂತಹ ಒಂದು ಮಾನವೀಯತೆಯನ್ನ ಮಾನವ ಪರಿಸರವನ್ನ ಕಟ್ಟುವ ನೆಲೆಯನ್ನ ಕನಕ 16ನೇ ಶತಮಾನದ ಸಂದರ್ಭದಲ್ಲಿ ನಮ್ಗೆ ಕೊಡ್ತಾನೆ. ಹಾಗಾಗಿ ಈ ಒಂದು ನೆಲೆಯನ್ನ ನೋಡ್ಬೇಕು. ಮೇಷ್ಟ್ರು ಆಗ್ಲೆ ಹೇಳಿದ್ಹಾಗೆ ಬಯಲು ಆಲಯದ ಒಳಗೋ, ನಯನ ಬುದ್ಧಿಯ ಒಳಗೋ, ಬುದ್ಧಿ ನಯನದ ಒಳಗೋ, ನಯನ ಬುದ್ಧಿಗಳೆರಡು ನಿನ್ನೊಳಗೋ, ಸವಿಯು ಸಕ್ಕರೆಯೊಳಗೊ, ಸಕ್ಕರೆಯು ಸವಿಯೊಳಗೊ, ಸವಿ ಸಕ್ಕರೆ ಎರಡು ನಿನ್ನ ಜಿಹ್ವೆಯೊಳಗೊ. ಅಂದ್ರೆ ಎಲ್ಲ ನಿಮ್ಮಲ್ಲೆ ಉತ್ತರ ಇದೆ. ನೀವು ಎಲ್ಲಿ ಹುಡುಕ್ತಾ ಇದೀರ ಮೂರ್ಖರಾ... ಅನ್ನೋದನ್ನ ಕನಕ ಮತ್ತೆ ಮತ್ತೆ ಹೇಳಿದ್ರೂ ನಾವು ಮತ್ತೆ ಮೂರ್ಖತ್ವದಲ್ಲೇ ಬದುಕೋ ಸ್ಥಿತಿ ಒಳಗಡೆ ಇಡೀ ಸಮಾಜ ಮುಂದುವರೀತಾ ಇರ್ತಕ್ಕಂತ ನೆಲೆ ಒಳಗಡೆ ಇದೀವಿ. ಅಂದ್ರೆ ಮಾತನಾಡೋದು, ಕೃತಿಗಿಳ್ಸೋದು, ನಾವು ಯಾವುದನ್ನೂ ಆಚರಣೆಯಲ್ಲಿ ತರದೇ ಇರ್ತಕ್ಕಂತ ಸ್ಥಿತೀಲಿ ಇದೀವಿ. ಅದಕ್ಕೆ ಈ ನೆಲೆಯ ಒಳಗಡೆ ನಮ್ಮ ಸಂಶೋಧನೆಗಳು ಅಥವಾ ನಮ್ಮ ವಿಚಾರಗಳು ಜನರನ್ನ ಮುಟ್ಟುವ ಹೊಸ institutionalize ಆಗಿರ್ತಕ್ಕಂತ ಯಾವುದಾದರೂ ಒಂದು ಚಿಂತನಾ ಕ್ರಮವನ್ನು ಈ ಕೇಂದ್ರದ ಮುಖಾಂತರವಾಗಿ ಮಾಡ್ಲಿಕ್ಕೆ ಸಾಧ್ಯನೇ? ಎಲ್ಲ ವಿದ್ವಾಂಸರೂ, ಚಿಂತಕರೂ ಬಹಳ ಮುಖ್ಯವಾಗಿ ಯೋಚಿಸ್ಬೇಕು ಅಂತ ನನಗನ್ಸುತ್ತೆ.

**ಚರ್ಚೆ : ಕೆ.ವೈ. ನಾರಾಯಣಸ್ವಾಮಿ**

ಈಗ ಕತ್ತಲು ಮತ್ತು ಬೆಳಕು ಅನ್ನೋ ಕಲ್ಪನೆ ಇದ್ಯಲ್ಲ ಅದನ್ನ ಊರಿಸಿದವರು ಯಾರು? ಯಾವುದನ್ನ ಕತ್ತಲು ಅಂತ ಹೇಳಿದಾರೆ? ಯಾವುದನ್ನ ಬೆಳಕು ಅಂತ ಹೇಳಿದಾರೆ? ನಾನು ಹೇಳ್ತಿರೋ ಸಮಸ್ಯೆ ಯಾವ್ದು ಅಂತ ಹೇಳಿದ್ರೆ ಯಾವುದನ್ನ ಬೆಳಕು ಅಂತ ಹೇಳಿದ್ದಾರೋ ಆ ಬೆಳಕು ಅನ್ನೋ ಪರಿಕಲ್ಪನೆಯಲ್ಲೇ ಸಮಸ್ಯೆ ಇದೆ ಅಂತ. ಇಲ್ಲಿ ಈಗ ಕತ್ತಲು ಮತ್ತು ಬೆಳಕು ಎನ್ನುವ ಎರಡು ಪರಿಕಲ್ಪನೆಗಳನ್ನ ನಿಮಗೆ ಕೊಟ್ಬಿಟ್ಟಿದ್ದಾರೆ. ಕತ್ತಲು ಅಂತಂದ್ರೆ ಇದು. ಅದಕ್ಕೆ ಏನೇನೋ ಕೆಲವು ಉತ್ತರಗಳಿವೆ. ಅದು ಮೌಢ್ಯ ಅಥವಾ ಸಾಂಪ್ರದಾಯಿಕತೆ, ಅಸಮಾನತೆ ಏನು ಬೇಕಾದ್ರೂ ಹೇಳೋಣ. ಬೆಳಕು ಅನ್ನೋದಕ್ಕೆ ಅವುಗಳಿಂದ ಹೊರಬಂದು ಪಡೀಬಹುದಾದ ಒಂದು ಸಮಾನತೆಯನ್ನೋ ಅಥವಾ ನಾವು ಒಂದು ಯಾವುದನ್ನ ಇದ್ರಿಂದ ಕಳಕೊಂಡು ಮುಂದೆ ಪಡ್ಕೊಳ್ತೀವಿ ಅನ್ನುವಂತೆ ಹೇಳಿದ್ರೆ ನಾನ್ ತಿಳ್ಕೊಳ್ತಿರೋದು ಅಂತ ಹೇಳಿದ್ರೆ ಅಥವಾ ನಾವು ಮಾತಾಡ್ತಿರೋದು ಏನು ಅಂದ್ರೆ ಈ ಕತ್ತಲು ಮತ್ತು ಬೆಳಕುಗಳನ್ನ ವಿವರಿಸಿರೋ ರೀತಿನೊಳಗೇನೇ ಸಮಸ್ಯೆ ಇದೆ. ಯಾವ್ದು ಬೆಳಕು ಅಂತ ಹೇಳ್ತಾರೆ ಅದೇನೇ ಒಂದು ಟ್ರಾಪ್. ನಾವು ಈಗ ಬೆಳಕು ಅಂತ ಹೋದ್ರೆ ಬೆಳಕು ಅಂತ ಹೇಳ್ತಿರೋದೇ ನಮ್ಮನ್ನ ಕಟ್ಟಿ ಹಾಕುತ್ತಿರುವ ನಮ್ಮನ್ನ ಖೆಡ್ಡಕ್ಕೆ ತಳ್ಳುತ್ತಿರುವ ಒಂದು ಪರಿಕಲ್ಪನೆ ಅದು. ಅದರಿಂದ ಅದರ ಬಗ್ಗೆ ಎಚ್ಚರ ತಾಳ್ಬೇಕು. ಇಲ್ದೆ ಹೋದ್ರೆ ಕನಕನನ್ನ ನೀವು– ಕೈವಾರ ನಾರಾಯಣಪ್ಪನವರು ಒಂದು ಮಾತನ್ನ ಹೇಳಿದ್ದಾರೆ ಓದಿನ ಸಾವು ಅಂತ. ನಾವು ಮತ್ತೆ ಮತ್ತೆ ಮಾಡಿದರೆ ನಾವು ಓದಿನ ಸಾವಿನ ಕಡೇನೇ ಚಲಿಸ್ತಾ ಇರ್ತೀವಿ. ಎಲ್ಲಿಗೂ ಚಲಿಸ್ದೇ ಇರುವ ಸ್ಥಿತಿ ಒಂದನ್ನ ಓದಿನ ಸಾವು ಅಂತ ಅವ್ರು ಸಜೆಸ್ಟ್ ಮಾಡ್ತಾ ಇದ್ದಾರೆ. ಈಗ ನೀವು ಹೇಳ್ತಾ ಇರೋದು ಮತ್ತೆ ಇನ್ಸ್ಟಿಟ್ಯೂಷನಲೈಸ್ ಮಾಡುವಂತಾದ್ದು ಅಥವಾ ಯುದ್ಧದ ಬಗ್ಗೆ ಮಾತಾಡಿದ್ರು. ಯುದ್ಧದ ಇದರ ಬಗ್ಗೆ ಕನಕದಾಸರು ಏನಾದ್ರೂ ನಮಗೆ ಕಾಣಿಸಿದರೇನೋ. ಪಂಪ ಕಾಣಿಸಿರಲಿಲ್ವೇ ರನ್ನ ಕಾಣಿಸಿರಲಿಲ್ವೇ. ಅಲ್ಲೆಲ್ಲ ಕಂಡ ಯುದ್ಧದ ಮನುಷ್ಯಲೋಕದ ಹಿಂಸೆಗಳಿಗೂ ಕನಕದಾಸರು ಭಿನ್ನವಾಗಿ ಏನು ಕಾಣಿಸಿದಾರೆ? ಹಾಗಾದ್ರೆ ಯುದ್ಧ ವಿರೋಧಿಯಾಗಿರುವುದು ಕನ್ನಡದ ಚಿಂತನೆಯ ನೆಲೆಯೋ, ಕನ್ನಡದ ಸಂಯೋಜನಾ ನೆಲೆಯೋ ಅದು ಬರಿ ಕೇವಲ ಕನಕದಾಸರದೋ. ಅದಕ್ಕೇ ನಾನು ಹೇಳೋದು ನಂಟು ಬೆಳಸ್ತವೆ ಅವು ಅಂತ. ನಂಟು ಬೆಳೆಸೋಕೋದಾಗ ಕನಕನ

ಜೊತೆ ನಾವು ಹೋಗುವಾಗ ನಮ್ಮ ದಾರಿ ಜೊತೆಗೆ ಕರೆದುಕೊಂಡು ಹೋಗುವಂತ ದಿಕ್ಕು ನಾವು ತಿಳಿಬಹುದಾದ ಲೋಕಾನೇ ಬೇರೆಯಾಗಿರ್ತದೆ ಅಂತ. ಹೀಗೆ ಯಾವ್ದು ಈಗಾಗಲೇ ಬತ್ತಿದೆಯೋ ಅಲ್ಲಿಗೇ ಕರ್ಕೊಂಡೋಗ್ತದೆ ಅಂತ. ನಾವು ಹೋಗೋ ದಾರಿಗಳು ನಮ್ಮನ್ನ ಮತ್ತೆ ಹೊಸದಾದ ದಾರಿಗಳಿಗೆ ಕರ್ಕೊಂಡು ಹೋಗೋದಿಲ್ಲ. ನಮಗೆ ಗೊತ್ತಿದೆ ಈ ದಾರಿಯಲ್ಲಿ ಹೋದ್ರೆ ಅದು ಎಲ್ಲಿಗೆ ಕರ್ಕೊಂಡು ಹೋಗಿ ನಮ್ಮನ್ನ ಬಿಡುತ್ತೆ ಅಂತ. ಈ ದಾರಿಯಲ್ಲೋದ್ರೆ ಏಳು ಬಾಗಿಲಿದೆ. ಅದನ್ನ ದಾಟಿದ್ರೆ ಬಯಲಿದೆ ಅಂತ ಗೊತ್ತಿದೆ ನಮ್ಗೆ. ಆದ್ರೆ ಬಾಗಿಲನ್ನು ತೆರೆದುಕೊಂಡು ಹೋಗಲು ನಮ್ಮನ್ನು ಪ್ರೇರೇಪಿಸುವ ಒತ್ತಾಯ ಶಿಕ್ಷಣದಲ್ಲೂ ಇದೆ. ನಮ್ಮ ಸಮಾಜದಲ್ಲೂ ಇದೆ. ಆ ದಾರಿಗಳು ಬೇಡ. ಆ ದಾರಿಯಲ್ಲಿ ಹೋದ್ರೆ ಕನಕರನ್ನು ಕನಕ ಕಾಣಿಸಿದ ಲೋಕ ನಮಗೆ ಕಾಣ್ಣೋದಿಲ್ಲ ನಾವೇನು ಕಂಡಿದೀವೋ ಆ ಲೋಕ ನಮ್ ಜೊತೆಗಿರುತ್ತದೆ ಅಂತ.

**ಚರ್ಚೆ : ಸುಬ್ರಹ್ಮಣ್ಯಸ್ವಾಮಿ**

ಮಾನವ ಹಕ್ಕುಗಳ ಒಂದು ಚಿಂತನೆ ಕಾಣಿಸ್ತಾ ಇದೆ ಇದ್ರಲ್ಲಿ. ಜಾತೀಯತೆ ಇರ್ಬಹುದು ಧರ್ಮ ಇರ್ಬಹುದು. ವರ್ಗ ತಾರತಮ್ಯ ಅಥವಾ ಶೋಷಣೆ ಇರ್ಬಹುದು ಇದರ ವಿರುದ್ಧ ಕನಕದಾಸರ ಹಕ್ಕು ಮತ್ತು ಕರ್ತವ್ಯಗಳ ಸಂಘರ್ಷದ ಪರಿಭಾಷೆ ಏನಿದೆ ಅದು ಮಾನವ ಹಕ್ಕುಗಳ ಹೋರಾಟವೇ ಅಂತ ಹೇಳಬಹುದೆ.

**ಚರ್ಚೆ : ಹುಲಿಕುಂಟೆ ಮೂರ್ತಿ**

ಪಿಯುಸಿಲಿ ಪಾಠ ಮಾಡ್ತಾ ಇದ್ವಿ. ಅಲ್ಲಿ ಕೆಲವೊಂದು ಸಮಸ್ಯೇನ ಎದುರಿಸ್ತೀವಿ. ಭಕ್ತಿ ಅಂತ ಹೇಳಿದ ತಕ್ಷಣ ಅದನ್ನ ವಿವರಿಸ್ಬೇಕು. ಸಿಕ್ಕಾಪಟ್ಟೆ ತೊಂದರೆ ಅದು. ನಾವು ಏನು ಹೇಳ್ತೀವೋ ಅವುಗಳ ವಿರುದ್ಧವಾಗಿ History bookಗಳಲ್ಲಿ Print ಆಗ್ಬಿಟ್ಟಿದೆ. ಭಕ್ತಿ ಅಂದ್ರೆ ಭಾರತದಲ್ಲಿ, ಕರ್ನಾಟಕದಲ್ಲಿ ಹಿಂದೂ ಧರ್ಮದ ಪುನರುಜ್ಜೀವನಕ್ಕಾಗಿ ದಾಸ ಪರಂಪರೆ ಹುಟ್ತು ಅನ್ನುವ ಚಿತ್ರಣ ಕಟ್ಟಿಕೊಡ್ತಾ ಇದಾರೆ History ಒಳಗಡೆ. ಅದು ಎಲ್ಲಿಂದ ಬಂತು ಅಂತ ನಮ್ಗೂ ಗೊತ್ತಿಲ್ಲ. ಅದರ ಜೊತೆಗೆ ನಮಗನ್ನೋದು ಏನಂದ್ರೆ ಭಕ್ತಿ ಅಂದ್ರೆ ಸ್ವಲ್ಪ ಭಯ ಆಗುತ್ತೆ. ಅದೂ ನಮ್ಮಂತವರಿಗೆ. ಅದ್ರಿಂದ ತುಂಬ ಸಮಸ್ಯೆಗಳನ್ನ ಅನುಭವಿಸಿರೋದು ಜೀವನದಲ್ಲೂ ಕೂಡ. ಹಂಗಾಗಿ ಭಕ್ತಿ ಅಂದ್ರೆ ಭಯ ಆಗಿ ಈಗ ಕನಕ, ಬಸವಣ್ಣ ಎಲ್ಲರ ಬಗ್ಗೆ ಇರುವಂತ ಸಮಸ್ಯೆ ಇದು. ಭಕ್ತಿ ಅನ್ನೋದನ್ನೇ ಹೊಸದಾಗಿ ಅರ್ಥ ಮಾಡ್ಕೊಬೇಕೋ ಅಥವಾ ಹೊಸದಾಗಿ ಕಟ್ಕೊಬೇಕೋ ಅನ್ನೋದು ಬೇರೆ ಸಮಸ್ಯೆ. ಆದ್ರೆ ಈ ಕಾಲದಲ್ಲಿ ಅದನ್ನ ಆ ಹೆಸರಲ್ಲಿ ಕರೀದೆ ಬೇರೆ ಹೆಸರಲ್ಲಿ ಏನಾದ್ರೂ ಕರೆಯಲು ಕಲಿತ್ಕೋಬೇಕೇನೋ ಅಂತ ಅನ್ಸುತ್ತೆ. ಇಲ್ಲ ಅಂತ ಅಂದ್ರೆ ಸಮಸ್ಯೆ ಏನಾಗುತ್ತೆ ಅಂದ್ರೆ ಕನಕ ಜಯಂತಿಗೆ ಮಾಂಸ ನಿಷೇಧ ತರದ್ದೇನಾದ್ರೂ ಆಗ್ಬಿಡೋ ಚಾನ್ಸಸ್ ಜಾಸ್ತಿ ಇದೆ. ನಮ್ಮಂತವರಿಗೆ ಈಗಾಗ್ಲೇ ದರ್ಶನ, ಆಯಾಮ, ಮೌಲ್ಯ ಇತ್ಯಾದಿಗಳೆಲ್ಲ ಯಾಕೋ ಕ್ಲೀಷೆ ಅನ್ನಿಸ್ಬಿಟ್ಟಿದೆ. ಬೆಳಕು ಎಲ್ಲ ಬಿಟ್ಟು ಈಗ ಕತ್ತಲ ಕಡೆ ನೋಡ್ತಾ ಇರೋದ್ರಿಂದ ಹೀಗಾಗಿದೆ. ಯಾಕಂದ್ರೆ ಕತ್ಲಲ್ಲಿ ಏನಿದೆ ಅನ್ನೋದನ್ನ ನೋಡಿಲ್ಲ. ಬೆಳಕಲ್ಲಿರೋದನ್ನ ಸಿಕ್ಕಾಪಟ್ಟೆ ನೋಡ್ಕೋ ಬಿಟ್ಟಿದೀವಿ. ಕತ್ತಲು ಅನ್ನೋ ಕಡೆ ಯೋಚ್ನೆ ಮಾಡ್ತಾ ಇರೋರು ಈ ಕಾಲಕ್ಕೆ ಕನಕದಾಸ ಯಾವ ತರ ಆ ಕಾಲಘಟ್ಟದಲ್ಲಿ ಏನೇನು ಅನುಭವಿಸಿದ್ನೋ ಅದರ ಬಗ್ಗೆ ನಮ್ಗೆ ಕುತೂಹಲ ಜಾಸ್ತಿ ಇದೆ. ಹುಟ್ಟದ ಯೋನಿಗಳಿಲ್ಲ. ಮೆಟ್ಟದ ಭೂಮಿಗಳಿಲ್ಲ ಅನ್ನೋದನ್ನೇ ನಮ್ಮ ಬೇರೆ ಭಾಷೆಗಳಲ್ಲಿ ಅವನ್ನ ಮಾತಾಡ್ಕೊಂಡಿದೀವಿ. ಸಾಮಾನ್ಯವಾಗಿ ಕನಕದಾಸ ಇದನ್ನ ಹೇಳೋವಾಗ್ಲೇನೇ ನಮ್ಗೇನೇ ಆ ತರ ಒಂದು ಕೋಪದಿಂದ ಬೇರೆ ಭಾಷೇಲಿ ಹೇಳ್ತೀವಿ ಎಲ್ಲರ ಮುಂದೆ. ಅದರ ಜೊತೆಗೆ ದಲಿತರನ್ನ, ಅಸ್ಪೃಶ್ಯತೆಯ ಪ್ರಶ್ನೆಗಳನ್ನ ಶರಣ ಚಳುವಳಿಯಿಂದ ಹಿಡಿದು ದಾಸ ಚಳುವಳಿ ಕೂಡ ಯಾಕೋ ಒಂದು ಕಡೆ ಅದನ್ನ ಸರಿಯಾಗಿ ಅರ್ಥ ಮಾಡ್ಕೊಳ್ಳಿಕ್ಕೆ ಬರ್ಲಿಲ್ವೇನೋ ಅಥವಾ ನಮಗೆ ಅರ್ಥ ಆಗ್ತಿಲ್ವೇನೋ ಅಥವಾ ನಾವದನ್ನ 20ನೇ ಶತಮಾನದಲ್ಲಿ ಕಟ್ಟಿಕೊಳ್ಳುತ್ತಿರುವ ಕಾರಣಕ್ಕಾಗಿ ನಾವೆಲ್ಲೋ ಅದನ್ನ ಬಿಟ್ಟು ಕಟ್ಕೊಂಡಿದೀವೋ ಅಥವಾ ಕನಕನಂತವರನ್ನ ಕ್ಲೈಂ ಮಾಡ್ತಾ ಇರುವಂತ ಜಾತಿಗಳು ಭಯದಿಂದ ಅದನ್ನೆಲ್ಲ ಸ್ವಲ್ಪ ದೂರ ಇಟ್ಟು ಕಟ್ಕೊಳೋಕೆ ಶುರು ಮಾಡಿದಾವೋ ಅಂತ ಅನ್ನೋಕೆ ಶುರುವಾಗಿದೆ ನನ್ಗೆ. ಅದರ ಬಗ್ಗೆ ಹೆಚ್ಚಿನ ಆಸಕ್ತಿ, ಕುತೂಹಲ ನನಗಿದೆ.

**ಚರ್ಚೆ : ಬಂಜಗೆರೆ**

ಭಕ್ತಿಗೆ ಅದರದೇ ಆದ ತಾತ್ವಿಕ ನೆಲೆ ಒಂದಿದೆ. ಬಹಳ ಸಲ ಅದನ್ನು ಜನಕ್ಕೆ ಉಣಬಡಿಸುವಾಗ, ಅದನ್ನು ಒದಗಿಸುವಾಗ ಬಳಸಿರುವ ವಿಧಾನ ಬೇರೆ. ಭಕ್ತಿಗೂ ಅದಕ್ಕೂ ಏನೂ ಸಂಬಂಧ ಇಲ್ಲ. ಒಂದು ಉದಾ: ಪು.ತಿ.ನರಸಿಂಹಾಚಾರ್ ಅವರ ಬಗ್ಗೆ ಪ್ರಚಲಿತದಲ್ಲಿದ್ದ ವಿಷಯ ಇದು. ಇದು ನಡೆದುದ್ದೋ ಅಲ್ವೋ ಗೊತ್ತಿಲ್ಲ; ಬಾಬ್ರಿಮಸೀದಿ ಕೆಡವಿದಾಗ ಆರ್.ಎಸ್.ಎಸ್.ನವರು ಬಂದು ಮಸೀದಿ ಕೆಡವಿದ್ದನ್ನು ಬೆಂಬಲಿಸಿ ನೀವು ಹೇಳಿಕೆ ಕೊಡ್ರಿ ಅಂತ ಅವರನ್ನು ಕೇಳಿದರಂತೆ. ಅವ್ರು ಕೃಷ್ಣನ ಭಕ್ತರು, ಯಾವಾಗ್ಲೂ ಮೂರು ನಾಮಗಳನ್ನ ಹಣೆ ಮೇಲೆ ಧರಿಸಿರುತ್ತಿದ್ದವರು. ಅವರು ಹೇಳಿದ್ದು 'ನಾನು ಮೂಲತಃ ಒಬ್ಬ ಭಕ್ತ. ಇನ್ನೊಬ್ಬರ ಭಕ್ತಿಯ ಕೇಂದ್ರವನ್ನ ಕೆಡುವುವರಿದ್ರೆ ಅವರು ರಾಕ್ಷಸರೇ ಇರಬೇಕು. ಅಲ್ಲಿ ದೇವ್ರು ಕೃಷ್ಣನ ರೂಪದಲ್ಲಿತ್ತೋ ಬೇರೆ ರೂಪದಲ್ಲಿತ್ತೋ ಅನ್ನೋದು ಮುಖ್ಯ ಅಲ್ಲ. ಭಕ್ತನಾದವನಿಗೆ ಭಕ್ತಿಯ ಕೇಂದ್ರಗಳೆಲ್ಲವೂ ಒಂದೇ. ಅವುಗಳ ನಡುವೆ ವ್ಯತ್ಯಾಸ ಮಾಡೋದಕ್ಕಾಗೋದಿಲ್ಲ. ಆದ್ದರಿಂದ ಈ ಮಸೀದಿಯನ್ನು ಕೆಡವಿರುವವರು ದೇವರ ಭಕ್ತರಾಗಿರಲು ಸಾಧ್ಯವಿಲ್ಲ' ಅಂದ್ರು ಅವ್ರು. ಅಂದ್ರೆ ಭಕ್ತಿಯ ವ್ಯಾಖ್ಯಾನ ಎಷ್ಟು ಭಿನ್ನ ಆಗಬಲ್ಲದು. ಆ ಭಕ್ತಿ ಎನ್ನುವುದು ತನ್ನಷ್ಟಕ್ಕೆ ತಾನು ಏನಾದ್ರೂ ಕೇಡು ಮಾಡುತ್ತಾ ಅನ್ನೋದನ್ನ ನಾವಿನ್ನೂ ಪರಿಶೀಲನೆ ಮಾಡಿ ನೋಡ್ಬೇಕಿದೆ. ಸಾಮಾಜಿಕ ರೂಪಗಳಾದ ಅಸ್ಪೃಶ್ಯತೆಗೆ ಮುಂತಾದವಕ್ಕೂ ಭಕ್ತಿಗೂ ಸಂಬಂಧವಿಲ್ಲ. ಅದೊಂದು ಸಂಪೂರ್ಣವಾಗಿ ಸಾಮಾಜಿಕ ಆಚರಣೆ. ಈ ಹರಕೆ ಹೊರೋದು, ಈ ಮೌಢ್ಯಕ್ಕೂ–ಮೌಢ್ಯನೋ

ಅಥವಾ ಏನೋ ಆ ಪದ ಬಳಸ್ಬೇಕೋ ಬೇಡ್ವೋ–ಆ ತರದ ಕೆಲವು ಆಚರಣೆಗಳು ಆಚರಣಾತ್ಮಕವಾಗಿರೋ ರೂಪಗಳಿಗೂ, ಧಾರ್ಮಿಕ ಕ್ರಿಯೆಗಳಿಗೂ, ಕ್ರಿಯಾವಿಧಿಗಳಿಗೂ ಭಕ್ತಿಗೂ ಸಂಬಂಧವೇ ಇಲ್ಲದಿರುವಂತಾದ್ದು. ನಾವು ಆಧುನಿಕರು, ನಮಗದೆಲ್ಲ ಗೊತ್ತಾಗಿದೆ ಜಾತಿ ವ್ಯವಸ್ಥೆ ಹೇಗೆ ನಿರ್ಮಾಣ ಆಗಿದೆ ಅಂತ್ಹೇಳಿ. ಆದ್ದರಿಂದ ಆ ಬಗೆಗಿನ ತಾತ್ವಿಕ ಚರ್ಚೆಯನ್ನು ನಾವಿನ್ನೂ ಭಿನ್ನವಾಗಿ ಮಾಡಬೇಕಾಗಿದೆ. ರಂಗನಾಯಕಮ್ಮ ತಮ್ಮ ತಾಯಿಯ ವಿಷಯದಲ್ಲಿ ಹೇಳ್ತಾ ಇದ್ರು. ಬಹಳ ಕಟ್ಟಾ ಮಾರ್ಕ್ಸ್‌ವಾದಿ ಅವರು ಅವರ ತಾಯಿ ಯಾವಾಗ್ಲಾದ್ರೂ ರಾಮನ ದೇವಸ್ಥಾನಕ್ಕೆ ಹೋಗ್ಬೇಕು ಅಂದಾಗ ಸ್ವತಃ ರಂಗನಾಯಕಮ್ಮನೇ ಕರೆದುಕೊಂಡು ಹೋಗ್ತಾ ಇದ್ರು. ಯಾರೋ ಕೇಳಿದಾರೆ ಇಷ್ಟೆಲ್ಲಾ ನೀನು ಕಾರ್ಲ್‌ಮಾರ್ಕ್ಸ್ ಕ್ಯಾಪಿಟಲ್ ಅನುವಾದ ಮಾಡ್ತೀಯ, ರಾಮಾಯಣ ವಿಷವೃಕ್ಷ ಬರಿದಿದೀಯ, ಅಂತಾದ್ರಲ್ಲಿ ನಿನ್ನ ತಾಯಿ ದೇವಸ್ಥಾನಕ್ಕೆ ಹೋಗ್ತೀನಂದ್ರೆ ಕರೆದುಕೊಂಡು ಹೋಗೋದು ಬರೋದು ಮಾಡ್ತೀಯಲ್ಲ ಸರೀನೇ ಅಂತ. ಅದಕ್ಕೆ ರಂಗನಾಯಕಮ್ಮ ಹೇಳಿರೋದು ನನ್ನ ತಾಯಿಗೆ ಅದ್ರಲ್ಲಿ ಭಕ್ತಿ ಇದೆ. ಇನ್ನೊಂದು, ಅದರಿಂದಾಗಿ ಆಕೆ ಇನ್ಯಾರ ಮೇಲೂ ಏನೂ ಅಪಚಾರ ಮಾಡುತ್ತಿಲ್ಲ, ಯಾರಿಗೂ ತೊಂದ್ರೆ ಕೊಡ್ತಿಲ್ಲ ಆದ್ದರಿಂದ ನಾನು ಯಾತಕ್ಕಾಗಿ ಅಡ್ಡ ಮಾಡಬೇಕು ಅಂತ. ಇದು ಅವರ ನಿಲುವು. ಈ ಭಕ್ತಿ ಅನ್ನುವ ಹೆಸರಿನಲ್ಲಿ ಯಾವುದಕ್ಕೆ ನಾವು ಹೆದರೋದು ಅನ್ನೋದನ್ನ ಯೋಚ್ನೆ ಮಾಡಿದ್ರೆ ಸ್ಪಷ್ಟತೆ ಅನ್ನೋದು ನಮ್ಗೆ ಜಾಸ್ತಿ ಆಗ್ಬಹುದೇನೋ.

ನಾವು ಪೆರಿಯಾರ್ ವಿಚಾರದಲ್ಲಿ ಬೆಳೆದವ್ರು ಆದ್ರಿಂದ ದೇವರ ಪಟವನ್ನ ಕಿತ್ತಾಕೋದ್ರಲ್ಲೇ ಬಹಳ ಹೆಮ್ಮೆ ಪಡುವವರು. ಆದ್ರಿಂದ ಇನ್ನೂ ಸ್ವಲ್ಪ ತೊಡಕ್ನಲ್ಲಿದೀವಿ. ಭಕ್ತಿಯ ಶುದ್ಧ ತಾತ್ವಿಕ ನಿಲುವು. ಅದರ ಪ್ರಕಾರ ಆಯಾಮ ಬಹಳ ದೊಡ್ಡದಿದೆ. ಅದಕ್ಕೆ ನಾವು ಹೋದ್ರೆ ಗಣಪತಿಯ ರೂಪ ನಗೆಪಾಟಲಷ್ಟೇ ಅವರಿಗೆ. ಅದೇನೋ fancy dress ಅಂತ. ನಿಜವಾದ ಭಕ್ತಿಗೆ ಇವೆಲ್ಲ fancy dress. ಭಕ್ತಿ ಪಂಥ ವೈದಿಕ ಪಂಥವನ್ನ ಪುನರುತ್ಥಾನ ಮಾಡುವುದಕ್ಕೆ ಬಂತು ಅನ್ನುವ ವಾದ ಸರಣಿ ಇದೆ. ಯಾವುದೋ ಒಂದು ನಿರ್ದಿಷ್ಟ ಪಂಥ, ನಿರ್ದಿಷ್ಟ ಕಾರಣಕ್ಕೆ ನಿರ್ದಿಷ್ಟ ಕ್ರಮದಲ್ಲಿ, ನಿರ್ದಿಷ್ಟ ಉದ್ದೇಶಕ್ಕೆ ಆ ಬಗೆಯ ಪಠ್ಯವನ್ನ present ಮಾಡಲಾಗಿದೆ. ಅವರಿಗೆ ಹಾಗೆ ಹೇಳಬೇಕಾಗಿತ್ತು ಹಾಗೆ ಹೇಳಿದ್ದಾರೆ. ಈಗ ಅದನ್ನ ನೋಡ್ತಾ ಇದ್ರೆ ಅದು ಹೌದಾ ಅಲ್ವಾ. ಅದಕ್ಕೂ ಪುನರುತ್ಥಾನಕ್ಕೆ ನೇರ ಸಂಬಂಧ ಇದ್ಯಾ ಇಲ್ವಾ. ಅವನ್ನೆಲ್ಲ ಇನ್ನೂ ನಾವು ಮತ್ತೆ ಮತ್ತೆ ಪರಿಶೀಲಿಸಬೇಕು. ಕನಕದಾಸರು ಮತ್ತು ಪುರಂದರದಾಸರು ಇಬ್ಬರೂ ಬ್ರಾಹ್ಮಣರಲ್ಲ ಅಂತ ಎಸ್.ಶಿವಣ್ಣ ಹೇಳ್ತಾರೆ. ಆದ್ರೆ ಅದು ಹೇಗೋ ಪುರಂದರದಾಸರು ಬ್ರಾಹ್ಮಣರು ಅಂತ ಚಲಾವಣೆಗೆ ಹೋಗ್ಬಿಟ್ಟಿದೆ. ಹೆಂಗಾಗುತ್ತೆ ಅದು? ಯಾಕೆ ಹೋಗುತ್ತೆ? ಆ ಬಿಂಬ ಯಾಕೆ ಕೊಡ್ತಾರೆ? ಅದಕ್ಕೋಸ್ಕರ ರಚನೆಗಳಲ್ಲಿ ಎಷ್ಟು ಮಾರ್ಪಾಡುಗಳನ್ನ ಮಾಡಿರ್ಬಹುದು. ಆ ಬಗ್ಗೆ ನಮಗೇನೂ ಗೊತ್ತಿಲ್ಲ. ಬರೆದಿಟ್ಟಿರುವ ಪದ್ಯಗಳೇ ಎಷ್ಟೋ ಸಲ ಸೃಷ್ಟಿಗಳಾಗಿರಬಹುದು ಹೇಳಕಾಗಲ್ಲ. ಎಷ್ಟೋ ವಚನಗಳೂ ಹಾಗಾಗಿವೆ.

**ಡಾಮ್ನಿಕ್**

ನಾವು ಕಟ್ಟಿಬಿಟ್ಟಿರೋ ಒಂದು ಸಿದ್ಧ ಮಾದರಿ ಇದು. ಆದ್ರೆ ನಾವು ಕಂಡುಕೊಳ್ಳುವ ಹಾದಿ ಅಂತಾದಾಗ ಎಲ್ಲವನ್ನೂ ಕೆಡವುತ್ತಾ ಹೋಗ್ತಿರ್ತೀವಿ. ಹಾಗಾಗಿ ಅದೊಂದು ಬದುಕಾಗಿ ನಾನು ಅನ್ವೇಷಣೆ ಮಾಡ್ಬೇಕಾಗಿರೋದು ಅಂತ ಸರ್ ಅವ್ರು ಬೇರೆ ತರದಲ್ಲಿ ಹೇಳ್ತಾರೆ ಇದನ್ನ. ಹಾಗಾಗಿ ಭಕ್ತಿಗೆ ಒಂದು ಅರ್ಥವನ್ನ ಒಂದು textಗೆ ಆರೋಪಿಸಿದ ತಕ್ಷಣವೇ ನಾವು ಅದೇ ದಾರಿಯಲ್ಲಿ ಹುಡುಕಬೇಕು ಅದನ್ನೇ ಮಾಡ್ಬೇಕು ಅನ್ನೋ ಚೌಕಟ್ಟಿಗೆ ಒಳಗಾಗ್ತಾ ಇದೀವಿ. ಯಾಕೆ ಒಳಗಾಗ್ಬೇಕು ಅಂತ? ಅಂತದ್ದನ್ನ ನಾವು ರೂಪಿಸಿಕೊಳ್ತಾಯಿಲ್ಲ ಅಂತ ನನ್ನ ಅಭಿಪ್ರಾಯ. ನಮ್ಮಲ್ಲಿದುವರೆಗೂ ನನ್ನ ಒಂದು ದೃಷ್ಟಿಯಲ್ಲಿ ಕನಕದಾಸರ ಕೃತಿಗಳನ್ನ ಅಥವಾ ಕೀರ್ತನೆಗಳನ್ನ ಯಾವ ರೀತಿ ನೋಡ್ಬೇಕು ಅಂತ ನನ್ನ ಅಭಿಪ್ರಾಯ ಅಂದ್ರೆ, ಗೆಳೆಯರೊಬ್ರು ಮಾತಾಡ್ತಿದ್ರು ಮತ್ತೆ ಕೆ.ವಿ.ಎನ್. ಸರ್ ಹೇಳಿದ್ರು ನಾನು ಕನಕನನ್ನ ನೋಡುವಂತಾದ್ದಿದೆಯಲ್ಲ ಅದು ಮುಖ್ಯ ಅಂತ ಹೇಳ್ದಿದ್ರು. ನಾನು ಅದನ್ನೇ ಮುಂದುವರಿಸ್ತಾ ಕನಕದಾಸರನ್ನ ನಾವು ಯಾವ ರೀತಿ ಓದ್ಕೊಳ್ಬೇಕು ಅಥವಾ ಅಧ್ಯಯನ ಮಾಡ್ಬೇಕು ಅನ್ನುವುದರ ಬಗ್ಗೆ ನಾನೊಂದು ಎರಡು ಕೀರ್ತನೆಗಳನ್ನಿಟ್ಕೊಂಡು ಮಾತಾಡ್ತೀನಿ. ಮೊದಲ್ನೇದಾಗಿ, ಅತ್ತೆಯೇ ಸೊಸೆಯಾಗಿ, ಸೊಸೆಯು ಅತ್ತೆಯಾಗಿ, ಪುತ್ರ ಪಿತನಾಗಿ, ಪಿತ ಪುತ್ರನಾಗಿ, ಗಂಡನೇ ಹೆಂಡತಿ, ಹೆಂಡತಿಯೇ ಗಂಡನಾಗಿ ವರ್ತಿಸುವರಯ್ಯ ಅಂತ ಹೇಳ್ತಾರೆ ಕನಕದಾಸರು. ನಿಜಕ್ಕೂ ಇದು ಇವತ್ತಿಗೆ ಬಹಳ relevent ಇರುವಂತಹ ಒಂದು ವಿಚಾರ. ಅಂದ್ರೆ ಒಂದು ಕುಟುಂಬದಲ್ಲಿ ಆಗಿರುವಂಥಾ ಬದಲಾವಣೆಗಳಿದ್ಯಲ್ಲ ಅದನ್ನ ಕನಕದಾಸರು ಬಹಳ ಚೆನ್ನಾಗಿ ಗುರ್ತಿಸಿ ಹೇಳ್ತಾ ಹೋಗ್ತಾರೆ, ಈ ರೀತಿಯಲ್ಲಿ ನಾವು ಕನಕದಾಸರ ವಿಚಾರಗಳನ್ನ ಚರ್ಚೆ ಮಾಡೋದು ಬಹಳ ಉತ್ತಮವಾದುದು ಅಂತ ನನ್ನ ಅಭಿಪ್ರಾಯ ಯಾಕಂದ್ರೆ ಕುಟುಂಬದಲ್ಲಿ ಇವತ್ತು ಬಹಳ ಬದಲಾವಣೆಗಳಾಗಿದಾವೆ. ಇವತ್ತು ಹಿರಿಯರ ಮಾತುಗಳನ್ನ ಕಿರಿಯರು ಯಾರೂ ಅಷ್ಟಾಗಿ ಕೇಳೋದಿಲ್ಲ ಅಂತ ನನ್ನ ಅಭಿಪ್ರಾಯ. ಈ ತರದ ಚರ್ಚೆಗಳಾಗ್ಬೇಕು ಅಂತ ನನ್ನ ಒಂದು ಅನಿಸಿಕೆ.

## ಕವಲು – ಎರಡು

## ಕನಕ : ಪುನಾಗ್ರಹಿಕೆಯ ನೆಲೆಗಳು

# ಪ್ರಸ್ತಾವನೆ

**ಕಾ ತ ಚಿಕ್ಕಣ್ಣ**

ಭಾಗವತನಾಗು ನೀನು ಬಾ ಅಂತ ಯಾರೂ ಕನಕದಾಸರನ್ನ ಕರೆದಿರಲಿಲ್ಲ. ಕನಕದಾಸರೇ ಸ್ವತಃ ನಾನು ಭಾಗವತನಾಗ್ಬೇಕು ಅಂತ ಹೋದವರು. ಭಾಗವತರಾಗ್ಬೇಕು ಅಂತ ಹೋದ ಕನಕದಾಸರಿಗೆ ಅಲ್ಲಿ ಅವ್ರು ಒಂಟಿಯಾದ್ರು. ಒಕ್ಕೂಟದಲ್ಲಿ ಸಿಗ್ಬೇಕಾದಂತ ಸಮಾನವಾದ ಗೌರವ ಸಿಗ್ಲಿಲ್ಲ. ಹಾಗಾಗಿ ಸಿಗ್ಲಿಲ್ಲ ಅನ್ನೋವಂತ ಕೊರಗು ಆ ಮನುಷ್ಯನನ್ನ ಬಿಡ್ಲಿಲ್ಲ. ಕೊನೆಗೆ ಎಲ್ಲವನ್ನೂ ಪೊರೆ ಕಳಚಿಕೊಂಡ ಹಾಗೆ ದೂರ ನಿಲ್ಲೋಕಾಗ್ಲಿಲ್ಲ. ಹೀಗೆ ನನ್ನನ್ನು ಒಪ್ಲಿಲ್ವಲ್ಲ ಅನ್ನುವಂತ ಒತ್ತಡದ ಸಂಘರ್ಷ ಹೀಗೆ ಕನಕದಾಸರನ್ನ ಬಾಧಿಸಿತು. ಈ ಬಾಧೆ ಕನಕದಾಸರನ್ನ ತಮ್ಮ ಆತ್ಮೀಯರು, ಆಪ್ತರು ಸಿಕ್ಕಾಗ ಪರಸ್ಪರ ಮಾತಾಡಿಕೊಂಡು ತೀರಿಸಿಕೊಳ್ತೀವಲ್ಲ ಆ ಕೆಲಸವನ್ನ ಕನಕದಾಸರು ಮಾಡ್ಲಿಲ್ಲ. ಆ ಕೆಲಸವನ್ನ ತನ್ನ ಸಾಹಿತ್ಯದ ಮೂಲಕ ಕ್ರಿಯೆ ಮೂಲಕ ಅಭಿವ್ಯಕ್ತಿ ಮಾಡೋದಕ್ಕೆ ಪ್ರಯತ್ನಪಟ್ರು. ಅದೀಗ ಅದೊಂದು ರೀತಿಯ ಸಾಂಸ್ಕೃತಿಕ ದಾಖಲೆಯಾಗಿದೆ. ಇವತ್ತು ನಾವು ಈ ಸಮುದಾಯದ ಚರಿತ್ರೆಯನ್ನ ಬೇರೆ ರೀತಿಯಲ್ಲಿ ನೋಡ್ತಾ ಇದೀವಿ. ಧರ್ಮ–ಜಾತಿ ಆ ಹಿನ್ನೆಲೆಯಲ್ಲಿ ನೋಡ್ತಾ ಇದೀವಿ. ಮಠಗಳ ಹಿನ್ನೆಲೆಯಲ್ಲಿ ನೋಡ್ತಾ ಇದೀವಿ. ಹೀಗಾಗಿ ಈ ಚರಿತ್ರೆ ಏಕಮುಖವಾಗಿ ಬಿಡುತ್ತೆ. ಸಮುದಾಯದ ಚರಿತ್ರೆಯನ್ನ ಸರಿಯಾಗಿ ಗ್ರಹಿಸ್ಬೇಕು. ಭಾಷೆ ಮತ್ತು ಸಂಸ್ಕೃತಿ ಹಿನ್ನೆಲೆಯಲ್ಲಿ ಈ ಸಮುದಾಯ ಚರಿತ್ರೆಯನ್ನು ಕಟ್ಟಬೇಕು. ಇವತ್ತು ಬೇಕಾಗಿರೋದು ಸಂಸ್ಕೃತಿಯ ಹಿನ್ನೆಲೆಯಲ್ಲಿ. ಹೀಗಾಗಿ ಚರ್ಚೆಯನ್ನು ಎತ್ತಿಕೊಳ್ಳಲು ಕನಕದಾಸರು ಎಲ್ಲಾದ್ರೂ ಒಂದಷ್ಟು ಚಿಂತನೆಗಳನ್ನ ಒಡ್ಡುತ್ತಾರಾ? ಕೊಡ್ತಾರಾ? ಎನ್ನೋ ದಿಕ್ಕಿನಲ್ಲಿ ನಾವು ವಿಚಾರ ಮಾಡ್ಬೇಕಾಗಿದೆ. ಹೀಗಾಗಿ  ಕನಕದಾಸನನ್ನ ಒಂದು ರೀತಿ ಮರು ಅವಲೋಕನಕ್ಕೆ ಒಡ್ಡುವಂತಾದ್ದು, ಮರುಸ್ಥಾಪನೆ ಮಾಡುವಂತಾದ್ದು, ಈಗಾಗಲೇ ಇರುವಂತಾದ್ದು, ಇರೋದನ್ನ ಇಟ್ಕೊಂಡೇನೇ ಅದನ್ನ ಮುರಿದು ನೋಡೋದು. ಮುರಿದು ನೋಡೋದೇ ಕ್ರಿಯೇಟಿವಿಟಿ ಗುಣ ಅದು. ಇರೋದನ್ನ ಒಡೆಯೋದು ಮತ್ತು ಚಿಗುರೋದು. ಸೃಜನಶೀಲತೆಯ ಕ್ರಿಯೆ ಅದು. ಹಾಗಾಗಿ ಯಾವ್ದನ್ನೂ ಒಂದು ಸಿದ್ಧ ಮಾದರಿಗೊಡ್ಡಿ ನಿಲ್ಲಿಸಿದರೆ ಅದು ಜಡ ಆಯ್ತು. ಜಂಗಮ ಆಗ್ಬೇಕು. ವ್ಯಕ್ತಿಶಃ ಕನಕದಾಸನೂ ಒಬ್ಬ ಜಂಗಮನ ಸ್ಥಿತಿಯವರು. ಆ ಜಂಗಮಸ್ಥಿತಿ ಎಲ್ಲಿರುತ್ತೋ ಅಲ್ಲಿ ಚಲನೆ ಇರುತ್ತೆ. ಅಲ್ಲಿ ಹೊಸ ಹೊಸ ಆಲೋಚನೆಗಳು ಬರ್ತವೆ. ಹಾಗಾಗಿ ಜಂಗಮನಾದ ಕನಕದಾಸನನ್ನ ನಾವು ಕಾಲ ಧರ್ಮಕ್ಕೆ ಅನುಗುಣವಾಗಿ, ಅವತ್ತಿನವತ್ತಿನ ಕಾಲಧರ್ಮದ ಸ್ಪಂದನದ ಒಳಗಿಟ್ಟು ನೋಡ್ತಾನೇ ಹುಡುಕುವಂತ ಪ್ರಯತ್ನ ಇದೆಯಲ್ಲ ಅದಾಗ್ಬೇಕು ಅನ್ನುವ ಕಾರಣಕ್ಕೋಸ್ಕರ ಈ ಅಧ್ಯಯನ ಸಂಸ್ಥೆ ಈ ನಿಟ್ಟಿನಲ್ಲಿ ಕೆಲಸವನ್ನು ಮಾಡ್ತಾ ಇದೆ. ಇವತ್ತು ಇಲ್ಲಿ ಮೈಸೂರಿನಲ್ಲಿ ಸಂವಾದ ಕಾರ್ಯಕ್ರಮ ಇರಿಸಿಗೊಂಡಿದ್ದೇವೆ. ವಿಚಾರ ಸಂಕಿರಣ ಒಮ್ಮುಖ ಆಗುತ್ತೆ. ಈ ವಿಚಾರ ಸಂಕಿರಣಗಳಲ್ಲಿ ಸಾಮಾನ್ಯವಾಗಿ ಒಂದಷ್ಟು ಮಾಹಿತಿ ಸಿದ್ಧ ಮಾಡಿ ಒಪ್ಪಿಸುವಂತಾದ್ದು ಮತ್ತು ಎದ್ದು ಹೋಗುವಂತಾದ್ದು ಅದಾಗೋದು ಬೇಡ. ನಮ್ಗೆ ಇವತ್ತು ಒಂದು ರೀತಿಯ ಪ್ರತಿಕ್ರಿಯಾತ್ಮಕವಾದ ಮಾತುಕತೆ ಆಗ್ಬೇಕು. ಹಾಗಾಗಿ ಒಂದು ರೀತಿಯ ಸಂವಾದದ ರೀತಿಯಲ್ಲಿ ಈ ಗೋಷ್ಠಿ ನಡೀಬೇಕು ಅನ್ನುವಂಥಾದ್ದು ನಮ್ಮ ಉದ್ದೇಶ ಇತ್ತು. ಆ ಹಿನ್ನೆಲೆಯಲ್ಲಿ ನಾವಿದನ್ನ ಆಲೋಚಿಸಿದ್ದೇವೆ.

ಸ್ನೇಹಿತರೆ, ಕನಕದಾಸ ಆವತ್ತು ಅವನೊಬ್ಬ ಭಕ್ತ, ಸಂತ, ಅವತ್ತಿನ ವೈದಿಕ ಸಂಪ್ರದಾಯಕ್ಕೆ, ಕರ್ಮ ಸಿದ್ಧಾಂತಕ್ಕೆ ಮಣ್ಣಿನಲ್ಲಿ ಬಂಧಿಸಿದ ದೇಹ ಮಣ್ಣುಗೂಡಿಸಬೇಡ ಅಂತ ಹೇಳುವ–ಕರ್ಮ ಸಿದ್ಧಾಂತವನ್ನ ಅವನು ಒಪ್ಪಿಯೂ ಕೂಡ ಈಚೆ ಬಂದವನು. ಆ ಸ್ಥಿತಿ ಇದೆಯಲ್ಲ ಅಂತ ಸ್ಥಿತಿ ಇಟ್ಕೊಂಡು ನೋಡಿದಾಗ ಕನಕದಾಸ ನಮಗೆ ಸಾಕಷ್ಟು ಪ್ರಶ್ನೆಗಳನ್ನ ಎತ್ತುತ್ತಾನೆ. ಅವನು ಒಪ್ಪಿದ ಧರ್ಮದ ಸಿದ್ಧಾಂತದ ಮಿತಿ ಹಾಗೂ ಆ ಮಿತಿಯನ್ನ ಮೀರಿ ಈಚೆ ಬಂದಿದ್ದ ಈ ಎಲ್ಲ ಪ್ರಶ್ನೆಗಳು ನಮ್ಮ ಮುಂದಿವೆ. ಹಾಗಾಗಿ

ಒಂದು ಮಾತು ಹೇಳಿ ನನ್ನ ಪ್ರಾಸ್ತಾವಿಕ ಮಾತುಗಳನ್ನ ಮುಗಿಸಬಹುದು. ಕನಕದಾಸ ಉಡುಪಿಗೆ ಹೋದ ಅಲ್ಲಿ ದರ್ಶನ ಸಿಗ್ಲಿಲ್ಲ, ಹಾಗಾಗಿ ಕಿಂಡಿಯ ಮೂಲಕ ತನ್ನ ದೇವರನ್ನ ನೋಡಿದ. ಇದನ್ನ ನಾವು ಹ್ಯಾಗೆ ನೋಡ್ತೀವಿ ಅಂದ್ರೆ, ಕನಕನ ಕಿಂಡಿ ಏನಿದ್ಯಲ್ಲ ಆ ಕಿಂಡಿಯಲ್ಲಿ ಕೃಷ್ಣನನ್ನು ತೋರಿಸೋದು ಆಗ್ತಿದೆ. ಆದರೆ ಈ ಐತಿಹ್ಯದಲ್ಲಿ ವಾಸ್ತವ ಎಷ್ಟು? ಕತೆ ಎಷ್ಟು ನನಗೀಗ ಮುಖ್ಯವಲ್ಲ. ಮುಖ್ಯವಾಗ್ಬೇಕಾಗಿರೋದು ಆ ಕಿಂಡಿಯ ಚರಿತ್ರೆಯಲ್ಲಿ ಇರೋ ಕನಕತ್ವ, ಕನಕತ್ವದ ಕಿಂಡಿಯಲ್ಲಿ ಕನಕದಾಸನನ್ನ ನೋಡೋದು ಆಗ್ಬೇಕು. ಆದ್ರೆ ನಾವು ಮಾಧ್ವಮತದ ಕಿಂಡಿಯಲ್ಲಿ ಕನಕದಾಸನನ್ನ ನೋಡಿದರೆ ಆಗುವ ಅಪಾಯ ಇದ್ಯಲ್ಲ ಅದನ್ನ ಗಮನಿಸಬೇಕಾಗಿದೆ. ಹಾಗಾಗಿ ಕನಕತ್ವದ ಕಿಂಡಿಯಲ್ಲೂ ನೋಡ್ಬೇಕು ಆದರೆ ಮಾಧ್ವ ತತ್ವದ ಕಿಂಡಿಯಲ್ಲಿ ನೋಡ್ಬಾರ್ದು ಅಂತೇನಿಲ್ಲ. ಆ ದಿಕ್ಕಿಗೆ ನಮ್ಮ ಕಣ್ಮುಚ್ಚಿಕೊಳ್ಳಬೇಕು ಅಂತಿಲ್ಲ. ನಮ್ಮ ಮನಸ್ಸು ಮುಕ್ತವಾಗಿರ್ಬೇಕು. ವಿಚಾರ ಮುಕ್ತವಾಗಿರ್ಬೇಕು. ಈ ಹಿನ್ನೆಲೆಯಲ್ಲಿ ನಾವು ಕನಕತ್ವದ ಕಿಂಡಿಯ ಮೂಲಕ ಕನಕನನ್ನ ನೋಡಿದರೆ ಹುಟ್ಕೊಳೋ ಅಂತ ಹೊಳಹು ಇದ್ಯಲ್ಲ ಅದನ್ನ ಇವತ್ತಿನ ಕಾಲಕ್ಕೆ ಹೆಚ್ಚು ಒತ್ತುಕೊಟ್ಟು ಮಾಡ್ಬೇಕಾಗಿದೆ ಅನ್ನುವ ಅಂಶ ಕೂಡ ನಮ್ಮ ಮುಂದಿದೆ.

ನಾನು ಹೆಚ್ಚು ಮಾತಾಡೋದಿಲ್ಲ. ಹಾಗಾಗಿ ನಾನು ಔಪಚಾರಿಕವಾಗಿ ಹೇಳ್ಬಹುದಾದ್ದು ಅಂದ್ರೆ ಇವತ್ತು ಡಾ. ಹೆಚ್.ಜೆ. ಲಕ್ಕಪ್ಪಗೌಡ ಅವ್ರನ್ನ ಈ ಗೋಷ್ಠಿಯಲ್ಲಿ ಉಪಸ್ಥಿತರಿರಿ ಅಂತ ಕೇಳ್ಕೊಂಡಿದ್ದೋ ಬರಲಿಲ್ಲ. ಅವರ ಬದಲಿಗೆ ಹಿರಿಯರಾದ ಕನಕದಾಸರ ಬಗ್ಗೆ ಆಳವಾಗಿ ಅಧ್ಯಯನ ಮಾಡಿದ ಪ್ರೊ. ಸುಧಾಕರ ಅವ್ರು ಬಂದಿದ್ದಾರೆ. ಅವರಿಗೆ ಅಧ್ಯಯನ ಕೇಂದ್ರದ ಪರವಾಗಿ ಹಾರ್ದಿಕವಾದ ಸ್ವಾಗತವನ್ನ ಕೋರ್ತಾ ಇದೀನಿ. ಇವತ್ತಿನ ವಿಷಯವನ್ನು ಮೂರು ರೀತಿಯಲ್ಲಿ ಚರ್ಚೆಗಿಟ್ಕೊಳೋಣ ಅಂತ ಭಾವಿಸಿ, 1) ಕನಕದಾಸರ ಕೃತಿಗಳಲ್ಲಿ ಇರುವ ಜೀವನ ಮೀಮಾಂಸೆ–ಈ ವಿಷಯವನ್ನು ಕುರಿತು ನಮ್ಮ ಡಾ. ಬಂಜಗೆರೆ ಜಯಪ್ರಕಾಶ್ ಅವರು ಮಾತಾಡ್ಬೇಕು ಅಂತ ಕೇಳ್ಕೊಂಡಾಗ ಅವ್ರು ಬಂದಿದ್ದಾರೆ. ಅವರಿಗೂ ಎಲ್ಲರ ಪರವಾಗಿ ಸ್ವಾಗತವನ್ನು ಬಯಸ್ತೀನಿ.

ಕನಕ ಕೃತಿ ಮತ್ತು ಸಂಸ್ಕೃತಿ ಕುರಿತ ಹಾಗೆ ವಿಷಯ ಮಂಡಿಸಬೇಕು ಅಂತ ಕೇಳ್ಕೊಂಡಾಗ ಡಾ. ಕೃಷ್ಣಮೂರ್ತಿ ಹನೂರು ಅವರು ಬಂದಿದಾರೆ. ಅವರಿಗೂ ಕೂಡ ನಾನು ಪ್ರೀತಿಯ ಸ್ವಾಗತವನ್ನು ಬಯಸ್ತೀನಿ. ಕನಕದಾಸ ಸಮುದಾಯ ಮತ್ತು ಸಾಂಸ್ಕೃತಿಕ ನಾಯಕತ್ವ, ಈ ನಾಯಕತ್ವದ ಬಗ್ಗೆ ಹೆಚ್ಚು ಚಿಂತನೆ ಮಾಡುವಂತ ಪ್ರೊ.ಹಿ.ಶಿ.ರಾಮಚಂದ್ರೇಗೌಡ್ರು ಬಂದಿದಾರೆ, ಅವರಿಗೂ ಕೂಡ ಸ್ವಾಗತವನ್ನು ಬಯಸ್ತೀನಿ.

ಸಂವಾದದಲ್ಲಿ ಭಾಗವಹಿಸಲು ನೀವು ಹಿರಿಯರೆಲ್ಲರೂ ಬಂದಿದ್ದೀರಿ. ನಿಮಗೆಲ್ಲರಿಗೂ ಕೂಡ ಅಧ್ಯಯನ ಕೇಂದ್ರದ ಪರವಾಗಿ ನಾನು ಸ್ವಾಗತ ಬಯಸ್ತಾ ಮಾಧ್ಯಮದ ಪ್ರತಿನಿಧಿಗಳಿಗೂ ಸ್ವಾಗತ ಮಾಡಿ, ಮಾತುಕತೆ, ಚರ್ಚೆಯನ್ನು ಪ್ರಾರಂಭ ಮಾಡ್ಬೇಕು ಅಂತ ಡಾ. ಬಂಜಗೆರೆ ಜಯಪ್ರಕಾಶ್ ಅವರನ್ನ ಕೇಳ್ಕೊತಿದೀನಿ.

## ಕನಕದಾಸರ ಕೃತಿಗಳಲ್ಲಿರುವ ಜೀವನ ಮೀಮಾಂಸೆ

**ಡಾ. ಬಂಜಗೆರೆ ಜಯಪ್ರಕಾಶ**

ಕನಕದಾಸರ ಬಗ್ಗೆ ಈಗಾಗ್ಲೇ ಸಾಕಷ್ಟು ಅಧ್ಯಯನಗಳು ನಡೀತಾ ಬಂದಿವೆ. ಹಾಗಾಗಿ ಚರ್ಚೆಗೆ ಹೊಸದಾದ ಅಂಶಗಳನ್ನು ಮುಂದಿಡೋದು ಅನ್ನೋದು ತಕ್ಷಣದಲ್ಲಾಗೋವಂತ ವಿಷಯ ಅಂತ ನಾನು ಅಂದ್ಕೊಂಡಿಲ್ಲ. ಮುಖ್ಯವಾಗಿ ನಾವು ಅವರನ್ನ ಎರಡು ಅಂಶಗಳ ನೆಲೆಯಿಂದ ಗ್ರಹಿಸಬಹುದು. ಅವರ ಕೃತಿಗಳಲ್ಲಿ ಇರುವಂತಹ ಜೀವನ ಮೀಮಾಂಸೆ ಯಾವುದು? ಹಾಗೂ ಅವರ ಜೀವನದಲ್ಲಿರುವಂತ ಜೀವನ ಮೀಮಾಂಸೆ ಯಾವುದು? ಅವು ಕೃತಿಗಳಲ್ಲಿ ಅಂತ ಹೇಳಿದ್ರೆ ಸಹಜವಾಗಿ ನನ್ನಂತವರಿಗೆ ಮುಖ್ಯವಾಗುವಂತಹ ಜೀವನ ಮೀಮಾಂಸೆ ಅವರ ರಾಮಧಾನ್ಯ ಚರಿತೆ ಮತ್ತು ಕೀರ್ತನೆಗಳಲ್ಲಿ ಇರುವ ನಿಲುವುಗಳು. ಕೀರ್ತನೆಗಳಲ್ಲೂ ಕೂಡ ಎಲ್ಲ ಕೀರ್ತನೆಗಳನ್ನ ಹೇಳೋದು ಕಷ್ಟ. ಅದಕ್ಕೆ ಕಾರಣ ಏನು ಅಂತ ಹೇಳಿದ್ರೆ ಒಂದು ನಿರ್ದಿಷ್ಟ ಸನ್ನಿವೇಶದಲ್ಲಿ ಒಂದು ಸಾಮಾಜಿಕ ಸಂಚಲನೆಯ ಕಾಲಘಟ್ಟದಲ್ಲಿ ಆ ಕಾಲಘಟ್ಟಕ್ಕೆ ಪ್ರತಿಕ್ರಿಯಿಸಿರುವಂತ ಸಂತ ಕವಿ ಅವರು. ಅದು ಒಂದು ವಿಸ್ತಾರವಾದ ಆವರಣವನ್ನ ಕನಕದಾಸರಿಗೆ ಒದಗಿಸಿದೆ ಅಂತ ನಾನು ಭಾವಿಸ್ತೀನಿ. ಆ ಕಾಲಘಟ್ಟದ ಚಾರಿತ್ರಿಕ ಹಿನ್ನೆಲೆ ಕನಕದಾಸರಲ್ಲಿ ಯಾವ ರೀತಿ ಕ್ರಿಯಾಶೀಲವಾಗಿತ್ತು. ಮತ್ತು ಕನಕದಾಸರು ಅದನ್ನು ಒಳಗೊಂಡ ಬಗೆ ಹೇಗೆ? ಅದನ್ನ ನಾವು ಈಗ ಗ್ರಹಿಸುತ್ತಿರುವ ಬಗೆ ಹೇಗೆ? ಇವು ಬಹಳ ಮುಖ್ಯವಾಗಿರುವ ಸಮಸ್ಯೆಗಳು ಅಂತ ನನಗೆ ಕಾಣಿಸಿವೆ.

ಕನಕದಾಸರ ಹಿನ್ನೆಲೆಯ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆಗಳು ಮತ್ತು ವಾದವಿವಾದಗಳು ನಡೀತಾ ಬಂದಿವೆ. ಶೂದ್ರ ಜಾತಿಯಿಂದ ಬಂದಂತ ಒಬ್ಬ ಸಂತ ಅವರು. ಭಕ್ತಿ ಪಂಥದ ಬಹಳ ದೊಡ್ಡ ಕೀರ್ತನಾಕಾರರು, ಅನುಭಾವಿ ಹಾಗೂ ಕವಿ ಅಂತ ಅವ್ರನ್ನ ಕರೀಬಹುದು. ಅವರು ಭಕ್ತಿ ಪಂಥವನ್ನ ಪ್ರವೇಶ ಮಾಡಿದ್ದಕ್ಕೆ ಕಾರಣಗಳು ಹಲವಾರಿದ್ದವು. ಆ ಕಾಲದ ಒತ್ತಾಸೆ ಕೂಡ ಅದಕ್ಕೆ ಇತ್ತು. ಆ ಕಾಲಘಟ್ಟದಲ್ಲಿ ನಾವು ನೋಡಬಹುದಾಗಿರುವಂತ ಕೆಲವು ಚಾರಿತ್ರಿಕ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಕನಕದಾಸರು ಈ ಭಕ್ತಿಪಂಥವನ್ನ ಪ್ರವೇಶ ಮಾಡಿದ್ದಕ್ಕೆ ಕಾರಣಗಳನ್ನು ಊಹಿಸಬೇಕಾಗುತ್ತದೆ. 16 ಮತ್ತು 17ನೇ ಶತಮಾನದಲ್ಲಿ ಏನು ಭಕ್ತಿ ಪಂಥ ಅಂತ ಕರೀತೀವಿ, ಹರಿದಾಸ ಪಂಥ, ಆ ಹರಿದಾಸ ಭಕ್ತಿ ಪಂಥದ ಚಲನಶೀಲತೆಯ ಗರಿಷ್ಠ ಬಿಂದು ಕನಕದಾಸ. ಕರ್ನಾಟಕದಲ್ಲಿ ಭಕ್ತಿಪಂಥಕ್ಕೆ ಯಾವುದಾದರೂ ಒಂದು ರೂಪದ ಸಾಮಾಜಿಕ ಅರ್ಥವನ್ನು ಮತ್ತು ಪ್ರಸ್ತುತತೆಯನ್ನು ವಿವರಿಸಬೇಕು ಅಂತ ಹೇಳಿದ್ರೆ ಅದು ಕನಕದಾಸರ ಮುಖಾಂತರವೇ ಆಗಬೇಕು. ಇದು ಬಹಳ ಮುಖ್ಯವಾಗಿರುವಂತ ವಿಷಯ.

ಭಕ್ತಿಪಂಥದ ಒಟ್ಟು ವ್ಯಾಪ್ತಿ ಬಹಳ ದೊಡ್ಡದು. ಭಕ್ತಿಪಂಥದ ಆಶಯ ಕೂಡ ಬಹಳ ಉದಾತ್ತವಾದುದು. ಆದರೆ ವಾಸ್ತವದ ನೆಲೆಯಲ್ಲಿ ಅದು ಗಳಿಸಿಕೊಂಡ ಚಲನಶೀಲತೆಯ ಸೀಮಾರೇಖೆಗಳು ಏನಾಗಿರಬಹುದು? ಅದರೊಳಗಡೆಯೇ ಇರುವಂತಹ ಮಿತಿಗಳು ಮತ್ತು ಅದರೊಳಗಡೆಯೇ ಇರುವಂತಹ ಬಿರುಕುಗಳು ಏನಾಗಿದ್ದವು ಅಂತ ನೋಡೋದಿಕ್ಕೆ ಕನಕದಾಸರು ನಮಗೊಂದು ಬಹಳ ದೊಡ್ಡ ಆಕರ.

ಪ್ರಾಸಂಗಿಕವಾಗಿ ಪ್ರಾಸ್ತಾವಿಕ ಭಾಷಣದಲ್ಲಿ ಅದನ್ನ ಕಾ ತ ಚಿಕ್ಕಣ್ಣನವರು ಹೇಳಿದ್ದಾರೆ. ಅವರನ್ನು ಭಾಗವತರಾಗುವಂತೆ ಯಾರೂ ಕರೀಲಿಲ್ಲ. ಆ ಕಾಲದ ಕರೆಗೆ ಓಗೊಟ್ಟು ತಾನೇ ಭಾಗವತರಾದರು. ಬಹಳ ಆಶ್ಚರ್ಯ ಅಂತ ಹೇಳಿದ್ರೆ ಕನಕದಾಸರು ಮಾತ್ರವೇ ಯಾಕೆ ವಿಶಿಷ್ಟ ಕರ್ನಾಟಕದ ಹರಿದಾಸ ಪಂಥದಲ್ಲಿ? ವಿಜಯನಗರ ಕಾಲಘಟ್ಟದಲ್ಲಿ ಹಲವು ಶೂದ್ರ ಜಾತಿಗಳು ಆಳುವ ವರ್ಗದ ವಲಯಕ್ಕೆ ಸವಾಲು ಎಸೆಯುತ್ತ ತಾವೂ ಕೂಡ ಆಳುವ ವರ್ಗದಲ್ಲಿ ಪಾಲ್ಗೊಳ್ಳೋದಿಕ್ಕೆ ಪ್ರಯತ್ನಪಟ್ಟಂತ ಅವಧಿ ಅದು. ರಾಜ್ಯಾಧಿಕಾರದಲ್ಲಿ ಬಹಳ ನಿರ್ಣಾಯಕವಾದ ಪಾತ್ರವನ್ನು ವಹಿಸೋದಕ್ಕೆ ಪ್ರಯತ್ನಪಟ್ಟ ಕಾಲಘಟ್ಟ ಅದು. ಆದರೆ ಕನಕದಾಸರೊಬ್ಬರೇನೇ ಶೂದ್ರ ಸಮೂಹದಿಂದ ಹೊರಟು ಆಧ್ಯಾತ್ಮಿಕ ಶಕ್ತಿಯನ್ನು ಗಳಿಸಬೇಕು. ಧಾರ್ಮಿಕ ಮತ್ತು ಆಚರಣಾತ್ಮಕ ನೆಲೆಗಟ್ಟಿನಿಂದಲೂ ಕೂಡ ಆ ಶೂದ್ರ ಶಕ್ತಿಯ ಪ್ರತಿಪಾದನೆಯನ್ನು, ಆಶೋತ್ತರಗಳನ್ನ ಮಂಡಿಸಬೇಕು ಅಂತ ಮುಂತೊಡಗಿರುವ ರೀತಿಯಲ್ಲಿ ಕಾಣ್ತುತ್ತೆ. ನಮಗೆಲ್ರಿಗೂ ಇತಿಹಾಸದಲ್ಲಿ ಗೊತ್ತಿರುವ ಪ್ರಕಾರ ಆ ಕಾಲಘಟ್ಟದಲ್ಲಿ ಕುರುಬರು ಮತ್ತು ಬೇಡರು ನಿರ್ಣಾಯಕವಾಗಿರುವಂತಹ ರಾಜ್ಯಾಧಿಕಾರ ನಿರ್ವಹಣೆಯ ಶಕ್ತಿಗಳಾಗಿ ಹೊರಹೊಮ್ಮಿದರು ಕರ್ನಾಟಕದಲ್ಲಿ. ಅದಕ್ಕೆ ಕಾರಣಗಳೇನು ಅನ್ನೋದನ್ನ ಕೂಡ ಇತಿಹಾಸಕಾರರು ಈಗಾಗಲೇ ಹೇಳಿದ್ದಾರೆ. ಪಾಳೆಯಗಾರರು, ವ್ಯವಸಾಯವನ್ನೇ ಹೆಚ್ಚು ಆಧರಿಸಿ ನಡೀತಾ ಇದ್ದಂತಹ ಒಂದು ರಾಜ್ಯವ್ಯವಸ್ಥೆ, ತುಂಡರಸರು ಮತ್ತು ತೋಳ್ಬಲವನ್ನೇ ಆಧರಿಸಿರುವಂತಹ ರಾಜ್ಯಶಕ್ತಿ, ವಿಜಯನಗರದ ಅರಸರ ಕಾಲಘಟ್ಟಕ್ಕೆ ಬಂದರೆ, ಬೇಡರು ಮತ್ತು ಕುರುಬರು ಆ ಕಾಲಘಟ್ಟದಲ್ಲಿ ಬಹಳ ದೊಡ್ಡ ಸಮರಶೀಲ ಜಾತಿಗಳಾಗಿ ಹೊರ ಹೊಮ್ಮಿರೋದನ್ನ ನಾವು ಕಾಣ್ತೀವಿ. ವಿಜಯನಗರ ಸಾಮ್ರಾಜ್ಯ ಇದ್ದದ್ದೂ ಕೂಡ ಈ ಎರಡು ಜಾತಿಗಳು ದಟ್ಟವಾಗಿ ನೆಲೆಸಿದ್ದಂತಹ ಜಿಲ್ಲೆಗಳಲ್ಲಿ. ರಾಯಚೂರು, ಬಳ್ಳಾರಿ, ಕೊಪ್ಪಳ. ಈ ಪ್ರಾಂತ್ಯವನ್ನು ಈಗ ನೋಡಿದ್ರೂ ಕೂಡ ನಮ್ಗೆ ಭೌಗೋಳಿಕ ನೆಲೆಗಳು ಅರ್ಥವಾಗುತ್ತದೆ. ಇವರಿಗೊಂದು ಸಮರಶೀಲತೆಯ ಗುಣವೂ ಇದೆ. ಅದರ ಅಂಗವಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ಅತ್ಯಂತ ನಿರ್ಣಾಯಕವಾದ ಪ್ರಭುತ್ವ ನಿರ್ಮಾಪಕ ಶಕ್ತಿಗಳಾಗಿ ಅವರು ಪಾತ್ರ ನಿರ್ವಹಿಸಿದರು.

ಅವರ ಬಹಳಷ್ಟು ಶಕ್ತಿ ಇರೋದು ಸೈನಿಕ ರೂಪದಲ್ಲಿ, ಆಗ ಇದ್ದಂತಹ ನಿತ್ಯವೂ ಯುದ್ಧ ನಡೆಯುವ ಪಾಳೇಗಾರಿಕೆಯ ಕಾಲ ಘಟ್ಟ, ತುಂಡರಸರ ನಡುವೆ ಪದೇ ಪದೇ ನಡೆಯುತ್ತಿದ್ದ ಜಗಳ, ಆ ಜಗಳದಲ್ಲಿ ದೊಡ್ಡ ತೋಳ್ಬಲವನ್ನ ಒದಗಿಸಿದ್ದು ಈ ಎರಡು ಜಾತಿಗಳು. ಅವರ್ನ ಬಿಟ್ರೆ ಮಾದಿಗರ ದಂಡು. ಕರ್ನಾಟಕದ ಸೈನ್ಯಗಳಲ್ಲಿ ಈ ಮೂರು ಜಾತಿಯ ದಂಡುಗಳಿಲ್ಲದಂತಹ ಸೈನ್ಯ ಇಲ್ಲ. ಬೇಡರ ಪಡೆ, ಕುರುಬರದ್ದು ಮತ್ತು ಮಾದಿಗರ ದಂಡು. ಈ ಮುಖಾಂತರ ರಾಜ್ಯಾಧಿಕಾರದ ನಿರ್ವಹಣೆಯಲ್ಲಿ ಅವರಿಗೆ ಸ್ಥಾನ ಸಿಕ್ಕಿದೆ. ನಿರ್ಣಾಯಕವಾದ ಶಕ್ತಿಯುತ ಪಾತ್ರವನ್ನು ಅವರು ನಿರ್ವಹಿಸ್ತಾ ಇದಾರೆ. ಆದ್ರೆ ಆಧ್ಯಾತ್ಮಿಕ ಅಧಿಕಾರದಲ್ಲಿ, ಸಾಂಸ್ಕೃತಿಕವಾಗಿರುವಂತಹ ಅಧಿಕಾರದಲ್ಲಿ ಅವರ ಸ್ಥಾನ ಬಹಳ ಕೆಳಗಡೆ ಇದೆ. ಅದನ್ನೇ ಒಂದು ವೈರುಧ್ಯವಾಗಿ ನಾವು ಗಮನಿಸ್ಬೇಕು. ಕನಕದಾಸರನ್ನ ಅವರು ಪ್ರತಿನಿಧಿಸುವ ಶೂದ್ರ ಜಾತಿಯ ಹಿನ್ನೆಲೆಯಲ್ಲಿ ಆಗ ಎಚ್ಚೆತ್ತುಕೊಂಡಿರುವಂತಹ ಒಂದು ಸಾಮಾಜಿಕ ಪ್ರಜ್ಞೆಯ ಹಿನ್ನೆಲೆಯಲ್ಲಿ ಮಹತ್ವದ ವ್ಯಕ್ತಿಯನ್ನಾಗಿ ಗುರ್ತಿಸೋದು ರಾಜ್ಯಶಕ್ತಿಗೇನೂ ಕಷ್ಟವಲ್ಲ. ಅವರು ಗುರ್ತಿಸಲೇಬೇಕಿತ್ತು. ಯಾಕಂದ್ರೆ ಅವ್ರು ಅದನ್ನ ಅವಲಂಬಿಸಿದಾರೆ. ಆದ್ರೆ ಆಧ್ಯಾತ್ಮಿಕವಾದ ನೆಲೆಯಲ್ಲಿ ಧಾರ್ಮಿಕ ವಲಯದಲ್ಲಿ ಅವರ ಶಕ್ತಿಯನ್ನ ಆ ರೀತಿಯಾಗಿ ಪರಿಗಣಿಸುವುದಕ್ಕೆ ಆ ಕಾಲಘಟ್ಟದ ಸಾಂಸ್ಕೃತಿಕ ವಲಯ ಸಿದ್ಧವಿಲ್ಲ. ಈ ಹಿನ್ನೆಲೆಯಲ್ಲಿ ನಾವು ಆ ಸಂಘರ್ಷವನ್ನು ಗಮನಿಸಬಹುದೋ ಏನೋ.

ತನ್ನನ್ನ ಭಾಗವತ ಆಗು ಅಂತ ಯಾರೂ ಹೇಳ್ಲಿಲ್ಲ. ಆತನೇ ಭಾಗವತನಾಗಿ ಒಂದು ಭಕ್ತಿಪಂಥವನ್ನ ಆಶ್ರಯಿಸಿದ್ದಾರೆ. ಭಕ್ತಿ ಮೂಲಕ ಯಾವ ಸಂದೇಶವನ್ನು ಜನತೆಗೆ ಹೇಳಬೇಕು ಅನ್ನುವ ವಿಷಯದಲ್ಲಿ ಅವರಿಗೆ ಸ್ಪಷ್ಟತೆ ಇದೆ. ಆಧ್ಯಾತ್ಮಿಕವಾಗಿ ಭಕ್ತಿಯನ್ನ ಅದರ ಉನ್ನತ ನೆಲೆಯಲ್ಲಿ ಗ್ರಹಿಸಿದವರು ಕನಕದಾಸರು. ಭಕ್ತಿಯನ್ನ ನಾವು ಎರಡು–ಮೂರು ಬಗೆಯಲ್ಲಿ ಗ್ರಹಿಸಬಹುದು. ಭಕ್ತಿಯನ್ನ ನಾವು ಶರಣಾಗತಿ ಅಂತ ಗ್ರಹಿಸಬಹುದು. ಭಕ್ತಿಯನ್ನ ಶರಣಾಗತಿಯ ಧಿಕ್ಕಾರ ಅಂತ ಕೂಡ ಗ್ರಹಿಸಬಹುದು. ಹೊಂದಾಣಿಕೆ ಅಂತ ಕೂಡ ಗ್ರಹಿಸಬಹುದು. ಯಾರು ಯಾವ ನೆಲೆಗಟ್ಟಿನಿಂದ ಭಕ್ತಿಯನ್ನ ಮಾತನಾಡುತ್ತಾರೆ ಅನೋದನ್ನ ನೋಡಿದ್ರೆ ಮಾತ್ರವೇ ಆ ಸಂದರ್ಭದಲ್ಲಿ ಭಕ್ತಿ ಯಾವ ಕಾರ್ಯವನ್ನ ನಿರ್ವಹಿಸ್ತಾ ಇದೆ ಅಂತ ನಾವು ಹೇಳ್ಬಹುದು. ಕರ್ನಾಟಕದ ಸಾಮಾಜಿಕ ಸಂಬಂಧದಲ್ಲಿ ಏಕಕಾಲದಲ್ಲಿ ಭಕ್ತಿ ಅನ್ನೋದು ಆಳುವ ವರ್ಗಗಳಿಗೆ ದಾಸ್ಯತ್ವವನ್ನು ಪ್ರಕಟಿಸುವಂತಹ ಮಾರ್ಗವಾಗಿಯೂ ಪ್ರಕಟವಾಗಿದೆ, ಆಳುವ ವರ್ಗಗಳ ಆಧಿಪತ್ಯವನ್ನು ಧಿಕ್ಕರಿಸುವ ನೆಲೆಗಟ್ಟಿನಲ್ಲಿಯೂ ಪ್ರಕಟವಾಗಿದೆ. ಇಲ್ಲಿ ಹೆಚ್ಚು ನಿರ್ದಿಷ್ಟವಾಗಿ ಕಂಡು ಬರೋದು ಶೈವ ಪಂಥೀಯ ಭಕ್ತಿ ಪಂಥಗಳೇ. ಕರ್ನಾಟಕದ ಮಟ್ಟಿಗೆ ನಾನು ಹೇಳ್ತಾಯಿರೋದು. ಕರ್ನಾಟಕದ ಮಟ್ಟಿಗೆ ಶೈವಾವಲಂಬಿಗಳಾಗಿರುವಂತಹ ಭಕ್ತಿಪಂಥದವರು ಉಂಟು ಮಾಡಿದ ಚಲನಶೀಲತೆಯನ್ನು ವೈಷ್ಣವ ಪಂಥದವರಲ್ಲಿ ನಿರೀಕ್ಷೆ ಮಾಡುವುದು ಸ್ವಲ್ಪ ಕಷ್ಟ. ಅದು ಉತ್ತರ ಭಾರತದಲ್ಲಾಗಿದೆ. ಉತ್ತರ ಭಾರತದಲ್ಲಿ ವೈಷ್ಣವ ಪಂಥೀಯ ಭಕ್ತಿ ಚಳುವಳಿ, ನಾಥ ಪಂಥ ಅಥವಾ ಸಿದ್ಧ ಪಂಥ ಮಾಡಿರುವಂತಹ ನಿರ್ಣಾಯಕವಾಗಿರುವಂತಹ ಜಾತಿ ಪಲ್ಲಟಗಳು ಮತ್ತೆ ಆಳುವ ವರ್ಗಗಳ ಮೇಲಿನ ಪ್ರಭಾವ ಕರ್ನಾಟಕದಲ್ಲಿನ ವೈಷ್ಣವ ಪಂಥೀಯರಿಂದ ನಿರೀಕ್ಷಿಸುವುದಕ್ಕೆ ಸಾಧ್ಯವಿಲ್ಲ ಎಂದರೆ ತಪ್ಪಿಲ್ಲ.

ಪತಿ–ಪತ್ನಿಯ ಸಖ್ಯದ ವಿನ್ಯಾಸದಲ್ಲಿ ಹುಡುಕಾಡಿದಂತಹ ಭಕ್ತಿಯ ಮಾರ್ಗ ಇದು. ಇದು ಅವರ ಬಿಡುಗಡೆಯ ಹಾದಿ. ಬಹಳ ಮುಖ್ಯವಾಗಿ ಆತನ ಜೀವನದ ಕಥೆಗಳಲ್ಲಿ ನಮಗೆ ಕಂಡುಬರೋದು ಏನು ಅಂತ ಹೇಳಿದ್ರೆ ಧರಾಧೀಶರನ್ನ ನಂಬಿ ಬದುಕೋದಕ್ಕೆ ಸಾಧ್ಯವಿಲ್ಲ ಅನ್ನುವ ಜ್ಞಾನೋದಯ. ಪರಿಸ್ಥಿತಿಯ ವ್ಯಂಗ್ಯ ಏನು? ಸ್ವತಃ ಒಂದು ತುಂಡರಸನ ಸ್ಥಾನದಲ್ಲಿದ್ದಂತಹ,

ಸ್ಥಳೀಯವಾಗಿ ದೊರೆ ಎಂದು ಕರೆಸಿಕೊಳ್ಳುತ್ತಿದ್ದ ಕನಕದಾಸರು ವಾಸ್ತವವಾಗಿ ಆಗ ದಾಸರಾಗಿದ್ದರು. ಆ ಕಾಲಘಟ್ಟದಲ್ಲಿ ಹೆಸರಿಗೆ ದೊರೆ, ತುಂಡರಸ. ಆದರೆ ವಾಸ್ತವಿಕವಾಗಿ ಧರಾಧೀಶರಿಗೆ ಆತ ದಾಸ. ಆನಂತರದ ಕನಕನಾಯಕ ಅಥವಾ ತಿಮ್ಮಪ್ಪನಾಯಕ ನಾಯಕಪಟ್ಟವನ್ನು ಬಿಟ್ಟು ದಾಸನಾದ. ಆ ಮುಖಾಂತರ ನಿಜವಾದ ದೊರೆಯಾದ. ಬಹಳ ಗತಿತಾರ್ಕಿಕವಾಗಿರುವ ನಡೆಯಿದು. ದಾಸತ್ವವನ್ನು ಸ್ವೀಕರಿಸುವ ಮುಖಾಂತರ ದೊರೆಯಾಗುವುದು. ದೊರೆಯಾಗಿದ್ದೀನಿ ಅನ್ನುವ ಭ್ರಮೆಯಲ್ಲಿ ದಾಸನಾಗಿರೋದು. ಇವೆರಡರ ನಡುವಿನ ವ್ಯತ್ಯಾಸವನ್ನ ನಾವು ಕನಕದಾಸರ ಜೀವನದ ನಡೆಯಲ್ಲಿ ಕಾಣಬಹುದು. ಕನಕದಾಸರು ಹೇಳುವ ಭಕ್ತಿಯ ಪ್ರಕಾರ ಆತ ಯಾರಿಗೆ ದಾಸನಾಗಿದ್ದಾನೋ ಆ ದೆಸೆಯಿಂದಾಗಿ ಆತ ಇನ್ಯಾರಿಗೂ ದಾಸನಾಗಿರ ಬೇಕಾದ್ದಿಲ್ಲ. ಭಕ್ತಿಪಂಥದ ಬಹಳ ದೊಡ್ಡ ಶಕ್ತಿನೇ ಅದು. ಅದನ್ನ ನಾವು ಬೆಂಗಳೂರಲ್ಲಿ ಚರ್ಚೆ ಮಾಡಿದಾಗ್ಲೂ ಕೂಡ ಕೆ.ವಿ.ಎನ್. ಮತ್ತು ಬೇರೆ ಬೇರೆ ವಿದ್ವಾಂಸರು ಆ ಚರ್ಚೆಯನ್ನು ಎತ್ತಿದರು. ಅಕ್ಕಮಹಾದೇವಿ ಲೋಕದ ಗಂಡರನ್ನೆಲ್ಲ ಬಿಟ್ಟು ಒಬ್ಬ ಗಂಡನನ್ನು ಒಪ್ಪಿಕೊಳ್ಳುತ್ತಾಳೆ. ಅದು ಗಂಡನ ರೂಪದಲ್ಲೇ ಇದೆ. ಆದ್ರೆ ಯಾವ ಗಂಡನಿಗೂ ತಲೆಬಾಗಬೇಕಾದ ಅಗತ್ಯವಿಲ್ಲದ ಒಂದು ದಾಸ್ಯತ್ವ. ಬಿಡುಗಡೆಯ ಒಂದು ಹಂತ. ಭಕ್ತಿ ಪಂಥಕ್ಕಿರುವಂತ ಬಹಳ ದೊಡ್ಡ ಶಕ್ತಿ ಏನು? ಕ್ರಿ.ಶ.ದ ಆರಂಭಿಕ ಕಾಲಘಟ್ಟದಿಂದಲೂ ನಾವು ನೋಡಬಹುದಾಗಿರುವ ಈ ಬೆಳವಣಿಗೆಯ ಹಿನ್ನೆಲೆ ಏನು? ಇಲ್ಲಿರುವಂತಹ ಧರಾಧೀಶರ ಸೇವೆಗೆ ಅವರನ್ನವರು ಒಡ್ಡಿಕೊಳ್ಳಬೇಕಾಗಿರುವುದಿಲ್ಲ. ಅವ್ರು ಒಂದೇ ಸಲಕ್ಕೆ ದೇವರಿಗೆ ದಾಸರಾದವರಾದ್ದರಿಂದ ಅವ್ರ ಮೇಲೆ ಇನ್ಯಾರ ಆಳ್ವಿಕೆಯೂ ನಡ್ಯೋದಿಲ್ಲ.

ಕಾಗಿನೆಲೆ ಪಟ್ಟಣದ ಬಗ್ಗೆ ಈಗ ಐತಿಹಾಸಿಕವಾಗಿ ಹೇಳಬಹುದಾಗಿರೋದೇನಂದ್ರೆ ಅತ್ಯಂತ ಹೆಚ್ಚಿನ ಸಂಗ್ರಾಮಗಳಾಗ್ತಿದ್ದದ್ದು ಆ ಕಾಗಿನೆಲೆ ಪಟ್ಟಣದ ಪ್ರಾಂತ್ಯದಲ್ಲೇ ವಿಜಯನಗರದ ಕಾಲಘಟ್ಟದಲ್ಲಿ. ಯಾಕೆ ಗೊತ್ತಿಲ್ಲ? ಅಲ್ಲಿ ರತ್ನ ಸಿಗ್ತಿತ್ತ, ವಜ್ರ ವೈಢ್ಯೂರ್ಯ ಸಿಗ್ತಿತ್ತಾ, ಏನು ಸಿಗ್ತಿತ್ತೋ ಗೊತ್ತಿಲ್ಲ. ಅದಕ್ಕೆ ಪೂರಕವಾಗಿ ಇನ್ನೊಂದು ಹಿನ್ನೆಲೆಯನ್ನು ಹೇಳ್ಬೇಕು ಅಂತಂದ್ರೆ ಹೊರೆಯಾಲ ದೊರೆಸ್ವಾಮಿ ಅವ್ರು ಹೇಳಿದ್ದು ಆ ಊರಲ್ಲಿ ಇರೋ ಜನರಲ್ಲಿ 70% ಅಂದರೆ 4900 ಜನರಲ್ಲಿ 4000 ಜನ ಮುಸ್ಲಿಮರಿದ್ದಾರೆ. ಅವರು ಯೋಧರಾಗಿರದ ಹೊರತು, ಅವರು ಸೈನಿಕರಾಗಿಲ್ಲದ ಹೊರತು ಅವರು ಅಲ್ಲಿ ಆ ಪ್ರಮಾಣದಲ್ಲಿ ಮುಸ್ಲಿಮರಾಗೋದಕ್ಕೆ ಸಾಧ್ಯವೇ ಇಲ್ಲ. ಅಲ್ಲಿ ಹೊರೆಯಾಲ ಅವರು ಗಮನಿಸಿರೋ ಇನ್ನೊಂದು ವಿಶೇಷವಾದ ಅಂಶ ಏನು ಅಂದ್ರೆ ಕೆಲವು ಮುಸ್ಲಿಮರು ಸಸ್ಯಾಹಾರಿಗಳು. ನೀವು ಸೈನಿಕ ದಳದಲ್ಲಿ ಸೇರ್ಬೇಕು ಅಂತ ಹೇಳಿದ್ರೆ ಮುಸ್ಲಿಮರಾಗಿದ್ದವರಿಗೆ ಸಿಗ್ತಿದಂತಹ ವಿಶೇಷ ಸವಲತ್ತುಗಳ ಕಾರಣಕ್ಕೆ ಒಂದು, ಎರಡನೆಯದು ಇವರ ಧರ್ಮನಿಷ್ಠೆಯನ್ನು ಬದಲಾಯಿಸದ ಹೊರತು ಇವರು ನಮಗೆ, ನಮ್ಮ ರಾಜ್ಯಕ್ಕೆ ನಿಷ್ಠೆ ತೋರಿಸುವುದಿಲ್ಲ ಅನ್ನುವ ಕಾರಣಕ್ಕೆ ಅವರನ್ನ ಬಲಾತ್ಕಾರದ ಮತಾಂತರ ಮಾಡಿರಬಹುದಾದ ಸಾಧ್ಯತೆಗಳು ಅಥವಾ ಅವಕಾಶವಾದಕ್ಕೆ ಮುಸ್ಲಿಂ ಆಗಿದ್ದೂ ಇಂದಿಗೂ ಸಸ್ಯಹಾರವನ್ನು ನಡೆಸಿಕೊಂಡು ಬರ್ತಾ ಇರುವಂತಹ ಆ ಕಾಲದ ಸೈನಿಕರ ಕುಟುಂಬಗಳವರು, ಇದೇನೇ ಇರ್ಬಹುದು. ಆ ಕಾಗಿನೆಲೇಲಿ ಬರೀ ಕಾಗಿನೆಲೇಲಿರೋದನ್ನ ವಶಪಡಿಸಿಕೊಳ್ಳೋದಕ್ಕೆ ಪದೇಪದೇ ಅಲ್ಲಿ 40–50 ಬಾರಿ ಕದನಗಳಾಗಿವೆ. ಅಂತಹ ಒಂದು ಪ್ರಾಂತ್ಯದಲ್ಲಿ ಈತ ಒಬ್ಬ ಮಾಂಡಲೀಕ ನಾಯಕ. ಆತನಿಗೆಷ್ಟು ವೈರಾಗ್ಯ ಹುಟ್ಟಿರಬಹುದು. ಎಷ್ಟು ನಶ್ವರ ಅಂತ ಕಂಡಿರಬಹುದು. ಆಗಿನ ಜೀವನದ ಹಿನ್ನೆಲೆಯಿಂದ ನೋಡಬಹುದಾದ್ರೆ ನಿತ್ಯ ಬೆಳಗಾದರೆ ಯುದ್ಧ. ಇವತ್ತು ಅರಸನಾಗಿರೋನು ನಾಳೆ ಆಳಾಗ್ತಾನೆ. ಇವತ್ತು ಗುಲಾಮನಾಗಿದ್ದವನು ನಾಳೆ ಅರಸನಾಗಿರ್ತಾನೆ. ಅತ್ಯಂತ ಅನಿಶ್ಚಯ ಸಂದರ್ಭದಲ್ಲಿ ಹುಟ್ಟಿಕೊಂಡಿರುವಂಥ ಒಂದು ಮನಃಸ್ಥಿತಿ ಅದು. ಇಲ್ಲಿ ಯಾವುದೂ ಕೂಡ ಶಾಶ್ವತವಾದುದಲ್ಲ. ಕನಕದಾಸರಲ್ಲಿ ಕಂಡುಬರುವ ವೈರಾಗ್ಯಕ್ಕೂ, ವಿಜಯನಗರ ಕಾಲಘಟ್ಟದಲ್ಲಿ ಕಂಡುಬರುವ ಒಂದು ವೈಭೋಗಕ್ಕೂ ಹತ್ತಿರದ ಸಂಬಂಧ ಇದೆ ಅಂತ ನನಗನ್ನುತ್ತೆ. ಎಲ್ಲಿ ವೈಭೋಗ ಅನ್ನೋದು ಅದರ ತುತ್ತತುದಿಗಳನ್ನ ತಲುಪುವ ದಿಕ್ಕಿನೆಡೆಗೆ ಹೊರಟಿರುತ್ತೆ, ಎಲ್ಲಿ ಭೋಗಲಾಲಸೆ ಅನ್ನೋದು ಅದರ ತಾರ್ಕಿಕ ಅಂತ್ಯಗಳನ್ನು ತಲುಪೋದಕ್ಕೆ ಹೋಗಿರುತ್ತೆ ಅಂತ ಸಂದರ್ಭಗಳಲ್ಲಿ ಅದರ ವಿರುದ್ಧ ನಡೆಯಾಗಿ ವೈರಾಗ್ಯಗಳು ಹುಟ್ಟಿಕೊಳ್ಳುತ್ತೆ. ಎಲ್ಲಿ ಹೆಣ್ಣನ್ನ ಅನುಭೋಗಿಸುವ, ಸದಾ ಬಳಸಬಹುದಾದ ಸರಕು ಎನ್ನುವ ಸಮಾಜ ಏರ್ಪಡುತ್ತೆ ಅಂತ ಸಮಾಜದಲ್ಲೇ ಹೆಣ್ಣನ್ನು ದೂರವಿಡಬೇಕು ಎನ್ನುವ ನೈತಿಕವಾದಿ ವಿರಕ್ತಿಯ ನಿಲುವು ಹುಟ್ಟಿಕೊಳ್ಳುತ್ತದೆ.

ಅಂತಹದರ ಸಹ ಅಭಿವ್ಯಕ್ತಿಯಾಗಿ ಉಡುಪಿಯಂತಹ ಜಾಗದಲ್ಲಿ ಉಡುಪಿಯಂತಹ ಕರ್ಮಠ ಬ್ರಾಹ್ಮಣರ ಸಾಂಪ್ರದಾಯಿಕ ಹಿಡಿತದಲ್ಲಿರುವ ಜಾಗದಲ್ಲಿ ಕನಕನಂತಹ ಒಬ್ಬ ದಾಸ ಹೋಗಿ ಕೃಷ್ಣ ದರ್ಶನದ ಪವಾಡವನ್ನ ಸಂಘಟಿಸೋಕೆ ಸಾಧ್ಯ ಇದೆ ಅಂದ್ರೆ ಆತನಿಗಿದ್ದಂತಹ ಭೌತಿಕ ಬೆಂಬಲ ಏನೋ ಇರ್ಲೇ ಬೇಕು ಉಡುಪಿಯಲ್ಲಿ. ಈತ ಬರಿ ವ್ಯಕ್ತಿಯಾಗಿ ಹೋಗಿದ್ದನೇ? ಅಥವಾ ಆತ ಪ್ರತಿನಿಧಿಸುತ್ತಿದ್ದ ಶಕ್ತಿಗಳು ಈತನಿಗೆ ದೊಡ್ಡ ಬಲವನ್ನು ಕೊಟ್ಟಿದ್ದವೇ? ವಿಜಯನಗರದ ಸೈನ್ಯದಲ್ಲೇ ಇವನ ಪರವಾಗಿ ಇದ್ದಿರಬಹುದಾದ ಶಕ್ತಿಗಳು ಅದರ ಆ ಭೂಕಂಪಕ್ಕೆ ಕಾರಣವಾದವೇ? ಈ ಮಾರ್ಗವಾಗಿಯೂ ಪವಾಡವನ್ನ ನಾವು ಅಧ್ಯಯನ ಮಾಡಲಿಕ್ಕೆ ಸಾಧ್ಯತೆ ಇದೆ. ಆ ಪವಾಡ ಕೃಷ್ಣ ಭಕ್ತಿಯ ಬಹಳ ದೊಡ್ಡ ಪ್ರತೀಕವಾಗಿರುವ ಹಾಗೆಯೇ ಕನಕನ ಶಕ್ತಿಯ ಪ್ರತೀಕವೂ ಕೂಡ. ಕೃಷ್ಣ ದರ್ಶನ ಕೊಡೋದು ಇವನ ಭಕ್ತಿಯ ಕಾರಣಕ್ಕೇ ಆಗಿರ್ಬಹುದು. ಅದು ಕನಕನ ಶಕ್ತಿಯೂ ಆಗಿರ್ಬಹುದು. ಆದ್ದರಿಂದ ನಂಬಿದವರ ಸೇವಕ ನೀನು ಅನ್ನುವ ಕಾರಣಕ್ಕೆ ಈತ ಭಕ್ತಿಯ ನೆಲೆಯಲ್ಲಿ ಆ ಭಕ್ತಿಯನ್ನ ಹೇಳಿರ್ಬೇಕು ಒಂದು. ಎರಡ್ನೆಯದು ಈತ, ಈ ಭಕ್ತಿ ಪಂಥ ಅಂತ ನಾವು ಕರೆಯೋ ಹರಿದಾಸ ಪಂಥದ ನೇರವಾದ ಅನುಯಾಯಿಯೋ ಅಥವಾ ಆ ರೀತಿಯ ಹೋಲಿಕೆಗಳನ್ನು ಪಡೆದಿದ್ದ ತನ್ನದೇ ತಾತ್ವಿಕತೆಯ ಕ್ರಿಯಾಶೀಲ ವ್ಯಕ್ತಿಯೋ. ಇವೂ ಕೂಡ ನಾವು ಮತ್ತಷ್ಟು ಚರ್ಚೆ ಮಾಡ್ಬೇಕಿರೋ ಅಂಶಗಳು.

ವಚನಕಾರರ ಕಾಲಘಟ್ಟಕ್ಕೂ ಸಂಬಂಧಪಟ್ಟಂತೆ ಈ ರೀತಿಯ ಅಂಶಗಳು ನಡೆದಿವೆ. ನೇರವಾಗಿ 12ನೇ ಶತಮಾನಕ್ಕೆ ಸೇರಿಲ್ಲದ ಅಥವಾ ಬಸವಕಲ್ಯಾಣಕ್ಕೂ ಅಥವಾ ಮಂಗಳವೇಡೆಗೂ, ಅನುಭವ ಮಂಟಪಕ್ಕೂ ಅಥವಾ ಆ ಶೂನ್ಯ ಸಿಂಹಾಸನಕ್ಕೂ ನೇರವಾಗಿ ಸಂಬಂಧವಿಲ್ಲದ ಎಷ್ಟೋ ವ್ಯಕ್ತಿಗಳು ಕಾಲಾನುಕ್ರಮದಲ್ಲಿ ಒಂದು ಕಥನವಾಗಿ ಅವರೆಲ್ಲರೂ ವಚನ ಚಳುವಳಿಯ

ಸಮಕಾಲೀನ ಪಾಲುದಾರರಾಗಿದ್ದರು ಅನ್ನುವಂತಹ ಸಂಯೋಜನೆಗಳು ಹುಟ್ಟಿವೆ. ಹರಿದಾಸಭಕ್ತಿ ಪಂಥದ ಕನ್‌ಸ್ಟ್ರಕ್ಟ್‌ನಲ್ಲಿ ಕೂಡ ಹಾಗೇ ಆಗಿರಬಹುದು. ಭಕ್ತಿ ಪಂಥವನ್ನು ಗ್ರಹಿಸಿದ್ದು ನಂತರದಲ್ಲಿ. ಇವರು ನೇರವಾದ ಅನುಯಾಯಿ ಆಗಿದ್ದಿರಬಹುದು. ತನ್ನಷ್ಟಕ್ಕೆ ತಾನು ಆ ಬಗೆಯ ತಾತ್ವಿಕ ಹೋಲಿಕೆ ಗಳಿರುವಂತಹ ವ್ಯಕ್ತಿಯಾಗಿರಬಹುದು. ಆ ಕಾಲದ ಒತ್ತಾಸೆಯಲ್ಲಿ ಶೂದ್ರ ಸಮುದಾಯ ಆಧ್ಯಾತ್ಮಿಕವಾಗಿ, ಧಾರ್ಮಿಕವಾಗಿ ತನ್ನ ಶಕ್ತಿಯನ್ನ ಪ್ರತಿಪಾದಿಸಿದಂತಹ ಕಾಲಘಟ್ಟ ಅದು.

ಇದಕ್ಕೆ ಪೂರಕವಾಗಿ ಇನ್ನೆರಡು ಅಂಶಗಳನ್ನು ಮಾತ್ರ ಹೇಳಿ ನನ್ನ ಮಾತುಗಳನ್ನ ಮುಗಿಸುತ್ತೇನೆ. ಆ ಕಾಲಘಟ್ಟದಲ್ಲೇ ಕರ್ನಾಟಕದ ಬಹುಪಾಲು ಶೂದ್ರ ಕುಶಲಕರ್ಮಿ ಜಾತಿಗಳು ಜನಿವಾರವನ್ನು ಧರಿಸಲು ಆರಂಭಿಸಿದವು. ಅದೊಂದು ಸವಾಲಾಗಿ. ಏಕಸ್ವಾಮ್ಯತೆಯ ವಿರುದ್ಧದ ಸವಾಲು. ಅದು ಪಾಂಚಾಳರು, ನೇಕಾರರಿಂದ ಹಿಡಿದು, ದಲಿತ ಜಾತಿಗಳಲ್ಲೂ ಕೂಡ ಕೆಲವು ಪಂಗಡಗಳು ಆ ಕಾಲಘಟ್ಟದಲ್ಲಿ ಜನಿವಾರವನ್ನು ಧರಿಸಿರುವ ಉದಾಹರಣೆಗಳಿವೆ. ಸ್ವತಃ ದೇವಸ್ಥಾನಗಳನ್ನ ಕಟ್ಟಿಸುವುದು ಹಾಗೂ ಅವರೇ ಅದರ ಪೂಜಾರಿಗಳಾಗಿ ಕಾರ್ಯನಿರ್ವಹಿಸುವುದೂ ಕೂಡ ಆ ಕಾಲಘಟ್ಟದಲ್ಲಿ ಸಂಭವಿಸಿದೆ. ಕನಕನ ಜೀವನದಲ್ಲೂ ಕೂಡ ಆ ಘಟನೆಯ ಉದಾಹರಣೆ ಇದೆ. ಕಾಗಿನೆಲೆಯಲ್ಲಿ ಆತ ಆದಿಕೇಶವನ ದೇವಸ್ಥಾನವನ್ನು ಕಟ್ಟಿಸಿರೋದು ಇತ್ಯಾದಿ ನಿದರ್ಶನಗಳಿದಾವೆ. ದೇವಸ್ಥಾನಗಳನ್ನ ಕಟ್ಟೋದು ಮಾತ್ರವಲ್ಲದೆ ಪೌರೋಹಿತ್ಯವನ್ನು ಮಾಡೋದಕ್ಕೂ ಕೂಡ ಈ ಭಕ್ತಿ ಪಂಥದಲ್ಲಿ ಒಂದು ಅವಕಾಶವನ್ನು ಕಲ್ಪಿಸಿಕೊಟ್ಟಿದ್ದರು. ದಾಸಪಂಥದಲ್ಲಿ ದಾಸಯ್ಯಗಳಾಗಿ ದೀಕ್ಷೆ ಪಡೆದವರು ಸ್ವತಃ ಅವರೇನೇ ಪುರೋಹಿತರು. ಇನ್ನು ಯಾವ ಮಾತ್ರಕ್ಕೂ ಮೇಲ್ಜಾತಿ ಪುರೋಹಿತರ‍್ನ ಕರೆಯುವಂತಿಲ್ಲ. ಆಧ್ಯಾತ್ಮಿಕ ಶಕ್ತಿಯನ್ನು ಧಾರ್ಮಿಕ ಶಕ್ತಿಯನ್ನು ವಿಕೇಂದ್ರೀಕರಿಸುವ ಒಂದು ವಿಧಾನವೂ ಕೂಡ ಇದು. ಮುಖ್ಯವಾಗಿ ಕರ್ನಾಟಕದ ಗ್ರಾಮಾಂತರ ಪ್ರದೇಶಗಳಲ್ಲಿ ದಾಸಯ್ಯಗಳೇ ಪೂಜೆ ಮುಂತಾದ ಧಾರ್ಮಿಕ ಆಚರಣೆಗಳಿಗೆ ಪೌರೋಹಿತ್ಯವನ್ನು ವಹಿಸುವರು. ಇಂತಹ ಕಾರ್ಯಕ್ರಮಗಳಿಗೆ ಬಂದು ಎಲ್ಲರಿಗಿಂತ ಮೊದಲು ಎಡೆ ಸ್ವೀಕರಿಸಿ 'ಗೋವಿಂದಾ' ಅಂತ ಹೇಳಿದ್ರೆ ಆ ಆಚರಣೆ ವಿಧಿವತ್ತಾಗಿ ಪೂರ್ಣಗೊಂಡಂತೆಯೇ. ಇದು ಎಲ್ಲರಿಗೂ ಸಲ್ಲುವಂತಹ ಒಂದು ದೇವರು. ಅಲ್ಲಿ ಪೂಜಾರಿ ಪಾತ್ರ ಯಾರಿಗಿದೆ? ಮೇಲ್ಜಾತಿಯವರ‍್ನ ಕರೆಸ್ಬೇಕಾದುದಿಲ್ಲ. ವಿಜಯನಗರ ಕಾಲಘಟ್ಟದಲ್ಲಿ ಶೂದ್ರರು ಏರ್ಪಡಿಸಿಕೊಂಡ ಆಧ್ಯಾತ್ಮಿಕ ಮತ್ತು ಧಾರ್ಮಿಕ ಶಕ್ತಿಯ ಪ್ರತೀಕವಾಗಿಯೇನೇ ತಿರುಪತಿ ತಿಮ್ಮಪ್ಪ ಅಷ್ಟು ದೊಡ್ಡ ದೈವಶ್ರದ್ಧೆಯ ಶಕ್ತಿ ಕೇಂದ್ರವಾಗಿ ಬೆಳವಣಿಗೆಗೊಂಡಿದ್ದು. ಈಗ್ಲೂ ಕೂಡ ಅದು ಮುಂದುವರೀತಾ ಇದೆ. ಇದು ವೈದಿಕವಾದುದಲ್ಲ. ವೈದಿಕರು ಆನಂತರ ಪೂಜೆ ಮಾಡೋದಕ್ಕೋಗಿರ‍್ಬಹುದು. ಅವೈದಿಕ ಶಕ್ತಿಯ ಪ್ರಾಬಲ್ಯದ ಪ್ರಕಟಣೆ ಇದು.

ಈ ರೀತಿಯ ಹಲವು ಅಂಶಗಳಲ್ಲಿ ನಾವು ಕನಕದಾಸರ ಭಕ್ತಿಯ ನೆಲೆಗಳನ್ನ ಮತ್ತು ಅವರ ಸಾಮಾಜಿಕ ಕ್ರಿಯಾಶೀಲತೆಯ ನೆಲೆಗಳನ್ನ ಗ್ರಹಿಸಬೇಕು. ನಮಗೆ ಸಾಮಾಜಿಕ ಸನ್ನಿವೇಶದ ಒತ್ತಾಸೆ ಇಲ್ಲದೆ, ಕುಲಕುಲ ಅನ್ನೋದರ ಬಗ್ಗೆ ಆತ ಕೀರ್ತನೆಗಳನ್ನ ಬರೆದು ಪ್ರತಿಪಾದಿಸುವುದು ಬಹಳ ಕಷ್ಟ. ಆತ್ಮ ಯಾವ ಕುಲ? ಜೀವ ಯಾವ ಕುಲ? ಅಂತ ಹೇಳೋದು ಆಧ್ಯಾತ್ಮ. ಆದ್ರೆ ಆ ರೀತಿ ಹೇಳ್ಬೇಕಾದ್ರೆ ಆತ ಹೇಳ್ತಾಯಿರೋ ಸಿದ್ಧಾಂತ ಯಾವ್ದು ಅಂತ ಹೇಳಿದ್ರೆ ಭಕ್ತಿಯ ನಿಜವಾದ ನೆಲೆಗಟ್ಟು ಭೇದವಿಲ್ಲದ್ದು. ಪರಮಾತ್ಮನನ್ನು ಬಿಟ್ರಿ ಉಳಿದವೆಲ್ಲವೂ ಕೂಡ ಪರಮಾತ್ಮನಿಗೆ ಸಮನಾದವು ಅಥವಾ ಪರಮಾತ್ಮನಿಂದ ಸೃಷ್ಟಿಯಾದವು. ಅವುಗಳಲ್ಲಿ ಭೇದವೇ ಇಲ್ಲ. ಇದರೊಳಗಡೆ ಯಾವ್ದು ಕುಲ? ಜೀವ ಸೃಷ್ಟಿಯಲ್ಲಿ ಕುಲಗಳಿಲ್ಲ. ಜೈವಿಕ ನೆಲೆಗಳಲ್ಲಿ ಅದನ್ನ ವಿವರಿಸ್ತಾ ವಿವರಿಸ್ತಾ ಕಂಡುಕೊಳ್ಳುವ ಜಾತಿ ವ್ಯವಸ್ಥೆಯ ನಿರಾಕರಣೆ. ಬೇರೆ ಹಲವು ವಿಷಯಗಳಲ್ಲಿ ಅದನ್ನ ಹೇಳ್ತಾರೆ. ವೇದಗಳು ಮತ್ತು ಶಾಸ್ತ್ರಗಳ ಪರವಾಗಿರುವ ಹೇಳಿಕೆಗಳಿರುವ ರೀತಿಯಲ್ಲೇ ವೇದಗಳು ಮತ್ತು ಶಾಸ್ತ್ರಗಳು ನಮ್ಮ ಬೀರಜ್ಜನ ಕುರಿ ಹಿಂಡಿನೊಳಗಡೆ ಕುರಿಗಳನ್ನು ಕಾಯುವ ನಾಯಿಗಳು, ಅವು ಅರಿವುದಪ್ಪಿ ಹಸಿವು, ನೀರಡಿಕೆಯಿಂದ ಬಳಲಿದರೆ ಅವುಗಳಿಗೆ ಅಂಬಲಿಯನೆರೆವ ಅಪ್ಪ ನಮ್ಮಜ್ಜ. ಅಪೌರುಷೇಯವಾದ ವೇದಗಳು, ದೇವರಿಂದ ಸೃಷ್ಟಿಯಾಗಿರುವ ವೇದಗಳು ಇವನ ಕುರಿ ಹಿಂಡಿನಲ್ಲಿ ಕಾವಲು ಕಾಯುವ ನಾಯಿಗಳು. ಅವು ದಿಕ್ಕುಗಾಣದೆ ಅರಿವುಗೆಟ್ಟು ಹಂಬಲಿಸಿದರೆ ಅಂಬಲಿಯನೆರೆವ ನಮ್ಮಜ್ಜ. ಇದು ಭಕ್ತಿಯ ಬಹಳ ದೊಡ್ಡ ನೆಲೆಗಟ್ಟು. ಭಕ್ತಿಗೆ ಮತ್ತು ಆತ ಒಪ್ಪಿರುವ ಆದಿಕೇಶವನಿಗೆ ಮೀರಿರುವಂತಹ ಯಾವ ಶಾಸ್ತ್ರಗಳೂ ಇಲ್ಲಿಲ್ಲ. ಆ ನಂಬಿಕೆಯ ಆಧಾರದಲ್ಲೇನೇ ಕನಕದಾಸರು ಅತ್ಯಂತ ಗಟ್ಟಿಯಾಗಿರುವಂತ ಕೀರ್ತನೆಗಳನ್ನು ಬರೆದರು.

ಇನ್ನೊಂದು ವಿಷಯ ಇದೆ. ಅದನ್ನ ಜಾಸ್ತಿ ಅಧ್ಯಯನ ಮಾಡಿಲ್ಲ. ಬಹಳ ಸಲ ಜಾತಿ ವಿರುದ್ಧವಾಗಿ ಆತ ಹೇಳೋದು ಬೇಕಾದಷ್ಟು ನಾವು ಚರ್ಚೆ ಮಾಡಿದೀವಿ. ಇನ್ನೊಂದು ಅವರ ಕೀರ್ತನೆ ಇದೆ. ಅದರ Powerfullness ಎಷ್ಟಿದೆ ಅನ್ನೋದನ್ನ ಮಹಿಳಾವಾದಿಗಳ್ಯಾರಾದ್ರೂ ಅಧ್ಯಯನ ಮಾಡ್ಬೇಕು. "ನಿನಗಿಂತ ಕುಂದೇನೋ ನಮ್ಮಮ್ಮ ಜಯಲಕ್ಷ್ಮಿ" ಅಂತಿರೋ ಹಾಡು. ಜಾತಿಯನ್ನು ನಿರಾಕರಿಸುವ ರೀತಿಯಲ್ಲೇನೇ ಒಂದು ರೀತಿ ನಿಂದಾಸ್ತುತಿ ಅದು. ನೀನೆಷ್ಟೇ ಮಹಿಮಾಶಾಲಿಯಾಗಿರಬಹುದು. ಆದರೆ ನಿನ್ನನ್ನು ಮೀರಿದ ಮಹಿಮಾಶಾಲಿ ನಮ್ಮಮ್ಮ ಜಯಲಕ್ಷ್ಮಿ ಅಂತ. ಈ ಒಂದೊಂದು ಉದಾಹರಣೆಗಳ ಆಧಾರದಲ್ಲಿ ಕನಕದಾಸರು ಎಷ್ಟು ಪ್ರಗತಿಪರವಾದ ಆಶಯಗಳನ್ನು ಹೇಳಿದಾರೆ ಅಂತ ಹೇಳ್ಬೇಕು ಅಂತ ನನ್ನ ವಾದ ಅಲ್ಲ. ಆದ್ರೆ ಆ ಅಂಶಗಳು ಕ್ಷೀಣವಾಗಿಯಾದರೂ ಪ್ರಕಟವಾಗ್ತಾಯಿದ್ದಾಗ, ವೇದಶಾಸ್ತ್ರಗಳ ಪರ ಅವ್ರು ನೂರು ಸಲ ಹೇಳಿರ‍್ಲಿ ಆದ್ರೆ ಎರಡು ಸಲ ವೇದಗಳ‍್ನ ವಿರೋಧಿಸಿ ಮಾತನಾಡಿದ್ರೆ ಅದು ನಿಜವಾದ ವಾಕ್ಯವಾಗಿರುತ್ತೆ. ಕಾರಣ ಏನು ಅಂತ ಹೇಳಿದ್ರೆ ಸುತ್ತ ಇರುವಂತಹ ವಾತಾವರಣದಲ್ಲಿ ವೇದಾಧಿಕಾರವೇ ತುಂಬಿದ್ದಾಗ ಅದನ್ನ ಧಿಕ್ಕರಿಸೋದಕ್ಕೆ ಬಹಳ ಶಕ್ತಿ ಬೇಕು ಮತ್ತು ನಿಜವಾದ ಕಾರಣ ಇರ‍್ಬೇಕು. ಹೊಗಳೋದು ಕುಶಲೋಪರಿಯ ಮಾತಾಗಿರುತ್ತೆ. ಲೋಕಾಭಿರಾಮದ ಮಾತಾಗಿರುತ್ತೆ. ನಾಥ ಪಂಥದ ಬಗ್ಗೆ ಹೇಳ್ತಾರೆ. ಇಡೀ ನಾಥ ಪಂಥದಲ್ಲಿ ವರ್ಣ ವ್ಯವಸ್ಥೆಯನ್ನ ಮತ್ತು ಜಾತಿ ವ್ಯವಸ್ಥೆಯನ್ನ ನಿರಾಕರಿಸಿರುವಂತಹ ನೇರ ವಾಕ್ಯಗಳಿಲ್ಲ. ಆದ್ರೆ ಇಡೀ ಅವರ ಆಚರಣೆಯಲ್ಲಿ ಜಾತಿಯನ್ನ ಅವ್ರು ಅನುಸರಿಸೋದೇ ಇಲ್ಲ. ಯಾಕಂದ್ರೆ ಪಿಂಡ ಅನ್ನುವುದೆಲ್ಲವೂ ಕೂಡ ಬ್ರಹ್ಮಾಂಡದ ಇನ್ನೊಂದು ರೂಪ ಆಗಿರುವುದರಿಂದ ಅದ್ರಲ್ಲಿ ಪವಿತ್ರವಾದುದು ಅಪವಿತ್ರವಾದುದು ಇಲ್ಲ. ಅನ್ನ ಮತ್ತೆ ನೈವೇದ್ಯ

ಅನ್ನುವಂತದ್ದು ಎರಡು ಇಲ್ಲ. ಅದನ್ನ ಬಸವಣ್ಣನವರು ಕೂಡ ಹೇಳೋದು ಅನ್ನ ಮತ್ತೆ ಪ್ರಸಾದ ಅಂತ ಎರಡಿಲ್ಲ. ಎಲ್ಲವೂ ಅನ್ನವೇ ಅಥವಾ ಎಲ್ಲವೂ ಪ್ರಸಾದವೇ.

ಈ ಹಿನ್ನೆಲೆಯಲ್ಲಿ ನಾವು ಕನಕದಾಸರು ಕರ್ನಾಟಕದ ಒಟ್ಟು ಸಾಂಸ್ಕೃತಿಕ ನೆಲೆಗಟ್ಟಿಗೆ ಕೊಟ್ಟಿರುವಂತಹ ಸಂದೇಶಗಳು ಅವರ ಕೃತಿಯಲ್ಲಿ ಯಾವ ಯಾವ ರೂಪದಲ್ಲಿ ಪ್ರಕಟಗೊಳ್ತಾ ಇದಾವೆ, ಸ್ಥೂಲವಾಗಿ, ಸೂಕ್ಷ್ಮವಾಗಿ ಮತ್ತು ಇಡೀ ಅವರ ಜೀವನದಲ್ಲಿ ಅವರ ಜೀವನದ ಸಂದೇಶ ಏನು. ಭಕ್ತಿ ಪಂಥ ಅನ್ನುವಂತಹ ಒಂದು ಪಂಥ ತಾನು ಹೇಳುವ ಸಿದ್ಧಾಂತಕ್ಕೂ ತಾನು ಆಚರಣೆಯಲ್ಲಿಟ್ಟುಕೊಂಡಿರುವಂಥ ನಡಾವಳಿಗಳಿಗೂ ಇರುವ contrastನ್ನ ತಂದು ತೋರಿಸುವಂತ ಬಹಳ ದೊಡ್ಡ ಪ್ರತೀಕ ಆಚರಣಾತ್ಮಕವಾಗಿ ಅದು. ಎಲ್ಲವೂ ದೇವರ ಸೃಷ್ಟಿ ಅಂತ ಸಿದ್ಧಾಂತವಾಗಿ ಹೇಳಿ ಆಚರಣೆಯಲ್ಲಿ ನೀಚ ಕುಲ, ಕೆಳಜಾತಿ ಎಂದು ದೂರೀಕರಿಸುವ ವಿಧಾನ ಅನುಸರಿಸಿದಾಗ ಪ್ರಶ್ನೆ ಮಾಡೋದಕ್ಕೆ ಮತ್ತು ಅದರ ಬಿರುಕನ್ನ ಒಡೆದು ತೋರಿಸೋ ಪ್ರಯತ್ನ ಅದು. ಇಷ್ಟಾದ್ರೂ ಕೂಡ ತಾನು ಭಕ್ತಿ ಪಥವನ್ನ ಬಿಟ್ಟಿಲ್ಲ. ಯಾಕಂದ್ರೆ ತಾನೇ ಭಕ್ತನಾದವನು. ಆತನ ಭಕ್ತಿಗೆ ಮಾನ್ಯತೆ ಮಾಡಬೇಕಾಗಿರುವಂತಹ ಭೂಸುರರಾಗಲಿ ಅಥವಾ ಧರಾಧೀಶರಾಗಲಿ ಆತನಿಗೆ ಅಗತ್ಯವೇ ಇಲ್ಲ. ತನ್ನ ಪಾಡಿಗೇ ಬದುಕಿದವನು. ಏಕಾಂಗಿಯಾಗಿ. ಇಡೀ ದಾಸ ಪಂಥದಲ್ಲಿ ಕನಕದಾಸರನ್ನ ಬಿಟ್ರೆ ಬೇರೊಬ್ಬ ಶೂದ್ರ ವರ್ಗದ ದಾಸರಿಲ್ಲ ಅಂತ ಹೇಳ್ತಾರೆ. ಆದ್ರೆ ಅವರು ಪ್ರತಿಪಾದಿಸಿರುವಂಥ ನೀತಿಗಳನ್ನು ನೋಡಿದರೆ, ಅಷ್ಟು ದೊಡ್ಡ ಧೈರ್ಯ ಬರ್ಬೇಕು ಅಂತ ಹೇಳಿದ್ರೆ ಆ ಸಾಮಾಜಿಕ ಸನ್ನಿವೇಶದ ಒತ್ತಾಸೆಗೆ ಆತ ಎಷ್ಟು ಕ್ರಿಯಾಶೀಲನಾಗಿ, ತಾತ್ವಿಕವಾಗಿ ಹಾಗೂ ಜೀವನ ರೀತಿಯಲ್ಲಿ ಸ್ಪಂದಿಸಿರಬಹುದು ಅನ್ನುವುದು ಗೊತ್ತಾಗುತ್ತೆ.

## ಕನಕದಾಸರ ಕೃತಿಗಳಲ್ಲಿರುವ ಜೀವನ ಮೀಮಾಂಸೆ – ಚರ್ಚೆ

**ಚರ್ಚೆ : ಮ.ನ.ಜವರಯ್ಯ**

ಕನಕದಾಸರ ಗೀತೆಗಳಲ್ಲಿ ಇವತ್ತಿಗೂ ಅಸಾಧ್ಯವಾದಂತ ಎಷ್ಟೋ ಕ್ರಾಂತಿಕಾರಿ ವಿಚಾರಗಳೇ ತುಂಬಿವೆ. ವೈಚಾರಿಕ ಚಿಂತನೆಗಳೂ ತುಂಬಿವೆ. ಆದರೆ ಕನಕದಾಸರ ಗೀತೆಗಳನ್ನ ಕುರಿತಂತ ಅಧ್ಯಯನ, ವಿಮರ್ಶೆ, ಬರವಣಿಗೆ ಇವುಗಳನ್ನೆಲ್ಲ ನೋಡಿದಾಗ ಅವುಗಳನ್ನ ಕೀರ್ತನೆಗಳ ಪಟ್ಟಿಗಷ್ಟೇ ಸೇರಿಸಿ ಬಿಟ್ಟಿದ್ದಾರೆ. ಇದು ಸೂಕ್ತವೇ? ದಯಮಾಡಿ ವಿವರಿಸಬೇಕಾಗಿ ವಿನಂತಿ.

**ಚರ್ಚೆ : ಬಂಜಗೆರೆ**

ಯಾವ ಸಂದರ್ಭದಲ್ಲಿ ಅದನ್ನ ಕೀರ್ತನೆ ಅಂತೀರ? ಯಾವ ಸಂದರ್ಭದಲ್ಲಿ ಅದನ್ನ ಗೀತೆ ಅಂತೀರ? ಅದನ್ನ ನನಗೆ ಸಾಹಿತ್ಯಕವಾಗಿ ವಿಂಗಡಿಸಿ ಹೇಳೋದು ಕಷ್ಟ. ನಾನು ಆ ಕಡೆ ಗಮನ ಹಾಕಿಲ್ಲ. ನೀವೇ ಅದನ್ನ ಏನಾದ್ರೂ ಇದ್ರೆ ಸ್ಪಷ್ಟ ಮಾಡಿದ್ರೆ ಅನುಕೂಲ ಆಗುತ್ತೆ.

**ಚರ್ಚೆ : ಮ.ನ. ಜವರಯ್ಯ**

ಕನಕದಾಸರ ಕೀರ್ತನೆಗಳಲ್ಲಿ ಭಕ್ತಿ ಅಷ್ಟೇ ಇಲ್ಲ. ಸಾಮಾಜಿಕ ವಿಡಂಬನೆ ಇದೆ. ಅಂದ್ರೆ ಇಡೀ ದಾಸಕೂಟದಲ್ಲಿ ಕನಕದಾಸರ ಇಷ್ಟು ಕ್ರಾಂತಿಕಾರಿ ಆಲೋಚನೆಗಳು ಬಾಕಿ ದಾಸರಲ್ಲಿ ಕಾಣ್ಸೋದು ಕಷ್ಟ. ಹಾಗಿದ್ರೂ ಕೂಡ ಕನಕದಾಸರ ಈ ಕೀರ್ತನೆಗಳನ್ನ ಆ ಕ್ರಾಂತಿ ಗೀತೆಗಳನ್ನ ಆಲೋಚನೆಯ ಅಭಿವ್ಯಕ್ತಿಗಳನ್ನ ಕೀರ್ತನೆಗಳು ಅಂತ ಅದನ್ನಷ್ಟಕ್ಕೇ ಸೀಮಿತಗೊಳಿಸಿ, ಕೀರ್ತನೆಗಳಲ್ಲಿ ಇರ್ತಕ್ಕಂತ ಆಲೋಚನೆಗಳನ್ನ ತೀರ ಸೀಮಿತಕ್ಕೆ ಒಳಪಡಿಸಿದಂತಾಗಬಹುದೇನೋ ಅಂತ ನನಗೆ ಸ್ವಲ್ಪ ಅನುಮಾನ ಇದೆ.

**ಚರ್ಚೆ : ಕೆ.ಎಸ್. ಭಗವಾನ್**

ನಾವು ಕನಕದಾಸರನ್ನ ನೋಡ್ತಿದ್ದಂತ ದೃಷ್ಟಿಗೂ, ಈಗ ಅವರು ಒಂದು ದೊಡ್ಡ ಚೌಕಟ್ಟಿನಲ್ಲಿ ಇಟ್ಟು ನೋಡ್ತಕ್ಕಂತದ್ದಕ್ಕೂ ಬಹಳ ವ್ಯತ್ಯಾಸವನ್ನ ನಾನು ಗುರುತಿಸಿದೀನಿ. ಆ ದೃಷ್ಟಿಯಿಂದ ಬಹಳ ಮುಖ್ಯವಾದ ಒಳನೋಟಗಳನ್ನ ಬಂಜಗೆರೆಯವರು ಕೊಟ್ಟಿದ್ದಾರೆ.

ಇಲ್ಲಿ ನಮ್ಮಲ್ಲಿ ಯಾವುದೇ ಒಬ್ಬ ಚಿಂತಕನನ್ನ ಅಥವಾ ಸಂತನನ್ನ ಅಥವಾ ಈ ರೀತಿಯ ವಿಚಾರಗಳ್ನ ಹರಡ್ತಕ್ಕಂತ ಮನುಷ್ಯನನ್ನ ಒಂದು ರೀತಿ ಎಲ್ಲರಿಂದ ಬಿಡಿಸಿಕೊಂಡಂತ ಒಬ್ಬ ವ್ಯಕ್ತಿಯನ್ನ ಪ್ರತಿಯೊಂದು ಸಮುದಾಯ ತಮ್ಮ ಪಟ್ಟಭದ್ರ ಹಿತಾಸಕ್ತಿಗಳ್ನ ಬೆಳೆಸ್ಕೊಳ್ಳಿಕ್ಕೆ ಅಥವಾ ಉಳಿಸ್ಕೊಳ್ಳಿಕ್ಕೆ ಬಳಸ್ಕೊಳ್ಳೋದ್ರಿಂದ ಬಹುಶಃ ಕನಕದಾಸರಂತ ಒಬ್ಬ ಕ್ರಾಂತಿಕಾರಿ ಚಿಂತಕ ಒಬ್ಬ ಸಾಂಪ್ರದಾಯಿಕ ಭಕ್ತನಂತೆ ಕಾಣ್ತಾ ಇದಾನೆ ಅಂತ ನನಗನಿಸುತ್ತಾ ಇದೆ. ಅದನ್ನ ಬಿಡಿಸೋ ಪ್ರಯತ್ನವನ್ನ ಬಂಜಗೆರೆಯವರು ಮಾಡಿದಾರೆ. ಹಾಗಾಗಿ ಮ.ನ.ಜವರಯ್ಯನವರು ಕೇಳಿದ್ದಕ್ಕೆ ನನಗನ್ಸೋದು ಈ ಭಕ್ತಿ ಅಂದ ಕೂಡ್ಲೇನೇ ನಮ್ಮ ಸಾಮಾಜಿಕ ಸ್ತರಗಳೇನೇನಿವೆ ಅವನ್ನೆಲ್ಲ ಹಾಗೇ ಉಳ್ಸ್ಕೊಳ್ಳೋದು. ಸಾಮಾಜಿಕವಾಗಿ ಮಾತ್ರ ಸಾಂಪ್ರದಾಯಿಕವಾಗಿ ಉಳ್ಸ್ಕೊಳ್ಳೋದು. ಮನಸ್ಸಿನಲ್ಲಿ ಮತ್ತು ಆಲೋಚನೆಯಲ್ಲಿ ಮಾತ್ರ ಕ್ರಾಂತಿಕಾರಿಗಳಾಗುವ ಒಂದು ಸಂಪ್ರದಾಯಶೀಲತೆ ನಮ್ಮಲ್ಲಿ ಕಂಡು ಬರ್ತಾ ಇದೆ.

ಹಾಗಾಗಿ ಇದನ್ನ ಕೀರ್ತನೆ ಮತ್ತು ಗೀತೆ ಅನ್ನೋ ಒಂದು ಅನುಮಾನ ನಮ್ಗೆ ಉಂಟಾಗ್ಲಿಕ್ಕೆ ಸಾಧ್ಯ ಆಗ್ತಾ ಇದೆ. ಈಗ ಬಂಜಗೆರೆಯವರು ತುಂಬ ಒಳ್ಳೆ ಮಾತುಗಳನ್ನಾಡಿದಾರೆ. ಆ ದೃಷ್ಟಿಯಿಂದ ಸಮಾಜದ ಹಿತವನ್ನ ಕುರಿತು ಚಿಂತನೆ ಮಾಡ್ತಾ, ಒಬ್ಬ ದೊಡ್ಡ ಚಿಂತಕನಾಗಿ, ಕ್ರಾಂತಿಕಾರಿಯಾಗಿ ಇನ್ನು ಮುಂದೆ ಕನಕದಾಸರನ್ನ ಗ್ರಹಿಸೋದು ಬಹಳ ಮುಖ್ಯ ಅಂತ ನನಗನ್ನಿಸುತ್ತದೆ. ಅದೇನಂದ್ರೆ ನಮ್ಮ ಇತ್ತೀಚಿನ ಕಾಲದ ಅಗತ್ಯಗಳು ತಲ್ಲಣಗಳು ಇವುಗಳನ್ನೆಲ್ಲ ಇಟ್ಕೊಂಡು ನಾವು ಕನಕದಾಸರ ಜೊತೆ ಅನುಸಂಧಾನ ಮಾಡೋದು ಕಷ್ಟ ಆಗ್ತದೆ. ಆದ್ರೆ ನಮ್ಗೆ ಅನುಸಂಧಾನಕ್ಕೆ ಅಪಾರವಾದ ಸಾಮಗ್ರಿಯನ್ನ ಕನಕದಾಸರ ಕೃತಿಯಲ್ಲಿ ನಾವು ಕಾಣಬಹುದು. ಕುಲ ಕುಲ ಎಂದರೇನು? ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರಾ? ಆಮೇಲೆ ರಾಮಧಾನ್ಯ ಚರಿತೆ ಇತ್ಯಾದಿ ಕೃತಿಗಳಲ್ಲಿ ಹೇಳ್ತಕ್ಕಂತಾದ್ದು. ಎಲ್ಲಾ ಕಡೆ ಕೃಷ್ಣ ಇದಾನೆ. ನಾನಿಲ್ಲದ ಜಾಗ ಎಲ್ಲಿದೆ ಅನ್ನೋದು ಬಹಳ ದೊಡ್ಡ ಅನುಭಾವದ ಎತ್ತರ ಅದು. ಈ ದೃಷ್ಟಿಯಿಂದ ನೋಡ್ದಾಗ ಕನಕನನ್ನ ಒಂದು ಹೊಸ ದೃಷ್ಟಿಯಿಂದ ನೋಡ್ಲಿಕ್ಕೆ ಒಂದು ಅವಕಾಶವನ್ನ ಈ ಸಂವಾದ ಒದಗಿಸಿದೆ ಅಂತ ನನಗನ್ನ್ಸಿದೆ. ನಮ್ಮ ಚಿಕ್ಕಣ್ಣ ಅವ್ರು ಮಾತ್ನಾಡ್ತಾ ಕನಕದಾಸರು ತಮ್ಮ ಸಿಟ್ಟುಗಳನ್ನು ಜಗಳಗಳ ಮೂಲಕ ತೀರಿಸಿಕೊಳ್ಳಲು ಅದನ್ನು ಸೃಜನಾತ್ಮಕವಾಗಿ ಮಾಡಿದರು ಅಂದ್ರು. ಬಹಳ ಒಳ್ಳೆ ಮಾತಿದು. ಈ ಮಾತಿಗೆ ಪೂರಕವಾಗಿ ಹೇಳೋದಾದ್ರೆ ಒಮ್ಮೆ ನಾನು ಮತ್ತೆ ನನ್ನ ಗೆಳೆಯ ನಾರಾಯಣ ಸ್ವಾಮಿಯವರು ಕುವೆಂಪು ಅವರ ಜೊತೆ ಮಾತ್ನಾಡ್ತಾ ಇದ್ವಿ. ನಾನೇನೋ ಪ್ರಶ್ನೆ ಹಾಕ್ದೆ. ಆಗ ಅವರಂದ್ರು ನಾನು ಶೂದ್ರ ತಪಸ್ವಿ ಬರ್ದೆ, ಜಲಗಾರ ಬರ್ದೆ, ಬೆರಳ್ಗೆಕೊರಳ್ ಬರ್ದೆ. ನನ್ನ ಒಳ್ಗೇ ಇದ್ದ ಪುಟ್ಟಪ್ಪ. ಇವರ್‍ಗೆಲ್ಲ ಉತ್ರ ಕೊಡು ಅಂತ ಹೇಳ್ತಿದ್ದ. ಆದ್ರೆ ಕುವೆಂಪು ನನ್ಗೇಳ್ತಿದ್ದ ಅಯ್ಯೋ ಇವ್ನೆಲ್ಲ ಯಾಕೆ ನಾನು ಗಮನಿಸ್ಲೀ ಬಿಟ್ಬುಡು, ನಿನ್ ಕೆಲ್ಸ ನೀನ್ ಮಾಡು ಅಂತ ಹೇಳ್ತಾ ಇದ್ದ. ಹೀಗೆ ಒಬ್ಬ ವ್ಯಕ್ತಿ ಮತ್ತು ಒಬ್ಬ ಸೃಜನಶಕ್ತಿ ಎರಡಕ್ಕೂ ಅವ್ರು ಭೇದವನ್ನು ಕಲ್ಪಿಸೋರು. ಆ ದೃಷ್ಟಿಯಿಂದ ಈ ಮಾತುಗಳು ಬಹಳ ಮುಖ್ಯ ಅಂತ ನನಗನ್ಸದೆ. ಅಂದ್ರೆ ಸೃಜನಾತ್ಮಕವಾಗಿ ನಡೆಸಿದ ಹೋರಾಟ ಇದೆಯಲ್ಲ ಅದೇ ಸಾಂಸ್ಕೃತಿಕವಾಗಿ ಗಟ್ಟಿಯಾಗಿ ಉಳಿಯೋದು. ಹಾಗಾಗಿ ನಾವಿವತ್ತು ಕನಕದಾಸರನ್ನ ಇಷ್ಟು ಗಂಭೀರವಾಗಿ ತೆಗೆದುಕೊಳ್ಳಲಿಕ್ಕೆ ಸಾಧ್ಯವಾಗುತ್ತಿದೆ.

**ಚರ್ಚೆ :**

ಶ್ರೀಯುತ ಮ.ನ.ಜವರಯ್ಯ ಅವರು ಏನು ಪ್ರಸ್ತಾಪ ಮಾಡಿದರು ಆ ಅನುಮಾನ ನನಗೆ ಕೂಡ ಓದುವಾಗ ಬಂದಿತ್ತು. ಮ.ನ.ಜ. ಅವರು ಸಮಗ್ರವಾಗಿ ಬರ್‍ದಿದಾರೆ. ದೊಡ್ಡ ಪುಸ್ತಕವನ್ನೇ ಬರ್‍ದಿದ್ದಾರೆ. ಅಂಬೇಡ್ಕರ್‌ಗೆ ಹೋಲಿಸಿ. ನನಗೆ ಇದು ಪ್ರಕಾರ ನ್ಯಾಯನೋ ಪ್ರಕಾರ ದೋಷನೋ ಅಂತಲ್ಲ. ಯಾವ್ದಾದ್ರೂ ಒಂದು ಕಾಲಘಟ್ಟದಲ್ಲಿ ಒಂದು ಪ್ರಕಾರ ನಡ್ಕೊಳ್ಳೋದಿದ್ಯಲ್ಲ ಬಹಳ ಕಷ್ಟದ ಕೆಲಸ. ಆದರೆ ಹೀಗೆ ಅವರ ವಿಡಂಬನೆ ಬೇರೆ ಬೇರೆದನ್ನ ಗಮನಿಸ್ದಾಗ ಅದು ಕನಕದಾಸರಿಗೆ ಕೀರ್ತನೆ ಅಂದ್ರೆ ಸಾಂಪ್ರದಾಯಿಕವಾಗಿ ಕೀರ್ತಿಸೋದು ಅಂತಲೇ. ಹೊಗಳೋ ಕೆಲಸ ಅದು... ಅದೇನು ವಿಮರ್ಶೆ ಅಲ್ಲ. ಕೀರ್ತನೆ ಅಂದ್ರೆ ವಿಮರ್ಶೆ ಅಲ್ಲ. ಒಂದು ಕಡೆ ಅವರು ಕೀರ್ತನೆಯನ್ನ ಮಾಡಿದಂತವರು ಮತ್ತಿನ್ನೊಂದು ಕಡೆ ಈ ಸ್ಥಿತಿ ಬಂದಾಗ ಬೇರೆ ಒಂದು ಪ್ರಕಾರವನ್ನ ಕಂಡ್ಕೊಬಹುದಿತ್ತಾ ಅನ್ನುವ ಪ್ರಶ್ನೆ ನನಗೆ ಬಂದಿತ್ತು. ಹಾಗಾಗಿ ಇದು ಪ್ರಕಾರ ದೋಷ ಆಗಿರ್‍ಬಹುದಾ? ಪ್ರಕಾರ ನ್ಯಾಯಕ್ಕೆ ವಿರುದ್ಧ ಆಗಿರ್‍ಬಹುದಾ ಅಂತ. ಆದ್ರೆ ಕನಕದಾಸರಿಗೆ ಆ ಪ್ರಕಾರವನ್ನ ಕಂಡುಕೊಳ್ಳಲಿಕ್ಕೆ ಆಗ್ಲೇ ಇಲ್ವಾ. ಆಗ್ಲಿಲ್ಲ ಅಂತ ಒಂದು ಮಾತನ್ನ ಒಂದ್ಕಡೆ ಹೇಳೋದಾದ್ರೆ, ಇನ್ನೊಂದ್ಕಡೆ ನಮ್ಮ ಬಂಜಗೆರೆಯವರು ಮಾತಾಡಿದ ಹಾಗೆ ಅವರು ಒಂದು ಸಮಗ್ರವಾಗೇನೇ ವೈದಿಕ ಸಂಸ್ಕೃತಿಯನ್ನ ಸ್ವೀಕರಿಸಿದ್ದು ವೈದಿಕ ಸಂಸ್ಕೃತಿಯ ಕಾರಣಕ್ಕಾಗಿ ಅಲ್ಲ. ವೈದಿಕ ಸಂಸ್ಕೃತಿಯನ್ನ ಆ ಕಾಲದ ಈ ರಾಜಪ್ರಭುತ್ವ ಇದ್ಯಲ್ಲ, ಈ ರಾಜಪ್ರಭುತ್ವಕ್ಕೆ ಪ್ರತಿಕ್ರಿಯೆಯಾಗಿ ಬಳಸ್ಕೊಳ್ಳೋದ್ರಿಂದ ವೈದಿಕರು ಏನು ವೈದಿಕತನವನ್ನ ಬಳಸ್ಕೊಂಡ್ರೊ ವೈದಿಕ ಸಂಸ್ಕೃತಿಯನ್ನ ಬಳಸ್ಕೊಂಡ್ರೊ ಅದಕ್ಕೆ ಭಿನ್ನವಾದ ನೆಲೆಯಲ್ಲಿ ಕನಕದಾಸರು ವೈದಿಕ ನೆಲೆಯನ್ನ ಬಳಸ್ಕೊಂಡಿದಾರೆ ಅಂತ ಆ ಸ್ಥಿತಿಲಿ ನನಗನ್ನಿಸ್ತು. ಇದನ್ನ ಬಂಜಗೆರೆಯವರು ಬಹಳ ಸ್ಪಷ್ಟಪಡಿಸಿದ್ರು. ಇಲ್ಲಿ ಅವರಿಗೆ ಕನಕದಾಸರಿಗೆ ಬೇರೆ ಪ್ರಕಾರ ಕಂಡುಕೊಳ್ಳಲಿಕ್ಕೆ ಯಾಕೆ ಆಗ್ಲಿಲ್ಲ ಅಂತ ಅಂದ್ರೆ ಅವ್ರು ವೈದಿಕವನ್ನ ಕೀರ್ತನೆಯಾಗಿ ಬಳಸ್ಕೊಳ್ದೇನೆ, ಶರಣಾಗತಿಯನ್ನಾಗಿ ಬಳಸ್ಕೊಳ್ದೇನೆ ವೈದಿಕವನ್ನ ಒಂದು ಬಹುದೊಡ್ಡ ಶೂದ್ರ ಸಂಸ್ಕೃತಿ ಅದು ಒಂಥರಾ ಅರಾಜಕತೆಯಲ್ಲಿ ತೊಡಗಿತ್ತಲ್ಲ ಆ ಸಂಸ್ಕೃತಿಗೆ ನಾಯಕತ್ವದ ಸೋಲು, ದಾಸನಾಗುವ ಸಂದರ್ಭ ಇದಕ್ಕೆ ಹೊರಟಿರುವ ಪ್ರತಿಕ್ರಿಯೆಯಾಗಿರುವುದರಿಂದ ಇಡೀ ಒಟ್ಟು ಅವರ ಈ ಸಮುದಾಯಕ್ಕೆ ಯಾಕಂದ್ರೆ ಯಾವತ್ತು ಕೂಡ ಸಂಭವಾಮಿ ಯುಗೇ ಯುಗೇ ಅಂತ ಅನ್ನುವ ಪರಿಕಲ್ಪನೆ ಇದೆಯಲ್ಲ ಆ ಸಂಭವಾಮಿ ಯುಗೇ ಯುಗೇ ಅಂದಾಗ ಶೂದ್ರರು ಪ್ರಭುತ್ವಕ್ಕೆ ಬದ್ಧರಾಗಲೋ ಶೂದ್ರರು ಜಾಸ್ತಿ ಮಟ್ಟಕ್ಕೇರ್ದಾಗ್ಲೋ ಅದನ್ನ ಹತ್ತಿಕ್ಕುವ ಒಂದು ತಂತ್ರ ಅಂತ ನಾನು ಸಂಭವಾಮಿ ಯುಗೇ ಯುಗೇನ ಭಾವಿಸಿರೋದು. ಇಡೀ ಸಂಭವಾಮಿ ಯುಗೇ ಯುಗೇನೇ ಹತ್ತಿಕ್ಕುವಂತಹ ಈ ಶೂದ್ರ ಶಕ್ತಿ ದೊಡ್ಡ ಅತಿರೇಕಕ್ಕೊಯ್ತು. ಮತ್ತೆ ಜಾಸ್ತಿಯಾಯ್ತು ಲೌಕಿಕತೆ ಜಾಸ್ತಿಯಾಯ್ತು, ಅದನ್ನ ಹತ್ತಿಕ್ಕೋಕೆ ಬಳಸ್ಕೊಂಡಂತ ಸಂಭವಾಮಿ ಯುಗೇ ಯುಗೇನ ನಾನು ಯೋಚ್ನೆ ಮಾಡಿದ್ರಿಂದ ಇಲ್ಲಿ ಇವರು ಮಾಡಲಾಗದ ಕೆಲಸವನ್ನ ಕನಕದಾಸರೇನಾದ್ರೂ ಮಾಡ್ತಿದಾರಾ ಅನ್ನುವಂತಹ ಕೆಲವು ಅನುಮಾನಗಳು ನನಗೆ ಬಂದ್ವು. ಅದು ಒಂಥರಾ ಮ.ನ.ಜ. ಅವರ ಆಲೋಚನೆಯ ಕ್ರಮ ಇನ್ನೂ ಸ್ವಲ್ಪ ವಿಸ್ತಾರವಾಗಿ ಆದಂತ ಚಿಂತನೆ ಅಂತ ನನಗನ್ನಿಸ್ತಾಯಿದೆ.

**ಚರ್ಚೆ : ಪ್ರೊ. ಸುಧಾಕರ್**

ಈಗ ಗೀತೆಯಲ್ಲಿ ಬರ್‍ತಕ್ಕಂತ ವಿಚಾರಕ್ಕೆ ಬಂದು ಒಂದು ಉದಾಹರಣೆ ಕೊಡ್ತೀನಿ. ಹಿಂಡನಗಲಿದ ಗೋವು ಹುಲಿಗಿಕ್ಕಿದ ಮೇವು ಅಂತ. ಈಗ ಕಾಡಿನಲ್ಲಿ ನಾಲ್ಕೈದು ದನಗಳು ಸುತ್ತಲೂ ವೃತ್ತಾಕಾರವಾಗಿ ಮಲಗಿದ್ರೆ ಹುಲಿ ಬಂದ್ರೂ ಕೂಡ ತಮ್ಮ

ಕೊಂಬಿನಿಂದಲೇ ತಿವಿದು ಹುಲಿಯನ್ನೇ ಸಾಯಿಸ್ತವೆ. ಯಾವಾಗ ಹಿಂಡಾಗಿದ್ದಾಗ. ಹಿಂಡನಗಲಿದ ಗೋವು ಹುಲಿಗಿಕ್ಕಿದ ಮೇವು. ಅದು ಒಂಟಿಯಾಗೋಯ್ತು ಅಂತ ಇಟ್ಕೊಳ್ರಿ ಅದು ಹುಲಿಗೆ ಇಕ್ಕಿದ ಮೇವಾಗ್ಬಿಡುತ್ತೆ. ಅಂದ್ರೆ ನೀವು ಹಿಂದುಳಿದ ವರ್ಗದವರು ಒಗ್ಗಟ್ಟಾಗಿಲ್ದೇ ಹೋದ್ರೆ ಆ ಮೇಲ್ವರ್ಗದ ಹುಲಿ ನಿಮ್ಮನ್ನ ನುಂಗ್ಬಿಡುತ್ತೆ ಅನ್ನೋದು ಆ ಗೀತೆಯಲ್ಲಿ ಬರೆದಿದೆ. ಈಗ ಕೀರ್ತನೆಯಲ್ಲೂ ಕೂಡ ವೈಚಾರಿಕತೆ ಇರೋವಂಥ ಕೀರ್ತನೆಗಳಿವೆ. ಉದಾಹರಣೆಗೆ ಶ್ರೀರಂಗಪಟ್ಟಣದ ಪಶ್ಚಿಮ ರಂಗನಾಥನನ್ನ ಕುರಿತ ದಶಾವತಾರದ ಕೀರ್ತನೆಯಲ್ಲಿ ಕೊನೆಯಲ್ಲಿ ಒಂದು ಮಾತನ್ನ ಹೇಳ್ತಾರೆ ಕನಕ. ಇನ್ನೆಷ್ಟು ಕಾಲ ನೀನಿಲ್ಲಿ ಮಲಗಿದ್ದರೂ ನಿನ್ನನೆಬ್ಬಿಸುವವರನು ಒಬ್ಬರನೂ ಕಾಣೆ ಅಂತ ಅಂತ್ಯ ಆಗ್ತದೆ. ಅಂದ್ರೆ ರಂಗನಾಥ ಮಲಗಿದಾನೆ. ಹಾವಿನ ಮೇಲೆ ಇಷ್ಟು ಕಾಲ ಮಲಗಿದ್ಯಲ್ಲ ಇನ್ನೂ ಮಲಗಿದ್ರೂ ನಿನ್ಯಾರೂ ಬಂದು ಎಬ್ಸಲ್ಲ ಅನ್ನುವಂತ ಮಾತನ್ನೇಳ್ತರೆ. ಇದು ಹೇಳಿದ್ದು ಯಾರ್‍ಗೆ? ರಂಗನಾಥನಿಗಲ್ಲ ಅಜ್ಞಾನದ ನಿಡುನಿದ್ರೆಯಲ್ಲಿ ನಿದ್ರೆ ಹೋಗುತ್ತಿರುವ ಅಂತ್ಯಜರು, ಹಿಂದುಳಿದವರು ಈ ಜನಕ್ಕೆ ಆ ಮಾತನ್ನ ಹೇಳಿದಾರೆ. ಅಂದ್ರೆ ನೀವಾಗಿಯೇ ಮೇಲೇಳ್ಬೇಕು. ನಿಮ್ಮ ಹಕ್ಕು ಬಾಧ್ಯತೆಗಳ್ನ ಲಪಟಾಯಿಸ್ತಯಿರ್‍ತಕ್ಕಂತ ಮೇಲ್ವರ್ಗದವರಿಂದ ನಿಮ್ಮ ಹಕ್ಕು ಬಾಧ್ಯತೆಗಳನ್ನ ನೀವು ಕಸಿದುಕೊಳ್ಬೇಕು. ಈ ಎಲ್ಲ ವೈಚಾರಿಕತೆ ಆ ಕೀರ್ತನೆಯಲ್ಲೂ ತುಂಬಿದೆ. ಈ ನಿಟ್ಟಿನಲ್ಲೂ ಕೂಡ ನೀವು ಯೋಚ್ನೆ ಮಾಡ್ಬೇಕು ಅಂತ ನನ್ನ ಅನಿಸಿಕೆ.

**ಚರ್ಚೆ :**

ಅವರೂ ಕೂಡ ಒಬ್ಬ ಮಾಂಡಲಿಕರಾಗಿದ್ರು ಅಂದ್ರೆ ಒಬ್ಬ ಚಿಕ್ಕ ದೊರೆಯಾಗಿದ್ರು, ಆ ನಂತರ ಬಹುಶಃ ಸವಣೂರು ನವಾಬರ ವಿರುದ್ಧ ಯುದ್ಧದಲ್ಲಿ ಸೋತನಂತರ ಆಮೇಲೆ ಕನಕನಾಗಿ ಕನಕನಾಯ್ಕನಾಗಿ ನಂತರ ಕನಕದಾಸನಾಗಿರ್‍ತಕ್ಕಂತದ್ದು ಒಂದು ದಂತ ಕಥೆ. ಆ ಐತಿಹ್ಯ ಆ ಪ್ರದೇಶದಲ್ಲಿ ಸಿಗುವಂತದ್ದು. ಆದ್ರೆ ಒಂದು ಈತ ನಿರಾಕರಿಸುವುದಕ್ಕೆ ಮುಂಚೆ ಆತನೂ ಒಬ್ಬ ದೊರೆಯಾಗಿದ್ದ. ಒಬ್ಬ ಚಿಕ್ಕದೊರೆಯಾಗಿದ್ದ ಅನ್ನುವಂತಾದ್ದು ಒಂದು ಗಮನಿಸಬೇಕಾಗಿರುವಂತ ಅಂಶ. ಇದಕ್ಕೆ ಮುಖ್ಯವಾಗಿ ಈ ಇಬ್ಬರನ್ನೂ ನಿರಾಕರಿಸಿದ ವ್ಯಕ್ತಿ ಅಂದ್ರೆ ಭೂಸುರರು ಮತ್ತು ಭೂಪತಿಗಳಿಬ್ಬರನ್ನೂ ನಿರಾಕರಿಸ್ತಾ ಆ ಮೂಲಕವಾಗಿ ಆ ನಂತರ ಅವರು ಹರಿದಾಸರಾಗಿ ಪ್ರವೇಶಿಸುವಾಗ ನಮ್ಮ ಮ.ನ.ಜವರಯ್ಯ ಹೇಳಿದ ಹಾಗೆ ಪ್ರವೇಶಿಸುವುದಕ್ಕೆ ಸಾಧ್ಯವಾಗುತ್ತೆ ಅಂತ ನನಗನ್ನುತ್ತೆ.

ಕೀರ್ತನೆ, ಮಾಧ್ವ ಮತ ಅಥವಾ ವೈದಿಕ ಸಂಪ್ರದಾಯದ ಬಳಿಕೆ ಪ್ರವೇಶಿಸವುದಕ್ಕೆ ಒಂದು ಕೀರ್ತನೆ ಆತನಿಗೆ ಒಂದು ದಾರಿಯಾಯ್ತು. ಅದು ಬೇಕಾಗಿತ್ತು. ಪ್ರವೇಶಿಸುವುದಕ್ಕೆ ಯಾವುದಾದರೂ ಒಂದು ವೀಳ್ಯ ಬೇಕಾಗಿತ್ತು. ಇಲ್ದೇ ಇದ್ರೆ ಫಲಿಸುವುದಕ್ಕೆ ಸಾಧ್ಯವಾಗ್ತಿರಲಿಲ್ಲ.

ಆ ಕಾರಣದಿಂದ ಕೀರ್ತನೆಯನ್ನ ಅವರು ಆ ರೀತಿಯಾಗಿ ಬಳಸಿಕೊಂಡ್ರು. ಅದು ಒಂದು ಮಾಧ್ಯಮವಾಗಿ ಅವರಿಗೆ ಬೇಕಾಗಿತ್ತು ಅಂತ ನನಗೆ ಅನ್ಸತದೆ. ಆ ಮಾಧ್ಯಮದ ಮೂಲಕವಾಗಿ ಮತ್ತೆ ಈ ಇಬ್ಬರನ್ನೂ ಈ ಎರಡೂ ಸ್ತರದ ವರ್ಗದ ಜನರನ್ನ ನಿರಾಕರಿಸುವುದರ ಮೂಲಕವಾಗಿ ನಿರಾಕರಿಸಿದರು. ಆ ನಿರಾಕರಣೆಯನ್ನ ಮತ್ತಷ್ಟು ಹೆಚ್ಚೆಚ್ಚು ಪ್ರಚಾರದಲ್ಲಿ ಅವರು ತಮ್ಮ ಕೃತಿಗಳ ಮೂಲಕ ಹಾಗೆ ತರ್‍ತಾ ಹೋದ್ರು ಇನ್ನೊಂದು ಅಂಶ ಏನಂತಂದ್ರೆ, ಈ ರೀತಿ ಅನ್ಯ ವೈದಿಕ ಸಂಪ್ರದಾಯದಲ್ಲಿ ಅದಲ್ಲದ ಒಬ್ಬ ವ್ಯಕ್ತಿ ಅದರ ಒಳಗೆ ಪ್ರವೇಶಿಸಿದ ನಂತರ ಆಗುವ ತುಮುಲಗಳಿವೆಯಲ್ಲ ಆ ತುಮುಲಗಳನ್ನ ಪ್ರಶ್ನಿಸುವುದು ಅಂದ್ರೆ ತನ್ನ ಒಡನೆ ಇರುವಂಥ ಬಹುಸಂಖ್ಯಾತರ ಪ್ರತಿನಿಧಿಯಾಗಿ ಕನಕದಾಸರು ಜಾತಿ ನಿರಾಕರಣೆಯನ್ನ, ಜಾತಿ ಪ್ರಶ್ನೆಯನ್ನ, ಜಾತಿ ವಿರುದ್ಧವಾದ ಪ್ರಶ್ನೆಗಳ್ನೆ ಎತ್ತುವುದಕ್ಕೆ ಸಾಧ್ಯವಾದುದು ಈ ಕಾರಣದಿಂದ. ಅದನ್ನ ನಾವು ಇಲ್ಲೂ ಕನಕದಾಸರ ಈ ಪರಿಸ್ಥಿತಿಯಲ್ಲೂ ನಾವು ಇಲ್ಲಿ 20ನೇ ಶತಮಾನದಲ್ಲೂ ಕೂಡ ನಾವು ಈ ರೀತಿ ಕಾಣ್ಬಹುದು. ಕನ್ನಡ ಸಾಹಿತ್ಯ 19–20ನೇ ಶತಮಾನದಲ್ಲಿ ಬಹಳ ಸಮೃದ್ಧವಾಗಿ ಬೆಳೀತು. ಅದರ ಬಗ್ಗೆ ಎರಡನೇ ಮಾತೇನಿಲ್ಲ. ಅತ್ಯಂತ ಧೀಮಂತ ಸಾಹಿತಿಗಳು ಬಂದ್ರು, ಶಿವರಾಮ ಕಾರಂತ, ಮತ್ತೆ ಆತರ ಅನೇಕ ಜನ ಬಂದಿದ್ದಾರೆ. ಆದ್ರೆ ಶೂದ್ರ ವರ್ಗದಿಂದ ಬಂದಂತ ಒಬ್ಬ ಕುವೆಂಪು ಮಾತ್ರ ವೈಚಾರಿಕ ನಿಲುವಿನಲ್ಲಿ ಅಸಂಖ್ಯಾತವಾದಂತಹ ತನ್ನ ಅಭಿಪ್ರಾಯಗಳನ್ನ ಹೇಳುವುದಕ್ಕೆ ಸಾಧ್ಯವಾಯ್ತು. ಅನೇಕ ಜನ ಬಂದ್ರು, ಈಗ ಡಿವಿಜಿ ಇದಾರೆ, ಶಿವರಾಮ ಕಾರಂತರಿದಾರೆ. ಗೊರೂರು ರಾಮಸ್ವಾಮಿಯವರ ರೀತಿ ಅನೇಕ ಬಹುದೊಡ್ಡ ಸಾಹಿತಿಗಳೆಲ್ಲ ಬಂದ್ರೂ ಕೂಡ ಅವರು ಮೂಲಭೂತವಾಗಿ ಜನತೆಯ ಪರವಾಗಿ ಚಿಂತಿಸುವುದಕ್ಕೆ ಇವರು ಚಿಂತಿಸಿಲ್ಲ ಅಂತಲ್ಲ, ಆ ಪ್ರಮಾಣದಲ್ಲಿ ವೈಚಾರಿಕವಾಗಿ ಚಿಂತಿಸಿ, ಆ ಜನರ ಆ ಜನರ ಪ್ರಮಾಣದಲ್ಲಿ ಆ ಜನರಿಗೆ ಒಳಿತನ್ನ ಅಪೇಕ್ಷಿಸುವಂತದ್ದು ವೈಚಾರಿಕವಾಗಿ ಮೌಢ್ಯತೆಯನ್ನ ಬಿಟ್ಟು ವೈಚಾರಿಕವಾಗಿ ಬೆಳೀಬೇಕು ಅನ್ನುವಂಥ ಒಂದು ನಿಲುವನ್ನ ಇಟ್ಕೊಂಡು ಅವ್ರು 20ನೇ ಶತಮಾನದಲ್ಲಿ ಕುವೆಂಪು, ಅವತ್ತು ಕನಕದಾಸ, ಅಂದ್ರೆ ಬಹುಸಂಖ್ಯಾತ ಮೌಢ್ಯವರ್ಗದಿಂದ ಬಂದ ಜನ ಹ್ಯಾಗೆ ಪ್ರತಿಕ್ರಿಯಿಸ್ತಾರೆ ಅನ್ನೋದಕ್ಕೆ ಕನಕದಾಸರು ಕುವೆಂಪು ಇಬ್ರೂ ಒಂದು ಅತ್ಯುತ್ತಮವಾದಂತ ನಿದರ್ಶನ. ಇದು ನನ್ನ ಅಭಿಪ್ರಾಯ. ಬಂಜಗೆರೆಯವರು ಕೆಲವು ಉತ್ತಮವಾದಂಥ ಅಭಿಪ್ರಾಯಗಳನ್ನ ಹೇಳಿದಾರೆ. ಆಮೇಲೆ ಇನ್ನೂ ನಂದೊಂದು ಪ್ರಶ್ನೆ ಇದೆ. ಭಕ್ತಿಪಂಥದ ಬಗ್ಗೆ ನಂದೊಂದು ಬಹುದೊಡ್ಡ ಪ್ರಶ್ನೆ ಇದೆ. ಅದನ್ನ ಮೂರನೆಯ ಗೋಷ್ಠಿಯಲ್ಲಿ ಹೇಳ್ತೇನೆ. ಯಾಕಂದ್ರೆ ನಾನದನ್ನ ಮೂಲಭೂತವಾಗಿ ಪ್ರಶ್ನಿಸಬೇಕು.

**ಚರ್ಚೆ : ಮನಜ**

**ಬಸವಣ್ಣನವರ ವಚನಗಳಿಗೆ ಒಂದು ಆಡಿಯನ್ಸ್ ಇತ್ತು ಬಸವಾದಿ ಮಠದ ವಚನಗಳನ್ನ ಕೇಳಲಿಕ್ಕೆ ಒಂದು ಆಡಿಯನ್ಸ್ ಇತ್ತು. ಆದ್ರೆ ಕನಕದಾಸರಿಗೆ ಅಂಥ ಆಡಿಯನ್ಸ್ ಇರ್ಲಿಲ್ಲ. ಆ ಕಾಲಕ್ಕಾದ್ರೂ ಕೂಡ ಕನಕದಾಸರ ಕ್ರಾಂತಿಕಾರಿ ಆಲೋಚನೆಗಳು ಒಂದು movement ಆಗ್ಲಿಕ್ಕೆ ಸಾಧ್ಯ ಆಗ್ಲಿಲ್ಲ. ಇದೊಂದಿಲ್ಲಿ ದಯವಿಟ್ಟು ಯೋಚ್ನೆ ಮಾಡ್ಬೇಕಾಗಿ ವಿನಂತಿ.**

**ಚರ್ಚೆ : ಬಂಜಗೆರೆ**

ಇವರಿಗೆ ಅನುಭವ ಮಂಟಪ ಅಂತ ಹೇಳುವ ಒಂದು ಅವ್ರ ಅನುಯಾಯಿಗಳ ಪ್ರೇಕ್ಷಕರು ಜಾಸ್ತಿ ಫಿಕ್ಸ್ ಆಗಿ ಇದ್ದಿರಬಹುದು. ಆದ್ರೆ ಇವರಿಗೆ ಜನರಲ್ ಆಡಿಯನ್ಸ್ ಇದ್ದೇ ಇದಾರೆ. ಆದ್ರೆ ಅನಿಶ್ಚಿತತೆ ಇದೆ ಅದರಲ್ಲಿ. ಯಾಕಂದ್ರೆ ಕೇಳಿಸ್ಕೊಳ್ತಾ ಇರುವಂತಹ ಸಾರ್ವಜನಿಕರು ಪೂರ್ತಿ ಪೂರ್ತಿಯಾಗಿ ಈತನ ಅಭಿಪ್ರಾಯವನ್ನು ಬೆಂಬಲಿಸೋರೋ ಅಲ್ಲವೋ ಗೊತ್ತಿಲ್ಲ. ಆದ್ದರಿಂದಲೇ ಆತ ಬಹಳ ಸಲ ಅಲ್ಲಿ ಹೇಳ್ಬೇಕಾದ್ರೆ, ಅನುಭವ ಮಂಟಪದಲ್ಲಿ ಕೂತು ಮಾತಾಡಬೇಕಾದ್ರೆ ಇರುವ ಧೈರ್ಯಕ್ಕೂ ಬೀದಿಯಲ್ಲಿ ಹೋಗಿ ಹೇಳುವ ಸತ್ಯಕ್ಕೂ ಸ್ವಲ್ಪ ವ್ಯತ್ಯಾಸ ಇದೆ. ಆಡಿಯನ್ಸ್ ಇಬ್ರಿಗೂ ಇದಾರೆ. ಅದು ಒಂದು, ಎರಡ್ನೇದು ಅಷ್ಟು ಕ್ರಾಂತಿಕಾರಿಯಾಗಿ ಹೇಳೋದಕ್ಕೆ ಅವರಿಗೆ ಸಾಧ್ಯ ಆಗಿಲ್ಲ ಅನ್ನೋ ಬಗ್ಗೆ ಹೇಳ್ಬೇಕಂದ್ರೆ ಕಾಲಘಟ್ಟಗಳೇ ಭಿನ್ನ ಇದೆ. ಮತ್ತೆ ಅವರ ಹಿನ್ನೆಲೆ ಕೂಡ ಬೇರೆ ಬೇರೆ.

**ಚರ್ಚೆ :**

ಕನಕದಾಸರು ಸಾಕಷ್ಟು ಏಕಾಂಗಿಯಾಗಿ ಬಂದ್ರು.

**ಚರ್ಚೆ : ಬಂಜಗೆರೆ**

ಏಕಾಂಗಿನೇ. ಬೆಂಬಲ ಇಲ್ಲ. ಸ್ವತಃ ದಾಸ ಕೂಟದಲ್ಲೂ ಕೂಡ ಏನು ಬಹಳ ದೊಡ್ಡ ಬೆಂಬಲ ಪಡೆ ಇಲ್ಲ. ಬೇರೆಯವರಿಗೆ ಇದ್ದ ಹಾಗೆ ಮಠ, ಆಸ್ಥಾನ ವ್ಯವಸ್ಥೆಗಳ ಬೆಂಬಲವಿಲ್ಲ. ಆದ್ದರಿಂದ ಆತನ ಸಂಕಷ್ಟಗಳು ಬೇರೆಯೇ ಇವೆ.

**ಚರ್ಚೆ :**

ಅವ್ರು ಭಕ್ತಿಯ ಪಂಥಗಳ ಬಗ್ಗೆ ಮಾತಾಡ್ತಾ ಮೂರು ಪ್ರಕಾರಗಳನ್ನ ಮಾತ್ರ ಹೇಳಿದ್ರು. ಆದ್ರೆ ಸಾರ್ವಜನಿಕರು ಜನಸಾಮಾನ್ಯರ ಗ್ರಹಿಕೆನಲ್ಲಿ ಭಕ್ತ ಅನ್ನೋದು ಮುಖ್ಯ. ಅಂದ್ರೆ ಭಕ್ತ ಬಲ್ಲಾಳ, ಭಕ್ತಧೃವ, ಭಕ್ತ ವಿಜಯ. ಪೌರಾಣಿಕ ನೆಲೆಯಲ್ಲಿ ಆ ಕ್ರಮದಲ್ಲೆ ಸಾರ್ವಜನಿಕರು ನೋಡೋದು. ಅವರಿಗೆ ಒಂದು ಪವಾಡಬೇಕು ಅಂತ ಅಲ್ಲ. ಕೃಷ್ಣ ದರ್ಶನ ಕೊಟ್ಟ ಅನ್ನುವ ಭಕ್ತಿಯ ಲೇಪನ ಇಲ್ದೆ ಸಾರ್ವಜನಿಕರು ಭಕ್ತಿಯನ್ನ ಗ್ರಹಿಸೋದಿಲ್ಲ ಒಂದು. ಎರಡನೆಯದು ನನಗೆ ಈ ಶೀರ್ಷಿಕೆ ಬಗ್ಗೇನೇ ಗೊಂದಲವಿದೆ ಯಾವ ಕನಕ mainstreamಗೆ ಅಂತ Identify ಮಾಡ್ಕೊಳೋಕೆ ಮತ್ತೆ ಮತ್ತೆ ವಾದಗಳ ಮೂಲಕ, ಆ ವೈದಿಕಶಾಹಿಯ ಮೂಲಕ ಪ್ರಯತ್ನಪಟ್ನೋ, ದರ್ಶನಕ್ಕೆ ಪ್ರಯತ್ನ ಪಟ್ನೋ, ಹಾಗೆ ರಾಷ್ಟ್ರೀಯತೆ ಕನಕನಿಗೆ ನಾವು ಯಾಕೆ ಆರೋಪಿಸಬೇಕು. ಇವತ್ತು ಮಾತಾಡ್ತಿರೋದು ಹುಸಿ ರಾಷ್ಟ್ರೀಯತೆ ಬಗ್ಗೆ. ಯಾವ ರಾಷ್ಟ್ರೀಯತೆಗೆ ನಾವು ಕನಕನ್ನ ಆರೋಪಿಸ್ತಿದ್ದೀವಿ ಎಂಬುದು ಎರಡ್ನೆ ಪ್ರಶ್ನೆ. ಮೂರ್ನೇದು ದಯವಿಟ್ಟು ಗಮನಿಸಿ, ಕುಲಕುಲವೆಂದು ಹೊಡೆದಾಡದಿರಿ. ಏನಾದ್ರೂ ಮಾತಾಡಿ ಈವತ್ತಿನ ಬಲಪಂಥೀಯ ಶಕ್ತಿಗಳು ಬೇಳೀತಾ ಇರುವ ಟೈಮ್‌ಲ್ಲಿ ನಾವು ಕನಕನ್ನ ನೋಡುವ ದೃಷ್ಟಿ ಸಂಪೂರ್ಣ ಬೇರೆಯಾಗ್ಬೇಕು. ಬಹಳ ಸುಲಭವಾಗಿ ಹೈಜಾಕ್ ಮಾಡ್ಬಿಡ್ತಾರೆ ಬಲಪಂಥೀಯರು. ಅದಾಗಿದೆ. ಈವತ್ತು ಸಾರ್ವಜನಿಕ ನೆಲೆಯಲ್ಲಿ ಜನಸಾಮಾನ್ಯರ ನೆಲೆಯಲ್ಲಿ ಹಾಡಾಡೋ ಕಿಸಬಾಯ್ ದಾಸ. ಹಾಡೋದೆಲ್ಲ ದೇವರ ನಾಮ. ಮ.ನ.ಜ. ಅವ್ರು ಪ್ರಶ್ನೆ ಬಹಳ ಸರಿ. ಕೀರ್ತನೆ ಅಲ್ಲ ದೇವರನಾಮ ದಾಸನ ಮಾಡಿಕೊ ಎನ್ನ– ಧರಾಧೀಶ ಮಾಡ್ಕೊತಾನಾ, ಭೂಸುರ ಮಾಡ್ಕೊತಾನಾ ಬೇಕಾಗಿಲ್ಲ ನನಗೆ. ಜನಸಾಮಾನ್ಯರು ಗ್ರಹಿಸೋದು ಆ ದಾಸ್ಯತ್ವವನ್ನೇ. ಬಿಡುಗಡೆ ಅನ್ನೋದು ಬೌದ್ಧಿಕವಾಗಿ ಚಿಂತನೆ ಮಾಡೋರ ಒಂದು ಆಲೋಚನಾ ಕ್ರಮ ಅಷ್ಟೆ. ಆ ಜನಸಾಮಾನ್ಯರೆಡೆಗೆ ಹೇಗೆ ಕನಕನ್ನ ತಗೊಂಡ್ಹೋಗ್ಬೇಕು? ಅಥವಾ ಅವರಿಗೆ ಪೌರಾಣಿಕ ಪ್ರಭಾವಳಿ ಕೊಡ್ಬೇಕಾ? ಇತ್ಯಾದಿ ಬಗ್ಗೆ ಇಷ್ಟು ಚರ್ಚೆ ನಡೆಯೋದ್ರಿಂದ ಮತ್ತೆ ಯಾವುದೇ ಜನ ಸಮುದಾಯದ ನಾಯಕನಾಗಿ, ಕ್ರಾಂತಿ ಪುರುಷನಾಗಿ ನೋಡೋವಾಗ್ಲೂ ಅವನನ್ನ ನಾವು ಮಾಸ್ ಲೀಡರ್ ಮಾಡೋದ್ಹೇಗೆ? ಮಾಸ್ ಆಗಿ ಹೇಗೆ ಕನಕನ್ನ ನೋಡ್ಬೇಕು ಅನ್ನುವಂತಾದ್ದು ಬಹಳ ಮುಖ್ಯ. ಇದು ಇವತ್ತಿನ ಪ್ರಸ್ತುತ ಅಂಶ ಅಂತ ನನಗನ್ಸುತ್ತೆ. ಇದರ ಬಗ್ಗೆ ಚರ್ಚೆ ನಡೆದ್ರೆ ಹೆಚ್ಚು ಒಳ್ಳೇದಾಗುತ್ತೆ.

**ಚರ್ಚೆ : ಉಗ್ರ ನರಸಿಂಹೇಗೌಡ**

ನನಗೆ ಕನಕ ಪುನಾಗ್ರಹಿಕೆ ನೆಲೆಗಳು ಯಾವ ಪುನಾಗ್ರಹಿಕೆಯಲ್ಲಿ ನಾವು ಕನಕನ್ನ ಗುರುತಿಸಬೇಕು ಅಂತ ನನಗನ್ನಿಸ್ತದೆ ಅಂದ್ರೆ ಪಟ್ಟಭದ್ರ ಹಿತಾಸಕ್ತಿಗಳ ಬಂಧನದಲ್ಲಿದ್ದಂತಹ ಉಡುಪಿ ಕೃಷ್ಣನ ಸನ್ನಿಧಿಯಲ್ಲಿ, ಸನ್ನಿಧಿಯಲ್ಲಿ ಅನ್ನೋದನ್ನ ಬಹಳ ಉದ್ದೇಶ ಪೂರ್ವಕವಾಗಿ ಬಳಸ್ತಾ ಇದೀನಿ, ಯಾವ ಶಕ್ತಿಗಳು ಕೃಷ್ಣನನ್ನ ಸನ್ನಿಧಿಯಾಗಿ ಮಾಡ್ಕೊಂಡಿದ್ವೋ ಅಂತಹ ಸನ್ನಿಧಿಯಲ್ಲಿ ಕನಕನ ಅಸ್ತಿತ್ವವನ್ನ ಇವತ್ತಿನವರೆಗೂ ಅಳಿಸೋಕಾಗೇ ಇಲ್ಲ. ಅಷ್ಟು ಘನತೆಯಿಂದ ಕೂಡಿತಾದ್ದರಿಂದ ಕನಕನ ವ್ಯಕ್ತಿತ್ವ ಯಾವ ವೈದಿಕಶಾಹಿ ಶಕ್ತಿಗಳು, ಯಾವೂ ಕೂಡ ಕನಕನ ಅಸ್ತಿತ್ವವನ್ನ ಅಳ್ಸೋಕಾಗ್ಲಿಲ್ಲ. ನಾವು ಬೇರೆ ಉದಾಹರಣೆಗಳನ್ನ ಕೂಡ ನೋಡ್ಬಹುದು. ಬೇರೆ

ಬೇರೆ ರೂಪಗಳನ್ನೆಲ್ಲ ಕೊಡ್ತಾ ಮೂಲ ಉದ್ದೇಶಗಳಿಗೆ ವಿರುದ್ಧವಾಗಿ ಅವರನ್ನ ನಿಲ್ಲಿಸಿದಾರೆ. ಆದ್ರೆ ಇಲ್ಲಿ ಈ ಒಂದು ಅನುಮಾನ ಕೂಡ ಇದೆ. ಏನಂದ್ರೆ ಸ್ವಲ್ಪ ಆ ಪುರೋಹಿತಶಾಹಿ ಮಾಧ್ಯಮವನ್ನೇ ಬಳಸ್ಕೊಂಡಿದ್ರಿಂದ ಆಗ್ಲೇ ಇವರ್ಧೇಳಿದ್ರು ಹಾಗೆ ಅಂದ್ರೆ ಮಾಧ್ಯಮವಾಗಿ ಅದನ್ನ ಬಳಸ್ಕೊಂಡಿದ್ರಿಂದ ಕೂಡ ಬಹಳ ಔಟ್ ಸ್ಟಾಂಡಿಂಗ್ ಆಗಿ ಮೂಲ ಕನಕನ್ನ ತುಂಬ ಕ್ರಾಂತಿಕಾರಿಯಾಗಿ ನೋಡೋಕೆ ಸಾಧ್ಯ ಆಗ್ದೇ ಇರುವಂತ ಒಂದು ಇದೂ ಕೂಡ ಇರ್ಬಹುದು. ಆ ತೆರೆ ಸರಿಸಿದ್ರೆ ಕನಕ ನಿಜವಾಗ್ಲೂ ಬಹಳ ಕ್ರಾಂತಿಕಾರಿ ಸಂತಕವಿ ಅಂತ ಹೇಳ್ಬೇಕು. ಬರೀ ಸಂತಕವಿ ಅಲ್ಲ ಮತ್ತೆ ರಾಷ್ಟ್ರೀಯ ಸಂತ ಕವಿ ಅನ್ನೋದು ಬರೀ ಆರೋಪ. ರಾಷ್ಟ್ರೀಯ ಅನ್ನೋದು ಅಂತ ಹೇಳ್ಲೇ ಬೇಕಾಗಿಲ್ಲ. ರಾಷ್ಟ್ರೀಯ ಪ್ರಾದೇಶಿಕ ಅಂತ ಮಾಡ್ಲೇಬೇಕಾಗಿಲ್ಲ. ಕನಕದಾಸರಿಗೆ ಅದರ ಎಲ್ಲ ಆಚೆಗೆ ನೋಡುವ ಶಕ್ತಿ ಇದೆ. ಅದರಿಂದಲೇ ಕನಕದಾಸರು ಇಷ್ಟೆಲ್ಲಾ ವರ್ಷಗಳ ನಂತರ ಕೂಡ ಜನಮಾನಸದಲ್ಲಿದಾರೆ. ಯಾವ್ದೇ ಇನ್‌ಸ್ಟಿಟ್ಯೂಷನಲೈಸ್ ಆಗ್ದೇನೆ ಕನಕ ಉಳ್ಕೊಂಡಿದಾರೆ ಅಂತ ಅಂದ್ರೆ ಕನಕದಾಸರ ವ್ಯಕ್ತಿತ್ವ, ಘನತೆ ಅಷ್ಟು ದೊಡ್ಡದು. ಅಷ್ಟು ಶಕ್ತಿಯುತವಾದುದು. ಅದಕ್ಕೇನೆ ಅದನ್ಯಾರೂ ಹೈಜಾಕ್ ಮಾಡ್ಕೊಳೋಕಾಗ್ಲಿಲ್ಲ ಅನ್ಸುತ್ತೆ ನನಗೆ. ಮತ್ತೆ ಈ ಎಲ್ಲ ವೈದಿಕ ಹುನ್ನಾರಗಳು, ವೈದಿಕ ಷಡ್ಯಂತ್ರಗಳ ವಿರುದ್ಧ ಕನಕನನ್ನು ಏಕಾಂಗಿಯಾಗಿ ಮಾಡಿದ್ದು ಅಂದ್ರೆ ಏಕವ್ಯಕ್ತಿ ಚಳುವಳಿ ಕನಕದಾಸರದು ಅನ್ನಬಹುದು. ಪರಂಪರೆ ಅಲ್ಲಿ ಸೇರಿದ್ರೂ ಕೂಡ ಒಬ್ಬನೇ ಆಗಿ ಮಾಡಿದ್ದು. ವಚನ ಚಳುವಳಿಗಾರರ್ದು ಒಂದು ಇನ್‌ಸ್ಟಿಟ್ಯೂಷನ್ ಇತ್ತು. ಅದಾಗ್ಲೇ ಒಂದು ಸಂಸ್ಥೆ ರೂಪದಲ್ಲಿ ಅಲ್ಲಿತ್ತು. ಕನಕದಾಸರನ್ನು ಆರೋಪದಲ್ಲಿ ನೋಡೋಕಾಗೋದಿಲ್ಲ. ಜೊತೆಗೆ ಈಗ ಕನಕನ ಪರಂಪರೆಯ ಪ್ರತಿನಿಧಿಗಳಾಗಿರುವ ಎಲ್ಲ ಶೂದ್ರ ಸಮುದಾಯಗಳೂ ಕೂಡ ಕನಕದಾಸರು ಮಾಡಿದ ರೀತಿಯಲ್ಲಿಯೇ ವ್ಯಕ್ತಿತ್ವದ ಘನತೆಯಿಂದಲೇ ಪ್ರತಿಭಟನೆ ಮತ್ತು ಪ್ರತಿಭಟನೆಯನ್ನು ತೋರ್ಸೋದನ್ನ ಆದ್ರೆ ಅದು ಅಳಿಸಲಾರದ ಶಾಂತಿಯುತವಾದ ಕ್ರಾಂತಿ ಆಗಿ ಬದಲಾಗುತ್ತದೆ ಎಂಬ ಹಿನ್ನೆಲೆಯಲ್ಲಿ ನಾವು ಕನಕನ ನೆಲೆಯನ್ನ ಪುನಾಗ್ರಹಿಸಬೇಕು ಅಂತ ನಾನು ತಿಳಿದುಕೊಂಡಿದ್ದೇನೆ.

**ಚರ್ಚೆ : ಬಂಜಗೆರೆ**

ರಾಷ್ಟ್ರೀಯ ಕವಿ ಎನ್ನುವುದು ಒಂದು ಸಂಸ್ಥೆಯವರು ಇಟ್ಕೊಂಡಿರುವಂತ ಹೆಸರು. ಆದ್ರೂ ಕೂಡ ನನಗೆ ಅನ್ನೋದು ಈಗ ರಾಷ್ಟ್ರ ಅನ್ನೋದು ಬಹಳ ದೊಡ್ಡ ಘಟಕ. ಇವರೆಲ್ಲರನ್ನೂ ಸ್ಥಾನಿಕ ಮತ್ತು ಸ್ಥಳೀಯ ಅಂತ ಮಾಡಿಟ್ಟಿರುವ ಒಂದು ಸಾಂಸ್ಕೃತಿಕ ಚೌಕಟ್ಟಿನ ಹಿನ್ನೆಲೆಯಲ್ಲಿ ಅದನ್ನ 'ರಾಷ್ಟ್ರೀಯ' ಎಂದು ಗಟ್ಟಿಗೆ ಘೋಷಿಸ್ಬೇಕಾಗಿರುತ್ತೋ ಏನೋ. ಯಾಕಂದ್ರೆ ಭಕ್ತ ಚೈತನ್ಯನ ಪಾಠ ನಾವು ಓದುವಾಗ ಹೈಸ್ಕೂಲಲ್ಲಿತ್ತು. ಕಬೀರನ ಪಾಠ ಬಹಳ ಹಿಂದೆ ಇತ್ತು. ಕಬೀರ ಕೂಡ ಕನ್ನಡಕ್ಕಿಂತ ಕಡಿಮೆ ಜನಸಂಖ್ಯೆ ಮಾತನಾಡುವ ಭಾಷೆಯಲ್ಲಿ ತನ್ನ ದೋಹೆಗಳನ್ನ ಬರೆದವನು. ಭಕ್ತ ಚೈತನ್ಯ ಅಂತೂ ಆತನ following ಪಶ್ಚಿಮ ಬಂಗಾಳದ ಕೆಲವು ಮೂಲೆಗಳಲ್ಲಿ ಮಾತ್ರ ಇದೆ. ಹಂಗಿದ್ರೂ ಅವರು ರಾಷ್ಟ್ರೀಯ ಸಂತರಾಗ್ಬಹುದಾದ್ರೆ ಕನಕದಾಸ ಕೂಡ ಯಾಕೆ ರಾಷ್ಟ್ರೀಯ ಸಂತ ಅಲ್ಲ ಅನ್ನುವ ಕ್ಲೈಮ್. ಬಹುಶಃ ರಾಷ್ಟ್ರಕವಿ ಅಂದ ಹಾಗೆ ವಿಶ್ವ ಕವಿ ಅಂದ ಹಾಗೆ ಇದು ಒಂದು ಅಸರ್‌ಷನ್.

**ಚರ್ಚೆ : ಪ್ರಶ್ನೆ**

ಕನಕದಾಸರಲ್ಲಿ ಕಂಡುಬರ್ತಕ್ಕಂತ ಎಲ್ಲ ಸಾಮಾಜಿಕ ಕಟ್ಟಳೆಗಳನ್ನ ಒಡೆದು, ಹೋಗುವಂತಹ ಶಕ್ತಿ ಕಂಡು ಬರೋದ್ರಿಂದ ಆ ರಾಷ್ಟ್ರೀಯ ಅನ್ನೋದು ನನ್ ಮಟ್ಟಿಗೆ ಸಂಕುಚಿತ ಅಂತ ಅನ್ಸಿದೆ. ಹಾಗೇ ಬಿಡ್ಬಹುದು ಇಲ್ದೇ ಇದ್ರೆ ಜಾಗತಿಕ ಸಂತಕವಿ ಅಂತ ಹೇಳಬಹುದು.

**ಚರ್ಚೆ :**

ಕನ್ನಡದ ಶಕ್ತಿ, ಕನ್ನಡದ ಪ್ರಕೃತಿ, ಕನ್ನಡದ ಸಾಹಿತ್ಯ ಏನಿದೆಯಲ್ಲ ಇದನ್ನ ಪ್ರತಿಬಿಂಬಿಸೋದು ಅಲ್ಲಿ. ಆದ್ದರಿಂದ ಕನಕ ರಾಷ್ಟ್ರೀಯ ಮಟ್ಟವನ್ನೂ ಮೀರಿದಂತಹ ಒಬ್ಬ ವ್ಯಕ್ತಿ. ಅನ್ಯ ಭಾಷೆಗಳಿಗೆ ಅನುವಾದ ಮಾಡಿ ಅದರ ಸತ್ವವನ್ನು ಬೇರೆ ಭಾಷೆಗಳಲ್ಲೂ ಸಿಕ್ಕುವ ಹಾಗೆ ಮಾಡಬೇಕು.

**ಚರ್ಚೆ : ಡಿ.ಕೆ. ಸುಧಾಕರ್**

ಜಯಪ್ರಕಾಶ್ ಅವರು 16ನೇ ಶತಮಾನದಲ್ಲಿ ಕನಕದಾಸರ ಪ್ರತಿಭೆ ಆಗಲಿ ವೈಚಾರಿಕತೆ ಆಗಲಿ ಅದು ಮೇಲುಮಟ್ಟಕ್ಕೆ ಬರಲು ಬಿಡಲಿಲ್ಲ ಅನ್ನುವ ಮಾತನ್ನ ಸೂಕ್ಷ್ಮವಾಗಿ ಹೇಳಿದ್ರು. 16ನೇ ಶತಮಾನದಲ್ಲೇ ಅಲ್ಲ. 21ನೇ ಶತಮಾನದಲ್ಲೂ ಕೂಡ ಬಿಡ್ತಾ ಇಲ್ಲ ಅನ್ನೋದಕ್ಕೆ ನೀವು ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯರ ಕನಕೋಪನಿಷತ್ತು ಎನ್ನುವ ಗ್ರಂಥವನ್ನ ನೋಡಿ. ಕನಕದಾಸರ ಪ್ರತಿಯೊಂದು ಗೀತೆಯೂ ಕೂಡ ಬೇರೆ ಕಡೆಯಿಂದ ಎರವಲು ತಂದದ್ದು, ಇದು ಪ್ರಧಾನ ಪ್ರತಿಭೆಯಲ್ಲ. ಅಧೀನ ಪ್ರತಿಭೆ ಎಂಬಂತೆ ಚಿತ್ರಿಸಿದ್ದಾರೆ. ಒಂದು ಉದಾಹರಣೆಯನ್ನ ನಿಮ್ಗೆ ಹೇಳ್ತೀನಿ. ಈಗ 'ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳ ಕೂಡೆ ಜಗಳವೇ ಲೇಸು' ಅನ್ನೋದಕ್ಕೆ ಸಂಸ್ಕೃತ ಭಾರವಿ ಕವಿಯ ಯಾವುದೋ ಒಂದು ಶ್ಲೋಕ ಪ್ರೇರಣೆ ನೀಡಿದೆ ಅಂತ ಹೇಳ್ತಾ ಇದಾರೆ. ಬಹುಶಃ ನಾನವರಿಗೆ ಮರು ಪ್ರಶ್ನೆ ಹಾಕ್ತೀನಿ– ವಿದ್ಯಾವಾಚಸ್ಪತಿಗಳೇ ಜನಪದದಲ್ಲಿ ಒಂದು ಗಾದೆ ಇದೆ. 'ಸಗಣಿಯವನ ಜೊತೆ ಸರಸ ಆಡೋದಕ್ಕಿಂತ ಗಂಧದವನೊಡನೆ ಗುದ್ದಾಡುವುದು ಲೇಸು' ಅಂತ. ಯಾಕೆ ಇಲ್ಲಿಂದ ಕನಕ ತೆಗೆದುಕೊಂಡಿರಬಾರ್ದು? ಹೀಗೆ ಕನಕ ಉಪನಿಷತ್ತು ಕನಕ ಉಪನಿಷತ್ತಲ್ಲ. ಗ್ರಂಥಕರ್ತರ ಅನರ್ಥದ ಅಸತ್ತು ಅಂತ ಹೇಳಿ ನಾನು ಭಾವಿಸ್ತೀನಿ. ಇವತ್ತೂ ಕೂಡ ಕನಕನನ್ನ ಬಿಡಕ್ಕೆ ಇವ್ರು ಯೋಚ್ನೆ ಮಾಡೋದೇ ಇಲ್ಲ. ಉದಾಹರಣೆಗೆ 'ನಮ್ಮ

ದೇವರು ಬಂದರು ಬನ್ನೀರೇ ನೋಡ ಬನ್ನೀರೇ' ಎಂಬ ಕೀರ್ತನೆ ಬಹಳ ಚೆನ್ನಾಗಿದೆ ಅಂತ ಹೇಳುತ್ಲೇ ಮರು ಘಳಿಗೆಯಲ್ಲೇ ಇದಕ್ಕೆ ಸರಿಸಾಟಿಯಾದ ವಾದಿರಾಜರ ಒಂದು ಕೀರ್ತನೆ ಇದೆ ಅಂತ ಹೇಳ್ಬಿಟ್ಟು ಮುಂದುಕ್ಕೋಗ್ತಾ ಇರ್‍ತಾರೆ. ಇದ್ಯಾಕೇಂದ್ರೆ ತೋಡೇನ ಸವರ್‍ತ್ಲೇ ಸವರ್‍ತ್ಲೇ ಒಳಶುಂಟಿ ಹಿಡಿದು ಬಿಡೋದು. ಇದನ್ನ ನೀವು ಗಮನಿಸ್ಬೇಕು. ಯಾಕೆ ಅಂದ್ರೆ ಇಂಥ ಗೋಷ್ಠಿ ಮಾಡ್ಬೇಕಾದಾಗ ಇವನ್ನೆಲ್ಲ ನೀವು ಗಣನೆಗೆ ತೆಗೆದುಕೊಳ್ಳದಿದ್ರೆ ಏನೂ ಪ್ರಯೋಜನ ಆಗೋದಿಲ್ಲ.

**ಚರ್ಚೆ : ಗೀತಾ ನಾವಲ್**

ನನ್ನ ಪ್ರಶ್ನೆ ಕೀರ್ತನೆಗಳನ್ನ ಕುರಿತ ಹಾಗೆ. ಕೀರ್ತನೆ ಅನ್ನುವಾಗ ಅದು ಬಹುಶಃ ಕೀರ್ತಿಸುವ ಅನ್ನೋದಕ್ಕಿಂತ ಮುಖ್ಯವಾಗಿ ಒಂದು ಹಾಡುಗಾರಿಕೆನಲ್ಲಿ ಪದಗಳು ಜನರ ಮಧ್ಯದಲ್ಲಿ ಪ್ರಚಲಿತ ಆಯ್ತು ಅನ್ನೋದು ಅದಕ್ಕಿರ್‍ತಕ್ಕಂತ ಪಾಸಿಟಿವ್ ಶಕ್ತಿ. ಏಕೆ ಅಂತ ಅಂದ್ರೆ ದಾಸರ ಪದಗಳು ಮೊದ್ಲು ಜನರಿಗೆ ಮುಟ್ಟಿದ್ದೇ ಅಕ್ಷರದ ಮೂಲಕ ಅಲ್ಲ. ಮೌಖಿಕವಾಗಿ. ಆದ್ರಿಂದ ಇದರಲ್ಲಿ Positive power ಇದೆ ಅಂತ ನಾನು ಅಂದ್ಕೊಳ್ತೀನಿ. ಎರಡ್ನೇದಾಗಿ ಅವರು ಹೇಳಿದ ಹಾಗೆ ಒಂದು ಮಾಹಿತಿ ಇದೆ. ಏನಂದ್ರೆ ಬರೀ ಅಷ್ಟಕ್ಕೇ ನಾವು ನಿಲ್ಲಿಸ್ತಾ ಇದೀವಿ ಅಂತ. ಕೀರ್ತಿಸು, ಹಾಡು, ಹಾಡುಗಾರಿಕೆ ಅಥವಾ ಮನರಂಜನೆ. ಅವರನ್ನ ಅವರೊಬ್ಬ ಕ್ರಾಂತಿಕಾರಿ ವಿಚಾರಗಳನ್ನು ಉಳ್ಳಂತ ಒಬ್ಬ ಕವಿ. ಅದನ್ನೂ ನಾವು ಗಮನಿಸ್ಬೇಕಾಗಿದೆ ಅನ್ನೋದು ಅವರ ಮಾತ್ನಲ್ಲಿ ನನಗೆ ಕಾಣಿಸ್ತಾ ಇದೆ. ಹಾಗಾಗಿ ಅವರ ಮಾತನ್ನ ಸಪೋರ್ಟ್ ತೆಗೆದುಕೊಳ್ತಾ ನಾನಿದನ್ನ ಹೇಳ್ತಾ ಇದೀನಿ. ಎರಡನೇದಾಗಿ ಬಂಜಗೆರೆಯವರು ಪ್ರಸ್ತಾಪ ಮಾಡಿದ ಹಾಗೆ ಅವರು ಎರಡು ಕೃತಿಗಳನ್ನ ಒಂದು ಕೀರ್ತನೆಗಳು ಮತ್ತೆ ರಾಮಧಾನ್ಯ ಚರಿತೆಯನ್ನ ನೀವು ಹೇಳಿದ್ರಿ, ನನಗೆ ಅದು ಹೆಚ್ಚು ಇಷ್ಟ ಜಾತಿ, ಕುಲ, ಧರ್ಮ ಆ ಹಿನ್ನೆಲೆಯಲ್ಲಿ ನಾವು ಕನಕನನ್ನ ನೋಡೋದಕ್ಕೆ ಹೋದ್ರೆ, ಬರಿ ಅಷ್ಟೇ ಆಗ್ಬಿಟ್ರೆ ಕೆಲವು ಮಾಹಿತಿಯನ್ನ ತಪ್ಪಿಸ್ಕೊಳ್ತೀವಿ ಅಂತ ನನಗನ್ಸುತ್ತೆ. ಯಾಕೆಂದರೆ ಕನಕನ ಮೋಹನ ತರಂಗಿಣಿ ನೋಡ್ತಾ ಇದ್ರೆ ಅದ್ರಲ್ಲಿ ಎಷ್ಟೊಂದು ಕಡೆ ಅವನೆಂಥ ಬಂಡಾಯ ಮನೋಭಾವದವನು ಅನ್ನೋದು ಗೊತ್ತಾಗುತ್ತೆ. ವೈದಿಕ ಧರ್ಮದ ವಕ್ತಾರರು ಏನ್ ಹೇಳ್ತಾರೆ ಅವನು ಬೇರೆ ಧರ್ಮದ ನೆಲೆಯನ್ನ ಪ್ರಸ್ತಾಪನೇ ಮಾಡಲ್ಲ. ಶೂದ್ರ ಬ್ರಾಹ್ಮಣ ಅಂತ ನೆಲೆಯನ್ನ ಪ್ರಸ್ತಾಪ ಮಾಡ್ದೆ ಒಂದೇ ಪಿಕ್ಚರ್ ಕೊಡ್ತಾ ಅಲ್ಲಿ ಎರಡೆರಡು ವೈರುಧ್ಯಗಳನ್ನ ಮಂಡಿಸುತ್ತಾ ಹೋಗೋದನ್ನ ಮೋಹನ ತರಂಗಿಣಿಯನ್ನ ನೋಡೋವಾಗ ನಾನು ಗಮನಿಸ್ತಾ ಇದೀನಿ. ಸಣ್ಣ ಸಣ್ಣ ಸಂಗತಿಗಳವು. ಆದ್ರೆ ಅಲ್ಲಿ ಶೈವ ಮತ್ತು ಬ್ರಾಹ್ಮಣ ದೇವಸ್ಥಾನಗಳಿಗೆ ಪರಸ್ಪರ ಹೋಗೋದಿಲ್ಲ. ತ್ರಿಮತಸ್ಥರು ಒಟ್ಟಿಗೆ ಸ್ನಾನ ಮಾಡಲ್ಲ. ಒಟ್ಟಿಗೆ ಊಟ ಮಾಡ್ತಾ ಇರ್‍ಲಿಲ್ಲ. ಆದ್ರೆ ಅವನು ಒಟ್ಟಿಗೆ ಊಟ ಮಾಡಿಸ್ತಾನೆ. ಒಟ್ಟಿಗೆ ಸ್ನಾನ ಮಾಡಿಸ್ತಾನೆ. ಮತ್ತೆ ಬ್ರಾಹ್ಮಣರ ಮದುವೆಗಳಲ್ಲಿ ಚುಕ್ಕೀನುಂಡೆ ಮಾಡಲ್ಲ. ತಿಥಿಗೆ ಮಾಡ್ತಾರೆ. ವಡೆಯನ್ನೂ ತಿಥಿಗೆ ಮಾಡ್ತಾರೆ. ಆದ್ರೆ ವೈದಿಕ ಧರ್ಮದಲ್ಲಿ ಅವನು ಚುಕ್ಕೀನುಂಡೆ ಮಾಡಿಸ್ತಾನೆ. ವಡೆ–ಪಾಯಸ ಮಾಡಿಸ್ತಾನೆ. ಆಮೇಲೆ ಅದನ್ನ ಬಡಿಸೋರು ತಿಗಳ್ರು. ಅವನೆಷ್ಟು ಚೆನ್ನಾಗಿ ಆ ತರ ಅಲ್ಲಿರ್‍ತಕ್ಕಂತ ಚಿತ್ರಗಳಲ್ಲಿ ಬಂಡಾಯದ ಚಿತ್ರಗಳನ್ನ ಕೊಡ್ತಾನೆ. ಆಮೇಲೆ ಒಂದ್ಕಡೆ ಹೋಮ, ಹವನಗಳೆಲ್ಲ ನಡೀತಾ ಇದೆ. ಮದುವೆ ಸಂದರ್ಭದಲ್ಲಿ. ರತಿ ಮನ್ಮಥರನ್ನ ಮಳೆನಲ್ಲಿ ನೀರಿಗೆ ಬಿಡ್ತಾನೆ. ಎಂಥ ಭಯಂಕರ ತುಂಟ ಚಿತ್ರಗಳನ್ನ ಕೊಡ್ತಾನೆ. ಇಲ್ಲಿ ಹೋಮಗಳ ಪವಿತ್ರ ಹೋಮ ನಡೀವಾಗ ಅಲ್ಲಿ ಗಂಡು–ಹೆಣ್ಣಿನ ತುಂಟ ಚಿತ್ರಗಳನ್ನ ಕೊಡ್ತಾನೆ. ಆಮೇಲೆ ಸಾಮಾನ್ಯ ನಗರ ಪ್ರದರ್ಶನ ಮಾಡುವಾಗ ಅಲ್ಲೂ ಅಷ್ಟೆ ವೇದ ಘೋಷಗಳು ನಡೀತಾ ಇರುತ್ತೆ. ಮನೆ ಮನೆಗಳ ವೇದ ಪಾಠಶಾಲೆಗಳಾಗಿರುತ್ತೆ, ದೊಡ್ಡ ದೊಡ್ಡವರ ಮನೆಗಳಲ್ಲಿ ಅಂದರೆ ಪೌರೋಹಿತ್ಯದ ನೆಲೆಯಲ್ಲಿ ನಡಿತಕ್ಕಂತಹ ಹೋಮ, ಹವನಗಳು ನಡೆಯೋವಾಗ ಈಗ ಸಾಮಾನ್ಯ ಮನುಷ್ಯರ ಮನೆನಲ್ಲಿ ಕನ್ನಡ ಚೌಪದಿಗಳನ್ನ ನುಡಿಸ್ತಾನೆ. ಆ ತರ ಸಣ್ಣ ಸಣ್ಣ ಸಂಗತಿಗಳಲ್ಲಿ ಆತ ಬೇರೆ ಬೇರೆ ಚಿತ್ರಗಳನ್ನು ಕೊಡ್ತಾ ಹೋಗ್ತಾನೆ ಮತ್ತೆ ಭಗವಾನ್ ಅವ್ರು ಪ್ರಸ್ತಾಪ ಮಾಡಿದ್ರು ಕೃಷ್ಣ ಎಲ್ಲಾ ಕಡೆ ಇದ್ದಾನೆ ಅಂತ. ನನ್ಗೆ ತಕ್ಷಣ ರುಕ್ಮಿಣಿ ಹೆರಿಗೆ ಸಮಯ ನೆನಪಿಗೆ ಬಂತು ಅವಳು ತುಂಬು ಗರ್ಭಿಣಿ ಮನೆ ಬಾಗಿಲಲ್ಲಿ ನಿಂತ್ಕೊಂಡು ಕೃಷ್ಣನಿಗೆ ಕಾಯ್ತಾ ನಿಂತಿರ್‍ತಾಳೆ. ಮನೆ ಮನೆ ಕೃಷ್ಣ ಕತೆ ತರ. ಎಲ್ಲರಿಗೂ ಸಿಕ್ತಾನೆ. ಆದ್ರೆ ಹೆಂಡ್ತಿರಿಗೆ ಸಿಗೋದಿಲ್ಲ ಅವನು. ತುಂಬು ಗರ್ಭಿಣಿ ಆ ಹೆರೋ ಸಮಯದಲ್ಲಿ ಕನಕ ಹೇಳ್ತಾನೆ ನಾರಾಯಣನ ಶತನಾಮದಲ್ಲಿ ನರಳಿದಳು ಅಂತ. ಹೆಣ್ಣಿನ ಚಿತ್ರಾನ ಇಂತ ಒಂದು ನೆಲೆಯಲ್ಲಿ ಇಟ್ಟಿದ್ದಾನೆ. ಅಂತಾ ಒಂದು ಚಿತ್ರಾನ ಅವನು ಕೊಡ್ತಾನೆ. ಒಂದ್ಕಡೆ ಭಗವಂತನನ್ನ ತೋರಿಸ್ತಾ ಇನ್ನೊಂದ್ಕಡೆ ಸಾಮಾನ್ಯರಿಗೆ ಹೆಬ್ಬಾಗಿಲಲ್ಲಿ ಕೃಷ್ಣ ಬರ್‍ತಾನೆ ಅಂತ ಸೊಂಟ ಹಿಡ್ಕೊಂಡು ರುಕ್ಮಿಣಿ ಕಾಯ್ತಾ ನಿಂತಿರುವ ಚಿತ್ರವನ್ನು ಮೋಹನ ತರಂಗಿಣಿಯಲ್ಲಿ ಅವನು ಕೊಡ್ತಾನೆ. ಹಾಗೆ ಮೋಹನ ತರಂಗಿಣೀನ ಹೆಚ್ಚಾಗಿ ನಾವು ಗಮನಿಸಿದಷ್ಟು ಇಂಥ ಬಂಡಾಯದ ಸಣ್ಣ ಸಣ್ಣ ಚಿತ್ರಗಳನ್ನ ಸಾಮಾನ್ಯ ಮನುಷ್ಯನ ವಿಷಯದಲ್ಲಿ ಸಣ್ಣ ಸಣ್ಣ ಚಿತ್ರಗಳನ್ನ ಕನಕ ಹೇಗೆ ಬೆಂಬಲಿಸ್ತಾನೆ ಅಂತ ತಿಳಿಸುತ್ತಾ ಇವೆ. ನಾವು ಪೂರ್ತಿ ಧರ್ಮ ಮತ್ತು ಜಾತಿಯ ನೆಲೆಯನ್ನ ಅವಗಣಿಸದೆ, ಅದನ್ನೂ ಇಟ್ಕೊಂಡಂತೆ ಈ ತರದಲ್ಲೂ ಕನಕನನ್ನ ನೋಡ್ಬೇಕಾಗ್ತದೆ ಅಂತ ನನ್ನ ಆಶಯ.

**ಚರ್ಚೆ : ನರೇಂದ್ರ ಕುಮಾರ್**

ಬಂಜಗೆರೆಯವರು, ಮತ್ತೆ ಈಗಾಗಲೇ ಟಿಪ್ಪಣಿ ಮಂಡಿಸಿದಂತ ಮುದ್ದುಕೃಷ್ಣ ಅವರು, ಉಗ್ರನರಸಿಂಹೇ ಗೌಡ್ರು ತಮ್ಮ ಸಣ್ಣ ಟಿಪ್ಪಣಿಗಳ ಮೂಲಕನೆ ಬಹಳ ನಾವು ವೈಚಾರಿಕವಾಗಿ ಮತ್ತು ಬೇರೆ ಬೇರೆ ಬಗೆನಲ್ಲಿ ಚಿಂತನೆ ಮಾಡೋದನ್ನ ಹೇಳ್ಕೊಟ್ಟಿದ್ದಾರೆ. ನನಗೆ ಕೆಲವು ಪ್ರಶ್ನೆಗಳಿದಾವೆ.

ನಾವು ಕನಕದಾಸರನ್ನ ಅಥವಾ ಯಾವುದೇ ಸಂತರನ್ನ ನೋಡ್ತಾನೆ ಇವತ್ತಿನ ಸಮಕಾಲೀನ, ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ವಿದ್ಯಮಾನಗಳ ಒಟ್ಟಿಗೆ ಮುಖಾಮುಖಿಗೊಳಿಸಬೇಕು ಅಂತ ಅನ್ಸುತ್ತೆ. ಇಲ್ಲಾಂದ್ರೆ ಅದೇ ಯಥಾಪ್ರಕಾರದ

ವೈಭವೀಕರಣ ಅಥವಾ ಇನ್ನೊಂದು ಬಗೆಯ ಕೀರ್ತನೆಯ ಸ್ವರೂಪದಲ್ಲಿ ಉಳ್ಕೊಬಹುದೇನೋ ಅನ್ನುವ ಅನುಮಾನ ನನಗೆ. ಎರಡ್ನೆದಾಗಿ ನಮ್ಮ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಹುಟ್ಕೊಂಡಂತಹ 12ನೆಯ ಶತಮಾನದ ವಚನ ಚಳುವಳಿ ಏನಿದೆ ಅದು ಪಡೆದಂಥ ವೈಶಾಲ್ಯತೆ ಅದರ ಬಾಹುಳ್ಯತೆ ತುಂಬ ಮುಖ್ಯವಾದುದು. ತಮ್ಮೆಲ್ಲರಿಗೂ ಗೊತ್ತಿರುವಂಥದ್ದು. ಜಾತಿ ಪದ್ಧತಿಯನ್ನ ವಿರೋಧ ಮಾಡ್ತಾ, ಅಸ್ಪೃಶ್ಯತೆಯನ್ನ ವಿರೋಧ ಮಾಡ್ತಾ, ವರ್ಗ ತಾರತಮ್ಯವನ್ನು ಪ್ರಶ್ನೆ ಮಾಡ್ತಾ ಲಿಂಗ ತಾರತಮ್ಯವನ್ನು ಪ್ರಶ್ನೆ ಮಾಡ್ತಾ ಹಾಗೇ ಆಹಾರ ತಾರತಮ್ಯನೂ ಕೂಡ ಅದು ಪ್ರಶ್ನೆ ಮಾಡ್ತು, ಚರ್ಚೆ ಮಾಡ್ತು ಅನ್ನುವಂತಾದ್ದು. ಇವತ್ತು ಯಾವ ಸ್ಥಿತಿ ತಲುಪಿದ್ದೀವಿ ಅಂತ ಅಂದ್ರೆ ಆಹಾರ ತಾರತಮ್ಯವನ್ನ ಸಮರ್ಥಿಸುವ ವಿಶ್ವೇಶ್ವರ ತೀರ್ಥಸ್ವಾಮೀಜಿ ಇರ್ಬಹುದು ಅಥವಾ ಈ ಮಡೆಸ್ನಾನದಂತ ಪ್ರಶ್ನೆಗಳಿಗೆ ನಾವೇನ್ ಮುಖಾಮುಖಿಯಾಗಬಹುದು? ಕನಕದಾಸರನ್ನ ಇಟ್ಕೊಂಡೇನೇ ಮುಖಾಮುಖಿಯಾಗೋದು ಹೇಗೆ ಅನ್ನೋದು? ಇನ್ನೊಂದು ಈ ಶಿವಶಿವ ಶಿವ ಎನ್ನಿರೋ ಮೂಜಗ ದೇವರ ಶಿವ ಶಿವ ಎನ್ನಿರೋ ಅಂತ ಹರಿ ಮತ್ತು ಶಿವನನ್ನ ಎರಡನ್ನೂ ಸೌಹಾರ್ದಯುತವಾಗಿ ರೂಪಿಸುವ ಒಂದು ಹೊಸ ಚಿಂತನೆಯನ್ನ ಕನಕದಾಸರು ಕಟ್ಟುವಂತಾದ್ದು. ಈ ಹಿಂದೂ ಅನ್ನುವ ಪರಿಕಲ್ಪನೆ ಬರೋದಕ್ಕಿನ್ನ ತೀರ ಹಿಂದಕ್ಹೋದ್ರೆ ವೈಷ್ಣವ ಮತ್ತು ಶೈವರಲ್ಲೇನೇ ಬಹಳ ದೊಡ್ಡ ರಕ್ತಪಾತದ ಚರಿತ್ರೆ ಇರುವಂತಹ ಸ್ಥಿತಿಯನ್ನು ಕೂಡ ನಾವು ಕಾಣ್ತ ಹೋಗ್ಬಹುದು. ಇದನ್ನ ಇಟ್ಕೊಂಡ್ ನಾವಿವತ್ತು ಹಿಂದೂವಾದ ಅನ್ನುವಂತಾದ್ದು ಯಾವ ಮಟ್ಟಕ್ಕೆ ಹೋಗಿದೆ? ಹಿಂದೂ–ಮುಸ್ಲಿಂ ಅನ್ನುವಂಥದ್ದು, ಹಿಂದೂ–ಕ್ರೈಸ್ತ ಅನ್ನುವಂಥದ್ದು ಈ ರೀತಿ ಬೇರೆ ಸ್ವರೂಪವನ್ನ ತಾಳುತ್ತ ಹಿಂಸಾತ್ಮಕ ಸ್ಥಿತಿಗೆ ಹೋಗುವಂತ ಕಾಲಘಟ್ಟದಲ್ಲಿ ನಾವು ಇದನ್ನ ಹೇಗೆ ಮರು ರೂಪಿಸಿಕೊಳ್ಳೋದು? ಶಿವ ಮತ್ತು ವಿಷ್ಣುವನ್ನ ಸಮೀಕರಿಸಿ ಹೊಸ ಒಂದು ಸೌಹಾರ್ದತೆಯ ಸಮಾಜವನ್ನ ಕಟ್ಟಲು ಪ್ರಯತ್ನಿಸುವ ಕನಕನನ್ನ ನಾವು ಹೇಗೆ ಒಂದು ಕೋಮುವಾದದ ವಿರುದ್ಧದ ಚಿಂತನೆಗೆ ಮರುರೂಪಿಸಬಹುದು ಅನ್ನುವಂಥದ್ದು ಕೂಡ ನನಗೆ ಇನ್ನೊಂದು ಮುಖ್ಯ ಅನಿಸುವಂಥ ಅನಿಸಿಕೆ. ಮೂರ್ನೆದಾಗಿ ಕ್ರಾಂತಿಕಾರಿ ಸಂತ ಕವಿ ಅಂತ ಉಗ್ರನರಸಿಂಹಯ್ಯನವರಂದ್ರು ಅದು ನಿಜವಾಗ್ಲೂ ಒಳ್ಳೆ ಪದ. ಯಾಕಂದ್ರೆ ಆಧ್ಯಾತ್ಮಿಕ ಹಿನ್ನೆಲೆಯ ಚಿಂತನೆಯ ಕಾರಣಕ್ಕಾಗಿ ಅದರಲ್ಲೂ ಕನಕದಾಸರ ಆಧ್ಯಾತ್ಮಿಕ ಚಿಂತನೆಯ ಕಾರಣಕ್ಕಾಗಿನೇ ದಾಸ ಸಾಹಿತ್ಯ ಒಂದು ವೈಶಾಲ್ಯತೆಗೆ ಹೋಗಲಿಕ್ಕೆ ಸಾಧ್ಯ ಆದಂಥದ್ದು. ಅದಕ್ಕೊಂದು ಮಾನವೀಯತೆಯ ಚೌಕಟ್ಟು ಮತ್ತೆ ಅದು ಒಂದು ಕೆಲವೇ ಸೀಮಿತ ಚೌಕಟ್ಟನ್ನ ಮೀರಿ ಅದಕ್ಕೊಂದು ವೈಶಾಲ್ಯ ಪ್ರಜ್ಞೆ ಮೂಡಿದಂಥದ್ದೇ ಕನಕದಾಸರ ಪ್ರವೇಶದ ಮೂಲಕ ಅವರ ಕೀರ್ತನೆಗಳ ಮೂಲಕ ಅದಕ್ಕೊಂದು ಮಾನವೀಯತೆಯ ಚೌಕಟ್ಟು ಸಿಗಲಿಕ್ಕೆ ಸಾಧ್ಯ. ಅದರೊಟ್ಟಿಗಿವತ್ತು ಜಾತಿ ಪದ್ಧತಿ, ಅಸ್ಪೃಶ್ಯತೆ ಅನ್ನುವಂಥದ್ದು ಕೂಡ ವ್ಯಾಪಕಗೊಳ್ತಾಯಿದೆ. ಜಾತಿ ಧೃವೀಕರಣ ಅನ್ನುವಂಥದ್ದು. ಪ್ರಬಲ ಜಾತಿಗಳೇನೆ ಮತ್ತೆ ಧೃವೀಕರಣಗೊಂಡು ರಾಜಕೀಯ ಪ್ರಾಬಲ್ಯವನ್ನು ಕೂಡ ಪಡ್ಕೊಳ್ತಾ ಇರುವಂತ ಸಂದರ್ಭದಲ್ಲಿ ತಳ ಸಮುದಾಯಗಳನ್ನ ತಮ್ಮೊಟ್ಟಿಗೆ ತೆಗೆದುಕೊಳ್ಳುವ ಅವನ್ನು ಕೂಡ ಒಟ್ಟೊಟ್ಟಿಗೆ ಕರೆದುಕೊಂಡು ಹೋಗುವಂತಹ ಒಂದು ಬಗೆಯ ತಾಳ್ಮೆ ಮತ್ತು ಆ ಬಗೆಯ ಒಂದು ವೈಶಾಲ್ಯತೆಯನ್ನು ಕೂಡ ಕನಕದಾಸರೊಟ್ಟಿಗೇನೆ ನಾವು ರೂಪಿಸ್ಬೇಕಾಗುತ್ತೆ. ಇಲ್ಲಾಂದ್ರೆ ಕೇವಲ ಜಾತಿ ಕೇಂದ್ರಿತವಾಗಿ ಮತ್ತೆ ಕನಕದಾಸರನ್ನ ಕಟ್ಟುವಂಥದ್ದು. ಮತ್ತೆ ಬಸವಣ್ಣನ್ನ ಇನ್ಯಾವ್ದೋ ಒಂದು ಜಾತಿಗೆ ಕಟ್ಟುವಂಥದ್ದು, ಇನ್ನೊಂದು ಈಗ ನೋಡಿ ದಲಿತರೊಳಗಡೆನೂ ಕೂಡ ಚಲವಾದಿ ಸಂಘಟನೆ ಬರೋದರ ಮೂಲ್ಕ ಅಂಬೇಡ್ಕರ್‌ರನ್ನ ದಲಿತ ಸಮುದಾಯದ ಒಂದು ಬಿಡುಗಡೆಯ ಸಂಕೇತವಾಗಿ ನೋಡುವುದರ ಬದಲು ಒಂದೆಡೆ ಜಾತಿ ಕೇಂದ್ರಿತವಾಗಿ ನೋಡುವ ಸ್ಥಿತಿ ಕೂಡ ನಾವು ಕಾಣ್ತೇವೆ. ಈ ಸ್ಥಿತಿಗಳನ್ನ ತಪ್ಪಿಸೋ ಅಂಥದ್ದು ಹೇಗೆ ಅನ್ನುವಂತಹ ಪ್ರಶ್ನೆಗಳನ್ನ ನಾವು ನೋಡ್ಬೇಕಾಗಿದೆ. ಅಸ್ಪೃಶ್ಯತೆಯ ಹಿನ್ನೆಲೆಯಲ್ಲಿ ನನಗೆ ಇತ್ತೀಚೆಗೆ ಒಂದು ಬಹಳ ದೊಡ್ಡ ಕಾರಣ ಅಂತ ನಿದ್ದೆಗೆಡಿಸಿದಂತ ಪ್ರಕರಣ ಅಂತ ಹೇಳಿ ನಾನು ನನ್ನ ಮಾತನ್ನ ಮುಗಿಸ್ತೇನೆ. ನಮ್ಮ ಸ್ನೇಹಿತರೊಬ್ರು ಬಾಡಿಗೆ ಮನೆಯನ್ನ ಹುಡುಕಲಿಕ್ಕೆ ಹೋದಾಗ ತುಂಬ ಓದಿದಂತಹ ವಿದ್ವಾಂಸರೇನೇ ಮಾಂಸಹಾರಿಯಾದವರಿಗೆ ಬಾಡಿಗೆ ಮನೆ ಕೊಡಲ್ಲ ಅಂತ ಮೈಸೂರಿನಲ್ಲೇ ಹೇಳಿದಂಥ ಪ್ರಕರಣ ನನ್ನ ನಿದ್ದೆಗೆಡಿಸ್ತು. ಅಂದ್ರೆ ಓದು ಅನ್ನುವಂಥದ್ದು, ಶಿಕ್ಷಣ ಅನ್ನುವಂಥದ್ದು ನಮ್ಮ ಜಾತಿ ಪ್ರಜ್ಞೆಯನ್ನ, ನನ್ನೊಳಗಡೆ ಇರುವಂತಹ ಅಮಾನವೀಯತೆಯನ್ನ, ಅಸ್ಪೃಶ್ಯತೆಯನ್ನ ಓಡಿಸ್ಲಿಲ್ಲ ಅಂದ್ರೆ ಅದಕ್ಕೆ ಯಾವ ಪರಿಹಾರವನ್ನು ನಾವು ಕನಕರ ಮೂಲಕ ಕಂಡುಕೊಳ್ಳಿಕ್ಕೆ ಸಾಧ್ಯ ಅನ್ನುವಂತಾದ್ದು. ಇದು ನನಗನ್ನಿಸಿದ್ದು.

## ಕನಕ ಕೃತಿ–ಸಂಸ್ಕೃತಿ

## ಪ್ರೊ. ಕೃಷ್ಣಮೂರ್ತಿ ಹನೂರು

ಬಂಜಗೆರೆಯವರು ಹೇಳ್ತಾ ವಿಜಯನಗರ ಕಾಲದಲ್ಲಿ ಅನೇಕ ಈ ತರದ ಶೂದ್ರ ಸಮುದಾಯಗಳನ್ನ ಅವರು ಹಿಡಿದಿರಿಸ್ಕೊಳ್ಬೇಕಾದ ಅನಿವಾರ್ಯತೆ ಇತ್ತು ಅಂತ ಅನ್ನುವಾಗ ಮತ್ತು ಅವ್ರು ಮಾತನಾಡುವಾಗ ಉದ್ದಕ್ಕೂ ನನಗೆ ಬೇರೆ ಬೇರೆ ಸಂಗತಿಗಳೆಲ್ಲವೂ ನೆನಪಿಗೆ ಬರ್ತಾ ಇದ್ವು. ಒಂದು ಬಕೈರನ್ನ ನಾನು 30–35 ವರ್ಷಗಳ ಹಿಂದೆ ಚಿತ್ರದುರ್ಗದಲ್ಲಿ ನೋಡಿದ್ದೆ. ಆ ಬಕೈರ್‌ನಲ್ಲಿ ಏನಿತ್ತು ಅಂತ ಅಂದ್ರೆ ವಿಜಯನಗರದ ಪ್ರಮುಖವಾದ ಒಬ್ಬ ದೊರೆ ಕೇವಲ ಒಂದು 200–300 ಜನ ಇದ್ದಂಥ ಮ್ಯಾಸಬೇಡರ ಒಂದು ಗುಂಪನ್ನ, ದನ ಮೇಯಿಸುವ ಮ್ಯಾಸ ಬೇಡರ ಒಂದು ಗುಂಪನ್ನ ತನ್ನ ಕಡೆಗೆ ಮಾಡಿಕೊಳ್ಬೇಕು ಅಂತ ಅಡವಿಯಲ್ಲಿ ವಾಸಮಾಡ್ಕೊಂಡು, ದನ ಮೇಯಿಸ್ಕೊಂಡು ಇದ್ದಂಥ ಒಂದು ಗುಂಪನ್ನ ತನ್ನ ಕಡೆಗೆ, ಬೇಕಾದಾಗ ಬಂದು ನನಗೆ ಸಹಾಯ ಮಾಡಿ ಅಂತ ಕೇಳ್ಕೊಳ್ಬೇಕು ಅಂದ್ಕೋತಾನೆ. ವಿಜಯನಗರದ ರಾಜನ ಹೆಸರು ಅಲ್ಲಿ ಪ್ರಸ್ತಾಪ ಇರ್ಲಿಲ್ಲ. ಆದ್ರೆ ಆ ಬುಡಕಟ್ಟಿನ ಗುಂಪಿನ ಹೆಸರು ಮಾತ್ರ ಪ್ರಸ್ತಾಪ ಇತ್ತು. ಆತ ಏನೆಲ್ಲಾ ಉಪಾಯಗಳನ್ನ ಮಾಡ್ತಾನೆ ಅವರನ್ನ ವಶಪಡಿಸಿಕೊಳ್ಳೋದಕ್ಕೆ ಅಂತ ಬಹಳ ಚೆನ್ನಾಗಿ ಆ ಬಕೈರ್‌ನಲ್ಲಿ ವಿವರಿಸಲಾಗಿತ್ತು. ಅವರು ಹೇಳಿದ್ದಕ್ಕೆ ದಾಖಲೆ ಏನು? ಶೂದ್ರ ಸಮುದಾಯಗಳನ್ನ ಒಳಗೊಂಡು ಬದುಕುವ ಈ ಅರಸೊತ್ತಿಗೆಗಳು ಮೊದಲು ತನ್ನ ಅನುಯಾಯಿಗಳನ್ನ ಕಳಿಸ್ತಾನೆ ರಾಜ. ಆಮೇಲೆ ಒಪ್ಪಲ್ಲ ಅವ್ರು. ಆಮೇಲೆ ಹೆಂಗಸರನ್ನ ಕಳ್ಸಿ ವಶಪಡಿಸಿಕೊಳ್ಳೋದಕ್ಕೆ ಪ್ರಯತ್ನ ಮಾಡ್ತಾನೆ. ಅದಕ್ಕೂ ಒಪ್ಪಲ್ಲ ಆ ಮ್ಯಾಸಬೇಡರ ಗುಂಪು. ತಿರುಗಿ ಹೀಗೇ ಪ್ರಯತ್ನ ಮಾಡ್ತಾ ಅವರ್‍ನ ಸ್ವಲ್ಪ ಸಮಯದಲ್ಲೇ ವಶಪಡಿಸ್ಕೋಬಿಡಬಹುದಾಗಿತ್ತು, ಅಂದ್ರೆ ಬಗ್ಗುಬಡಿದು ಅಧಿಕಾರವನ್ನ ಬಳಸಿ, ವಶಪಡಿಸ್ಕೊಬಿಡಬಹುದಾಗಿತ್ತು. ಆದ್ರೆ ಹಾಗೆ ಮಾಡಿಲ್ಲ–ಅವನು ತುಂಬ ನಯವಾದ ರೀತಿಯಲ್ಲಿ ಒಳಗು ಮಾಡಿಕೊಳ್ಳುವುದಕ್ಕೆ ನೋಡ್ದ ಅಂತ್ಲೇ ಆ ಬಕೈರ್ ವಿವರಿಸುತ್ತೆ. ಆಮೇಲೆ ಒಬ್ಬ ಸಂತನನ್ನ ಕಳಿಸಿ, ಅವರನ್ನ ಸಮಾಧಾನ ಮಾಡಿ, ಅವರನ್ನ ಬೇರೆ ಬೇರೆ ರೀತಿಯಲ್ಲಿ ಒಲಿಸಿ ವಶಪಡಿಸಿಕೊಂಡ ಅಂತ ಅನ್ನುವ ವಿವರ ಇದೆ. ಅದೇ ಸಂದರ್ಭದಲ್ಲಿ ನಾವು ಇದು ಬಹುಶಃ 16ನೇ ಶತಮಾನದ ಬಕೈರಿರಬಹುದು. ಅದೇ ಸಂದರ್ಭದಲ್ಲಿ ನಾನು ಇನ್ನೊಂದು ಪುಸ್ತಕವನ್ನು ಓದಿದೆ ಅದು ಪರಮನ್ಯೆ ಕಳ್ಳರ್. ಅದು ತಮಿಳುನಾಡಿನ ಒಂದು ಬುಡಕಟ್ಟಿಗೆ ಸಂಬಂಧಪಟ್ಟಂತ ಪುಸ್ತಕ ಅದು. ಅವರು ಕಳ್ಳರು. ಸಣ್ಣ ಪುಟ್ಟ ಕಳ್ರು ಅವ್ರು. ದರೋಡೆಕೋರರೇನಲ್ಲ. ಸಣ್ಣ ಸಣ್ಣ ಪರಮರೈ ಕಳ್ರು. ಅವರ ವೃತ್ತಿ ಅದು. ಎಲ್ಲಾದ್ರೂ ಯುದ್ಧ ಆದ್ರೆ ಅಲ್ಲಿಗೆ ಹೋಗಿ ಅವರ ಅಳಿದುಳಿದದ್ದೇನಾದ್ರೂ ಇದ್ರೆ ಕಿತ್ಕೊಂಡ್ಬರೋ ಅಂಥ ಒಂದು ಸಣ್ಣ ಗುಂಪು. ಪರಮರೈ ಕಳ್ಳರ್ ದೊಡ್ಡ ಪುಸ್ತಕ ಅದು. ಒಬ್ಬ ಪಾಶ್ಚಾತ್ಯ ಲೇಖಕ ಬರ್ದಿದ್ದಂತಹ ಪುಸ್ತಕ ಅದು. ಡ್ಯೂಮಾಂಡ್ ಅಂತ. ಏನಿತ್ತು ಅಂತ ಅಂದ್ರೆ ಒಬ್ಬ ರಾಜ ಏನು ಯೋಚ್ನೆ ಮಾಡ್ತಾನೆ ಅಂತ ಅಂದ್ರೆ ತನ್ನ ಸೈನ್ಯದಲ್ಲಿ ಸೈನಿಕರ ಸಂಖ್ಯೆ ಕಡಿಮೆಯಾದುದ್ದರಿಂದ ಯಾಕೆ ಈ ಪರಮರೈ ಕಳ್ಳರ್‍ನ ಉಪಯೋಗಿಸ್ಕೊಬಾರ್‍ದು ಅಂತ ಹೇಳಿ ಅವರನ್ನ ಉಪಾಯ ಮಾಡಿ ಕರ್‍ಸಿ ಮೊದ್ಲು ಮೆಲ್ಲಗವರ್‍ನ ದೇವಸ್ಥಾನ ಕಟ್ಟಕೆ ಹಾಕ್ತಾನೆ. ಯಾವಾಗ ಅವರಿಗೆ ದೇವರು, ದಿಂಡಿರು ಅಂತ ಶುರುವಾಗ್ಬಿಡುತ್ತೋ ಗೊತ್ತಿಲ್ದೇ ಇರೋದು ಮತ್ತು ದೇವ್ರು ಅನ್ನೋದು ಒಂದು ಮನಸ್ಸಿಗೆ ಬಂದುಬಿಡುತ್ತೋ ಮೆಲ್ಲಗೆ ಅವರಲ್ಲಿ ಆ ರಾಜನ ಬಗ್ಗೆ ಗೌರವ ಬಂದು, ಆ ಕಳ್ಳರೆಲ್ಲರೂ ಕೂಡ ಭಕ್ತರಾಗಿ ಪರಿವರ್ತನೆಯಾಗುವ ಒಂದು ದಾಖಲೆಯಿದೆ. ಡ್ಯೂಮಾಂಡ್ ಅಂತ ಪಾಶ್ಚಾತ್ಯ ಲೇಖಕ ಬರೆದ ಪರಮರೈ ಕಳ್ಳರ್ ಅನ್ನುವ ಪುಸ್ತಕ ಅದು.

ಬಂಜಗೆರೆಯವರು ಹೇಳುವಾಗ ನನಗೆ ಇವೆಲ್ಲವೂ ಕೂಡ ಮನಸ್ಗೆ ಬರ್ತಾ ಇತ್ತು. ಅಂದ್ರೆ ಹೇಗೆ ಈ 15ನೇ ಶತಮಾನದಲ್ಲಿ ತಮ್ಮ ಸೈನ್ಯದಲ್ಲಿ ಜನಸಂಖ್ಯೆ ಕಡಿಮೆಯಾದಾಗ ಇವರ್‍ನ ವಶಪಡಿಸಿಕೊಳ್ಳುವ ಕ್ರಮಗಳನ್ನೆಲ್ಲಾ ಅನುಸರಿಸ್ತಾ ಇದ್ರು ರಾಜರು ಅನ್ನುವಂತದ್ದು. ಇಂಥ ಗುಂಪಿನಲ್ಲಿ ಇದ್ದಕ್ಕಿದ್ದ ಹಾಗೆ ಒಬ್ಬರು ಇಬ್ಬರು ಬೇರೆ ಕಡೆಗೆ ಹೊರಳಿ, ಸಂತರಾದಂತ ದಾಖಲೆಗಳು ಇವೆ. ಪದ್ಧತಿಯ ಮೂಲಕ ಸೈನ್ಯಕ್ಕೆ ಜನಗಳನ್ನ ಪಡೀತಾ ಇದ್ದುದು, ತಳವರ್ಗದ ಹೆಣ್ಣು ಮಕ್ಕಳು ಮತ್ತು ಇನ್ನೂ ಬೇರೆಯ ವರಿಷ್ಠ ಗುಂಪಿನ ಗಂಡುಗಳು. ತಳವರ್ಗದ ಹೆಣ್ಣು ಮಕ್ಕಳು–ವರಿಷ್ಠ ಗುಂಪಿನ ಯಾರಾದ್ರೂ ಸರಿ, ಇಚ್ಛಿಸಿದ ಸಂದರ್ಭದಲ್ಲಿ ಸೇರಿ ಮಕ್ಕಳನ್ನ ಪಡೀತಕ್ಕಂಥದ್ದು. ಅವರು ಕುಲರಹಿತ ಮಕ್ಕಳು. ಮುಂದಿನ ವರ್ಷ ಬೇಕಾದ್ರೆ ಬಂದು ಆ ದೇವಸ್ಥಾನದಲ್ಲಿ ಕುಲ ಕೊಡ್ಸ್ಕೋಬಹುದು. ಪರಿಚಾರಿಕೆಗೆ ಬಳಕೆಯಾಗ್ತಾ ಇದ್ರು ಅವ್ರು. ಇದು ವ್ಯಾಪಕವಾಗಿ ನಡೆದಿದೆ. ಜನಪದದಲ್ಲಿ ಇತ್ತಿದು. ಮಹಾಭಾರತದಲ್ಲೂ ಪ್ರಸ್ತಾಪ ಇದೆ ಮತ್ತು ಬೇರೆ ಬೇರೆ ಕೆಲವು ಗ್ರಂಥಗಳಲ್ಲೂ ಇದರ ಪ್ರಸ್ತಾಪ ಇದೆ. ಆದ್ರೆ ಹೆಚ್ಚು ಅಧ್ಯಯನಕ್ಕೆ ಒಳಪಡದಂತಹ ವಿಚಾರ ಇದು, ಈ ನಿಯೋಗ ಪದ್ಧತಿ. ಇಂಥ ಸಂದರ್ಭದಲ್ಲಿಯೂ ಕೂಡ ಕೆಲವರು ಬೇರೆ ಕಡೆಗೆ ಹೊರಳಿ ಮಹಾ ದೊಡ್ಡ ಸಂತರಾದುದೂ ಉಂಟು. ಬೇರೆ ಕಡೆಗೆ ಹೊರಳಿ ಮತ್ತು ಅವರು ಅಲ್ಪಸ್ವಲ್ಪ ವಿದ್ಯೆಯನ್ನು ಗಳಿಸಿ ಮತ್ತು ಅದೇ ಮಾರ್ಗದಲ್ಲಿ ಕ್ರಮಿಸಿ ಬಹುದೊಡ್ಡ ಸಂತರಾದಂಥ ಸಂದರ್ಭಗಳೂ ಕೂಡ ಉಂಟು. ಇದು ಕಾಡಿದ್ದೂ ಕೂಡ ಉಂಟು. ಈ ಕುಲ ಸಮಸ್ಯೆ ಸಂತರನ್ನ ಕಾಡಿದ್ದೂ ಕೂಡ ಉಂಟು. ಬಹುಶಃ ಬಸವಣ್ಣನವರ ಹಿನ್ನೆಲೆ ಮುನ್ನೆಲೆಯಲ್ಲಿಯೂ ಕೂಡ ಈ ತರದ ಒಂದು ಸಮಸ್ಯೆ ಏರ್ಪಟ್ಟಂತೆ ಕಾಣುತ್ತೆ. ಅಕ್ಕ ನಾಗಮ್ಮನ ವಿಚಾರದಲ್ಲೋ, ಚನ್ನಬಸವಣ್ಣನ ವಿಚಾರದಲ್ಲೋ ಇದು ಕಾಡಿರ್ಬೇಕು ಅಂತ ಕಾಣುತ್ತೆ. ಅದಕ್ಕೆ ಜನಿವಾರ ಕಿತ್ತಾಕಿದಂಥ ಪ್ರತಿಭಟನೆಯನ್ನ ಆತ ಮಾಡಿರ್ಬೇಕು. ಸರ್ವಜ್ಞನ ವಿಚಾರದಲ್ಲೂ ಇದು ಕಾಡಿರ್ಬೇಕು. ಮಲೆಯ ಮಾದೇಶ್ವರನ ವಿಚಾರದಲ್ಲೂ ಈ ತರದ ಸಂಗತಿಗಳು ಇದ್ದಿರಬಹುದು. ಹಾಗಾಗಿ ಹುಟ್ಟನ್ನ ಹ್ಯಾಗೆ ಸೃಷ್ಟಿಸ್ತಾರೆ ನಮ್ಮ ಜನಪದರು. ಬೆನ್ನಿನಿಂದ ಹುಟ್ಬುಟ್ಟ ಅಂತ ಬೇರೆ ರೀತಿನಲ್ಲಿ ಅವರು ಹೇಳ್ತಾ ಹೋಗ್ತಾರೆ. ಇದು ಬಂಜಗೆರೆಯವರು ಹೇಳ್ತಾ ಇದ್ದಾಗ ನನ್ನಲ್ಲಿ ಬಂದಂಥ ವಿಚಾರ. ಕುಲಸಮಸ್ಯೆ ನಮ್ಮ ಕನ್ನಡದಲ್ಲಿ ಅನೇಕ ಹಿರಿಯರನ್ನ ಕಾಡ್ತದೆ.

ಪಂಪನಿಂದ ಹಿಡಿದು ಬಸವಣ್ಣನಿಂದ ಮುಂದುವರಿದು ಈತರ ಉದ್ದುಕ್ಕೂ ಮಹದೇಶ್ವರನವರೆಗೂ ಆ ಕುಲ ಸಮಸ್ಯೆ, ಜಾತಿ, ಧರ್ಮ ಅಲ್ಲ ಕುಲ ಸಮಸ್ಯೆ ಕಾಡಿರೋ ಅಂಥದ್ದು.

ಇದೇನೇ ಇರ್ಲಿ ವಚನಕಾರರು ಮತ್ತು ಕೀರ್ತನಕಾರರು ಈ ಸಮೂಹ ಇದ್ಯಲ್ಲ ಮಹಾ ಪ್ರಾಮಾಣಿಕರ ಸಮೂಹ. ಬದುಕಿನಲ್ಲಿಯೂ ಕೂಡ ತಾವು ನಡೆದುಕೊಂಡ ರೀತಿ ಹಾಗೂ ಹಾಡಿದ ರೀತಿ ಮಹಾ ಪ್ರಮಾಣಿಕವಾದದ್ದಿದು. ಇವರನ್ನ ಕುರಿತು ನಮಗೆ ಅರ್ಥ ಮಾಡಿಕೊಳ್ಳೋಕೆ ಎಷ್ಟರಮಟ್ಟಿಗೆ ಸಾಧ್ಯವಾಗುತ್ತೋ ಇಲ್ವೋ ಅಂತ ಅನ್ನುವ ಮಾತು. ಐನ್‌ಸ್ಟೀನ್ ಒಂದು ಮಾತನ್ನ ಹೇಳಿದಾನೆ ನನ್ನ ಯಶಸ್ಸು ಅಂತಕ್ಕಂಥಾದ್ದು ಇದ್ಯಲ್ಲ ಅದು ನನ್ನ ಶ್ರಮವನ್ನ ಮತ್ತು ಸಾಧನೆಯನ್ನ ಅನುಸರಿಸಿದ್ದಲ್ಲ, ಅದರ ಫಲ ಅಲ್ಲ ಅದು. ನನ್ನ ಶ್ರಮ ಮತ್ತು ಯಶಸ್ಸು ನನ್ನ ಸಾಧನೆಯ ಫಲ ಅಲ್ಲ. ನನ್ನ ಪ್ರಮಾಣಿಕತೆಯ ಫಲ ಅಂತ ಹೇಳ್ತಾರೆ. ಐನ್‌ಸ್ಟೀನ್ ವಿಜ್ಞಾನಿ ಇರ್ಬಹುದು. ಅವನನ್ನೂ ಕೂಡ ನಾವು ಸಂತ ಅಂತ ಕರೀಬಹುದಾದ್ರೆ ಈ ಸಂತನ ಮಾತು ನಮ್ಮ ವಚನಕಾರರಿಗೂ ಮತ್ತು ಕೀರ್ತನಕಾರರಿಗೂ ಬಹಳವಾಗಿ ಅನ್ವಯಿಸುತ್ತೆ. ಮಹಾ ಪ್ರಮಾಣಿಕವಾದುದು. ಎಲ್ಲವನ್ನೂ ಕಳೆದುಕೊಳ್ಳುವುದು ಮತ್ತು ಗಳಿಸುವುದು ಈ ಆಶಯ ಈ ಎರಡೂ ಗುಂಪಿನ ನಡುವೆ ಬಹಳ ಕೆಲ್ಸ ಮಾಡಿದೆ ಅಂತ ಅನ್ಸುತ್ತೆ.

ಎಲ್ಲವನ್ನೂ ಕಳೆದುಕೊಳ್ಳುವುದು ಮತ್ತು ಗಳಿಸುತ್ತಾ ಹೋಗುವುದು ಅದನ್ನೇ ಬೇರೆ ರೀತಿನಲ್ಲಿ ಯಾವಾಗ ದಾಸನಾಗಿದ್ದ? ಯಾವಾಗ ಪ್ರಭುವಾಗಿದ್ದ ಅನ್ನೋದನ್ನ ಬಂಜಗೆರೆ ಯವರು ಹೇಳಿದ್ರು. ಆದ್ರೆ ಈ ಆಶಯ ಕನ್ನಡ ಸಾಹಿತ್ಯದಲ್ಲಿ ಬಹಳ ವ್ಯಾಪಕವಾಗಿದೆ. ಪಂಪನಂಥವರೂ ಕೂಡ ಸಾಮ್ರಾಜ್ಯವನ್ನ ತಿರಸ್ಕರಿಸಿ ಮಾತ್ನಾಡ್ತಿದ್ರು. ಒಬ್ಬ ತುಂಡರಸನಾಗಿದ್ದ ಕನಕದಾಸ ಅನ್ನೋದಾದ್ರೆ ಇದು ಅನೇಕರ ಜೀವನದಲ್ಲಿ ಘಟಿಸಿದೆ. ಬಸವಣ್ಣನವರೂ ಕೂಡ ಮಂತ್ರಿ ಪದವಿಯನ್ನ ಬಿಟ್ಬಂದ್ರು. ಅಕ್ಕಮಹಾದೇವಿಯೂ ಕೂಡ ಒಂದು ಸಣ್ಣ ತುಂಡರಸನನ್ನ ಬಿಟ್ಟು ಬಂದ್ಲು. ಇವನೂ ಕೂಡ ಒಬ್ಬ ದೊಡ್ಡ ಶ್ರೀಮಂತ ನಾಗಿದ್ದ ಪುರಂದರದಾಸ, ಅದನ್ಬಿಟ್ಟ. ಕನಕದಾಸರೂ ಕೂಡ ತುಂಡರಸನಾಗಿದ್ದು ಅದನ್ಬಿಟ್ಟು ಬಂದ. ಇವರೆಲ್ಲರೂ ಕೂಡ ಈ ಸಾಮ್ರಾಜ್ಯದ ಬಗ್ಗೆ ಒಂದು ಹೇಸಿಗೆಯ ಮಾತನ್ನ ಆಡೇ ಆಡಿದ್ದಾರೆ. ಪಂಪ ದಂಡನಾಯಕನಾಗಿದ್ದೂ ಕೂಡ, ಅರಿಕೇಸರಿಗೆ ಅಷ್ಟು ಹತ್ತಿರವಾಗಿದ್ದೂ ಕೂಡ, ಯಾವುದೋ ಹಂತದಲ್ಲಿ ಅವನು 'ಹೇಯಂ ಸಾಮ್ರಾಜ್ಯಂ' ಅಂತಲೇ ಮಾತಾಡ್ತಾನೆ. 'ಹೇಯಂ ಸಾಮ್ರಾಜ್ಯಂ ಉಪಾಲಯಂ ಪ್ರಾರಜ್ಯಂ' ಅಂತ. ಈ ಸಾಮ್ರಾಜ್ಯ ಅಂತಕ್ಕಂತಾದ್ದು ಬಹಳ ಹೇಸಿಗೆಯನ್ನ ಉಂಟು ಮಾಡ್ತಕ್ಕಂತಾದ್ದಿದು. ನಿಷ್ಪ್ರಯೋಜಕವಾದದ್ದಿದು. ಉಪಾಲಯ ಮಾಡಿಕೊಳ್ಳಬೇಕಾದ್ದು ಇಲ್ಲಿ ಯಾವುದು ಅಂತ ಅಂದ್ರೆ ಪರಿವ್ರಾಜಕತ್ವ ಅಂದರೆ ಅಧ್ಯಾತ್ಮ ಅನ್ನುವ ಮಾತನ್ನ ಪಂಪನೂ ಕೂಡ ಆಡ್ತಾನೆ. ಹಾಗೆ ನೋಡಿದ್ರೆ ಪಂಪ ಬಹಳ ದೊಡ್ಡ ಆಧ್ಯಾತ್ಮಿಯಾಗಿ ಕಾಣ್ತಾನೆ. ದಂಡನಾಯಕನಾಗಿದ್ದೂ ಕೂಡ ಅದರ ವಿರುದ್ಧವಾದ ಮಾತುಗಳನ್ನೇ ಉದ್ದಕ್ಕೂ ಆಡ್ತಾನೆ. ಬಹುಶಃ ಅದು ಕನಕನಿಗೂ ಕೂಡ ಅನ್ವಯಿಸುತ್ತೆ. ಯುದ್ಧವೆಂಬುದು 'ಗೆಲ್ಲಮಿಲ್ಲ ಸೋಲಮಿಲ್ಲ' ಅಂತ ಮಾತಾಡ್ತಾನೆ. 'ರಣಂ ಸಕಲ ಜನ ಸಂಹರಣ ಕಾರಣಂ' ಅಂತ ಮಾತಾಡ್ತಾನೆ. ಈ ಆಶಯ ಉದ್ದಕ್ಕೂ ಇದೆ. ರನ್ನನಂತಹವನೂ ಕೂಡ ಗಧಾಯುದ್ಧವನ್ನು ಯಾಕೆ ಬರೆದ ಅಂದ್ರೆ ಇದರ ದುರಂತವನ್ನು ತೋರ್ಸೋದಕ್ಕೇನೇ. 13ನೇ ಆಶ್ವಾಸವನ್ನು ತಕ್ಕೊಂಡು ಅವನು ಸಾಹಸ ಭೀಮ ವಿಜಯ ಅಂತ ಬರ್ದ. ನೀವು ಗಮನಿಸಿ. ಈ 10ನೇ ಶತಮಾನದಲ್ಲಿ ಎಲ್ರೂ ವಿಜಯಗಳನ್ನ ಬರೆದ್ರು. ಪಂಪ 'ವಿಕ್ರಮಾರ್ಜುನ ವಿಜಯ', ರನ್ನ 'ಸಾಹಸ ಭೀಮ ವಿಜಯ'ವನ್ನ ಬರೆದ. ಪೊನ್ನ 'ಭುವನೈಕ ರಾಮಾಭ್ಯುದಯ'ವನ್ನ ಬರೆದ. ಇವೆಲ್ಲವೂ ದುರಂತದ ಕಥೆಗಳು. ಸೋಲಿನ ಕಥೆಗಳು. ಇವೆಲ್ಲವೂ ವಿಜಯದ ಕಥೆಗಳಾದ್ರೆ ಅವು ಅಲ್ಲೇ ಸೋಲಿನ ಕಥೆಗಳನ್ನೂ ದುರಂತದ ಕಥೆಗಳನ್ನೂ ಹೇಳ್ತವೆ. ಇದನ್ನ ಸಂಪೂರ್ಣ ತಳ್ಳಿ ಹಾಕಿದವರು ವಚನಕಾರರು ಮತ್ತು ಕೀರ್ತನಕಾರರು. ಅಂದ್ರೆ ಈ ಪ್ರಭುತ್ವವನ್ನ ವಿರೋಧಿಸ್ತಾ. ಯಾವುದು ನಿಜವಾದ ಪ್ರಭುತ್ವ? ಕಳೆದುಕೊಳ್ಳುವುದು ಮತ್ತು ಗಳಿಸುವುದು. ಇಂಥವರನ್ನು ನೋಡಿದ ಕ್ರಮ ಯಾವುದು. ಬಹುಶಃ ಈ ಅರ್ಥದಲ್ಲೇ ಕನಕದಾಸ ಬಹಳ ಕ್ರಮಬದ್ಧವಾಗಿ ತನ್ನ ಜೀವನವನ್ನೇ ಕುರಿತ ಹಾಗೆ ಅವನು ಕೃತಿ ರಚನೆಯನ್ನ ಮಾಡ್ಕೊಂಡ್ಹೋಗಿದಾನೆ ಅಂತ್ಲೂ ಅನ್ಸುತ್ತೆ.

ಅವನ ಮೋಹನ ತರಂಗಿಣಿಯನ್ನ ನೋಡಿ, ಅದರಲ್ಲಿ ಒಂದು ಪ್ರೇಮಕಥೆಯನ್ನ, ಆಮೇಲೆ ನಳ ಚರಿತ್ರೆಯನ್ನ ಬರ್ದಿದಾನೆ. ಅದು ಜಗತ್ತಿನ ಎಲ್ಲ ಲೇಖಕರೂ ಕೂಡ ವಿಧಿಯನ್ನ ಒಪ್ಕೊಂಡಿದಾರೆ. ಅದನ್ನ ಪ್ರತಿನಿಧಿಸುವಂಥ ಒಂದು ನಳಚರಿತ್ರೆಯ ಕೃತಿಯನ್ನ ಬರೀತಾನೆ. ವಿಧಿ ಅನ್ನೋದು ಬಹಳ ಪ್ರಮುಖವಾದುದು ಜೀವನದಲ್ಲಿ. ಯಾವ ರಾಜ ಏನ್ಬೇಕಾದ್ರೂ ಆಗ್ಬಹುದು ಅನ್ನುವ ರೀತಿಯಲ್ಲಿ. ವಿಧಿಯನ್ನ ಕುರಿತಾದ ನಳ ಚರಿತ್ರೆಯನ್ನ ಕಟ್ತಾನೆ. ಆಮೇಲೆ ಅವನು ಹರಿಭಕ್ತಿಸಾರವನ್ನು ಬರೀತಾನೆ. ಆಮೇಲೆ ಈ ಕಾವ್ಯಗಳು ಜನರ ಮನಸ್ಸನ್ನು ಮುಟ್ಟುತ್ತ್ವೋ ಇಲ್ಲವೋ ಅಂತನ್ನುವ ಕಾರಣಕ್ಕಾಗಿ ಕೀರ್ತನೆಗಳನ್ನು ಬರೀತಾನೆ. ಈ ಕೀರ್ತನೆಗಳು, ನನಗನಿಸುತ್ತೆ ವಚನಕಾರರಿಗಿಂತಲೂ ಹೆಚ್ಚು ಪ್ರಚಾರಕ್ಕೆ ಬಂದಿದ್ದು ಕೀರ್ತನೆಗಳು. ಆಮೇಲೆ ಅದಕ್ಕೆ ಕಾರಣ ಇಡೀ ಇಂಡಿಯಾದಲ್ಲೇ ಒಂದು ಭಕ್ತಿಯ ವಾತಾವರಣ ಸೃಷ್ಟಿಯಾಗಿತ್ತು. ಇಡೀ ಇಂಡಿಯಾದಲ್ಲೇ 16ನೇ ಶತಮಾನ ಸೋಲಿನ ಕಾಲ ಮತ್ತು ಗೆಲುವಿನ ಕಾಲ. ಯುದ್ಧದ ವಿಚಾರದಲ್ಲಿ ಅದು ಸೋಲಿನ ಕಾಲವಾಗಿದ್ರೂ ಕೂಡ ಅಧ್ಯಾತ್ಮದ ವಿಚಾರದಲ್ಲಿ ಅದು ಗೆಲುವಿನ ಕಾಲ. ಇಡೀ ಭಾರತ ಈ ಅಧ್ಯಾತ್ಮದ ಹಿನ್ನಲೆಯಲ್ಲಿ ಬೆಳೆದಂತಹುದು. ಹಾಗಾಗಿ ಇಲ್ಲಿ ಕರ್ನಾಟಕದಲ್ಲಿಯೂ ಕೂಡ ವಚನಕಾರರಿಗಿಂತ್ಲೂ ಹೆಚ್ಚು ಪ್ರಚಾರ ಸಿಕ್ಕಿದ್ದು ಕೀರ್ತನಕಾರರಿಗೆ ಅಂತ ಅನ್ಸುತ್ತೆ. ಮತ್ತು ಅವರು ಅದರ ದೀಕ್ಷೆ ತಗೊಂಡು ಇಡೀ ಕರ್ನಾಟಕವನ್ನು ತಿರುಗಿದೋರಾಗಿದ್ದರು.

ವಚನಕಾರರು ಕರ್ನಾಟಕದ ಒಳಗೆಲ್ಲ ತಿರುಗಿದೋರಾಗಿರಲಿಲ್ಲ. ಅಲ್ಲಮಪ್ರಭು ಒಬ್ಬನನ್ನು ಬಿಟ್ಟರೆ ಉಳಿದವರೆಲ್ಲ ಕಲ್ಯಾಣದಲ್ಲಿ ಕೇಂದ್ರೀಕೃತವಾಗಿದ್ದವರು. ಆದರೆ ಈ ದಾಸಪಂಥದವರು ಒಂಟೊಂಟಿಯಾಗಿ ಇಡೀ ಕರ್ನಾಟಕವನ್ನು ತಿರುಗಿದೋರು– ಪುರಂದರದಾಸರಾದಿಯಾಗಿ. ಇದಕ್ಕೆ ಇಲ್ಲೇ ಕೆಲವು ಸಾಕ್ಷಿಗಳೆಲ್ಲ ಇವೆ. ಇಲ್ಲಿ ಶ್ರೀರಂಗಪಟ್ಟಣದಲ್ಲಿ ದೇವರ ಮುಂದೆ ಹಾಡಿದ್ದು ಕನಕದಾಸರು, ಆಮೇಲೆ ಬೇರೆ ಬೇರೆ ಭಾಗಗಳಲ್ಲೆಲ್ಲ, ತಿರುಪತಿಗೆ ಹೋಗಿ ಗೋವಿಂದಶೆಟ್ಟಿ ಅಂತ್ಹೇಳಿ ಅಲ್ಲಿ ಲೇವಡಿ ಮಾಡಿ

ಅಂದ್ರೆ ಭಕ್ತಿ ಮತ್ತು ಲೇವಡಿಯ ಹಿನ್ನೆಲೆಯಲ್ಲಿ ಕೀರ್ತನೆಯನ್ನು ರಚಿಸಿದ್ದು, ಬಿಳಿಗಿರಂಗನ ಬೆಟ್ಟದಲ್ಲೂ ಕೂಡ ಸ್ವಲ್ಪ ಕಾಲ ಕನಕದಾಸರು ಇದ್ದರು ಅನ್ನುವ ಪ್ರತೀತಿಗಳನ್ನು ನಾನು ಕೇಳಿದೀನಿ. ಹೀಗಾಗಿ ಇವರು ಒಬ್ಬೊಬ್ರೆ ಅಂದ್ರೆ ವಚನಕಾರರಿಗಿಂತ ವ್ಯಾಪಕವಾಗಿ, ಅಂದ್ರೆ ಅದಕ್ಕೆ ಪ್ರಾಧಾನ್ಯತೆ ಇದೆಯೋ ಇಲ್ಲವೋ, ಇದಕ್ಕೆ ಪ್ರಾಧಾನ್ಯತೆ ಇದೆಯೋ ಇಲ್ಲವೋ ಈ ನೆಲೆಯಲ್ಲಿ ನಾನು ಮಾತಾಡ್ತಾ ಇಲ್ಲ, ಆದ್ರೆ ಹೆಚ್ಚು ವ್ಯಾಪಕವಾದದ್ದು ಕೀರ್ತನಾ ಲೋಕವೇ ಅಂತ ನನಗೆ ಅನ್ನಿದೆ. ಇವರೆಲ್ಲರೂ ಕೂಡ ತಿರುಗುವರಾಗಿದ್ದರು. ಆದ್ರೆ ದಕ್ಷಿಣ ಕರ್ನಾಟಕದಲ್ಲಿ ಈ ಕೀರ್ತನ ಪರಂಪರೆ ಅಷ್ಟು ವ್ಯಾಪಕವಾಗಿದ್ದ ಹಾಗೆ ಕಾಣ್ಸಲ್ಲ. ಆ ಮೇಲಾಮೇಲೆ ಈ ಮಂಟೇಸ್ವಾಮಿ, ಮಲೆ ಮಾದೇಶ್ವರರ ಶೈವತತ್ವ ಪ್ರಚಾರವಾದ್ದರಿಂದ ಈ ಭಾಗದಲ್ಲಿ ಕೀರ್ತನೆಗಳ ಪ್ರಭಾವ ತುಂಬಾ ಕಡಿಮೆ. ನಾನು ಚಿಕ್ಕವನಾಗಿದ್ದಾಗ ಈ ಭಾಗದಲ್ಲಿ ಅವರಿಬ್ಬರ ಕಾವ್ಯವೇ–ಮಾದೇಶ್ವರ, ಮಂಟೇಸ್ವಾಮಿಗಳ ಕಾವ್ಯವನ್ನು ಅದರ ಭಾಗಗಳ ಜನಪದ ಗೀತೆಗಳನ್ನು ಹಾಡ್ತಾ ಇದ್ದಿದ್ದು ಹೆಚ್ಚಾಗಿತ್ತು. ಆದ್ರೆ ಮಧ್ಯಮಧ್ಯೆ ಎಲ್ಲೋ ಒಬ್ಬೊಬ್ಬರು ಈ ದಾಸ ಪರಂಪರೆಯ ತಂಬೂರಿ ಇಟ್ಕೊಂಡು ಕೀರ್ತನೆಗಳನ್ನು ಹಾಡ್ತಾ ಇದ್ರು. ಆದ್ರೆ ರಾಯಚೂರು ಭಾಗದಲ್ಲಿ ಮತ್ತು ಹೊಸಪೇಟೆ, ವಿಜಯನಗರದ ಭಾಗದಲ್ಲಿ ಅಪಾರವಾದ ರೀತಿಯಲ್ಲಿ ಈಗಲೂ ಕೂಡ ಕೀರ್ತನೆಗಳನ್ನು ಹಾಡುವ ಪರಂಪರೆ ಉಳಿದುಕೊಂಡಿದೆ. ನಾನು ರಾಯಚೂರಿನ ಭಾಗದಲ್ಲಿ ಒಬ್ಬ ಕೀರ್ತನಕಾರರನ್ನು ಭೇಟಿಯಾಗಿದ್ದೆ. ಈಚೆಗೆ ಅಂದ್ರೆ ಹತ್ತಿಪ್ಪತ್ತು ವರ್ಷಗಳ ಹಿಂದೆ. ಅವನು ಇಲ್ಲಿ ಮಂಟೇಸ್ವಾಮಿ ಭಕ್ತರು ಹೇಗಿರ್ತಾರೋ, ಮಲೆ ಮಾದೇಶ್ವರನ ಭಕ್ತರು ದೀಕ್ಷೆ ತಗೊಂಡೋರು ಹೇಗಿರ್ತಾರೋ ಹಾಗೆ ಅಲ್ಲಿ ಅವನು ದೀಕ್ಷೆ ತಗೊಂಡೋನಾಗಿದ್ದ.

ನಾನು ಈ ಪ್ರಾಮಾಣಿಕತೆ ಅಂತ ಈಗ ಹೇಳಿದೆನಲ್ಲ ಇದನ್ನು ಪರಿಪಾಲಿಸೋದು ಎಷ್ಟು ಕಷ್ಟ ಅನ್ನೋದು ಯೋಚನೆ ಮಾಡಿದ್ರೇನೆ ಗೊತ್ತಾಗುತ್ತೆ ಅದು. ಅವನು ದಾಸ ಪರಂಪರೆಯ ದೀಕ್ಷೆಯನ್ನ ತಗೊಂಡೋನಾಗಿದ್ದ. ನೂರಾರು ಕೀರ್ತನೆಗಳನ್ನು ಹಾಡೋನಾಗಿದ್ದ. ಇಲ್ಲಿ ಹೇಗೆ ಮಲೆಮಾದೇಶ್ವರನ ಹಾಡುಗಾರರಾಗಲಿ ಅಥವಾ ಕಂಸಾಳೆಯವರಾಗಲಿ ಇನ್ಯಾರೋ ಹಾಗೆ ಅವನು ಈ ವೈಷ್ಣವ ಪರಂಪರೆಯ ದೀಕ್ಷೆಯನ್ನು ತಗೊಂಡೋನಾಗಿದ್ದ. ಅವನು ಅದೇ ವೇಷದಲ್ಲಿ ಅಂದ್ರೆ ಒಂದು ಕಚ್ಚೆ ಪಂಚೆನ ಹಾಕೊಂಡು ಮೇಲುಡುಗೆ ತುಂಬ ಕಡಿಮೆ ಮತ್ತು ಅಪಾಟಿ ಪೇಟ ಸುತ್ಕೊಂಡು ತಂಬೂರಿ ಹಿಡ್ಕೊಂಡು ಕುಣೀತಾ ಕುಣೀತಾ ಕೀರ್ತನೆಗಳನ್ನ ಹಾಡ್ತಿದ್ದ. ಆತನಿಗೆ ಕನಕದಾಸರ ಕೀರ್ತನೆಯೂ ಬರ್ತಿತ್ತು. ಪುರಂದರದಾಸರ ಕೀರ್ತನೆಯೂ ಬರ್ತಿತ್ತು. ವಾದಿರಾಜರ ಮತ್ತು ಶ್ರೀಪಾದರಾಜರ ಅಸಂಖ್ಯಾತ ಕೀರ್ತನೆಗಳನ್ನ ಹಾಡೋನಾಗಿದ್ದ ಮತ್ತು ಊಂಛ ವೃತ್ತಿ ಆತನ ಕಸುಬಾಗಿತ್ತು. ಇದು ಎಷ್ಟು ಕಷ್ಟದ ಸಂಗತಿ ಅನ್ನೋದನ್ನ ಹೇಳ್ತಾ ಇದ್ದೆ. ದೀಕ್ಷೆ ತಗೊಂಡಾಕ್ಷಣಕ್ಕೆ ಬದುಕಿನ ಪರ್ಯಂತ ಇದೇ ಕೆಲಸವನ್ನ ಮಾಡ್ಕೊಂಡು ವಿಷ್ಣು ಪಾರಮ್ಯವನ್ನ ಹೇಳ್ಕೊಳ್ತಾ ತಿರುಗ್ತೀನಿ ಅನ್ನುವ ಆ ಕಠಿಣ ನಿಯಮ ಇದ್ಯಲ್ಲ ಅದನ್ನ ನೋಡಿದರೆ ಪ್ರಾಮಾಣಿಕತೆಯ ಕಾಠಿಣ್ಯತೆ ಏನು ಅಂತ ಗೊತ್ತಾಗುತ್ತೆ. ಬಹುಶಃ ಇವೆಲ್ಲವೂ ಕೊನೆಯ ಕೊಂಡಿಗಳು ಅಂತ ಅನ್ಸುತ್ತೆ. ಈ ನೀಲಗಾರರಿರಬಹುದು, ಕಂಸಾಳೆಯವರಿರ ಬಹುದು ಅಲ್ಲಿ ಕೀರ್ತನಕಾರರಿಬಹುದು ಇವೆಲ್ಲವೂ ಅಪರೂಪದ ಕೊನೆಯ ಕೊಂಡಿಗಳು ಅಂತ ಅನ್ಸುತ್ತೆ. ಇವರ ಮೂಲ ಪುರುಷರಿದ್ದಾರಲ್ಲ 12ನೇ ಶತಮಾನದ ವಚನಕಾರರ ಪರಂಪರೆಯವರಿರಬಹುದು ಅಥವಾ ಈ ಹೊತ್ತಿನ 16ನೇ ಶತಮಾನದ ಕೀರ್ತನಕಾರಿರ ಬಹುದು. ಇವರ ಈ ಪ್ರಾಮಾಣಿಕತೆ ದೀಕ್ಷೆಯನ್ನ ತಕ್ಕೊಂಡೇ ನಾನು ಹೀಗೆ ಬದುಕ್ಬೇಕು ಅಂತ ಅನ್ನೋದಿದ್ಯಲ್ಲ ಈ ಸಂದರ್ಭದ ತುಂಬ ಕಷ್ಟದ ಸಂಗತಿ. ಈ ಕಾಲಕ್ಕೆ ಈ ಸಂದರ್ಭಕ್ಕೆ ಕಷ್ಟದ ಸಂಗತಿಯೇನೋ ಅನ್ಸುತ್ತೆ.

ಕೀರ್ತನೆಕಾರರು ದೀಕ್ಷೆ ತಕ್ಕೊಂಡ ಕ್ರಮದಲ್ಲಿಯೇ ಇಲ್ಲೂ ಕೂಡ ಮಲೆಮಹದೇಶ್ವರರ ದೀಕ್ಷೆಯನ್ನು ತಕ್ಕೊಂಡು ಹಾಗೆ ಬದುಕಿದ ಅಸಂಖ್ಯಾತ ಗುಡ್ಡರನ್ನ ನಾನು ಕಂಡಿದೀನಿ. ಅಂದ್ರೆ, ಹಾಗೆಯೇ ಇರ್ಬೇಕು ಅಂತ ನಾನು ಹೇಳ್ತಾ ಇಲ್ಲ. ಕಷ್ಟ. ಆದರೆ ಪ್ರಾಮಾಣಿಕತೆಯ ಕಷ್ಟ ಏನು? ಅದನ್ನ ತಕ್ಕೊಂಡಿದ್ದಕ್ಕೆ ಹಾಗ್ಬದ್ಕಿದಾರಲ್ಲ, ಆ ಪಾರಮ್ಯಕ್ಕೆ ಅವರನ್ನ ಅರ್ಪಿಸಿಕೊಂಡು ಇಲ್ಲಿ ಮುಖ್ಯವಾದ ಸಂಗತಿ ಅಂತ ನಾನು ಭಾವಿಸ್ತಾ ಇದೀನಿ. ಇನ್ನು ಇವರನ್ನ ನೋಡಿದ ಬಗೆ ಹೇಗೆ ಅಂತ. ಈ ಕವಿಗಳನ್ನಾಗಲಿ ಈ ವಚನಕಾರರನ್ನಾಗಲಿ ಅಥವಾ ಕೀರ್ತನಕಾರರನ್ನಾಗಲಿ ನಮ್ಮ ಪರಂಪರೆ ನೋಡಿದ ಬಗೆ ಹೇಗೆ? ಸಾಮಾನ್ಯ ಜನ ಅವರನ್ನ ಪವಾಡದ ಹಿನ್ನೆಲೆಯಲ್ಲಿ ನೋಡಿದಾರೆ. ಜೈನಕವಿಗಳನ್ನ ಬಿಟ್ಟರೆ ಪಂಪ, ರನ್ನ, ಪೊನ್ನ, ಜನ್ನ ಇವರನ್ನ ಬಿಟ್ಟರೆ ಉಳಿದಂತೆ ಎಲ್ಲ ಕವಿಗಳನ್ನು ಎಲ್ಲ ವಚನಕಾರರನ್ನೂ, ಕೀರ್ತನಕಾರರನ್ನೂ ಪವಾಡದ ಹಿನ್ನೆಲೆಯಲ್ಲಿ ನೋಡಿದಾರೆ ಇದು ದೈವತ್ವವನ್ನು ಮತ್ತು ಇವರ ಹಿರಿಮೆಯನ್ನು ಅಂದ್ರೆ ಈ ಕೀರ್ತನಕಾರರ, ವಚನಕಾರರ, ಕವಿಗಳ ಹಿರಿಮೆಯನ್ನು ಹೆಚ್ಚಿಸಿರುವ ಬಗೆಯಾಗಿದೆ ಈ ಪವಾಡಗಳು ಇವತ್ತಿಗೂ ಕೂಡ ಈ ಪವಾಡಗಳು ನಮ್ಮ ಹೆಗಲ ಮೇಲೆ ಕುಳಿತು ನಮ್ಮನ್ನ ಅಣಕಿಸ್ತಾ ಇವೆ. ಇವನ್ನ ಎಷ್ಟು ತಳ್ಳಿ ಹಾಕಿದ್ರೂ ಕೂಡ ಇವೇ ಹೆಚ್ಚು ಪ್ರಭಾವವನ್ನ ಹೊಂದಿದಂಥ ಸಂಗತಿಗಳಾಗಿವೆ. ಕನಕದಾಸರ ವಿಚಾರದಲ್ಲೂ ಪವಾಡಗಳಿವೆ. ಪುರಂದರದಾಸರ ವಿಚಾರದಲ್ಲೂ ಪವಾಡಗಳಿವೆ. ಕುಮಾರ ವ್ಯಾಸನ ವಿಚಾರದಲ್ಲೂ ಪವಾಡಗಳಿವೆ. ಆದ್ರೆ ಪಂಪ, ರನ್ನ, ಪೊನ್ನಾದಿಗಳ ವಿಚಾರದಲ್ಲಿ ಪವಾಡಗಳಿಲ್ಲ. ಯಾಕೆ ಅಂದ್ರೆ ಅವರು ಲೌಕಿಕರು. ಅವರನ್ನ ಗಮನಿಸಿಲ್ಲ. ನಮ್ಮ ಓದು ಇಂತಹದನ್ನ ಗಮನಿಸಿಯೂ ಇಲ್ಲ. ವಿಕ್ರಮಾರ್ಜುನ ವಿಜಯದ ಒಂದೂವರೆ ಪ್ರತಿ ಮಾತ್ರ ಸಿಗುತ್ತೆ. ಆದಿ ಪುರಾಣದ 16–17 ಪ್ರತಿ ಸಿಗುತ್ತೆ. ಶಾಂತಿ ಪುರಾಣದ ಬಗ್ಗೆ ಸಿಗುತ್ತೆ. ಅಜಿತ ತೀರ್ಥಂಕರ ಪುರಾಣ ಸಿಗುತ್ತೆ. ಆದ್ರೆ ಲೌಕಿಕ ಕಾವ್ಯಗಳಿವೆಯಲ್ಲ ಅವು ಸಿಗೋದಿಲ್ಲ. ಹೆಚ್ಗೆ ಸಿಗೋದಿಲ್ಲ. ಸಿಗದೇ ಇರೋದಕ್ಕೆ ಏನು ಕಾರಣ ಅಂತ ಅಂದ್ರೆ ಅವರು ವೈದಿಕರಲ್ಲದೇ ಇರೋದು ಮತ್ತು ಅವರು ತಗೊಂಡಂತ ಕಾವ್ಯ ಇದೆಯಲ್ಲ ಅದಕ್ಕೆ ಇತಿಹಾಸದ ಪುರುಷರನ್ನ 'ತಗುಳ್ಚಿ' ಬರೆದಿದ್ರಿಂದ ಜನಪ್ರಿಯ ಆಗ್ಲಿಲ್ಲ ಅದು. ಇತಿಹಾಸದ ಪುರುಷರನ್ನ ತಗುಳ್ಚಿ ಸತ್ಯಾಶ್ರಯ ತೈಲಪನಿರ್ಬಹುದು, ಅರಿಕೇಸರಿ ಇರ್ಬಹುದು, ಕೃಷ್ಣನನ್ನಿರಬಹುದು ಸೇರಿಸಿ ಬರೆದದ್ದು ಮತ್ತು ಅನೇಕ ಸಂಗತಿಗಳನ್ನ ಪವಾಡದ ಸಂಗತಿಗಳನ್ನ ಬಿಟ್ಟು ಬರೆದದ್ದು. ಪಂಪ ಆ ಸಂಗತಿಗಳನ್ನ ಬಿಟ್ಟೇ ಬರ್ದಿದಾನೆ. ಬಿಟ್ಟು ಬರ್ದದ್ದು ಜನಪ್ರಿಯ ಆಗಿಲ್ಲ. ಜನ ಅದನ್ನ ಸ್ವೀಕರಿಸಿಲ್ಲ. ಅದೇ ವೀರಶೈವ ಕವಿಗಳ ವಿಚಾರಕ್ಕಾದ್ರೂ ಬನ್ನಿ, ಬಸವಣ್ಣನವರ, ಅಲ್ಲಮಪ್ರಭುವಿನ, ಅಕ್ಕಮಹಾದೇವಿಯ ವಿಚಾರಕ್ಕಾದ್ರೂ ಬನ್ನಿ ಅಥವಾ ಪುರಂದರದಾಸರು, ಕನಕದಾಸರ ವಿಚಾರಕ್ಕಾದ್ರೂ ಬಂದ್ರೆ

ಈ ಪವಾಡಗಳು ಮೇಲುಗೈಯನ್ನ ಸಾಧಿಸಿಬಿಟ್ಟಿವೆ. ಆ ಹಿನ್ನೆಲೆಯಲ್ಲೇ ಅವರನ್ನೆಲ್ಲ ನೋಡಲಾಗಿದೆ. ಅವು ಕೆಲವು ಸಲ ಸೂಕ್ತವಾಗೂ ಇರ್ತವೆ. ಕೆಲವು ಸಂದರ್ಭಗಳಲ್ಲಿ ಅಸಂಬದ್ಧವಾಗಿಯೂ ಇರ್ತವೆ ಮತ್ತು ಕವಿಗಳ ಬಗ್ಗೆಯೂ ಕೂಡ ಪವಾಡದ ಬಗೆಗಳನ್ನು ಸೃಷ್ಟಿಸಿಬಿಡಲಾಗಿರುತ್ತದೆ. ಬಹುಶ್ರೇಷ್ಠ ವ್ಯಕ್ತಿಯನ್ನ ಈ ಪವಾಡದ ಹಿನ್ನೆಲೆಯಲ್ಲಿಯೇ ನೋಡ್ಬೇಕೋ ಏನೋ ಅಂತನ್ನುವ ಒಂದು ಕ್ರಮ ಬಂದ್ಬಿಟ್ಟಿದ್ರಿಂದ ಅದು ಹಾಗೆ ಇವತ್ತಿಗೂ ಕೂಡ ಅವುಗಳನ್ನ ಬಿಟ್ಕೊಡೋದು ಕಷ್ಟ ಆಗ್ತಾ ಇದೆ.

ಮಾಟ, ಮಂತ್ರ, ಪವಾಡ ಎಷ್ಟು ಪ್ರಭಾವವನ್ನ ಬೀರ್ತಾ ಇವೆ ಅಂತ ಅನ್ನೋದು ನಾವು ಆಲೋಚನೆ ಮಾಡುವ ಕ್ರಮ ಬೇರೆ, ಸಾಮಾನ್ಯ ಜನ ಆಲೋಚನೆ ಮಾಡುವ ಕ್ರಮ ಬೇರೆ. ಕುಮಾರವ್ಯಾಸ ಒದ್ದೆ ಬಟ್ಟೆ ಉಟ್ಕೊಂಡೇನೆ ಬರಿಯೋದು. ಕಾಳಿದಾಸನಿಗೆ ದೇವಿ ಕಾಣಿಸ್ಕೊಂಡಿದ್ರಿಂದಲೇ ಹಾಗೆ ಬರೆಯೋಕೆ ಸಾಧ್ಯ ಆಯ್ತು. ಆದ್ರೆ ಕಾಳಿದಾಸನ ಎಲ್ಲ ಕೃತಿಗಳನ್ನ ಓದಿದ್ರೆ ಈತ ಎಂಥ ಸುಸಂಸ್ಕೃತ, ಎಂಥ ವಿದ್ಯಾಭ್ಯಾಸ ಪಡೆದವನಾಗಿದ್ದಿರ ಬಹುದು ಅಂತ ಅನ್ಸುತ್ತೆ ಅವನ ಬರವಣಿಗೆಯ ಸಂದರ್ಭದಲ್ಲಿ. ಈ ಪವಾಡವೇ ಅಲ್ಲಿ ಕೆಲ್ಸಕ್ಕೆ ಬರೋದಿಲ್ಲ. ಅಂತಹವನೊಬ್ಬ ಕವಿ ಬಗ್ಗೆ ಈ ಪವಾಡವೇ ಹೆಚ್ಚು ಪ್ರಚಾರಕ್ಕೆ ಬಂದುಬಿಟ್ಟಿದೆ. ಕನಕದಾಸರಲ್ಲೂ ಕೂಡ ಈ ತರದ, ಪುರಂದರದಾಸರಲ್ಲೂ ಕೂಡ ಈ ತರದ ಈ ಪವಾಡದ ಅಂಶಗಳು ಹೆಚ್ಚು ಪ್ರಚಾರಕ್ಕೆ ಬಂದುಬಿಟ್ಟಿವೆ. ಈ ಪವಾಡಗಳು ಅವರ ಬರವಣಿಗೆಯನ್ನೇ ಹಿಂದಕ್ಕೆ ತಳ್ಳಿದ ಹಾಗೆ ಮುಂದೆ ಬಂದಿವೆ. ಪವಾಡದ ಕಥೆ ಕನಕದಾಸರದ್ದಿದೆಯಲ್ಲ 'ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ' ಆ ಕೀರ್ತನೆಯ ಬಗೆಗಿನ ಪವಾಡದ ಕತೆಯಿದೆಯಲ್ಲ ಬಂಜಗೆರೆಯವರು ಬಹಳ ಸೂಕ್ಷ್ಮವಾಗಿ ಹೇಳಿದ್ರದನ್ನ. ತಿರುಪತಿ ಎಲ್ಲರಿಗೂ ಪ್ರವೇಶವಿದ್ದಂತಹ ಒಂದು ಜಾಗ ಅಂತ. ತಿರುಪತಿ, ಕಾಶಿ ಮತ್ತು ಶ್ರೀಶೈಲ, ಧರ್ಮಸ್ಥಳ ಈ ಮೂರ್‍ನಾಲ್ಕು ಜಾಗಗಳು ಭಾರತದಲ್ಲಿಯೇ ಪ್ರಸಿದ್ಧ ಯಾತ್ರಾಸ್ಥಳಗಳು. ಕಾಶಿ ಗಂಗಾನದಿಯ ತಟದಲ್ಲಿದ್ದ ಕಾಶಿ, ಶ್ರೀಶೈಲ ಮತ್ತು ಈ ಧರ್ಮಸ್ಥಳದ ದೇವ್ರು ಮತ್ತೆ ತಿರುಪತಿ ಇವೆಲ್ಲವೂ ಶೈವ ಕೇಂದ್ರಗಳಾಗಿದ್ದವು ಮತ್ತು ಬುಡಕಟ್ಟು ಜನರ ಆರಾಧ್ಯ ದೈವಗಳಾಗಿದ್ದವು. ಬುಡಕಟ್ಟು ಜನರ ಜೊತೆಗೆ ತಳವರ್ಗದ ಆರಾಧ್ಯ ದೈವಗಳಾಗಿದ್ದು ಮತ್ತು ಎಲ್ಲರಿಗೂ ಪ್ರವೇಶ ಇದ್ದಂತದ್ದು. ಆ ಕಾಲದಿಂದ ಹಿಡಿದು ಈ ಕಾಲದವರೆಗೂ ಕೆಲವು ದೇವಸ್ಥಾನಗಳಿಗೆ ಎಲ್ರಿಗೂ ಪ್ರವೇಶ ಇದ್ಯೋ ಇಲ್ವೋ ಅನ್ನೋ ಚರ್ಚೆ ಇದೆ. ಆದ್ರೆ ಇವುಗಳಿಗೆ ಮಾತ್ರ ಎಲ್ಲಾ ಮುಕ್ತವಾಗಿ ಹೋಗ್ಬಹುದಾಗಿತ್ತು ಮತ್ತು ಎಲ್ಲರ ಮನೆ ದೇವತೆಗಳವು. ಇವತ್ತಿಗೂ ನೀವು ಹಕ್ಕಿಪಿಕ್ಕಿಯವರನ್ನಾದ್ರೂ ಕೇಳ್ರಿ, ದೊಂಬರನ್ನಾದ್ರೂ ಕೇಳ್ರಿ ಯಾವ ಬುಡಕಟ್ಟವರನ್ನಾದ್ರೂ ಕೇಳ್ರಿ ತಿಮ್ಮಪ್ಪ, ವೆಂಕಟೇಶ್ವರ, ಕನಕದಾಸರು ತಿಮ್ಮ ಶೆಟ್ಟಿ ಅಂತ ಕರೀತಾರೆ ತಮಾಷೆಗೆ. ಬಂದೇವಯ್ಯ ಗೋವಿಂದಶೆಟ್ಟಿ ಅನ್ನುವ ಕೀರ್ತನೆಯಲ್ಲಿ. ಆ ಬುಡಕಟ್ಟು ದೇವತೆಗೆ ದಕ್ಷಿಣ ಭಾರತದವರೆಲ್ಲರೂ ನಡ್ಕೊಳ್ತಾರೆ. ಇಡೀ ಭಾರತದವರೆಲ್ಲ ಕಾಶಿ ವಿಶ್ವೇಶ್ವರನಿಗೆ ನಡ್ಕೊತಾರೆ. ಮತ್ತು ಕರ್ನಾಟಕದ ಬಹುಭಾಗಗಳು ಧರ್ಮಸ್ಥಳಕ್ಕೆ, ಧರ್ಮಸ್ಥಳದ ದೇವತೆಗೆ ನಡ್ಕೊಳ್ತಾ ಇದಾರೆ. ಈ ಬುಡಕಟ್ಟು ದೇವತೆಗಳು ಕಾಲಕ್ರಮೇಣ ಅವ್ರ ವಶ ಆದವು. ಉಳ್ಳವರ ವಶ ಆದ್ಮೇಲೆ ಅವು ಬೇರೆ ಬೇರೆ ರೂಪವನ್ನ ಪಡ್ಕೊಂಡ್ವು. ರಾಮಾನುಜಾಚಾರ್ಯರು ಆ ದೇವರಿಗೇ ದೀಕ್ಷೆಯನ್ನ ಕೊಟ್ಟು ವೆಂಕಟೇಶ್ವರ ಅಂತ ಮಾಡಿ ಹಾಕಿದ್ರು. ಶಿವ ಬೇಟಗಾರ ದೇವತೆ, ಆದಿಮ ದೇವತೆ. ಕೃಷ್ಣ ಗೊಲ್ಲರಿಗೆ ಸಂಬಂಧಪಟ್ಟಂತ ತಳವರ್ಗದ ದೇವತೆ. ರಾಮನಿಗೆ ದೇವಾಲಯಗಳು ನಿರ್ಮಾಣ ಆಗ್ಲಿಲ್ಲ. ಆದ್ರೆ ಆಂಜನೇಯನಿಗೆ ದೇವಾಲಯಗಳು ನಿರ್ಮಾಣ ಆದ್ವು. ಈ ಸಂದರ್ಭದಲ್ಲಿ ಕೃಷ್ಣನಿಗೆ ದೇವಾಲಯ ಈ ಉಡುಪಿಯಲ್ಲಿ ನಿರ್ಮಾಣವಾದಾಗ ಈ ತಳವರ್ಗದ ದೇವತೆಗೆ ಎಲ್ಲರಿಗೂ ಪ್ರವೇಶ ದೊರಕ್ಬೇಕು. ಅಲ್ಲಿದ್ದ ಹಾಗೆಯೇ ತಿರುಪತಿಯಲ್ಲಿದ್ದ ಹಾಗೆ, ಕಾಶಿಯಲ್ಲಿದ್ದ ಹಾಗೆ ಮತ್ತು ಧರ್ಮಸ್ಥಳದಲ್ಲಿದ್ದ ಹಾಗೆ ಎಲ್ಲರಿಗೂ ತಳವರ್ಗದವರಿಗೂ ಅಲ್ಲಿ ಪ್ರವೇಶ ಸಿಗುವ ಹಾಗೆ ಉಡುಪಿಯಲ್ಲೂ ಕೂಡ ಪ್ರವೇಶ ದೊರಕಬೇಕು. ಆದ್ರೆ ದೊರಕದೇ ಇದ್ದ ಸಂದರ್ಭದಲ್ಲಿ ಈ ಪ್ರತಿಭಟನೆಯ ಗೀತೆ ಹುಟ್ಟಿಕೊಂಡಿದೆ ಅಂತ ಅನ್ಸುತ್ತೆ. ಅದು ಸಿನಿಮಾದಲ್ಲಿ ಪವಾಡದ ರೀತಿ ಆಗೋಗ್ಬಿಟ್ಟಿದೆ. ಬಹಳ ಜನಪ್ರಿಯತೆಯನ್ನ ಗಳಿಸಿದಂತಹ ಪವಾಡ ಅದು. ಅದು ಹಾಗಾಗಿರೋದಕ್ಕೆ ಸಾಧ್ಯವೇ ಇಲ್ಲ. ಇಲ್ಲಿ ಎಲ್ಲರಿಗೂ ಪ್ರವೇಶವನ್ನ ಕೊಡ್ಲೇಬೇಕು. ಯಾಕಂದ್ರೆ ಕೃಷ್ಣ ತಳವರ್ಗದ ದೇವರು. ಶಿವ, ಬೆನವ, ಮತ್ತು ಕೃಷ್ಣ ಇವು ತಳವರ್ಗದ ದೇವರುಗಳು. ಆಂಜನೇಯ ಎಲ್ಲ ಗ್ರಾಮೀಣರ ದೇವತೆ.

ಈ ದೇವತೆಗಳು ತಳವರ್ಗದವರಾದ್ದರಿಂದ ಇಲ್ಲಿ ಸ್ಥಾಪನೆಯಾದ ಮೇಲೆ ಇಲ್ಲಿಯೂ ಕೂಡ ಎಲ್ಲರಿಗೂ ಪ್ರವೇಶ ದೊರಕಬೇಕು. ಆ ದೊರಕದೇ ಇದ್ದ ಸಂದರ್ಭದಲ್ಲಿ ಕನಕದಾಸನ ಪ್ರತಿಭಟನೆಯ ಗೀತೆ ಇದ್ದಿರಬೇಕು. 'ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ' ಅಂತ ಇರೋದನ್ನ ಎರಡು ಟೋನ್‌ಗಳಲ್ಲೂ ಓದ್ಬಹುದು ಅನ್ಸುತ್ತೆ. ಕೂಗಿದರೂ ಕೇಳಲಿಲ್ಲವೇ ಅಂತ ಇದ್ಯಲ್ಲ ಅದು ದೈನ್ಯದ ಧ್ವನಿಯಲ್ಲಿ ಹಾಡ್ಬಿಟ್ಟಿರೋದ್ರಿಂದ ಜನಪ್ರಿಯ ಆಗೋಗಿದೆ ಅದು. ಆ ಸಿನಿಮಾದ ಕಾರಣವಾಗಿ ರಾಜ್‌ಕುಮಾರ್ ಅವರು ಬಹಳ ತನ್ಮಯರಾಗಿ ನಟಿಸಿರುವ ಕಾರಣದಿಂದ ಅದಕ್ಕೆ ತುಂಬ ಜನಪ್ರಿಯತೆ ಸಿಕ್ಕಿದೆ. ಅವರು ಪುರಂದರದಾಸರು ಮತ್ತು ಇತರೆ ಬೇರೆ ಬೇರೆ ಪಾತ್ರಗಳನ್ನು ಮಾಡೋದಕ್ಕಿಂತ ಕನಕದಾಸರ ಪಾತ್ರ ಮಾಡಿದ ಮೇಲೆ ತುಂಬ ಜನಪ್ರಿಯತೆ ಸಿಕ್ಕೋಯ್ತು. ರಾಜ್‌ಕುಮಾರ್ ಅವರು ತಮ್ಮ ಜೀವನದ ಎಲ್ಲಾ ಕಷ್ಟಗಳನ್ನೂ ಕೂಡ ಅದ್ರಲ್ಲಿ ತೋರಿಸಿಬಿಟ್ಟಿದಾರೆ ಅಂತ ಕಾಣುತ್ತೆ. ಬೆಳಗ್ಗೆ ಎದ್ದು ನಾಷ್ಟಕ್ಕೂ ಕಾಸಿರ್‍ಲಿಲ್ಲ ಅಂತ ರಾಜ್‌ಕುಮಾರ್ ಅವರು ಕೆಲವು ಸಂದರ್ಭಗಳಲ್ಲಿ ಹೇಳ್ಕೊಂಡಿದ್ದಾರೆ. ಆ ಎಲ್ಲಾ ನೋವನ್ನೂ ಕೂಡ ಕನಕದಾಸರ ರೀತಿಯಲ್ಲಿ ಆ ಸಿನಿಮಾದಲ್ಲಿ ಅವ್ರು ತೋರ್‍ಸಿದಾರೆ. ಇನ್ನೊಂದನ್ನ ಗಮನಿಸ್ಬೇಕು. ಇಡೀ ಕೀರ್ತನೆಗಳ ಸಾರವನ್ನೆಲ್ಲ ಆ ಸಿನಿಮಾದಲ್ಲಿ ಹಿಡಿದಿಟ್ಟಿರುವ ಹಾಗೂ ಇದೆ. ಉದ್ದಕ್ಕೂ ಎಷ್ಟೇ ಪ್ರತಿಭಟನೆ ಇದ್ರೂ ಕೂಡ ಅಲ್ಲಿ ಕನಕದಾಸರು ವಿನಯವನ್ನೇ ಬಹಳ ದೊಡ್ಡ ಮೌಲ್ಯವನ್ನಾಗಿ ಪ್ರತಿಪಾದಿಸಿದ ಹಾಗೆ ಕಾಣ್ಸುತ್ತೆ ಆ ಸಿನಿಮಾದಲ್ಲಿ. ಕನಕದಾಸರ ಕೀರ್ತನೆಗಳಲ್ಲಿ ವಿನಯದ ಜೊತೆಗೆ ಪ್ರತಿಭಟನೆಯೂ ಕಾಣುತ್ತೆ. ನಿಂದಾಸ್ತುತಿ ಎನ್ನುವ ಮಾತಿದ್ದೇ ಇದೆ. ಆ ದೇವಾಲಯದಲ್ಲಿ ಅದನ್ನ ದೈನ್ಯದ ಧ್ವನಿಯಲ್ಲಿ ಹಾಡಿರೋದ್ರಿಂದಲೋ ಏನೋ ಅದು ಬೇರೆ ರೀತಿಯಲ್ಲಿ ಪ್ರಚಾರವನ್ನ ಪಡೆದಿದೆ. ಕೂಗಿದರೂ ಕೇಳಲಿಲ್ಲವೇ ಅಂತ ಅನ್ನೋದಿದ್ಯಲ್ಲ ಅದು ಯಾವ ತರದ ಧ್ವನಿ ಅದು. ದೈನ್ಯತೆಯೋ ಇಲ್ಲ–ಕೆಲವು ಕೀರ್ತನೆಗಳನ್ನ ಗಮನಿಸಿ,

ತಿರುಪತಿ ದೇವರನ್ನ ಹಂಗೆ ಲೇವಡಿ ಮಾಡಿದಾರೆ. ಬಡ್ಡಿ ತಗೊಂಡು ಬದುಕ್ತಾಯಿದೀಯ ನೀನು ಅಂತೆಲ್ಲ. ಇದೇನಯ್ಯ ಹಿಂಗೆ ಮಲಕ್ಕೊಂಡಿದೀಯ ಅಂತ ಇಲ್ಲಿ ಶ್ರೀರಂಗಪಟ್ಟಣದ ದೇವರನ್ನ ಲೇವಡಿ ಮಾಡಾಕಿದಾರೆ. ಅಲ್ಲಿ ಅವರಿಗೆ ಆ ದೈನ್ಯತೆಯ ಧ್ವನಿ ಹ್ಯಾಗೆ ಬಂತು? ನನಗನ್ಸುತ್ತೆ ಅದನ್ನ ಬೇರೆ ಧ್ವನಿಯಲ್ಲಿ ನೀವು ಹಾಡಿದ್ರೆ ಇದೇನು ನಿನಗೆ ಕೇಳಿಸ್ತಾ ಇಲ್ಲವೇ? ಎಲ್ಲರಿಗೂ ರಕ್ಷಣೆ ಮಾಡಿದೆ. ಇಲ್ಲಿ ನನಗೆ ದರ್ಶನ ಕೊಡೋದಕ್ಕೆ ನಿನಗೇನಾಗಿದೆ ತೊಂದರೆ? ಅಂತ ಅನ್ನುವ ಧ್ವನಿಯೂ ಕೂಡ ಅದರೊಳಗಿದೆ. ಈ ನಿಂದಾಸ್ತುತಿ ನಮ್ಮ ದಾಸರಲ್ಲಿತ್ತು. ವಚನಗಳಲ್ಲಿದ್ದ ಹಾಗೇನೇ ನಿಂದಾಸ್ತುತಿ ಕೀರ್ತನೆಗಳಲ್ಲೂ ಅದು ಇದೆ. ದೇವರನ್ನ ಕೆಲವು ಸಲ ಸೇವಕ ಅಂತ ಟ್ರೀಟ್ ಮಾಡ್ತಕ್ಕಂಥಾದ್ದು. ಬೇರೆ ತರದಲ್ಲೂ ಇದೆ. ನಿನ್ನ ಸೇವಕ ನಾನು. ನನ್ನ ಸೇವಕ ನೀನು ಈ ಕೊಳುಕೊಡೆಗಳೆಲ್ಲವೂ ಕೂಡ ಇವೆ. ಒಬ್ಬ ಲೇಖಕನಾಗಿ ಎಲ್ಲವೂ ಆಗಿರುತ್ತಾನೆ. ಒಬ್ಬ ಕವಿ ಅನೇಕ ಸಂದರ್ಭಗಳಲ್ಲಿ ಅನೇಕ ಸ್ವರೂಪವನ್ನ ಪಡೀತಾನೆ. ಪಂಪನಲ್ಲೇ ಅದಿದೆ. ಅವನು ಜೈನಧರ್ಮೀಯ. ಬ್ರಾಹ್ಮಣ ಧರ್ಮವನ್ನು ಬಿಟ್ಟ, ಜೈನ ಧರ್ಮವನ್ನು ಅನುಸರಿಸಿದ ಅನ್ನೋದಿದ್ಯಲ್ಲ ಆ ಆದಿಪುರಾಣದಲ್ಲಿ ಮಹಾವ್ರತನ ಆಸ್ಥಾನದಲ್ಲಿ ಎಲ್ಲ ಧರ್ಮಗಳನ್ನು ಲೇವಡಿ ಮಾಡಿ ಬಿಸಾಕಿಸ್ತಾನೆ. ಇದ್ಯಾವ್ದಿದು? ಜುಟ್ಟು ಕಿತ್ಕೊಳೊ ಧರ್ಮ, ಇದೂ ಒಂದು ಧರ್ಮವಾ ಅಂತ ಮಾತಾಡಿಸ್ತಾನೆ. ಪಂಪನೇ ಬರೆಯೋದದನ್ನ, ಇದೇನಿದು ಈ ಪ್ರಾಣಿ ಹಿಂಸೆ. ಈ ಯಜ್ಞಕಾರ್ಯಗಳು, ಇದ್ಯಾವುದಿದು ಧರ್ಮ ಇದು? ಈ ವೈದಿಕ ಧರ್ಮ ಅಂತನೂ ಲೇವಡಿ ಮಾಡ್ತಾನೆ. ಕೊನೆಗೆ ಯಾವುದೋ ಹಂತದಲ್ಲಿ 'ಮನುಷ್ಯ ಜಾತಿ ತಾನೊಂದೇ ವಲಂ' ಅಂತ ಮಾತಾಡಿಸ್ತಾನೆ. ಅಂದ್ರೆ ಒಬ್ಬ ಲೇಖಕ ಎಲ್ಲ ಸಂದರ್ಭಗಳಲ್ಲೂ ಅವನು ಬೇರೆ ಬೇರೆಯ ಸ್ವರೂಪಗಳನ್ನ ತಾಳ್ತಾ ಇರ್ತಾನೆ ಮತ್ತು ಒಂದು ನಿಲುವು ಅನ್ನೋದಿರುತ್ತೆ ಹಾಗಾಗಿ ಈ ಸಾಮ್ರಾಜ್ಯವನ್ನು ತಳ್ಳಿಹಾಕುವುದು, ಕಳೆದುಕೊಳ್ಳುವುದು ಮತ್ತು ಗಳಿಸಿಕೊಳ್ಳುವುದು, ಕಳೆದುಕೊಳ್ಳುವುದು, ಗಳಿಸಿಕೊಳ್ಳುವುದನ್ನ ಇಡೀ ಕನ್ನಡ ಸಾಹಿತ್ಯ ಪರಂಪರೆಯೇ ಹೇಳುತ್ತೋ ಏನೋ ಅಂತ ನನಗನ್ಸುತ್ತೆ. ಹಾಗಾಗಿ ಕನ್ನಡ ಸಾಹಿತ್ಯ ಪರಂಪರೆಯ ಆಶಯ ಒಂದೇ ಆದುದು. ಅದು ಪಂಪನಿಂದ ಹಿಡಿದು, ಅವನು ಅರಸನ ಆಸ್ಥಾನದಲ್ಲಿದ್ದವನು ಸರಿ. ಇವ್ರು ಅರಸನ ಆಸ್ಥಾನವನ್ನು ಬಿಟ್ಟು ಬಂದದ್ದು ಸರಿ ಮತ್ತು ಇವರು ವಚನಕಾರರು, ಕೀರ್ತನಾಕಾರರು ಇವರೂ ಕೂಡ ಜನತೆಯ ಮುಂದೆ ಹೋಗಿ ಈ ಸಾಹಿತ್ಯವನ್ನು ಮಂಡಿಸಿದವರು.

ಇನ್ನೊಂದು ಅಂಶವನ್ನ ನಾನು ಪ್ರಸ್ತಾಪ ಮಾಡಿ ನಿಲ್ಲಿಸ್ತೇನೆ. ಈ ಜೈನರು ಮತ್ತು ಕೀರ್ತನಕಾರರು ತಮ್ಮ ಹೇಳಿಕೆಗೆ ತಮ್ಮ ಬರವಣಿಗೆಗೆ ಮೂಲ ಆಕರವನ್ನಾಗಿ ರಾಮಾಯಣ ಮಹಾಭಾರತವನ್ನು ಸ್ವೀಕರಿಸಿದರೆ ವೀರಶೈವ ಶರಣರು ಮಾತ್ರ ಅದನ್ನು ಸ್ವೀಕರಿಸಲಿಲ್ಲ. ಅವರದನ್ನ ತ್ಯಜಿಸಿದರು. ಅದು ವೈದಿಕ ಮೂಲವಾದ್ದರಿಂದ ಮತ್ತು ಯಜ್ಞಯಾಗಾದಿಗಳನ್ನ ಮತ್ತು ಹಿಂಸೆಯನ್ನ ಹೇಳುತ್ತೆ ಅನ್ನುವ ಕಾರಣಕ್ಕೋ ಏನೋ ವೀರಶೈವರು ಸ್ವೀಕರಿಸಲಿಲ್ಲ ಇದನ್ನ. ಎಲ್ಲೂ ಕೂಡ ಪ್ರಸ್ತಾಪ ಮಾಡಿಲ್ಲ ಅದನ್ನ. ಆದ್ರೆ ಪವಾಡಗಳನ್ನ ವಿಪರೀತವಾಗಿ ಸ್ವೀಕರಿಸಿದ್ರು. ಬಸವಣ್ಣನವರನ್ನೂ ಕೂಡ ಪವಾಡದ ವ್ಯಕ್ತಿಯನ್ನಾಗಿಯೇ ನೋಡಿ ಕೃತಿಯನ್ನ ರಚಿಸಿದರು. ಆ ಹಿನ್ನೆಲೆಯಲ್ಲೇ ಇವರು ರಾಮಾಯಣ ಮಹಾಭಾರತದ ಪ್ರಸಂಗಗಳ್ನ ಬಳಸ್ಕೊಂಡು ತಮ್ಮ ಕೀರ್ತನೆಗಳಲ್ಲಿ ಹೇಳ್ತಾ ಪುರಾಣದ ಸಂಗತಿಗಳನ್ನ, ಕೃಷ್ಣ ಪುರಾಣದ ಸಂಗತಿಗಳನ್ನ, ಮಹಾಭಾರತ ರಾಮಾಯಣದ ಸಂಗತಿಗಳನ್ನ ತಮ್ಮ ಕೀರ್ತನೆಗಳಲ್ಲಿ ಬೆರೆಸ್ತಾ ಬೆರೆಸ್ತಾ ಕೀರ್ತನೆಗಳನ್ನ ಕಟ್ಟಿ, ಅವನ್ನೇ ಮತ್ತೆ ಜನಪ್ರಿಯ ಮಾಡಿದ್ರು. ಎರಡೂ ಪರಂಪರೆಗಳಿಗೆ ಇರುವ ಬಹುದೊಡ್ಡ ವ್ಯತ್ಯಾಸ ಇದೇ ಅಂತ ಕಾಣುತ್ತೆ. ಅಸ್ಮಿತೆ ಅನ್ನುವಂತಾದ್ದು ಪ್ರಾಚೀನ ಸಾಹಿತ್ಯದಲ್ಲಿ ಇರ್ಲಿಲ್ಲ ವಚನಕಾರರ ಕಾಲದಲ್ಲಿ ಬಂದಂತದ್ದು ಅಂತ ಜನ ಹೇಳ್ತಾರೆ. ಅದನ್ನ ಹೆಚ್ಚು ಗಮನಿಸಬೇಕಾದ ಅಗತ್ಯ ಇದೆ ಅನ್ನೋ ರೀತೀಲೂ ಪ್ರಸ್ತಾಪ ಮಾಡ್ತಾರೆ. ಅದು ಹಾಗೆ ಹೇಳೋದು ತುಂಬ ಕಷ್ಟ. ಅಸ್ಮಿತೆಯಿರ್ಲಿಲ್ಲ ಅಂತ. ಪಂಪನಲ್ಲಿ ಇದ್ದ ಅಸ್ಮಿತೆ, ಕುಮಾರ ವ್ಯಾಸನಲ್ಲಿದ್ದ ಅಸ್ಮಿತೆ ಇದೆಲ್ಲ ತಳ್ಳಿಹಾಕಿ ಮಾತನಾಡ್ಲಿಕ್ಕೆ ಬರೋದಿಲ್ಲ. ಈ ವೀರಶೈವ ಪಂಥಕ್ಕೂ ಮತ್ತು ಈ ಕೀರ್ತನೆಕಾರರ ಪಂಥಕ್ಕೂ ಅನೇಕ ಸಾಮ್ಯತೆಗಳು ಇವೆ. ಅದನ್ನ ಗಮನಿಸಬೇಕು ಅಂತ ಹೇಳಿ ಮತ್ತು ಇಲ್ಲಿ ಕುಲದ ಸಮಸ್ಯೆ ಇದೆಯಲ್ಲ ಅದು ಕೆಲವು ಕವಿಗಳನ್ನ, ಕೀರ್ತನೆಕಾರರನ್ನ ಮತ್ತೆ ವಚನಕಾರರನ್ನ ಬಹಳ ಕಾಡಿರುವ ಹಾಗೆ ಕಾಣ್ಸುತ್ತೆ ಅಂತ ನನಗೆ ಅನಿಸುತ್ತಾ ಇದೆ. ಇದು ಪಂಪನಿಂದಲೇ ಆರಂಭ ಆಗುತ್ತೆ ಅದು ನಿಮಗೆ ಗೊತ್ತು. ಕರ್ಣ ಮತ್ತು ಭೀಷ್ಮ, ದ್ರೋಣಾಚಾರ್ಯರ ಸಂಭಾಷಣೆಯ ಸಂದರ್ಭದಲ್ಲಿ ಆ ಕುಲದ ಮಾತು ಬರುತ್ತೆ. ನಾನಾಗಲೇ ಹೇಳಿದ ಹಾಗೆ ಈ ಕುಲ ಅಂತಕ್ಕಂತದ್ದು ಇದೇ ಇದ್ದಿರಬೇಕು ಅಂತ ಅನ್ಸುತ್ತೆ ಬಸವಣ್ಣನವರು, ಅಕ್ಕ ನಾಗಮ್ಮ, ಚನ್ನಬಸವಣ್ಣನವರ ವಿಚಾರದಲ್ಲೂ ಈ ಕುಲದ ಸಮಸ್ಯೆ ಬಹಳ ಕಾಡಿದೆ. ಅದು ಕನಕದಾಸರಲ್ಲೂ ಕೂಡ ವಿಪರೀತವಾಗಿ ಅದು ಕಾಡಿದೆ. ಈ ಜಾತಿ, ಧರ್ಮ, ಕುಲದ ಹೆಸರಿನಲ್ಲಿ ಎಷ್ಟು ಅನಾಹುತಗಳು ನಡೀತಾ ಇವೆ ಅಂತ ಅನ್ನೋದು ನಮ್ಮ ಕವಿಗಳಿಗೆ ಸಂತರಿಗೆ ಅರ್ಥವಾಗ್ತಾ ಇತ್ತು ಅಂತ ಕಾಣಿಸುತ್ತಿದೆ. ಅದು ಕನಕದಾಸರಿಗೂ ಕೂಡ ಗೊತ್ತಿರುವ ಹಾಗೆ ಅರ್ಥವಾಗುವ ಹಾಗೆ ಕಾಣಿಸುತ್ತೆ. ಅದು ಮೇಲಿಂದ ಮೇಲೆ ಅದನ್ನ ಪ್ರಸ್ತಾಪ ಮಾಡ್ತಾರೆ. ಪುರಂದರದಾಸರು ಮತ್ತೆ ಬೇರೆ ಯಾವುದೇ ಕೀರ್ತನಾಕಾರರಿಗಿಂತಲೂ ಹೆಚ್ಚಾಗಿ ಕುಲದ ಸಮಸ್ಯೆ ಕನಕದಾಸರನ್ನ ಕಾಡಿತ್ತು. ಅದು ನಿಮಗೆಲ್ಲಾ ಗೊತ್ತೇ ಇದೆ. ಬಹುಶಃ ಅವರು ಬಂದಿರ್ತಕ್ಕಂತ ಜಾತಿ ಯಾವ ವರ್ಗದಿಂದ ಬಂದ್ರು ಮತ್ತು ಹೇಗೆ ಅವರನ್ನ ಅದು ಅವರ ಬದುಕಿನಲ್ಲಿ ಕಾಡ್ತು ಅನ್ನುವಂತಾದ್ದು ಅವರ ಕೀರ್ತನೆಗಳಲ್ಲಿ ಪ್ರಸ್ತಾಪ ಆಗಿದೆ. ಮತ್ತೆ ಅಲ್ಲಿಯೂ ಕೂಡ ಮೇಲುವರ್ಗದವರನ್ನ ತಳ್ಳಿಹಾಕಿ ಮಾತನಾಡುವ ಕ್ರಮವೂ ಕೂಡ ಕಂಡುಬರುತ್ತೆ, ಕುಮಾರವ್ಯಾಸನಂತಹವನೂ ಕೂಡ ಬ್ರಾಹ್ಮಣ ಧರ್ಮದ ಅಥವಾ ಮೇಲ್ವರ್ಗದ ಸಂಗತಿಗಳನ್ನ ತಳ್ಳಿಹಾಕಿ ಮಾತಾಡ್ತಾನೆ. ಪಂಪನೂ ಕೂಡ ಅದೇ ಕೆಲಸವನ್ನ ಮಾಡಿದ್ದಾನೆ. ಬಸವಣ್ಣನವರೂ ಅದೇ ಕೆಲಸವನ್ನ ಮಾಡಿದ್ದಾರೆ, ಕನಕದಾಸನಿಗಂತೂ ಹೆಚ್ಚು ಕಾಡಿದೆ ಅದು. ಹಾಗಾಗಿ ಉಡುಪಿಯಲ್ಲಿ ಆದಂತಹ ಪವಾಡ ಏನಿದೆ ಆ ಪವಾಡದ ಕೀರ್ತನೆಯೂ ಇದೆ ಮತ್ತು ಈ ಬಾಳೆಹಣ್ಣಿಗೆ ಸಂಬಂಧಪಟ್ಟಂತ ಕೀರ್ತನೆಯೂ ಕೂಡ ಅದು ಕೀರ್ತನೆಯ ರೂಪದಲ್ಲೇ ಇದೆ. ಇಡೀ ಜಗತ್ತೆಲ್ಲವೂ ಕೂಡ ದೈವ ಸಂಬಂಧಿಯಾದದ್ದು ಅನ್ನುವಂತಹದು ಮತ್ತು ಆ ಹಿನ್ನೆಲೆಯಲ್ಲೇ ದೈವಕ್ಕೆ ನಾವು ಶರಣಾಗಬೇಕು ಅನ್ನುವಂತ ಕೀರ್ತನೆಗಳು ಈ ಭಕ್ತಿಪಂಥದಲ್ಲಿ ಹೆಚ್ಚು ಕಾಣಿಸಿಕೊಂಡಿವೆ. ಹಾಗಾಗಿ ಈ ಕೀರ್ತನೆಯನ್ನ ಈ

ಉಡುಪಿಯ ಪ್ರವೇಶದ ಸಂದರ್ಭದಲ್ಲಿ ಪ್ರತಿಭಟನೆಯ ಕೀರ್ತನೆಯಾಗಿ ಯಾಕೆ ಆಗಿರಬಾರ್ದು ಅಂತ ಅನ್ನುವ ಸೂಚನೆಗಳು ಕೂಡ ಅದನ್ನು ಬೇರೆ ರೀತಿನಲ್ಲಿ ಓದಿದರೆ ಗೋಚರವಾಗುತ್ತೆ. ಹಾಗಾಗಿ ಯಾವ್ದೋ ಮಾರ್ಗವನ್ನ ಕಂಡ್ಕೊಬಿಟ್ರು ಅಂತ ಕಾಣ್ಸುತ್ತಲ್ಲಿ. ಪ್ರವೇಶ ಇಲ್ಲದೆ ಹಿಂದಿನ ಮಾರ್ಗದಲ್ಲಿ ಎಲ್ಲರಿಗೂ ದರ್ಶನವನ್ನ ಕಲ್ಪಿಸಿಬಿಟ್ರೆ ಸರಿಹೋಗುತ್ತೆ. ಅದಕ್ಕೆ ಅಂತ ಒಂದು ಉಪಾಯವನ್ನ ಕಂಡ್ಕೊಂಡ್ರು ಅಂತ ನನಗನ್ಸುತ್ತೆ. ಬಹುಶಃ ಇದು ಕನಕದಾಸರಿಂದಲೇ ಆಗಿರಬಹುದು ಅಂತಲೂ ನನಗನ್ಸುತ್ತೆ. ಇದನ್ನೆಲ್ಲಾ ನೀವು ಒಂದಷ್ಟು ಚರ್ಚೆ ಮಾಡ್ಬಹುದು.

ಆಮೇಲೆ ಇನ್ನೊಂದು ಸಂಗತಿ ಸ್ತ್ರೀಯ ಪರವಾಗಿಯೂ ಮಾತನಾಡಿದ ಹಾಗೆ ಸ್ತ್ರೀಯ ವಿರೋಧಿಯಾಗಿಯೂ ಮಾತನಾಡಿರುವುದು ಕಂಡು ಬರುತ್ತದೆ. ಹೆಚ್ಚು ಸಾಮೂಹಿಕವಾದ ತಿಳಿವಳಿಕೆ ಬಂದಾಗಲೆಲ್ಲ ಕನಕದಾಸರು ಎಲ್ಲರೂ ಹುಟ್ಟೇ ದೋಷ, ಮಲಮೂತ್ರ ದ್ವಾರವಾಗಿ ಬಂದಂತಾದ್ದು ಅನ್ನುವಂತಾ ಸೂಚನೆಗಳು ಕಂಡುಬರ್ತವೆ. ಬಹುಶಃ ಸಾಮೂಹಿಕವಾಗಿ ಬಂದಾಗ ಹಾಗೆ ಮಾತಾಡ್ತಾರೆ ಅಂತ ಕಾಣುತ್ತೆ. ಹೆಣ್ಣು ಹೊನ್ನು ಮಣ್ಣು. ಹೊನ್ನನ್ನ ಮತ್ತು ಮಣ್ಣನ್ನ ತಿರಸ್ಕರಿಸುವ ಸಂದರ್ಭದಲ್ಲಿ ಹೆಣ್ಣನ್ನು ತಿರಸ್ಕರಿಸಿ ಮಾತನಾಡಿದ ಸೂಚನೆಗಳು ಕಂಡು ಬರ್ತವೆ. ವಚನಕಾರರು ಸ್ತ್ರೀಯರಿಗೆ ಕೊಟ್ಟಂತಹ ಪ್ರಾತಿನಿಧ್ಯವನ್ನು ಕೀರ್ತನಕಾರರು ಕೀರ್ತನೆಗಳ ಸಂದರ್ಭದಲ್ಲಿ ಕೊಟ್ಟ ಹಾಗೆ ಕಾಣಿಸುವುದಿಲ್ಲ. ಯಾವ ಸ್ತ್ರೀಯೂ ಕೂಡ ಇವರ ಸಮೂಹದಲ್ಲಿ ಸೇರಿಕೊಂಡಂತೆ ಕಾಣಿಸುವುದಿಲ್ಲ. ಅದಕ್ಕೆ ಕಾರಣ ಬಹುಶಃ ಅವರು ಜಂಗಮರಾಗಿದ್ದುದೋ ಏನೋ. ಯಾಕಂದ್ರೆ ಇವರು ಒಂದು ಕಡೆ ನೆಲೆ ನಿಂತವರಲ್ಲ. ಅದು ಸ್ತ್ರೀಯಿಂದ ಕಷ್ಟವಾಗ್ಬಹುದೋ ಏನೋ, ಅದೆಲ್ಲದಕ್ಕಿಂತ ಇವರು ಸಂಸಾರ ಜಿಹಾಸೆಯನ್ನ, ಸಾಮ್ರಾಜ್ಯ ಜಿಹಾಸೆಯನ್ನ ಹೇಗೆ ಕಳೆದರೋ ಹಾಗೇ ಸಂಸಾರ ಜಿಹಾಸೆಯನ್ನೂ ಕೂಡ ಇವರು ಕಳೆದಿದ್ದಾರೆ. ಆ ಕಾರಣದಿಂದ ಹೆಣ್ಣಿಗೆ ಯಾವ ಸ್ಥಾನವನ್ನು ಕೀರ್ತನಕಾರರು ಕೊಟ್ಟಿದ್ರು ಅನ್ನೋದನ್ನು ಅರ್ಥಮಾಡಿಕೋ ಬಹುದು. ಯಾಕಂದ್ರೆ ಅವರು ಹೆಚ್ಚು ಮಾತನಾಡೋದು ಸಂಸಾರ ಜಿಹಾಸೆಯನ್ನ ಕುರಿತು. ಅದರ ಸೂಚನೆಗಳು ಕೆಲವು ಕೀರ್ತನೆಗಳಲ್ಲಿ ಕಂಡುಬರುತ್ತೆ. ಆದ್ರೆ ಅವರು ಪ್ರೇಮವನ್ನು ಕುರಿತಾಗಿ ಇದು ಅನಿವಾರ್ಯವಾದ ಭಾಗ ಅಂತ ಮೋಹನ ತರಂಗಿಣಿ ಆರಂಭದಲ್ಲಿ ಬರೆದಿದ್ದಾರೆ.

ಇದಿಷ್ಟನ್ನ ನಿಮ್ಮ ಮುಂದೆ ಟಿಪ್ಪಣಿಗಳಾಗಿ ನಾನು ಇರಿಸಿದ್ದೇನೆ. ಇನ್ನೊಂದು ಸಂಗತಿ. ನಮ್ಮ ಕನ್ನಡ ಸಾಹಿತ್ಯದ ನಡೆ ತುಂಬ ಅರ್ಥಪೂರ್ಣವಾಗಿರುವ ಹಾಗೆ ಕಾಣ್ಸುತ್ತೆ. ಇಡೀ ಕನ್ನಡ ಸಾಹಿತ್ಯದ ಆಶಯ ಒಂದೇ ಅಂತ ನಾನು ಹೇಳ್ದೆ. ಅರಮನೆಯನ್ನ ಕುರಿತು ಅರಮನೆಯಲ್ಲಿದ್ದ ಕವಿಗಳು ಅರಮನೆಯ ಸಂಗತಿಗಳನ್ನು ಕುರಿತು ಬರೆದದ್ದೊಂದು ಹಂತ. ಅರಮನೆಗೆ ದೊಡ್ಡವರು. ಎರಡನೆಯ ಹಂತ ಆಕಾಶಕ್ಕೆ ದೊಡ್ಡವರು. ಮೂರನೆಯ ಹಂತ ಧರೆಗೆ ದೊಡ್ಡವರು. ಅರಮನೆಗೆ ದೊಡ್ಡವರು ಪಂಪರನ್ನಾದಿಗಳು. ಆಮೇಲೆ ಆಕಾಶಕ್ಕೆ ದೊಡ್ಡವರು ವ್ಯೋಮಮೂರ್ತಿ ಅಲ್ಲಮ ಪ್ರಭು. ಅಂದ್ರೆ ಅವರು ಯಾವುದೋ ಅರಮನೆಗೋ, ಯಾವುದೋ ರಾಜ್ಯಕ್ಕೋ ಸೀಮಿತರಲ್ಲದ ಆಕಾಶದ ವ್ಯಾಪ್ತಿಯ ವ್ಯಕ್ತಿತ್ವವನ್ನ ಪಡೆದವರು. ಆಕಾಶಕ್ಕೆ ದೊಡ್ಡವರು. ಇವರು ಜನಕ್ಕರ್ಥವಾಗುವ ಹಾಗೆ ಬರೆಯೋದಕ್ಕೆ ಪ್ರಯತ್ನ ಮಾಡಿದವರು. ಧರೆಗೆ ದೊಡ್ಡವರು ಅಂತನ್ನೋ ಮಾತಿದ್ಯಲ್ಲ ಮಂಟೇಸ್ವಾಮಿ ಅಥವಾ ಮಾದೇಶ್ವರನ್ನ ಕುರಿತು ಅವರು ಬರೆಯೋದನ್ನು ಬಿಟ್ಟು ಪ್ರಯೋಗಕ್ಕೆ ಇಳಿದವರು. ಪ್ರಯೋಗ ಪುರುಷರವರು. ಏನನ್ನೂ ಬರೆಯದೆ ತಾವಾಗಿಯೇ ಪ್ರಯೋಗಕ್ಕಿಳಿದವರು. ಮಧ್ಯ ಕರ್ನಾಟಕದ ತಿಪ್ಪೇಸ್ವಾಮಿ ಇರಬಹುದು, ಇನ್ನೂ ಉತ್ತರ ಕರ್ನಾಟಕದಲ್ಲಿ ಈ ತರದವರು ಅನೇಕರಿದ್ದಾರೆ. ದಕ್ಷಿಣ ಕರ್ನಾಟಕದಲ್ಲಂತೂ ಅವರ ಪರಂಪರೆ ಬಹಳ ದೊಡ್ಡದಾಗಿದೆ. ಹಾಗಾಗಿ ಇವರು ಧರೆಗೆ ದೊಡ್ಡವರು. ಹೇಗೆ ಅಂದ್ರೆ ಪ್ರಯೋಗ ಪುರುಷರು. ಏನನ್ನೂ ಬರೆಯದೆ ಜನಸಮುದಾಯದ ನಡುವೆ ಅವರ ಒಳಿತಿಗೋಸ್ಕರವಾಗಿ ನಿರಂತರವಾಗಿ ಹೋರಾಡಿಕೊಂಡಿದ್ದವರು ಮತ್ತು ಬರೆಯುವುದನ್ನು ಮೀರಿದವರು. ಅದಕ್ಕೇ ಜನ ಸಮೂಹ ಅವರನ್ನ ಧರೆಗೆ ದೊಡ್ಡವರು ಅಂತ ಕರೆದ್ರು ಅಂತ ನನಗನ್ಸುತ್ತೆ.

ಹಂಗಾಗಿ ಈ ಮೂರು ಪಂಥದಲ್ಲಿಯೂ ಯಾವುದು ದೊಡ್ಡದು? ಯಾವುದು ಸಣ್ಣದು ಅಂತ ಯೋಚ್ನೆ ಮಾಡೋದಕ್ಕಿಂತ ಹೆಚ್ಚಾಗಿ ಎಲ್ರೂ ಮಾಡಿರ್ತಕ್ಕಂತ ಕೆಲ್ಸ ಒಂದೇ ಅಂತ ನನಗೆ ಅನ್ಸುತ್ತೆ. ಅರಮನೆಯಿಂದ ಬೀದಿಗೆ ಬಂದ ಸಾಹಿತ್ಯ, ಗುಡಿ ಅಥವಾ ಗುಂಡಾರಕ್ಕೆ ಬಂದ ಸಾಹಿತ್ಯ, ಆಮೇಲೆ ಬೀದಿ ಬೀದಿಯಲ್ಲಿ ಹರಿದಂತಹ ಸಾಹಿತ್ಯ ಪರಂಪರೆ ಕನ್ನಡ ಸಾಹಿತ್ಯದ್ದು ಅಂತ ನನ್ನ ಅನಿಸಿಕೆ. ಅರಮನೆಗೆ ದೊಡ್ಡವರು ಆಕಾಶಕ್ಕೆ ದೊಡ್ಡವರು ಮತ್ತು ಧರೆಗೆ ದೊಡ್ಡವರು ಅನ್ನುವ ಮೂರು ಸಮೂಹಗಳು ನಮ್ಮ ಕನ್ನಡ ಸಾಹಿತ್ಯ ಪರಂಪರೆಯಲ್ಲಿದ್ದು ಅವೆಲ್ಲವೂ ಒಂದೇ ಭಾವನೆಯನ್ನು ಹೊಂದಿವೆ. ಮೇಲ್ಪದರದಲ್ಲಿ ಬೇರೆ ಬೇರೆ ತರವೂ ಅವಿದ್ದಿರಬಹುದು. ಅವೆಲ್ಲವೂ ಕೂಡ ಜಾತಿ ಧರ್ಮಗಳನ್ನು ತಳ್ಳಿ ಹಾಕುವ ಕೆಲಸವನ್ನೇ ಮಾಡಿವೆ ಅಂತ ನನಗನ್ಸುತ್ತೆ. ಕುಲವಿಲ್ಲದಾ ದಾಸ ಕುರುಬದಾಸ. ಕುನ್ನಿದಾಸ, ಚಾಂಡಾಲದಾಸ. ಚಾಂಡಾಲರ ಮನೆಯ ಬಾಗಿಲನ್ನು ಕಾಯ್ತಕ್ಕಂತ ಕೆಲಸವನ್ನು ಮಾಡ್ತಕ್ಕಂತವ್ನು ಅಂತ ಮಾತನಾಡಿದ್ದನ್ನು ಎಲ್ರೂ ಹೆಚ್ಚು ಕಮ್ಮಿ ಅದನ್ನ ಮಾಡಿದಾರೆ. ಪುರಂದರದಾಸರು ಕೂಡ ಇದೇ ತರದ ಮಾತನ್ನಾಡಿದಾರೆ. ಅವರಿವರ ಮನೆಯ ಬಾಗಿಲನು ಕಾಯ್ದು ಬಳಲಿದೆನೋ ಶ್ರೀಹರಿಯೇ ಎನ್ನುವ ಮಾತನ್ನು ಕೂಡ ಆಡಿದಾರೆ. ಆದ್ರೆ ಹೀಗೆ ಎಲ್ಲಿಯೂ ಕೂಡ ಜಾತಿ ಕುಲಗೋತ್ರ ಹೇಳಿಕೊಳ್ಳದ ಕುಮಾರವ್ಯಾಸ, ಬಸವಣ್ಣನವರೂ ಕೂಡ ಅದನ್ನೇನೂ ಹೇಳ್ಕೊಂಡಿಲ್ಲ. ಹರಿಹರ ಬರೀದೇ ಹೋಗಿದ್ರೆ ಅದು ಸಿಕ್ತಿರ್ಲಿಲ್ಲ. ಕನಕದಾಸನೂ ಕೂಡ ಹೇಳ್ಕೊಂಡಿಲ್ಲ. ಆದರೆ ನಮ್ಮ ಸಾಹಿತ್ಯ ಚರಿತ್ರೆಯ ದೊಡ್ಡ ದುರಂತ ಅಂತ ಅಂದ್ರೆ ಇವರೆಲ್ಲರ ಕುಲಗೋತ್ರಗಳನ್ನ ಕಂಡುಹಿಡಿಯುವುದಕ್ಕೋಸ್ಕರವಾಗಿ ಬರ್ದೂ ಬರ್ದೂ ಶ್ರಮ ವಹಿಸಿದ್ದಾರೆ. ಅನೇಕ ಸಂದರ್ಭಗಳಲ್ಲಿ ನಮ್ಗೆ ಯಾಕೆ ಹಿಂಗಾಯ್ತು ಅಂತ ಅನಿಸಿದೆ. ಕುಲವಿಲ್ಲದಾ ದಾಸ ಕುರುಬದಾಸ,

ಕುನ್ನಿದಾಸ ಅಂತೆಲ್ಲಾ ಮಾತಾಡಿದ್ರು. ಎಲ್ಲೂ ಕೂಡ ಏನನ್ನೂ ಹೇಳ್ಕೊಳ್ಳದಿರುವ ಕುಮಾರವ್ಯಾಸ, ನಮ್ಮ ಬಹುತೇಕ ಕವಿಗಳು ಸರ್ವಜ್ಞನೂ ಕೂಡ ಹೇಳ್ಕೊಂಡಿಲ್ಲ. ಆದ್ರೆ ಇವರ ಜಾತಿಮತಗಳನ್ನ ಕುರಿತು ಕಂಡಕಂಡಂತೆ ಯೋಚ್ನೆ ಮಾಡೋದನ್ನ ಬಿಟ್ಟು, ಬಹುಶಃ ಮ.ನ.ಜವರಯ್ಯ ಅವ್ರೂ ಅದನ್ನೇ ಇದರ ಬಗ್ಗೆ ಚರ್ಚೆ ಆಗಿಲ್ಲ, ಅದರ ಬಗ್ಗೆ ಚರ್ಚೆ ಆಗಿಲ್ಲ ಅಂತ ಶುರು ಮಾಡಿದ್ರು. ಆ ತರದ ಚರ್ಚೆಗಳನ್ನೇ ಬಿಟ್ಟು, ವಸ್ತುವನ್ನ ಕುರಿತು ಹೆಚ್ಚಾಗಿ ಚರ್ಚೆಯನ್ನ ಮಾಡುವುದನ್ನ ಬಿಟ್ಟು ಅನೇಕ ರೀತಿಯ ಶ್ರಮವನ್ನ ವಹಿಸಿ ನಾವು ಎಲ್ಲ ಲೇಖಕರ ಜಾತಿ, ಕುಲಗೋತ್ರಗಳನ್ನ ಹುಡುಕೋ ಪ್ರಯತ್ನಗಳನ್ನು ಮಾಡಿರೋದ್ರಿಂದ, ಎಷ್ಟೋ ಸಾರಿ ಇದು ನಗೆಪಾಟಲೋ ತಮಾಷೆಯೋ, ನೂರಾರು ಪುಟಗಳನ್ನ ಮೀಸಲಿರಿಸಿಬಿಟ್ಟಿದ್ದಾರೆ ನಮ್ಮ ಸಾಹಿತ್ಯ ಚರಿತ್ರೆಕಾರರು. ಹಾಗಾಗಿ ನಮ್ಮ ಸಂತರಾಗಲಿ, ವಚನಕಾರರಾಗಲಿ, ಕವಿಗಳೇ ಆಗಲಿ ಇವೆಲ್ಲವನ್ನೂ ಕೂಡ ಮೀರಿದವರು. ಮೀರಲಾಗದ ನಾವು ಈ ಎಲ್ಲ ಕೆಲಸವನ್ನ ಮಾಡಿದೀವಿ. ಇನ್ನು ಮುಂದಾದ್ರೂ ಕೂಡ ಮ.ನ.ಜವರಯ್ಯನವರ ಆರಂಭದ ಪ್ರಶ್ನೆಯಂತೆ ಅವರ ಕಂಟೆಂಟ್ ಏನಿದೆ? ವಸ್ತು ಏನಿದೆ ಅದರ ಬಗ್ಗೆ ಹೆಚ್ಚು ಚರ್ಚೆಯಾದ್ರೆ ನಮ್ಮ ಅರಿವು ಹೆಚ್ಚಾಗುತ್ತದೆ ಅಂತ ನನಗನ್ಸುತ್ತೆ.

## ಕನಕ ಕೃತಿ – ಸಂಸ್ಕೃತಿ – ಚರ್ಚೆ

**ಚರ್ಚೆ : ಹನೂರು**

ಇದು ಮಧ್ವಾಚಾರ್ಯರ ನಂತರ ಬಂದದ್ದಾದ್ದರಿಂದ ಅಷ್ಟೊತ್ತಿಗಾಗಲೆ ಮಡಿ ಮೈಲಿಗೆಗಳ ಕಲ್ಪನೆ ಬೆಳೆದು ಬಂದ್ಬಿಟ್ಟಿದೆ. ಮಡಿ ಮೈಲಿಗೆಗಳ ಕಲ್ಪನೆ ಬಹಳ ಪ್ರಬಲವಾಗಿ ಬೆಳೆದು ಬಂದ್ಬಿಟ್ಟಿದೆ. ಹಾಗಾಗಿ ಇಲ್ಲಿ ಆ ಸಮಸ್ಯೆ ಉಳ್ಕೊಂಬಿಟ್ಟಿದೆ. ಸ್ಪರ್ಶ ಅನ್ನೋದು ಬಿಡಿ. ಪ್ರವೇಶ ನಿಷೇಧವಂತೂ ಇತ್ತು. ಹಂಗಾಗಿ ಒಂದು ಉಪಾಯವನ್ನ ಮಾಡಿ ಹಿಂದಿನಿಂದ ಬಂದು ದರ್ಶನ ಮಾಡುವಂಥ ಒಂದು ಉಪಾಯವನ್ನು ಕಂಡ್ಕೊಂಡಿದಾರೆ. ಇದು ಆರಂಭವಾದದ್ದು ಕನಕದಾಸರ ಕಾಲದಲ್ಲಿರಬಹುದು. ಬಹುಶಃ ಕನಕದಾಸರು ಕೂಡ ಅದನ್ನ ಭೇದಿಸೋದಕ್ಕಾಗಿಲ್ಲ. ಈ ಕೀರ್ತನೆ ಮಾತ್ರ ಅದರ ಇನ್ನೊಂದು ಟೋನ್‌ಲ್ಲಿ ನೋಡಿದ್ರೆ ಯಾಕೆ ಸಾಧ್ಯ ಇಲ್ಲ ಅನ್ನೋ ರೀತಿನಲ್ಲಿದೆ.

**ಚರ್ಚೆ : ಕಾ ತ ಚಿಕ್ಕಣ್ಣ**

ಇನ್ನೊಂದು ಚರ್ಚೆಯೂ ಇದೆ. ಆ ಕೀರ್ತನೆಯನ್ನು ಅಲ್ಲಿ ಹಾಡಿದ್ದಲ್ಲ ಅನ್ನುವ ಮಾತುಗಳೂ ಇವೆ.

**ಚರ್ಚೆ : ಮ.ನ. ಜವರಯ್ಯ**

ಅಲ್ಲ, ಇದನ್ನ ಬೇರೆ ರೀತಿನಲ್ಲಿ ಯೋಚ್ನೆ ಮಾಡೋಕೆ ಸಾಧ್ಯನಾ ಅಂತ. ಕನಕನ ಕಿಂಡಿ ಇದ್ಯಲ್ಲ ಅದು ಬಹುಶಃ ಕನಕದಾಸರಿಗೆ ಪ್ರವೇಶ ಕೊಡ್ದೇ ಇದ್ದದ್ರಿಂದ ಪ್ರತಿಭಟನೆಗೆ ಕ್ಲೋಸ್ ಮಾಡಿದ್ರು. ತೀವ್ರವಾದ ಪ್ರತಿಭಟನೆ ಉಂಟಾಗಿ ರಾತ್ರೋ ರಾತ್ರಿ ಹಾರೆ ತಗೊಂಡೋಗಿ ಒಂದು ತೂತು ಮಾಡಿ ಕೃಷ್ಣ ಇಲ್ಲೇ ಕಿಂಡಿಯಲ್ಲಿ ಕಾಣಿಸ್ಕೊಂಡಿದಾನೆ ಅನ್ನುವಂಥ ವಾತಾವರಣ ಉಂಟಾಗಿರ್ಬಹುದು. ಕೃಷ್ಣ ಆ ಗೋಡೆಯನ್ನೇ ತೂತು ಮಾಡಿ ದರ್ಶನ ಕೊಟ್ಟಿರೋದು ಅಂತ ಒಂದು ಎಪಿಸೋಡ್ ಕ್ರಿಯೇಟ್ ಮಾಡಿರಬಹುದೇ?

**ಚರ್ಚೆ : ಹನೂರು**

ಆ ಸಿನೆಮಾ ಬಂದ ಮೇಲೆ ಇದು ಹೆಚ್ಚು ಚಾಲ್ತಿಗೆ ಬಂತು. ಅದು ಜಗಳ ಆಗಿದೆಯೋ ಏನಾಗಿದೆಯೋ ಉಪಾಯವಂತೂ ಅಲ್ಲಿ ನೆರವೇರಿದೆ. ಈ ರೀತಿ ಸಮಾಧಾನಗಳು, ಜಗಳಗಳು ನಮ್ಮ ಕರ್ನಾಟಕದಲ್ಲಿ ಅನೇಕ ಕಡೆ ನಡೆದಿವೆ. ಕೂಡ್ಲೂರು ಅಂತ ಹೆಸರಿದೆ. ಅದಕ್ಕೆ ಹರಿಹರ ಅಂತ ಹೆಸರು ಬಂದಿದ್ದು ಅಮೇಲೆ. ಹರಿಹರ ದೇವಾಲಯವನ್ನು ನಿರ್ಮಾಣ ಮಾಡಿದ ಮೇಲೆ ಕೂಡ್ಲೂರು ಅಂತ ಇದ್ದದ್ದಕ್ಕೆ ಹರಿಹರರ ಹೆಸರನ್ನ ಪ್ರಚಾರಕ್ಕೆ ತಂದ್ರು. ಈ ತರದ ಜಗಳಗಳು ಸಂಭವಿಸಿದಾಗ ಸಮಾಧಾನಕಾರ ಮಾರ್ಗೋಪಾಯ ಗಳೂ ಆಗಿವೆ. ಅದು ಉಡುಪಿಯಲ್ಲಾಗಿದೆ. ಬಹುಶಃ ಬೇರೆ ಕಡೆ ಬರ್ದಿದಾರೆ ಅನ್ನೋದಕ್ಕಿಂತ ಆ ಕೀರ್ತನೆ ಅಲ್ಲೇ ಬರ್ದಿರ್ಬೇಕು. ಹಾಗೇ ಒಂದು ಮಾರ್ಗೋಪಾಯವನ್ನ ಕಂಡ್ಕೊಂಡಿರ್ಬೇಕು.

**ಚರ್ಚೆ : ಮುದ್ದುಕೃಷ್ಣ**

ಅದನ್ನ ಬಹಳ ಕಾಂಟಂಪರೈಸ್ ಮಾಡೋದಾದ್ರೆ ಒಂದು ಕೆರೆಯ ಸಂಬಂಧ ಒಂದು ವಿವಾದ ಆಯ್ತು. ಅಸ್ಪೃಶ್ಯ ಜನಾಂಗಕ್ಕೆ ಕೆರೆ ನೀರು ಮುಟ್ಟೋಕೆ ಬಿಡೋದಿಲ್ಲ ಅಂತ. ಒಂದು ಫ್ಯಾಕ್ಟ್ ಫೈಂಡಿಂಗ್ ಕಮಿಷನ್ ಹೋಯ್ತು. ನ್ಯಾಯ ಪಂಚಾಯ್ತಿನೂ ಆಯ್ತು. ಕಡೆಗೆ ಏನು ತೀರ್ಮಾನ ಆಯ್ತು ಅಂತಂದ್ರೆ ನೀರು ಮುಟ್ಟಂಗಿಲ್ಲ. ಅಲ್ಲಿಂದ ಒಂದು ನಲ್ಲಿ ಎಳೆದ್ಬಿಟ್ಟು ಅಲ್ಲಿಂದ ತಗೋಬಹುದು. ಅದು ಮುಟ್ಟೋ ಹಕ್ಕಿಂದ ವಂಚಿತರಾಗ್ಬೇಕು. ಈ ರೀತಿಯ ಕುಟಿಲೋಪಾಯಗಳನ್ನ ಇವತ್ತೂ

ನೋಡ್ತಾಯಿದೀವಿ. ಇವರು ಪ್ರವೇಶ ಮಾಡ್ಬಾರ್ದು. ದರ್ಶನ ಸಿಕ್ಕಿರ್ಬೇಕು. ಹಂಗೇ ಅವ್ರು ನೀರು ಮುಟ್ಟಂಗಿಲ್ಲ. ಆದ್ರೆ ನೀರು ಸಿಕ್ಕಿರ್ಬೇಕು – ಈ ರೀತಿ ಎಷ್ಟು ಅಮಾನವೀಯ ಪರಿಸ್ಥಿತಿ ಇದು.

**ಚರ್ಚೆ : ಭಗವಾನ್**

ಸ್ನೇಹಿತರೇ ಬಹಳ ವಿಸ್ತಾರವಾದ ವ್ಯಾಪ್ತಿಯಲ್ಲಿ ಡಾ. ಹನೂರು ಅವರು ಮಾತನಾಡಿದ್ರು. ಇಡೀ ಕನ್ನಡ ಸಾಹಿತ್ಯವನ್ನೇ ಒಂದು ರೀತಿ ವಿವೇಚನೆಗೊಳಪಡಿಸಿದಾರೆ. ನನಗೆ ಕೆಲವು ಪ್ರಶ್ನೆಗಳಿವೆ. ಈಗ ದಾಸ ಅಂದ್ರೆ ಭಕ್ತ ಅಂತ ಹೇಳ್ತಾರೆ. ಅವರ ಗುರು ವ್ಯಾಸರಾಯ. ಅವರಿಗೆಲ್ಲ ರಾಯರು ಅಂತ ಹೆಸರಿದೆ. ಆದ್ರೆ ಈ ಭಕ್ತರಿಗೆ ಮಾತ್ರ ದಾಸ ಅಂತಿದೆ. ಪುರಂದರದಾಸ, ಕನಕದಾಸ ಆ ದಾಸ, ಈ ದಾಸ ಅಂತ. ಯಾಕೆ ವ್ಯಾಸರಾಯರು ವ್ಯಾಸದಾಸ ಅಂತಿಟ್ಕೊಳ್ಳಿಲ್ಲ? ಯಾಕೆ ಅವರನ್ನೂ ವ್ಯಾಸದಾಸ ಅಂತ ಕರೀಲಿಲ್ಲ? ರಾಯ ಅಂತ ಯಾಕಿಟ್ಕೊಂಡ್ರು ಅವ್ರು? ಭಕ್ತಿ ಅನ್ನೋದಿದ್ಯಲ್ಲ ಅದು ವೈಭವೀಕರಿಸಿದ ಗುಲಾಮಗಿರಿ ಅಂತೀನಿ ನಾನು. ಅಲ್ದೇ ಇದ್ರೆ ಅವ್ರೂ ದಾಸ ಅಂತ್ಲೇ ಇಟ್ಕೋಬಹುದಿತ್ತು. ಇಟ್ಕೊಳ್ಳಿಲ್ಲ ಅವ್ರು. ರಾಯ ಅಂದ್ರೆ ಯಜಮಾನ. ಆ ಭಾವನೆ ಅವರಲ್ಲಿತ್ತು. ಮನಸ್ಫೂರ್ತಿಯಾಗಿ ಯಾವ ಯಾವ ಜಾತಿಯವ್ರು ಯಾವ ಯಾವ ಹೆಸರಿಟ್ಕೊಳ್ಬೇಕು ಅಂತ ಸ್ಪಷ್ಟಪಡಿಸ್ಬಿಟ್ಟಿದಾರೆ. ನಮ್ಮ ಇಡೀ ಸಾಹಿತ್ಯದಲ್ಲಿ ಅವತ್ನಿಂದ ಇವತ್ತಿನವರೆಗೂ ಬಹಳ ಸ್ಪಷ್ಟವಾಗಿ, ಗಾಢವಾಗಿರೋದು ಮನುಸ್ಮೃತಿಯ ಚಿಂತನೆ. ಈ ಸ್ಮೃತಿಯನ್ನ ದಾಟಿದವರು ಶರಣರು. ಅದನ್ನವರು ಹೇಳಿದಾರೆ. ಬಹಳ ಮುಖ್ಯವಾಗಿ ಚಾತುರ್ವರ್ಣ್ಯವನ್ನ ಅವರು ತಿರಸ್ಕರಿಸಿದರು. ವೇದಗಳನ್ನ ತಿರಸ್ಕರಿಸಿದರು. ಬಸವಣ್ಣ–ಅಕ್ಕ–ಅಲ್ಲಮ–ಸಿದ್ಧರಾಮ ಎಲ್ಲರೂ ವೇದಗಳನ್ನ ಸಂಪೂರ್ಣವಾಗಿ ತಿರಸ್ಕರಿಸಿದ್ರು. ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನ್ನಿಕ್ಕುವೆ, ತರ್ಕದ ಬೆನ್ನ ಬಾರನೆತ್ತುವೆ, ಆಗಮದ ಮೂಗ ಕೊಯ್ವೆ ಮಹಾದಾನಿ ಕೂಡಲಸಂಗಮ ದೇವಾ ಮಾದಾರ ಚನ್ನಯ್ಯನ ಮನೆಯ ಮಗ ನಾನು.

ಇದು ಮುಖ್ಯವಾಗಿ ಶರಣರಿಗೂ, ದಾಸ ಸಾಹಿತ್ಯಕ್ಕೂ ಇರುವ ವ್ಯತ್ಯಾಸ. ದಾಸ ಸಾಹಿತ್ಯದಲ್ಲಿ ಒಂದು ರೀತಿ ಈಗ ಬಸವಣ್ಣ, ಕನಕದಾಸರನ್ನ ಬಿಟ್ರೆ ಇನ್ನು ಉಳಿದವರೆಲ್ರೂ ಆ ಚಾತುರ್ವರ್ಣ್ಯದ ಚೌಕಟ್ಟನ್ನೇ ಒಪ್ಕೊಂಡು ಅದನ್ನವರೆಲ್ರೂ ಪ್ರಶ್ನೆ ಮಾಡ್ದೇ ಇರೋದು. ಪ್ರಶ್ನೆ ಮಾಡ್ದೋರು ಕನಕದಾಸರೊಬ್ಬರೇ. ಹಾಗಾಗಿ ಇದೆಲ್ಲದರ ಬಗ್ಗೆ ನಮಗೆ ಸ್ಪಷ್ಟತೆ ಬೇಕು. ಮತ್ತೆ ಪವಾಡಗಳಿದ್ಯಲ್ಲ, ಪವಾಡಗಳ ಬಗ್ಗೆ ಬುದ್ಧ ಮೊಟ್ಟ ಮೊದಲೇ ಹೇಳ್ದ. ಪವಾಡಗಳನ್ನ, ಪವಾಡ ಮಾಡೋರನ್ನ ನಂಬಬೇಡಿ ಅಂದ. ನೀವು ಶ್ರೀ ರಾಮಕೃಷ್ಣ ಪರಮಹಂಸರ ವಚನಗಳನ್ನೇನಾದ್ರೂ ಓದಿದ್ರೆ ಪದೇ ಪದೇ ಅವ್ರು ತಮ್ಮ ಶಿಷ್ಯರಿಗೆ ಪವಾಡಗಳನ್ನ ಮಾಡೋರ್ನ ನಂಬಬೇಡಿ ಅಂತಾ ಹೇಳ್ತಾರೆ. ಅಧ್ಯಾತ್ಮ ಸಾಧನೆಗೆ ಅದರಿಂದ ತೊಂದರೆಯಾಗುತ್ತದೆ. ನೀವು ದಾರಿ ತಪ್ತೀರಿ. ಗುರಿ ಮುಟ್ಟೋದಿಲ್ಲ. ಇದು ಸುಳ್ಳು ಪವಾಡ. ಹಾಗಾಗಿ ಅವರು ನರೇಂದ್ರ–ವಿವೇಕಾನಂದ ಹಾಗೂ ಉಳಿದ ಶಿಷ್ಯರಿಗೆ ಅವರ್ನ ಪ್ರಶ್ನೆ ಮಾಡೋಕೆ ಅವಕಾಶ ಕೊಡ್ತಾರೆ. ಯಾವ ರೀತಿ ಬೇಕಾದ್ರೂ ಪ್ರಶ್ನೆ ಮಾಡಿ ಅನ್ನೋರು. ಬುದ್ಧನೂ ಸಹ ತನ್ನ ಶಿಷ್ಯರಿಗೆ ಎಂದೂ ಯಾವ ಪ್ರಶ್ನೆಗಳನ್ನೂ ಕೇಳ್ಬೇಡಿ ಅನ್ಲಿಲ್ಲ. ಅನುಮಾನಗಳನ್ನ ಅವನು ಬಹಳ ಪ್ರೋತ್ಸಾಹಿಸ್ತಿದ್ದ. ನಮ್ಮ ಕನಕದಾಸರು, ಪುರಂದರದಾಸರು ಇವರು ಅಡ್ಡಾಡ್ಕೊಂಡು ಅಲೆದಾಡ್ಕೊಂಡು ಹೋದ್ರಲ್ಲ ಅವ್ರ ಮೇಲೆ ಬುದ್ಧ ಭಿಕ್ಕುಗಳ ಪ್ರಭಾವ ಇರಬಹುದೇನೋ ಅಂತ ಅನ್ಸುತ್ತೆ ನನಗೆ. ಯಾಕಂದ್ರೆ ಬುದ್ಧ ತನ್ನ 60 ಜನ ಶಿಷ್ಯರನ್ನ ಮೊದ್ಲು ಕೂರ್ಸಿ ಮಾತನಾಡಿದ. ಹೇಳ್ತಿದೀನಿ. ಇದೆಲ್ಲ ಅನುಭವವಾಗಿದೆ, ಸತ್ಯ ಅಂತ ಪತ್ತೆ ಹಚ್ಕೊಂಡಿದೀರಿ, ಇದನ್ನ ಎಲ್ಲ ಕಡೆಗೆ ಹೋಗಿ ಹೇಳ್ತಾಯಿರಿ. ಆದ್ರೆ ಒಂದೇ ಜಾಗಕ್ಕೆ ಇಬ್ರು ಹೋಗ್ಬೇಡಿ. ಯಾಕಂದ್ರೆ ಇಬ್ರೂ ಒಂದೇ ಕೆಲ್ಸ ಮಾಡ್ತೀರಿ, ಬೇರೆ ಬೇರೆ ಹೋಗಿ ಅಂತ. ಹಾಗಾಗಿ ಬುದ್ಧನ ಪ್ರಭಾವ ಈ ನಮ್ಮ ದಾಸರ ಮೇಲೆ ಬಂದಿರಬಹುದೇನೋ ಅಂತ ನನಗನ್ನಿಸ್ತಾಯಿದೆ. ವಿವೇಕಾನಂದರು ಅವರ ಕೃತಿಗಳಲ್ಲಿ ಬಹಳ ಸ್ಪಷ್ಟವಾಗಿ 2/3 of this Indian population were Buddhists ಅಂತಾರೆ. ಅದೇ ಮಾತನ್ನ ಅಂಬೇಡ್ಕರ್ ಅವ್ರು ಹೇಳ್ತಾರೆ. ಅವರ 7ನೇ ಸಂಪುಟ Who are the shudras and how they came to be the forth varna of Hindu Aryan Society ಅನ್ನೋದ್ರಲ್ಲಿ ಅವ್ರು ಹೇಳ್ತಾರೆ. ಮತ್ತೆ ಅವ್ರೇ The untouchables ಅನ್ನೋ ಪುಸ್ತಕ ಅದರಲ್ಲಿ ಬಹಳ ಸ್ಪಷ್ಟವಾಗಿ ಹೇಳ್ತಾರೆ The religion of the masses of India was Buddhism ಅನ್ನೋ ಮಾತನ್ನ ಪದೇ ಪದೇ ಹೇಳ್ತಾರೆ. ಎಲ್ರೂ ಒಪ್ಕೊಂಡಿದ್ದಾರೆ ಈ ಮಾತನ್ನ. ಹಾಗಾಗಿ ಬುದ್ಧನ ಪ್ರಭಾವ ಇದ್ದಿದ್ರಿಂದ ನಮ್ಮ ದಾಸರ ಮೇಲೆ ಈ ಹಳ್ಳಿ ಹಳ್ಳಿಗೆ ಹೋಗಿ ಹೋಗಿ ಹಾಡು ಹೇಳುವ ಪ್ರಭಾವ ಅವರ ಮೇಲೆ ಆಗಿರ್ಬಹುದು ಅಂತ ನನಗನ್ನಿಸ್ತದೆ.

**ಚರ್ಚೆ : ಪ್ರೊ. ಡಿ.ಕೆ. ಸುಧಾಕರ್**

ಒಂದು ವಿಷಯವನ್ನ ನಾನಿಲ್ಲಿ ಸ್ಪಷ್ಟಪಡಿಸ್ತೇನೆ. ಮ.ನ.ಜವರಯ್ಯ ಹೇಳಿದ್ರು. ಕನಕನ ಕಿಂಡಿ ಹಾರೆ ತಗೊಂಡು ಮಾಡಿದ್ದು ಅಂತ ಹೇಳಿ. ಬಹುಶಃ ನೀವು ಆ ಉಡುಪಿಗೆ ಹೋಗಿ ಆ ದೇವಸ್ಥಾನದ ವಾಸ್ತುಶಿಲ್ಪವನ್ನು ಗಮನಿಸಿದ್ರೆ ಗರ್ಭಗುಡಿಯ ಎದುರಿಗೆ ನವರಂಗ ಅಂತಿರ್ತದೆ. ಅದಾದ ಮೇಲೆ ಚಂದ್ರಸಾಲೆ ಅಂದ್ರೆ ಭಕ್ತಾದಿಗಳು ಕೂರ್ಲಿಕ್ಕೆ ದೊಡ್ಡ ಹಜಾರ ಇರ್ತದೆ. ಅದೆಲ್ಲವೂ ಇರೋದು ಪಶ್ಚಿಮಾಭಿಮುಖವಾಗಿ. ಪೂರ್ವಾಭಿಮುಖವಾಗಿ ಶ್ರೀಕೃಷ್ಣನಿದ್ದ. ಆಗ ಅವನು ತಿರುಗಿಬಿಟ್ಟ ಅನ್ನೋದು ಕಟ್ಟುಕಥೆ. ಆದ್ರೆ ಮಧ್ವಾಚಾರ್ಯರು ಕೃಷ್ಣನನ್ನ ಸಂಸ್ಥಾಪಿಸಿದ್ದೇ ಪಶ್ಚಿಮಾಭಿಮುಖವಾಗಿ. ಆದ್ರೆ ಈ ಕಥೆ ಯಾಕೆ ಕಟ್ಟಿದ್ರು ಅಂತ ಅಂದ್ರೆ ಕನಕ ತನ್ನ ಹಿಂಬಾಲಕರೊಡನೆ ಆ ದೇವಸ್ಥಾನಕ್ಕೋಗಿ ಪೂಜೆ ಮಾಡ್ಬೇಕು ಅನ್ನೋ ದೃಢ ನಿರ್ಧಾರದಿಂದ ಉಡುಪಿಗೆ ಹೋದಾಗ ಕರ್ಮಠ ಮಾಧ್ವರು ಹೆಬ್ಬಾಗಿಲಿಡ್ತಾರೆ. ಅಂದ್ರೆ ಗರ್ಭಗುಡಿ, ನವರಂಗ, ಹಜಾರ ಆಮೇಲೆ ಮುಂದೆ ಒಂದು ದೊಡ್ಡ ಮುಂಬಾಗಿಲಿಡ್ತಾರೆ. ಮುಂಬಾಗಿಲಿಗೂ, ಗರ್ಭಗುಡಿಯ ಕೃಷ್ಣನಿಗೂ ನೇರವಾದ ಗೆರೆ ಎಳೆದ ಹಾಗಿರ್ತದೆ. ಆದ್ದರಿಂದ ಇವರು ನುಗ್ಗಿ ಬಿಡ್ತಾರೆ ಈ ಜನ ಅಂತ ಅವರಿಗೆ ಹೆದರ್ಕೊಂಡು ಬಾಗಿಲನ್ನ ಮುಚ್ಚಿದ್ರು. ಕೃಷ್ಣನ ದೇವಾಲಯಕ್ಕೆ ಇದ್ದಿದ್ದು ಪಶ್ಚಿಮದ ಕಡೆ ಹೆಬ್ಬಾಗಿಲು. ಇವತ್ತು ಅವ್ರು

ಗೋಪುರ ಕಟ್ಟಿದಾರಲ್ಲ ಅದು ಯಾವ ಕಡೆಗಿದೆ? ಪಶ್ಚಿಮದ ಹೆಬ್ಬಾಗಿಲತ್ರ, ಆದ್ದರಿಂದ ಈಗಿದನ್ನ ಯಾಕೆ ಕಟ್ಟಿದ್ರು ಅಂತ ಅಂದ್ರೆ ಆಗ ಅಲ್ಲಿ ಕನಕನಿಗೆ ಅವಮಾನ ಮಾಡಿದ್ದು ಆ ಅವಮಾನದಿಂದ ನಮ್ಮ ಮಾಧ್ವ ಮತಕ್ಕೆ, ಮಾಧ್ವ ಧರ್ಮಕ್ಕೆ ಕೆಟ್ಟ ಹೆಸರು ಬರ್ತದೆ ಅಂತ ಹೇಳಿ ಪೂರ್ವದಿಂದ ಪಶ್ಚಿಮಕ್ಕೆ ತಿರುಗಿದ ಅಂತ ಒಂದು ಕಟ್ಟು ಕಥೆಯನ್ನ ಕಟ್ಟಿ ಹರಿಬಿಟ್ರು. ಇವತ್ತು ಆ ಮಠಕ್ಕೆ ಲಕ್ಷಗಟ್ಟಲೆ, ಕೋಟಿಗಟ್ಟಲೆ ಹಣ ಹರಿದು ಬರ್ತಿದೆ ಆದ್ರಿಂದ ನೀವು ಇದನ್ನ ಅರ್ಥಮಾಡ್ಕೊಳ್ಬೇಕು. ಇನ್ನು ಎರಡನೆಯದಾಗಿ ನಮ್ಮ ಕೃಷ್ಣಮೂರ್ತಿಯವರು ಒಂದು ವಿಷಯ ಹೇಳಿದ್ರು, ಈ ಹನುಮಂತ ಇವ್ರೆಲ್ಲ ಶೂದ್ರ ಚೈತನ್ಯವುಳ್ಳವರು ಅಂತ್ಹೇಳಿದ್ರು. ಆದ್ರೆ ಆ ಶೂದ್ರ ಚೈತನ್ಯವುಳ್ಳವರನ್ನ ಮಾಧ್ವರೇನ್ಮಾಡಿದ್ರು ಅಂದ್ರೆ ಎಲ್ಲಿಗೆ ಕರ್‍ಕೊಂಡೋದ್ರು ಬ್ರಹ್ಮನ ಬಳಿಗೆ. ದೇವತಾ ತಾರತಮ್ಯ ಅಂತ ಬರುತ್ತೆ. ಮೊದಲು ಶ್ರೀಹರಿ, ಆಮೇಲಿನವರು, ಆಮೇಲಿನವರು. ಇವನನ್ನ ಹನುಮಂತನ್ನ ಅಲ್ಲಿಗೆ ತಗೊಂಡ್ಹೋಗಿರ್‍ತಾರೆ. ನೋಡ್ರಿ ಕನಕ ಹೇಗೆ ಮುಗುಮ್ಮಾಗೆ ಅಂತಹ ಕಟ್ಟು ಪಾಡನ್ನ ಒಡೀತಾನೆ ಅನ್ನೋದನ್ನ ನೀವು ಈ ಕೀರ್ತನೆಯಲ್ಲಿ ನೋಡ್ಬಹುದು. ನನ್ನ ಕಂದ ಹಳ್ಳಿಯ ಹನುಮ. ಇಲ್ಲಿ ಆ ಮಠದಿಂದ ಮಾಧ್ವರು ತಗೊಂಡ್ಹೋಗಿದ್ರಲ್ಲ ಬ್ರಹ್ಮನ ಹತ್ತಿರಕ್ಕೆ ಅವನನ್ನ ಕೂಡಲೆ ಎಳೆದು ತರ್‍ತಾನೆ. ಜೊತೆಗೆ ಇನ್ನೊಂದನ್ನ ಹೇಳ್ತೀನಿ ಈ ಉಷಾ ಮತ್ತು ಅವಳ ಗೆಳತಿ ಅನಿರುದ್ಧನಿಗೋಸ್ಕರವಾಗಿ ಗೆಳತಿ ಹೊರಟೋದಾಗ ಇವಳು ಕಾಯ್ತಾ ಇರ್‍ತಾಳೆ. ಕ್ಷಣಕ್ಷಣವೂ ಯುಗವಾಗಿ ಬಿಡ್ತದೆ. ಸೂರ್ಯ ಇದ್ದ ಕಡೆಯೇ ಇದಾನೆ ಅಂತ್ಹೇಳಿ ಭಾಸವಾಗಿ ಬಿಡುತ್ತೆ ಉಷಾಗೆ. ಆಗ ಅಂದ್ಕೊಳ್ತಾಳೆ ಸೂರ್ಯನ ರಥಕ್ಕೆ ಎರೆಯೆಣ್ಣೆಯಿಲ್ಲವೊ. ನಿಮಗೆ ಎರೆ ಎಣ್ಣೆ ಅಂದ್ರೆ ಅರ್ಥವಾಗುತ್ತೋ ಇಲ್ವೋ. ನಮ್ಮ ಹಳ್ಳಿಗಾಡುಗಳಲ್ಲಿ ಗಾಡಿಗಳ ಚಕ್ರಕ್ಕೆ ಎರೆಎಣ್ಣೆ ಅಂತ ಬರ್ತದೆ. ಎರೆ ಬಂಬು ಅಂತ ಇರ್‍ತದೆ. ಅದು ಆ ಎರೆಎಣ್ಣೆ, ಸೂರ್ಯ ರಥಕ್ಕೆ ಎರೆಎಣ್ಣೆ ಇದೆಯೋ ಇಲ್ಲವೋ ಅಂತ ಕನಕ ಹೇಳ್ತಾನೆ. ಇಲ್ಲಿ ನೀವು ಗಮನಿಸ್ಬೇಕು. ಎರೆಎಣ್ಣೆ ತಳವರ್ಗದ್ದು, ತಳವರ್ಗವನ್ನ ಸಂಕೇತಿಸುತ್ತದೆ. ಇದು ಮೇಲು ವರ್ಗದ ಸೂರ್ಯರಥಕ್ಕೆ ಒಂದು ರೀತಿಯ ಸಮ್ಮಿಲನ ಮಾಡ್ತಾನೆ. ಅಂದ್ರೆ ಏನು? ಈ ಕೆಳವರ್ಗ ಅಥವಾ ತಳವರ್ಗ ಮೇಲ್ವರ್ಗದೊಡನೆ ಸರೀಕರಾಗಿ ಬಾಳಬೇಕು ಅಂತಕ್ಕಂತ ಒಂದು ನಿಲುವು ಕನಕದಾಸನಿಗಿದೆ. ಆದ್ರಿಂದ ಇಲ್ಲಿ ಒಂದು ಕಡೆ ಒಡೆಯುವುದು, ಇನ್ನೊಂದು ಕಡೆ ಕಟ್ಟುವುದು ಮಾಡ್ಕೊ ಬಂದಿದಾನೆ ಅವನ ಕೃತಿಗಳಲ್ಲಿ ಮತ್ತು ಕೀರ್ತನೆಗಳಲ್ಲಿ. ಉಷಾದೇವಿ ಮತ್ತು ಅನಿರುದ್ಧನ ಮದುವೆ ಮನೇಲಿ ಎರಡು ಧರ್ಮಗಳನ್ನ ಒಗ್ಗೂಡಿಸ್ತಕ್ಕಂತ ಒಂದು ಪ್ರಯತ್ನವಾಗಿದೆ. ಈ ದೃಷ್ಟಿಯಿಂದ ನಾವು ಕನಕನನ್ನ ಅಭ್ಯಾಸ ಮಾಡಬೇಕಾಗ್ತದೆ.

**ಚರ್ಚೆ : ಬಂಜಗೆರೆ**

ಕೃಷ್ಣನ ವಿಗ್ರಹದ ಬಗ್ಗೆ ಇನ್ನೂ ಕೆಲವು ಚರ್ಚೆಗಳಿವೆ. ಪಶ್ಚಿಮ ದಿಕ್ಕಿನಿಂದ ದ್ವಾರ ಇರೋದು, ಹಿಂದೂ ದೇವಾಲಯದ ವಾಸ್ತುಶಿಲ್ಪಗಳ ಪ್ರಕಾರ ಅದು ಹಿಂದೂಗಳದ್ದೇ ಅಲ್ಲ ಅಂತ, ಜೈನ ಯಕ್ಷನ ವಿಗ್ರಹ ಅಲ್ಲಿದ್ದದ್ದು, ನಿಂತಿರುವ ಭಂಗಿಯೂ ಕೂಡ. ಅದಕ್ಕೆ ಸಮಾನವಾದ ಅಂಶವನ್ನ ನಾವು ಮಲೆ ಮಾದಪ್ಪನ ಬೆಟ್ಟದಲ್ಲಿ ಕಾಣ್ತೀವಿ. ಪಶ್ಚಿಮ ದಿಕ್ಕಿಗೆ ಮುಖ ಮಾಡಿರುವಂತಾದ್ದು ಅಲ್ಲಿರುವಂತ ಶ್ರವಣನ ಬೋಳಿ, ಶ್ರವಣ ದೊರೆಯನ್ನ ಸಂಹಾರ ಮಾಡಿದ ಮೇಲೇನೇ ಮಲೆ ಮಾದಪ್ಪ ಅಲ್ಲಿ ತಳ ಆಗೋದು, ಆ ದೇವಸ್ಥಾನದ ಮೂಲ ಚೌಕಟ್ಟೇ ಜಿನಾಲಯದ ತರ ಇದೆ. ಅದೇ ತರ ಕರಾವಳಿಯಲ್ಲಿ ಜೈನರು ಬಹಳ ಪ್ರಾಬಲ್ಯದಲ್ಲಿದ್ದದ್ದು ನಂತರ ಅಲ್ಲಿ ವೈಷ್ಣವ ಧರ್ಮ ಹೋಗಿದ್ದನ್ನ ನಾವು ಗಮನಿಸಿಕೊಂಡರೆ, ಬಾಗಿಲು ಮುಚ್ಚುಬ್ಬಿರ್‍ಬೇಕವ್ರು. ಪಶ್ಚಿಮದ ಬಾಗಿಲು ಅಶುಭ ಅಂತ. ಇವರು ಚಳುವಳಿ ಮಾಡಿರ್‍ಬೇಕು ಆ ದಿಕ್ಕಿನಿಂದಲೇ ಅವನನ್ನ ನೋಡಿ ಅಭ್ಯಾಸ. ಆ ಬಾಗಿಲನ್ನ ತೆಗಿ ಅಂತ. ಆದ್ರಿಂದ ಆಯ್ತು ಅಂತ ಒಂದು ರಾಜಿ ಸಂಧಾನ, ಕಿಂಡಿ ಬಿಡೋದು ಇತ್ಯಾದಿ ಸಂಭವಿಸಿರ್‍ಬೇಕು.

**ಚರ್ಚೆ : ಮ.ನ.ಜವರಯ್ಯ**

ಪುರೋಹಿತ ವರ್ಗದ ಜನ ಎಂದೂ ಅವ್ರು ಗುಡಿಗುಂಡಾರಗಳನ್ನ ಕಟ್ಟಿದವರಲ್ಲ ಎನ್ನುವ ಮಾತಿದೆ. ಎರಡ್ನೇ ಪಾಯಿಂಟು ಅಂಬೇಡ್ಕರ್ ಸಂಶೋಧನೆಯಲ್ಲಿ ನಿರೂಪಿತವಾಗಿರ್‍ತಕ್ಕಂತ ಅಂಶವೇನಂದ್ರೆ ಇವತ್ತಿನ ತಿರುಪತಿ ಗುಡಿ ಏನಿದೆ ಅದು ಮೂಲತಃ ಬುದ್ಧವಿಹಾರ ಆಗಿತ್ತು ಅಂತ. ಒಂದು ವೇಳೆ ಈ ಪ್ರಾಚೀನ ಗುಡಿ ಗುಂಡಾರಗಳು ಅಂತ ಏನು ಕರೀತೀವಿ ಎಲ್ಲವೂ ಮೂಲತಃ ಜೈನ ಮಂದಿರಗಳು, ಬುದ್ಧವಿಹಾರಗಳು ಆಗಿದ್ವು ಅನ್ನುವಂತಹ ತೀರ್ಮಾನವಾಗುತ್ತೆ.

**ಚರ್ಚೆ : ಹನೂರು**

ಯಾವ್ಯಾವ ಕಾಲಕ್ಕೆ ಯಾವ್ಯಾವ ಧರ್ಮ ಪ್ರಾಬಲ್ಯಕ್ಕೆ ಬಂತೋ. ನೇತೃತ್ವ ವಹಿಸ್ತೋ ಆಗ ಆ ದೇವ್ರುಗಳೂ ಕೂಡ ಆ ಬಣ್ಣವನ್ನ ಬಳ್ಕೊಳ್ತಾವೆ.

**ಪ್ರಶ್ನೆ : ಹೊರೆಯಾಲ ದೊರೆಸ್ವಾಮಿ**

ವಚನ ಸಾಹಿತ್ಯ ಮತ್ತು ದಾಸ ಸಾಹಿತ್ಯದ ಬಗ್ಗೆ ಎರಡು ಲಕ್ಷಣಗಳನ್ನು ಹೇಳ್ತಾರೆ. ವಚನ ಸಾಹಿತ್ಯ ಅಂದ್ರೆ ಅದು ಕಲ್ಯಾಣ ಕೇಂದ್ರಿತವಾಗಿತ್ತು. ಹರಿದಾಸರು ಅಂದ್ರೆ ಸುತ್ತಾಡುವವರಾಗಿದ್ರು. ಇದಕ್ಕೇನು ಮುಖ್ಯ ಕಾರಣ. ಬಹುಶಃ ಅದಕ್ಕೆ ಈ ಕಾರಣ ಇರಬಹುದು. ವಚನ ಸಾಹಿತ್ಯದ ಹೊತ್ತು 12ನೇ ಶತಮಾನ. 12ನೇ ಶತಮಾನದ ಹೊತ್ತಿನಲ್ಲಿ ಭಾರತೀಯ ಮನಸ್ಸುಗಳು ಈ ಕಲ್ಯಾಣ, ಈ ಶರಣರು ಒಟ್ಟಿನಲ್ಲಿ ತನ್ನ ಬದುಕನ್ನ ಮೂಲಭೂತವಾಗಿ ಬದಲಾಯಿಸಿಕೊಳ್ಳುವ ಒಂದು ಪ್ರಕ್ರಿಯೆಗೆ ಒಳಗಾಗಿಸಿ ಕೊಳ್ಳುವುದಕ್ಕೆ ಮತ್ತು ಅದರೊಳಗೆ ಕ್ರಾಂತಿಕಾರಕವಾದುದನ್ನ ಅಥವಾ ಬದಲಾವಣೆಯನ್ನ ಸಮಾಜದಲ್ಲಿ ತರುವುದಕ್ಕೆ ತನ್ನೊಳಗೇ

ಚಿಂತನೆಯನ್ನ ನಡೆಸೋದಕ್ಕೆ ಸಾಧ್ಯವಾಯಿತು. ಆ ರೀತಿಯ ಚಳುವಳಿ ಭಾರತೀಯ ನೆಲದಲ್ಲಿ ಇನ್ನೆಲ್ಲೂ ಕಂಡು ಬರೋದಿಲ್ಲ. ಆದ್ರೆ ಭಕ್ತಿ ಸಾಹಿತ್ಯ ಏನಿದೆ, 13–14ರ ನಂತರ ಭಕ್ತಿ ಸಾಹಿತ್ಯ ಏನಿದೆ ಈ ಎಲ್ಲ ಭಕ್ತಿ ಸಾಹಿತ್ಯ ಕಂಡು ಬರುವಂತಾದ್ದು 13ನೇ ಶತಮಾನದ ನಂತರ. ಎಲ್ಲ ಪ್ರಾಂತ್ಯಗಳಲ್ಲೂ ಪ್ರಧಾನವಾಗಿ ಕಂಡು ಬರುತ್ತೆ. ಈ ತಮಿಳು ಪ್ರಾಂತ್ಯದ ಆಂಡಾಳ್, ಆಳ್ವಾರ್ ಅದು ಬೇರೆ ನೆಲೆಗೆ ಬರ್‍ತದೆ. ಈ ತರದ ಭಕ್ತಿ ಸಾಹಿತ್ಯ ಏನು ಹುಟ್ಕೊಳ್ತು 13ನೇ ಶತಮಾನದಲ್ಲಿ, ಅಲ್ಲಾವುದ್ದೀನ್ ಖಿಲ್ಜಿ ದೆಹಲಿಯಲ್ಲಿ ಅಧಿಕಾರದಲ್ಲಿದ್ದು ಮಲ್ಲಿಕಾಫರ್‌ನ ಮೂಲಕ ಭಾರತವನ್ನು ಆಕ್ರಮಿಸಿ ಕೊಳ್ಳಲು ನಡೆಸಿದ ಒಂದು ಪ್ರಯತ್ನಕ್ಕೆ ಪ್ರತಿಕ್ರಿಯಾತ್ಮಕವಾಗಿ ಇಲ್ಲಿದ್ದ ಹಿಂದೂಗಳು, ಹಿಂದೂಗಳು ಅಂದ್ರೆ ಬೇರೆ ಅರ್ಥದಲ್ಲಿ, ಒಟ್ಟಾರೆ ಇಲ್ಲಿಯ ಮನಸ್ಸುಗಳು ಅದಕ್ಕೆ ಪ್ರತಿಕ್ರಿಯಾತ್ಮಕವಾಗಿ ಈ ರೀತಿಯಾಗಿ ಅದನ್ನ ನೇರವಾಗಿ ಎದುರಿಸುವುದಕ್ಕೆ ಆಗ್ದೇ ಇರುವುದರಿಂದ ಎರಡನೆಯ ದಾರಿಯಲ್ಲಿ ಈ ರೀತಿ ಹುಡುಕ್ಕೊಳ್ತಾ ಹೋದ್ರಾ ಅಂತ ನನ್ನ ಪ್ರಶ್ನೆ.

## ಕನಕದಾಸ : ಸಮುದಾಯ ನಾಯಕತ್ವ

### ಡಾ. ಹಿ.ಶಿ. ರಾಮಚಂದ್ರೇಗೌಡ

ನಾನು ಹೇಳೋದು ಆಕಡೆ ಈಕಡೆ ಹೋಗ್ಬಾರ್‍ದು ಮತ್ತು ನಾನೇನ್ ಹೇಳ್ತಾಯಿದೀನಿ ಅಂತ ಅನ್ನೋದು ನಿರ್ದಿಷ್ಟವಾಗಿ ಗೊತ್ತಾಗ್ಬೇಕು ಅನ್ನೋ ಕಾರಣಕ್ಕೋಸ್ಕರವಾಗಿ, 10 ನಿಮಿಷದ ಟಿಪ್ಪಣಿ ಆಗ್ಬಹುದು, ಅದನ್ನ ಬರ್‍ಕೊಂಡ್ ಬಂದಿದೀನಿ. ಅದನ್ನ ಓದುತ್ತೀನಿ. ಯಾಕಂದ್ರೆ ನಾವು ಭಾಷಣ ಮಾಡಿ ಅಭ್ಯಾಸ ಆಗಿರೋದ್ರಿಂದ ಈ ಓದೋದು ಕೂಡ ನಾವೆಲ್ಲ ಮೇಷ್ಟ್ರುಗಳಾಗಿದ್ದಾಗ ಮೊದ್ಲೆಲ್ಲಾ ಓದ್ತಾ ಇದ್ವಿ. Neat ಆಗಿ ಬರೋದು. ಈಗ ಓದೋದ್ನ ಯಾರೂ ಮಾಡಲ್ಲ. ಭಾಷಣನೇ ಜಾಸ್ತಿ ಮಾಡ್ತಾರೆ. ಹಾಗಾಗಿ ಅದನ್ನ ಅನುಸರಿಸ್ಬೇಕು ಅನ್ನೋ ಕಾರಣಕ್ಕಾಗಿ ಬಂದಿದೀನಿ. ಮೊದಲ್ನೇದಾಗಿ ಎರಡು ಉದಾಹರಣೆಗಳನ್ನ ನಿಮ್ಮ ಮುಂದೆ ಪ್ರಸ್ತಾಪಮಾಡಿ, ನಮ್ಮ ಗೋಪಿನಾಥ್ ಕೂಡ ರೆಡಿ ಆಗಿ ಬಂದಿದಾರೆ. ನಾನು ಪ್ರಸ್ತುತಕ್ಕೇನೇ ವಿಷಯಾನ ತರ್‍ತೀನಿ. ಮೊದ್ಲು ಇದರ ಬಗ್ಗೇನೇ ಪ್ರಸ್ತಾಪ ಮಾಡಿದ್ವಿ–ರಾಷ್ಟ್ರೀಯ ಸಂತಕವಿ ಕನಕದಾಸ ಅಂತ. ನನ್ನ ವಿಷಯಕ್ಕೆ ಇದು ಹತ್ತಿರವಾಗಿರುವಂಥದ್ದು. ನಾನೇ ಪ್ರಸ್ತಾಪ ಮಾಡಬೇಕಾಗಿರುವಂಥದ್ದು. ಯಾಕೆ ಕನಕದಾಸರನ್ನ ರಾಷ್ಟ್ರೀಯ ಕವಿ ಅಂತ ಕರೀತಾ ಇದಾರೆ? ಮತ್ತೆ ಯಾಕೆ ಸಂತಕವಿ ಅಂತ ಕರೀತಾ ಇದಾರೆ? ಇದೂ ಕರ್ನಾಟಕ ಸರ್ಕಾರದಿಂದ ಆಗಿರೋದು. ಸಮುದಾಯದ ಒತ್ತಾಯದ ಹಾಗೂ ಅಪೇಕ್ಷೆಯ ಮೇರೆಗೂ ಆಗಿರುವಂಥಾದ್ದು. ಇದು ಯಾಕೆ ಈ ತರ ಆಗುತ್ತೆ? ಅಂತ ಕೇಳ್ದಾಗ ಬಹಳ ಮುಖ್ಯವಾಗಿ ಇಲ್ಲಿ Cultrual Politics ಇರುವಂಥಾದ್ದು ಅಂತ ಸ್ಪಷ್ಟವಾಗಿ ಗೊತ್ತಾಗುತ್ತೆ. ರಾಷ್ಟ್ರೀಯ ಅಂತ ಒಬ್ಬ ಕವಿ, ಸಾಧಕರನ್ನ ಹೇಳಬೇಕಾಗಿಲ್ಲ. ಯಾಕೆ ರಾಷ್ಟ್ರೀಯ ಅನ್ನುವಂತ ಈಥರದ ಡೈಕಾಟಮಿಗಳು ಬರ್‍ತವೆ ಅಂದ್ರೆ ಇವತ್ತು ಒಂದು ದೊಡ್ಡ ಸಮಸ್ಯೆ ಜಗತ್ತಿನಾದ್ಯಂತ ಇದೆ. ಅದು local and global. ಗ್ಲೋಬಲ್ ಅನ್ನುವಂಥಾದ್ದು ಬಹಳ ಮಹತ್ವದ್ದು ಅನ್ನುವ ಅಭಿಪ್ರಾಯ ಬಂದುಬಿಟ್ಟಿದೆ. ಇದು ಪ್ರಭುತ್ವ ಮಾಡಿರುವಂಥ ಅದರಲ್ಲೂ corporate section ಹೆಚ್ಚು ಒತ್ತಾಯ ಮಾಡ್ತಾ ಇದೆ. ಗ್ಲೋಬಲ್ ಆಗೋದರ ಬಗ್ಗೆ ಆದಂಥಾದ್ದನ್ನ ಇದು globalization ಅನ್ನುವಂತಾಗಿದೆ. ಇದು ಆರ್ಥಿಕವಾದದ್ದು. Cultural globalization ಇಲ್ಲ. ಅದೆಲ್ಲ ಬರೀ ಸುಳ್ಳು. Culture ಮಾರಾಟ ಆಗ್ತಾ ಇದೆ. Developed countries under developed contries ಮತ್ತು ಇನ್ನೂ ಹಿಂದುಳಿದಿರುವ ದೇಶಗಳು ಕಲ್ಚರ್‌ನ ಕೊಳ್ತಾ ಇದಾವೆ. ಕಲ್ಚರ್‌ನ ತಗೊಂಡ್ಹೋಗ್ತಾ ಇದಾರೆ. ತಮ್ಮನ್ನ ಸಮೃದ್ಧ ಮಾಡ್ಕೊತಾ ಇದಾರೆ. ತಮ್ಮನ್ನ ವೆರೈಟಿ ಮಾಡ್ಕೊಳ್ತಾ ಇದಾರೆ. ನಮ್ಮನ್ನ ಒಂದು ಥರ ಮನೋರಂಜನೆ ಮಾಡ್ಕೊಳ್ತಾ ಇದಾರೆ. ಆದ್ರೆ ಕಲ್ಚರಲ್ ಆಗಿ globalization ಇವತ್ತಿಗೂ ಇಲ್ಲ. ಇರುವಂಥದ್ದು commercial globalization ಮಾತ್ರ. ಆದ್ರೆ ಆ ತರದ ಕಾರಣಕ್ಕೋಸ್ಕರವಾಗಿ globalization ಈ ತರ ಇರೋದ್ರಿಂದ ಮತ್ತು ಅದೇ globalization ನಾವು ಅನುಸರಿಸುತ್ತಾ ಇರೋದ್ರಿಂದ ನಮ್ಗೆ ಗೊತ್ತಿಲ್ದೇನೆ ನಾವು ಪ್ರಜ್ಞಾವಸ್ಥೆಯಲ್ಲೋ ಅರೆ ಪ್ರಜ್ಞಾವಸ್ಥೆಯಲ್ಲಿಯೋ ಗ್ಲೋಬಲೈಸ್ ಆಗುವಂಥಾದ್ದು ಸಾಧನೆ. ಲೋಕಲ್ ಆಗುವಂಥಾದ್ದು identityಯನ್ನ ಕಳೆದುಕೊಳ್ಳುವ ರೀತಿ ಅನ್ನೋ ಒಂದು ಮನೋಧರ್ಮ ಬಂದಿದೆ. ಹಾಗಾಗಿ ನಾವೇನ್ಮಾಡ್ತೀವಿ ಅಂದ್ರೆ ತಕ್ಷಣಕ್ಕೆ ರಾಷ್ಟ್ರೀಯರಾಗೋದಕ್ಕೆ ಪ್ರಯತ್ನ ಪಡ್ತೀವಿ. ಪ್ರತಿಯೊಂದು ಸಮುದಾಯನೂ ಪ್ರತಿಯೊಂದು ವರ್ಗವೂ ರಾಷ್ಟ್ರೀಯ ಆಗ್ಬೇಕು. ಇದು ಕಾಣಿಸಿಕೊಳ್ಳುವ ಈ ಹೊತ್ತಿನ ಎಲ್ಲಿ ಕಳೆದುಹೋಗುತ್ತೇವೋ ಆ ಕಾರಣಕ್ಕೋಸ್ಕರವಾಗಿ ಕಾಣಿಸಿಕೊಳ್ಳಬೇಕು ಅನ್ನುವ ಒಂದು ತವಕ. ಅದರ ವಿಷಯ ಇರ್‍ಲಿ, ಇಲ್ದೇ ಇರ್‍ಲಿ, ಸಾಧನೆ ಇರ್‍ಲಿ ಇಲ್ಲದಿರ್‍ಲಿ ಕಾಣಿಸಿಕೊಳ್ಳಬೇಕು ಅಂತ ಇವತ್ತಿರೋದ್ರಿಂದ ಆ ಕಾಣಿಸಿಕೊಳ್ಳುವ ಒಂದು ತತ್ವವಾಗಿ ಇವತ್ತು ನಾವು ನಮ್ಮನ್ನೇ ಪ್ರದರ್ಶನ ಮಾಡ್ಕೊಳ್ಳೋಕೆ ರಾಷ್ಟ್ರೀಯ ಹಂತದಲ್ಲಿ ಅಥವಾ ನಾವು ಕಂಡ ನಾಯಕರನ್ನ, ಕವಿಗಳನ್ನ ರಾಷ್ಟ್ರೀಯ ಹಂತದಲ್ಲಿ ಫೋಸ್ ಮಾಡ್ಲಿಕ್ಕೆ ಪ್ರಯತ್ನಪಡ್ತೇವೆ. ಆ ಕಾರಣಕ್ಕೋಸ್ಕರವಾಗಿ ಎಲ್ಲರೂ ಕೂಡ ಈ ತರದ ರಾಷ್ಟ್ರೀಯ ಅನ್ನಿಸ್ಕೊಳ್ಳುವಂತಹ ಈ ತರದ ರಿಯಲ್ ಆಗಿಲ್ಲದಿರುವ ಒಂಥರ ಕೃತಕವಾಗಿರುವುದರ ಕಡೆಗೆ ನಡೀತಾ ಇದೀವಿ. ಆದರೆ ರಾಷ್ಟ್ರವಾಗಿ ರಾಷ್ಟ್ರೀಯ ಅಂತ ಅನ್ನುವ ಪರಿಕಲ್ಪನೆ ಇದೆಯಲ್ಲ ರಾಷ್ಟ್ರೀಯ ಅಂತ ಕರೆದುಕೊಳ್ಳದೇನೇ ಲೋಕಲ್ ಅನ್ನುವಂಥಾದ್ದು ಕೂಡ ರಾಷ್ಟ್ರೀಯನೇ. ಒಂದು ರಾಷ್ಟ್ರದೊಳಗಡೇನೇ ಇರ್‍ತಕ್ಕಂತಾದ್ದು ಅದೇನು ಪ್ರತ್ಯೇಕವಾಗಿ ಇರೋದಲ್ಲ ಲೋಕಲ್ ಅನ್ನುವಂತಾದ್ದು. ಹಾಗಾಗಿ ಈ ಲೋಕಲ್ ಅನ್ನುವಂಥಾದ್ದು ಕಲ್ಚರ್‌ಲ್ಲಿ ಯಾವ್ದು ಮುಖ್ಯ ಅಂತ ಅಂದ್ರೆ

ಲೋಕಲ್ ಆಗಿರೋದೇನೆ. ಒಂದು ಸಾಹಿತ್ಯಕ್ಕೆ ಮತ್ತು ಜಾನಪದಕ್ಕೆ ಸಂಬಂಧಪಟ್ಟ ಹಾಗೆ ಸಾರ್ವತ್ರಿಕ ಅಭಿಪ್ರಾಯಗಳಿರ್ಬಹುದು. ಆದರೆ ಅವು ಅವತರಿಸುವಂತಾದ್ದೆಲ್ಲಿ ಅಂದ್ರೆ ಸ್ಥಳೀಯವಾದ ಜನಪದಗಳಲ್ಲಿ ಅವು ಅವತರಿಸುತ್ತೆ. ಎಲ್ಲಾ ಅಂಶಗಳೂ ಅವು ಪ್ರದರ್ಶನ ಆಗೋದು ಪರ್‌ಫಾರ್ಮ್ ಆಗೋದು ಸ್ಥಳೀಯವಾಗೇನೇ. ಭಾಷೆ ಸ್ಥಳೀಯವಾಗಿರುತ್ತೆ, ನಡವಳಿಕೆಗಳು ಸ್ಥಳೀಯವಾಗಿರುತ್ತೆ, ನಂಬಿಕೆಗಳು ಸ್ಥಳೀಯವಾಗಿರುತ್ತೆ. ಒಳಗಡೆ ನೀವು ವಿಶ್ವಾತ್ಮಕವಾದುದನ್ನ ಹುಡುಕಬಹುದು. ಹಾಗಾಗಿ ನಿಜವಾಗಿಯೂ ಒಬ್ಬ ವ್ಯಕ್ತಿ ಸಮಾಜ ಅನ್ನುವಂಥಾದ್ದು ರಿಯಲ್ ಅರ್ಥದಲ್ಲಿ ಅವು ರಾಷ್ಟ್ರೀಯನೇ. ಆದ್ರೆ ಇವತ್ತು ಗುರುತಿಸಿಕೊಳ್ಳುವ ಕಾರಣಕ್ಕೋಸ್ಕರವಾಗಿ ಈ ಅಂಶಗಳು ನಮಗೆ ಬರ್ತಾ ಇದಾವೆ. ಕನಕದಾಸರನ್ನ ನೀವು ಸಂತ ಅಂತ ಕರೀಲೇ ಬೇಕಾಗಿಲ್ಲ. ಹಾಗಾಗಿ ರಾಷ್ಟ್ರೀಯ ಅಂತ ಕರೀಲೇಬೇಕಾಗಿಲ್ಲ. ಅವರು ಒಂದೊಂದು ಸಂಸ್ಕೃತಿಯ ದಾಖಲೆಯಾಗಿ ಹುಟ್ಟಿ ಬೆಳೆದಿದ್ರಿಂದ ಅವರು ರಾಷ್ಟ್ರೀಯನೇ ಆಗಿರ್ತಾರೆ ಅನ್ನುವಂಥಾದ್ದು. ಇಲ್ಲಿ ಯಾಕೆ ಇದಾಗಿದೆ ಅಂತ ಹೇಳಿದ್ರೆ ನಿಮಗೆ ಗೊತ್ತಿರುವ ಹಾಗೆ ಬೇರೆ ಬೇರೆ ಪೀಠಗಳು ಸರ್ಕಾರದಿಂದ ಸ್ಥಾಪನೆಯಾಗಿರೋದು ಬೇರೆ ಬೇರೆ ಜನರನ್ನ ಓಲೈಸುವ ಕಾರಣಕ್ಕಾಗಿ. ಬೇರೆ ಬೇರೆ ಜನರನ್ನ ತಮ್ಮ ವೋಟ್ ಬ್ಯಾಂಕ್ ಆಗಿ ಮಾಡಿಕೊಳ್ಳುವ ಕಾರಣಕ್ಕಾಗಿ ಇಲ್ಲಿ ಕನಕದಾಸರನ್ನ, ಕನಕಪೀಠವನ್ನು ಕೂಡ ರಾಜಕೀಯವಾಗಿ ಬಳಸಿಕೊಂಡಿರುವಂತಾದ್ದೇ. ಯಾಕಂದ್ರೆ ಕನಕದಾಸರು ಇಷ್ಟು ದಿವಸ ಕಣ್ಣಿಗೆ ಬೀಳದಂಥವರು ಇತ್ತೀಚೆಗ್ಯಾಕೆ ಕಣ್ಣಿಗೆ ಬಿದ್ರು? ಅನ್ನುವಂತಾದ್ದಿದೆಯಲ್ಲ ಅದು ಎರಡು ರೀತಿಯಲ್ಲಿ ಈ ಸಾಂಸ್ಕೃತಿಕ ರಾಜಕೀಯ ನಡೀತಾ ಇದೆ. ಒಂದು Exploitory ಇನ್ನೊಂದು Identity. ಯಾವ್ವು Exploitory ಅಂದ್ರೆ ಇವತ್ತು ನಿಮ್ಗೆ ಗೊತ್ತಿರುವ ಹಾಗೇನೇ ನಿಜವಾದ Politics ಇಲ್ಲ. Ethical Politics ಎನ್ನುವಂಥಾದ್ದು ಇವತ್ತು ನಮ್ಮ ಮುಂದೆ ಇಲ್ಲ. ಒಂದು ಜಾತಿ ಇನ್ನೊಂದು ಕ್ಲಾಸ್ ಮತ್ತು ದುಡ್ಡುಗಳು ಮಾತ್ರ ನಮ್ಮ ಮುಂದೆ operate ಆಗ್ತಾ ಇದಾವೆ. real politics ಅನ್ನುವಂತಾದ್ದಿಲ್ಲ. ಆ ಕಾರಣಕ್ಕೋಸ್ಕರವಾಗಿ ಅನೇಕ ಸಲ ನಮಗೆ ಯಾಕೆ ಗೊಂದಲ ಉಂಟಾಗುತ್ತೆ ಅಂತ ಅಂದ್ರೆ ನೆನ್ನೆ ಈ ಪಕ್ಷದಲ್ಲಿದ್ದವನು ನಾಳೆ ಆ ಪಕ್ಷಕ್ಕೋಗಿರುತ್ತಾನೆ, ಆ ಪಕ್ಷದಲ್ಲಿದ್ದವ ಇನ್ನೊಂದು ಪಕ್ಷಕ್ಕೋಗಿರ್ತಾನೆ. ನಮ್ಗೆ ಎಷ್ಟು ಬೇಸರ ಆಗುತ್ತೆ ಅಂತ ಅಂದ್ರೆ ಆ Political Ideology ಬಗ್ಗೆ ಯೋಚ್ನೆ ಮಾಡಿದ್ರೇನೆ ಬೇಸರ ಆಗುತ್ತೆ. ಒಂದೊಂದ್ಸಲ ಎಷ್ಟು ಬೇಸರ ಆಗುತ್ತೆ ಅಂದ್ರೆ ಯಾವನಿಗೆ ಮಾರಾಯಾ Vote ಕೋಡೋದು? ಅಂತ ನಮ್ಗೆ ಸಿಕ್ಕಾಪಟ್ಟೆ ಬೇಸರ ಆಗಿರುತ್ತದೆ. ಆದ್ರೆ ನಮಗೆ ಬೇಸರ ಆಗಿರುತ್ತೆ, ಅವರಿಗೆ ಬೇಸರಕ್ಕೆ ಕಾರಣಗಳೇ ಇಲ್ಲ. ಯಾಕಂದ್ರೆ ರಾಯಕೀಯ ಅನ್ನುವಂತಾದ್ದು ಒಂದು ರೀತಿಯ ಆಟ ಅಂತ ತಿಳ್ಕೊಂಡಿದಾರೆ. ಆ ಆಟದಲ್ಲಿ ಯಾರು ಗೆಲ್ತಾರೋ ಅಷ್ಟೇ ಮುಖ್ಯ ಆಗಿರುತ್ತೆ ಹೊರತು ಆ ಕಾರಣಕ್ಕೋಸ್ಕರವಾಗಿ ಇವತ್ತು Political Ideology ಅನ್ನುವಂತಾದ್ದು real ethical politics ಅನ್ನುವಂಥಾದ್ದು ಇಲ್ಲ. ನಾವು ಏನ್ಮಾಡ್ತೀವಿ ಅಂತ ಅಂದ್ರೆ ಸಾಮಾನ್ಯ ಜನರು ಮತ್ತು ನಾವು ಪ್ರಜೆಗಳು ಮೈಕೈ ಎಲ್ಲವನ್ನೂ ಹುರಿ ಮಾಡ್ಕೊಳ್ತೀವಿ. ಮನಸ್ಸೆಲ್ಲಾನೂವೆ ಗೊಂದ್ಲ ಮಾಡ್ಕೊಳ್ತೀವಿ. ಈತರ ಆಗೋಗಿದ್ಯಲ್ಲ ಅಂತ. ಯಾಕಂದ್ರೆ ರಾಜಯಕೀಯ ಇಲ್ಲದ ಮೇಲೆ ತಾತ್ವಿಕತೆಯನ್ನು ಎಲ್ಲಿ ಹುಡುಕ್ತೀರಿ ನೀವು. ಹಾಗಾಗಿ ಇವತ್ತು ಜಾತಿ ಪದ್ಧತಿ ಮಾಡ್ತಿದಾವೆ. ಕ್ಲಾಸ್ ಆಪರೇಟ್ ಮಾಡ್ತಿದಾವೆ. ಇನ್ನೂ ಮುಂದೆ ಹೇಳ್ಬೇಕಂದ್ರೆ ಮನಿ ಆಪರೇಟ್ ಮಾಡ್ತಿದೆ. ಮುಖ್ಯವಾಗಿ ಇವತ್ತು ಜಾತಿ ಮತ್ತು ದುಡ್ಡು ಮಾತ್ರವೇ ಆಪರೇಟ್ ಮಾಡ್ತಿದಾವೆ. ಅವುಗಳಿಂದಾನೆ identify ಆಗ್ತಾ ಇದಾವೆ. ಇನ್ನೊಂದು ಉದಾಹರಣೇನಾ ಸಮರ್ಥನೆಯಾಗಿ ನಿಮ್ಗೆ ಹೇಳ್ತೀನಿ. ಈ ಜೋಕನ್ನು ಅಮೆರಿಕಾದಲ್ಲಿ ಒಬ್ಬ ಇಂಜಿನಿಯರ್ ಹೇಳಿದ್ರು. ಆಮೇಲೆ ಅದನ್ನು ನಾನು ಬರಗೂರು ಅವರಿಗೆ ಫೋನ್ ಮಾಡಿ ತಿಳ್ಕೊಂಡೆ. ನಂತರ ಇನ್ನೊಬ್ಬರನ್ನೂ ನಾನು consult ಮಾಡ್ದೆ. ಇವತ್ತು ಕರ್ನಾಟಕ ಏನಪ್ಪಾ ಅಂತ ಕೇಳಿದ್ರೆ ಎಲ್.ಕೆ.ಜಿ.–ಲಿಂಗಾಯತ, ಕುರುಬ ಮತ್ತು ಗೌಡರ ರಾಜಕೀಯ. ಅಲ್ಲಿ ನನಗೆ ಇದನ್ನ ಅಮೆರಿಕಾದಲ್ಲಿ ಹೇಳಿದ್ರು. ನಾನು 'ಬರಗೂರು ಈ ತರ ಬರ್ತಾಯಿದೆಯಲ್ಲ ಏನು ಮಾರಾಯರೇ' ಅಂದ್ರೆ "ಹೌದು ಸರ್, ಹೀಗಿದೆ ಎಲ್.ಕೆ.ಜಿ. ಲಿಂಗಾಯತ್ರದ್ದು, ಕುರುಬರದ್ದು ಹಾಗೂ ಗೌಡರದ್ದು ರಾಜಕೀಯ ಇರುವಂತಾದ್ದು" ಇದರ ಹಿಂದೆ not a simple thing. ನೀವು ಸಣ್ಣ ಸಣ್ಣ minority ಗುಂಪುಗಳು ಕಾಣದಂಗೆ ಹೊಸಕಿಕೊಂಡು ಹೋಗ್ತಾ ಇದಾವೆ. ಈಗ ಅವರಿಗೆ ಎಲ್ಲಿಂದ ಮೇಲಕ್ಕೆ ಬರೋದು ಅನ್ನೋದಿದೆಯಲ್ಲಾ ತುಂಬ ಕಷ್ಟ ಆಗ್ತಿದೆ. ಯಾಕಂದ್ರೆ ಇವತ್ತು ಮತದಾರ ಕೂಡ commodityನೇ. ಮತದಾರರು ಮತದಾರರಾಗಿ ಉಳಿದೇ ಇಲ್ಲ. ಆ ಕಾರಣಕ್ಕೋಸ್ಕರವಾಗಿ ಇವತ್ತು ಏನಾಗಿದೆ ಅಂದ್ರೆ ವಾಸ್ತವವಾಗಿ ಕುರುಬ ಜನಾಂಗ emerge ಆಗ್ತಿರೋದು ಇತ್ತೀಚೆಗೆ. ಕರ್ನಾಟಕದಲ್ಲಿ ಮೊತ್ತ ಮೊದಲಿಗೆ emerge ಆದಂತ ಸಮುದಾಯಗಳು ಅಂದ್ರೆ ಜಾತಿ ರಾಜಯಕೀಯದಲ್ಲಿ ಲಿಂಗಾಯತರು ಒಕ್ಕಲಿಗರೇನೇ. ಇವತ್ತೂನು Mass Politicians ಯಾರು ಅಂತ ಅಂದ್ರೆ ಒಂದು ಯಡಿಯೂರಪ್ಪ, ಇನ್ನೊಂದು ಸಿದ್ಧರಾಮಯ್ಯ. ಮತ್ತೊಂದು ಕುಮಾರಸ್ವಾಮಿ. ನಾನು interview ಮಾಡಿ ಖಾತ್ರಿ ಮಾಡ್ಕೊಂಡಿರೋದು ಇದು. ಈ ಮೂರು ಜನಾನೇ Mass leaders. ಇನ್ಯಾರೂ Mass leaders ಇಲ್ಲ. ಆ ಕಾರಣಕ್ಕೋಸ್ಕರವಾಗೇ ಬಿ.ಜೆ.ಪಿ. ಹೆದರ್ತಾ ಇರೋದು. ನೋಡಿ ಸಿದ್ರಾಮಯ್ನೋರು ಮಾಸ್ ಲೀಡರ್ ಆಗ್ಲಿಕ್ಕೆ ಕಾರಣ ಏನು ಅಂತ ಅಂದ್ರೆ ಅಸ್ತಿತ್ವನೇ ಇಲ್ಲದಿರುವ ಒಂದು ಸಮುದಾಯ ಅಸ್ತಿತ್ವವನ್ನು ಕಂಡುಕೊಂಡಂಥ ಒಂದು ಸಂದರ್ಭ. ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಇದ್ರಲ್ಲಿ ಅದು ರಿಯಾಕ್ಟ್ ಮಾಡ್ಕೊಂಡಿದೆ. ಹಾಗಾಗಿ ಈಗ ಇತ್ತೀಚೆಗೆ ಒಂದು ಕುರುಬ ಸಮುದಾಯ ಅನ್ನುವಂಥಾದ್ದು ರಾಜಕೀಯವಾಗಿ ಈಗ Emerge ಆಗ್ತಾ ಇದೆ ಮತ್ತು ಈಗ ಅದು ಗಟ್ಟಿ ಆಗ್ತಾ ಇದೆ. ಇದಕ್ಕೆ ಕಾರಣ ಇವರು ಕರ್ನಾಟಕ ಸಂದರ್ಭದಲ್ಲಿ ಒಂದೊಂದು ದೃಷ್ಟಿಯಿಂದ ಬಹುಸಂಖ್ಯಾತರು. ಈಗೇನಾಗಿದೆ ಅಂತ ಹೇಳಿದ್ರೆ ಈ ತರದ ಎರಡು ಉದಾಹರಣೆಗಳು ನಮಗೆ ಏನು ಹೇಳ್ತಾಯಿದೆ ಅಂದ್ರೆ ಇವತ್ತು ರಾಜಕೀಯ ಮಾಡೋದಾದ್ರೆ ಬಹುಸಂಖ್ಯಾತರು ಮಾತ್ರ ರಾಜಕೀಯ ಮಾಡೋಕೆ ಸಾಧ್ಯ. ಇನ್ನುಳಿದವರು ರಾಜಕೀಯ ಮಾಡ್ಲಿಕ್ಕೆ ಸಾಧ್ಯ ಇಲ್ಲ ಅನ್ನುವಂಥ ಒಂದು ವಾತಾವರಣ ಸೃಷ್ಟಿಯಾಗಿದೆ. ಆ ಕಾರಣಕ್ಕೋಸ್ಕರವಾಗಿ ಒಂದು ಈ ಬಹುಸಂಖ್ಯಾತ ಜಾತಿಗಳು ಮತಕ್ಕಾಗಿ ಮತ್ತು ತಮ್ಮ stuntಗಾಗಿ ಬೇರೆ ಕೆಳ ತಳವರ್ಗಗಳ ಮೇಲೆ ಸಾಂಸ್ಕೃತಿಕ ರಾಜಕೀಯ ಬಳಸ್ತಾ ಇದಾರೆ. ಹಾಗೇನೇ ತಳ ಸಮುದಾಯಗಳು unorganized

ಸಮುದಾಯಗಳು ತಮ್ಮ ಅಸ್ತಿತ್ವಕ್ಕೋಸ್ಕರವಾಗಿ ಈ ಸಾಂಸ್ಕೃತಿಕ ರಾಜಕೀಯನ ಬಳಸ್ಕೊಳ್ತಾ ಇದಾವೆ. ಇನ್ನೊಂದು ದೊಡ್ಡ ದುರಂತ ಏನು ಅಂತ ಅಂದ್ರೆ ಸಾಂಸ್ಕೃತಿಕ ರಾಜಯಕೀಯದ ಮೂಲಕ ಸಾಂಸ್ಕೃತಿಕ ನಾಯಕರನ್ನ ಗುರುತಿಸಿ ಕೊಳ್ಳೋದಕ್ಕೆ ಹೋಗ್ತಾ ಇದಾರೆ. ಯಾಕೆ ಸಾಂಸ್ಕೃತಿಕ ನಾಯಕನನ್ನ ಗುರುತಿಸಿಕೊಳ್ಳಲಿಕ್ಕೆ ಹೋಗ್ತಾ ಇದಾರೆ ಅಂತ ಅಂದ್ರೆ ಜನರಿಗೆ ರಾಜಕೀಯದ ಬಗ್ಗೆ ಪೊಲಿಟೀಷಿಯನ್ಸ್ ಬಗ್ಗೆ ಭರವಸೆ ಇಲ್ಲ. ಯಾಕಂದ್ರೆ ಇವಾಗ ಅವ್ರೆಲ್ಲ ಸಂಪಾದ್ನೆ ಮಾಡೋದಷ್ಟೇನೆ. ಸಂಪಾದ್ನೆ ಮಾಡ್ತಾರೆ ಮತದಾರರನ್ನ ದುಡ್ಡು ಕೊಟ್ಟು ಕೊಂಡ್ಕೊಳ್ತಾ ಇದಾರೆ. ಹಾಗಾಗಿ ಅವರ ಬಗ್ಗೆ ಭರವಸೆ ಬಹಳಷ್ಟು ಜನರಿಗೆ. ನೀವು ರಾಜಕಾರಣಿಗಳನ್ನ ಎದುರುಗಡೆ ಹೊಗಳಬಹುದು. ಆದ್ರೆ ಇವತ್ತಿನ ರಾಜಕಾರಣಿಗಳ ಬಗ್ಗೆ ಜನರಿಗೆ ಭರವಸೆ ಇಲ್ಲ. ಆ ಕಾರಣಕ್ಕಾಗಿನೇ ಅವ್ರು ಮತದಾರರೂ ಕೂಡ ವ್ಯಾಪಾರಿಗಳಾಗಿದ್ದಾರೆ. ಅದು ರಾಜಕೀಯ ವ್ಯಾಪಾರಿಗಳಿರ ಬಹುದು, ಹಣದ ವ್ಯಾಪಾರಿಗಳಿರಬಹುದು. ಇಲ್ಲಿ ಈಗ ಇಷ್ಟೊಂದು ಸಮಸ್ಯೆಗಳಿವ್ಯಲ್ಲ. ಚುನಾವಣೆಯಲ್ಲಿ ಈ ಸಮಸ್ಯೆಗಳು ಎಣಿಕೆಗೆ ಬರಲ್ಲ. ಯಾರ್ದೂ ಸಮಸ್ಯೆ ಬರಲ್ಲ, ನಮ್ ಗೋಪಿನಾಥ್‌ಗೆ ಚೆನ್ನಾಗಿ ಗೊತ್ತು ರಾಜಕೀಯ, ನನಗಿಂತ. ಹಾಗಾಗಿ ಯಾರು ಎಷ್ಟೇ ಕೂಗಾಡಿದ್ರೂ ಮಾಡಿದ್ರೂವೆ ಜನ ಅವನ್ನ ಗಮನಕ್ಕೆ ತಗೊಳ್ಳೋದಿಲ್ಲ. ಯಾಕಂದ್ರೆ ಅವರೇನು ವ್ಯಾಪಾರ ಮಾಡ್ತಿದಾರೋ ಚುನಾವಣೆ ಮೂಲ್ಕ ನಾವು ಅದನ್ನೇ ತಾತ್ಕಾಲಿಕ ವ್ಯಾಪಾರ ಮಾಡ್ತೀವಿ ಅಂತ ಅಂದ್ಕೊಂಡಿದಾರೆ. ಅದನ್ನೇ ಜನ ಹೇಳ್ತಾರೆ. ಹಾಗಾಗಿ ಈತರ ರಾಜಕೀಯ ಮತ್ತು ರಾಜಕೀಯ ವ್ಯಕ್ತಿಗಳ ನಂಬಿಕೆ ಇಲ್ದೇ ಇರೋದ್ರಿಂದ ಇನ್ನೊಂದು ಕಡೆಯಿಂದ ಸಾಂಸ್ಕೃತಿಕ ರಾಜಕೀಯ ಮಾಡೋದಕ್ಕೋಸ್ಕರವಾಗಿ ತಪ್ಪು ಹೆಜ್ಜೆಯನ್ನ ಈ ಗುಂಪುಗಳು, ವರ್ಗಗಳು ಅಥವಾ ಜಾತಿಗಳು ಮಾಡ್ತಾ ಇವೆ. ಅದೇನು ಅಂತ ಅಂದ್ರೆ ಮಠಾಧಿಪತಿಗಳ ಕಡೆಗೆ ಹೋಗುವಂಥದ್ದು. ಮಠಗಳನ್ನು ಸ್ಥಾಪಿಸುವಂಥದ್ದು. ಇದು ಇನ್ನೊಂದು ರೀತಿನಲ್ಲಿ ಸಾಂಸ್ಕೃತಿಕ ರಾಜಕೀಯ ಆಗ್ಬಹುದು. ಆದ್ರೆ ಇದು ಚಲನಶೀಲ ಸಾಂಸ್ಕೃತಿಕ ರಾಜಕೀಯ ಅಲ್ಲ. ಮಠಾಧಿಪತಿಗಳ ಕಡೆಗೆ ಹೋಗುವಂಥದ್ದು, ಯಾಕಂದ್ರೆ ಮಠಗಳು ಸ್ಥಗಿತತೆಯ ಸಂಕೇತಗಳೇ ಹೊರತು ಅವು ಜನತೆಯನ್ನ ಚಲಿಸುವಂಥವಲ್ಲ. ನಿಜವಾಗಿ ಮಠಗಳು ಚಲನಶೀಲ ಆಗಿದ್ರೆ ಅವು ವೈದ್ಯಕೀಯ ಕಾಲೇಜುಗಳು, ಇಂಜಿನಿಯರಿಂಗ್ ಕಾಲೇಜುಗಳು ಬೇರೆ ಬೇರೆ ಇವನ್ನ ಶುರುಮಾಡ್ಕೊಂಡು ಸಿಕ್ಕಾಪಟ್ಟೆ ಡೊನೇಷನ್ ತಗೊಳ್ಳೊ ಕೆಲಸಕ್ಕೋಗ್ತಿರ್ಲಿಲ್ಲ. ಹಾಗಾಗಿ ಮಠಗಳಲ್ಲಿ ಸಂಸ್ಕೃತಿ ಯಾವ್ದೂ ಇಲ್ಲ. ಒಂದು ವ್ಯಾಪಾರ ಅಂತ ಮಠಗಳ ವ್ಯಾಪಾರ ಅಂತಿರ್ತಿತ್ತು. ಹಾಗಾಗಿ ಒಂದು ದುರಂತ ಅಂತ ಅಂದ್ರೆ ತಳವರ್ಗಗಳು ಸ್ವಾಮಿಗಳನ್ನ ಕಂಡ್ಕೊಳ್ತಾ ಇರುವುದರ ಮೂಲಕ ಸಾಂಸ್ಕೃತಿಕ ದಾರಿಗಳನ್ನ ಕಂಡ್ಕೊಳ್ತಾ ಇರೋದು. ಯಾಕಂದ್ರೆ ಇವತ್ತು ಮಠ ಅಂತ ಹೇಳಿದ್ರೆ ಹಣ ಸಂಗ್ರಹಣೆಯ ಖಜಾನೆಯಾಗಿರೋದ್ರಿಂದ ಎಲ್ಲಿ ಹಣ ಸಂಗ್ರಹಣೆಯಾಗುತ್ತೋ, ವ್ಯವಹಾರ ಆಗುತ್ತೋ ಅಲ್ಲಿ ಒಂದು ನೈತಿಕತೆಯ ಪ್ರಶ್ನೆ ಅನ್ನುವಂಥದ್ದು ಇರೋದಿಲ್ಲ. ರಾಜಕೀಯಕ್ಕೆ, ಧರ್ಮಕ್ಕೆ, ಸಂಸ್ಕೃತಿಗೆ ನೈತಿಕ ಪ್ರಜ್ಞೆನೇ ಮುಖ್ಯ. ಆ ಹಿನ್ನೆಲೆಯಲ್ಲಿ ಕನಕಪೀಠ ಸ್ಥಾಪಿಸಿರುವಂಥದ್ದು, ಕನಕಪೀಠ ಮಾಡ್ತಕ್ಕಂಥದ್ದು ಸರ್ಕಾರದ ಸಾಂಸ್ಕೃತಿಕ ರಾಜಕೀಯ. ಕನಕಪೀಠ ನಮ್ಮ ಚಿಕ್ಕಣ್ಣ ಅವರನ್ನ ಇಟ್ಕೊಂಡು ಮಾಡ್ತಾ ಇರುವಂಥದು, ಒಂದು ಸಮುದಾಯದ ಸಾಂಸ್ಕೃತಿಕ ರಾಜಕೀಯ. ವಾಸ್ತವವಾಗಿ ನನಗೆ ಅನಿಸುವ ಹಾಗೆ ಕನಕದಾಸರು ಮಾಡಿದ್ದೂ ಕೂಡ ಸಾಂಸ್ಕೃತಿಕ ರಾಜಕೀಯನೇ. ಕನಕದಾಸರು ಮೊದಲಿಗೆ ನಾನವರನ್ನ ಕ್ರಾಂತಿಕಾರಿ, ವಿಚಾರವಾದಿ ಏನೂ ಹೇಳಲ್ಲ. ಇವೆಲ್ಲ 20ನೇ ಶತಮಾನದಲ್ಲಿ ಬಂದಂಥ Solid ಚಿಂತನೆಗಳು. ಹೊರಗಡೆಯಿಂದ barrow ಮಾಡಿದಂಥ ಚಿಂತನೆಗಳು. ವೈಚಾರಿಕತೆ ಅವೂ ಇವು ಇವೆಲ್ಲ ಬರಮಾಡಿದಂಥ ಚಿಂತನೆಗಳು. Inbuilt ಅಲ್ಲ ಇವು. Inbuilt ಆದಾಗ ಕನಕದಾಸರನ್ನ ನೀವು ಮಡಿ ಅಂತನೂ ಕ್ರಾಂತಿಕಾರಿ ಅಂತನೂ ಕರೀಬೇಕಾಗಿಲ್ಲ. ಅವರ ಸಾಹಿತ್ಯ ಯಾವುದನ್ನೂ Brand ಮಾಡ್ಬೇಕಾಗಿಲ್ಲ. ಕನಕದಾಸರು ಆ ಸಂದರ್ಭದಲ್ಲಿ ಕರ್ನಾಟಕದ ಸಮಾಜ ಚಲಿಸಲಿಕ್ಕೆ ಏನು ಮಾಡಿದ್ರು? ಅನ್ನುವುದು ಬಹಳ ಮುಖ್ಯವಾದ ವಿಷಯ. ಹಾಗಾಗಿ ಕನಕದಾಸರು ಮಾಡಿದ್ದು ಸಾಂಸ್ಕೃತಿಕ ರಾಜಕೀಯ. ಅದರಲ್ಲಿ ಅವರು ಸಾಂಸ್ಕೃತಿಕ ರಾಜಕೀಯ ಮಾಡಿದ್ದು ಯಾರ ವಿರುದ್ಧ ಅಂತ ಅಂದ್ರೆ ಎರಡು ಸುದ್ದಿಯನ್ನು ಕೊಡ್ತಾರವರು. ಶೂದ್ರರಿಗೆ ಒಂದು ಸುದ್ದಿ ಕೊಡ್ತಾರೆ. ಬ್ರಾಹ್ಮಣರಿಗೆ ಇನ್ನೊಂದು ಸುದ್ದಿ ಕೊಡ್ತಾರೆ. ಆದ್ರೆ ಕನಕದಾಸರ ಎರಡೂ ಸುದ್ದಿಗಳನ್ನ ನಾವು ಇವತ್ತಿನವರೆಗೂ ಕೂಡ ಸ್ವೀಕಾರ ಮಾಡಿಲ್ಲ ಅನ್ನೋದನ್ನ ಅರ್ಥಮಾಡ್ಕೋಬೇಕು. ನಾನು ತಪ್ಪಿದ್ದರೆ ದಯವಿಟ್ಟು ನೀವು ನನಗೆ ಹೇಳ್ಬೇಕು. ಕನಕದಾಸರು ಮೊದಲು ವಿರೋಧ ಮಾಡಿದ್ದು ಶೂದ್ರರನ್ನ. ಬಂಜಗೆರೆಯವರು ದೊಡ್ಡ ಒಂದು ತಳಹದಿಯನ್ನ ಹಾಕಿದ್ದಾರೆ. ಆಗ ಇದ್ದಂತಹ ಪಾಳೇಗಾರ್ರು, ಪುಡಿ ಪಾಳೇಗಾರ್ರು, ನಾಯಕರು ಇವರೆಲ್ಲ ಪರಸ್ಪರ ಕಚ್ಚಾಡಿ ಬದುಕೆಲ್ಲವನ್ನು ಪ್ರಭುತ್ವಕ್ಕೆ ಒಪ್ಪಿಸುವ ಚಟುವಟಿಕೆ ನಡೀತಿತ್ತೇ ಹೊರತು ಅವರ್ಯಾರೂ ಕೂಡ Identityನಲ್ಲಿ ಅಸ್ತಿತ್ವದಲ್ಲಿ ಇರ್ಲಿಲ್ಲ. ಆದ್ರೆ ಇವತ್ತಿನವರೆಗೂ ಕನಕದಾಸರು ಹೇಳಿರುವಂತದ್ದು ಮತ್ತು ನಮ್ಮಲ್ಲಿ ಉಳಿದಿರುವಂತದ್ದು, ಬರ್ಬರತೆ ಇದೆಯಲ್ಲ, ಶೂದ್ರರ ಬರ್ಬರತೆ ಇವತ್ತೂ ನಾವದನ್ನ ಕನಕದಾಸರ ಸಂದರ್ಭದಲ್ಲೇ ಅರ್ಥಮಾಡ್ಕೋಬೇಕು. ಕನಕದಾಸರು ಮೊದ್ಲೇನೇಳಿದ್ರು ಅಂತಂದ್ರೆ ಅವ್ರು ರಾಜಕೀಯವನ್ನೆಲ್ಲ ಅನುಭವಿಸಿದ್ರು. ಆದ್ರೆ ಅವರಿಗನ್ನಿದ್ದೇನು ಅಂದ್ರೆ ರಾಜಕೀಯ ಅನ್ನುವಂಥದ್ದು ಆ ಸಂದರ್ಭದಲ್ಲಿ ಯಾವ ಸಂದರ್ಭದಲ್ಲೂ ಕೂಡ ಅದು ಅಭಿನಯನೇ. ಪಾತ್ರಾಭಿನಯಾನೇ. ನನಗನ್ನಿದ್ದು ಏನು ಅಂದ್ರೆ ಇಡೀ ಅವರು ಆ ಸಂದರ್ಭದ ಪರಿಸ್ಥಿತಿಲಿ ಅರ್ಥ ಮಾಡ್ಕೊಂಡಿದ್ದು ಈಗಿದೆಯಲ್ಲ ಈ ರಾಜಕೀಯ, ಈ ರಾಜಕೀಯದಲ್ಲಿ ನಾವು ಬೆಳೀತೀವಿ, ದೊಡ್ಡೋರಾಗ್ತೀವಿ, ನಾಯಕರಾಗ್ತೀವಿ ಅಂತ ಇದ್ಯಲ್ಲ ಇದೆಲ್ಲ ಒಂಥರ ಪಾತ್ರಧಾರಿನೇ ಹೊರತು ಗಟ್ಟಿಯಾದುದಲ್ಲ ಅನ್ನಿಸ್ತು ಅವರ್ಗೆ. ಆ ಗಟ್ಟಿಯಾದುದಲ್ಲ ಆ ಕಾರಣದಿಂದನೇ ಈ ರಾಜಕಾರಣ ಲೌಕಿಕ ರಾಜಕಾರಣ ಮತ್ತು ಕೇವಲ ದುಡ್ಡಿನ ವ್ಯವಹಾರದ ರಾಜಕಾರಣ ಮತ್ತು ನಮ್ಮ ಹನೂರು ಅವರು ಹೇಳಿದ ಹಾಗೆ ಬೇಕಾದವ್ರನ್ನ ತಲೆಹಿಡ್ಕೊಂಡ್ಹೋಗಿ ಸೈನ್ಯಕ್ಕೆ ಒಪ್ಪಿಸುವ ರಾಜಕಾರಣ. ಅದೇ ಸಾಂಸ್ಕೃತಿಕ ರಾಜಕಾರಣ ಬೇಕು ಅಂತ ಹೇಳ್ದಾಗ ಅವರಿಗೆ ಅನ್ನಿದ್ದು ಆ ಸಂದರ್ಭದಲ್ಲಿ ಇದ್ದಂಥ ವೈದಿಕ ಸಂಸ್ಕೃತಿಯ ತತ್ವ ಚಿಂತನೆ. ಯಾಕಂದ್ರೆ ಭಾರತದಲ್ಲಿ ನೀವು ಒಪ್ಕೊಳಿ ಬಿಡಿ ನಿರಂತರವಾಗಿ establish ಆಗಿ ಉಳ್ಕೊಂಡ್ಬಂದಿರೋದು ವೈದಿಕ ಸಂಸ್ಕೃತೀನೇ. ಶೂದ್ರರು ಹೋರಾಟ ಮಾಡ್ತಾ ಇದಾರೆ ಹೊರತು ಅದಕ್ಕೆ ಪರ್ಯಾಯವಾದ ಯಾವ ಚಿಂತನೆಯನ್ನೂ ಇಟ್ಕೊಂಡಿಲ್ಲ. Simply Attempt ಮಾಡ್ತಾಯಿದಾರೆ. ಅದಕ್ಕಂಟ್ಕೊಂಡಿಲ್ಲ. ನಮ್ಮ ಕನಕದಾಸರಿಗೆ ಆ ಸಂದರ್ಭಕ್ಕೆ ಸಿಕ್ಕಿದ್ದು ಅದೇ ಚಿಂತನೆ ಅಂತ

ನನಗನ್ನಿಸ್ತಾ ಇದೆ. ಮತ್ತೆ ರಾಜಕೀಯಕ್ಕೂ ಬೇಕಾದಂಥ ರಾಜಕೀಯ ಹಾಗೂ ಸಾಂಸ್ಕೃತಿಕ ದೃಢತೆ ಅನ್ನುವಂಥದ್ದು ಆಕಡೆಯಿಂದಾಗೇ ಬರ್ಬೇಕು. ರಾಜಕೀಯ ದೃಢ ಆಗ್ಬೇಕು ಅಂದ್ರೂ ಕೂಡ ರಾಜಕೀಯ ಒಂದು ಸ್ಥಿರ ಆಗ್ಬೇಕು ಅನ್ನೋದಾದ್ರೆ, ಆ ಬಗೆಯ Ideology ಬೇಕು ಅಂತ ಕನಕದಾಸರಿಗೆ ಅನ್ಸಿದ್ರಿಂದ ಅವ್ರು ಆ ಐಡಿಯಾಲಜಿಯನ್ನ ಅನುಸರಿಸಿದರು ಹಾಗೂ ಅವ್ರು ಭಿನ್ನವಾದ್ರು.

ಕನಕದಾಸರಿಗೆ ಭಿನ್ನವಾಗಬೇಕು ಅಂತ ಇತ್ತು. ಕನಕದಾಸರಿಗೆ ಆ ತರದ ಒಂದು ಸ್ಥಿರತೆಯನ್ನು ಕಂಡ್ಕೊಳ್ದೇನೆ ಬೇರೆ ಸ್ಥಿರತೆಯನ್ನ ಕಂಡುಕೊಳ್ಳುವ ಒಂದು ಸನ್ನಿವೇಶ ಇರ್ಲಿಲ್ಲ ಮತ್ತು ಭಾರತದ ಇತಿಹಾಸದಲ್ಲಿ ಅದು ಇಲ್ಲ. ಯಾವತ್ತೂ ಇಲ್ಲ. ಇವತ್ತೂ ಕೂಡ ಸಾಂಸ್ಕೃತಿಕವಾಗಿ ಹೋರಾಟ ಮಾಡೋರೆಲ್ಲ ನಾವು ವೈದಿಕ ಸಂಸ್ಕೃತಿಗೆ ಪ್ರತಿಕ್ರಿಯೆ ಸೂಚಿಸ್ತಾರೇ ಹೊರತು ನಮ್ಮ ಸಂಸ್ಕೃತಿಯನ್ನೆಂದೂ ನೀವು ಸೃಷ್ಟಿ ಮಾಡ್ಕೊಳ್ಳೋಕೆ ಪ್ರಯತ್ನನೇ ಮಾಡಿಲ್ಲ. ಉದಾಹರಣೆಗೆ ಇಲ್ಲೂ ಇದನ್ನ ಮುಂದುವರಿಸಿ ಹೇಳೋದಾದ್ರೆ ಉದಾಹರಣೆಗೆ: ಇವ್ರು ಬ್ರಾಹ್ಮಣರಿರಬಹುದು ಅನ್ನೋ ಸಂದೇಶ ಕನಕದಾಸರು ಕೊಟ್ಟಿದ್ದಾರೆ. ಯಾಕಂದ್ರೆ ಅಲ್ಲಿಗೇ ಹೋಗಿ ಅವರೊಳ್ಗೇನೇ ಮಾತಾಡುವಾಗ ಒಂದು ಸಂದೇಶ ಬ್ರಾಹ್ಮಣರಿಗೆ ಕೊಟ್ಟಿದ್ದಾರೆ. ಏನಂದ್ರೆ, ನೀವು ರಸಿಪ್ರೋಕಲ್ ಆಗ್ಬೇಕು. ನೀವು ಸಂಬಂಧಾತ್ಮಕ ಆಗ್ಬೇಕು. ನೀವು ಏನಿದನ್ನ ಇಟ್ಕೊಂಡಿದೀರೋ ನಿಮ್ಮದು ಅಂತ ಶ್ರೇಷ್ಠ ಅಂತ ಇಟ್ಕೊಂಡಿದೀರೊ, ಸಂಪನ್ನ ಅಂತ ಇಟ್ಕೊಂಡಿದೀರೋ, ಇದು ಶ್ರೇಷ್ಠ ಮತ್ತು ಸಂಪನ್ನ ಅಲ್ಲ. ಇದು ಯಾವಾಗ ಆಗುತ್ತೆ ಅನ್ನುವಂಥಾದ್ದಿದೆಯಲ್ಲ, ನೀವು ರಸಿಪ್ರೋಕಲ್ ಸಂಬಂಧಾತ್ಮಕವಾದ್ರೆ ಮಾತ್ರ ಇರುತ್ತೆ. ಅವರ ಎಲ್ಲಾ ಕೀರ್ತನೆಗಳಲ್ಲಿ ಬರುವಂಥ ವಿಡಂಬನೆ ಈ ಬ್ರಾಹ್ಮಣರು ಶೂದ್ರರಿಗೆ ಹೇಳುವುದರ ಜೊತೆಗೆ ಒಂದು ಸಂಸ್ಕೃತಿಯನ್ನ ಕಟ್ಕೊಳಿ ಅಂತ ಹೇಳುವುದರ ಜೊತೆಗೆ ಬ್ರಾಹ್ಮಣರು ರಸಿಪ್ರೋಕಲ್ ಆಗಿ ಅಂತ ಅದು ನಿಮ್ಮ ಉಳಿವಿನ ಪ್ರಶ್ನೆ ಅಂತ ಅವ್ರು ಹೇಳಿದಾರೆ. ಈಗ ಉದಾಹರಣೆಗೆ ನಮ್ಮ ಉಡುಪಿಯ ಸ್ವಾಮೀಜಿ ಪೇಜಾವರ ಶ್ರೀಗಳು ಅಸ್ಪೃಶ್ಯತೆ ಬೇಡ ಅಂತ ಹೇಳ್ದಾಗ ನಮ್ಗೆ ಸಂತೋಷ ಆಗುತ್ತೆ. ನಿಜವಾಗಿಯೂ ಹಿಂದೂವನ್ನ ಗುರ್ತಿಸ್ತಾ ಇದಾರೆ ಅನ್ಸುತ್ತೆ. ನಮ್ಗೆ ಅಸ್ಪೃಶ್ಯತೆ ಬೇಡ, ನಾವೆಲ್ಲ ಒಂದು ಅಂತ ಹೇಳ್ದಾಗ ಪರ್ವಾಗಿಲ್ಲವಲ್ಲ ಇವರು. ಹಿಂದೂಗಳ್ನ ಗುರ್ತಿಸ್ತಾ ಇದಾರಲ್ಲ, ಒಂದು ಅಂತ ಹೇಳ್ತಾ ಇದಾರಲ್ಲ. It is wonderful ಅಂತ ಹೇಳಿ ಇವರನ್ನ honour ಮಾಡ್ಬೇಕು ಅಂತ ಅನ್ಸುತ್ತೆ. ಮಡೇಸ್ನಾನದ ಬಗ್ಗೆ ಅವರಿಗೇನ್ಮಾಡ್ಬೇಕೋ ಅವರಿಗೆ ಬಿಟ್ಟಿದ್ದು ಅಂತ ಹೇಳಿದ ತಕ್ಷಣನೇ ಅಲ್ಲಿ ಒಬ್ಬ ಸ್ತಬ್ಧ ಸ್ವಾಮಿಯನ್ನ ಕಾಣ್ತೇವೆ. ಇವತ್ತು ಬಹಳ ಮುಖ್ಯವಾದ ಪ್ರಶ್ನೆ ಅಂದ್ರೆ ಹಿಂದೂ ಧರ್ಮದ ಮಿತಿಗಳನ್ನ ವಿರೋಧ ಮಾಡ್ದೇ ಇರೋರೆಲ್ಲರೂ ಕೂಡ ಯಾವ್ದೇ ಜಾತಿ ವಿರೋಧಿನೂ ಅಲ್ಲ, ಬ್ರಾಹ್ಮಣ ವಿರೋಧಿಗಳೂ ಅಲ್ಲ. ಏನೂ ಅಲ್ಲ. ಇಲ್ಲಿ ಒಂದು ಆತ್ಮೀಯವಾದಂಥ ಎಲ್ಲರಿಗೂ ಸಲ್ಲುವಂಥ ಒಂದು ಸಂಸ್ಕೃತಿ, ಒಂದು ಧರ್ಮ ಬರ್ಲಿ ಅನ್ನುವಂಥಾದ್ದಾಗಿದೆ. ಅದನ್ನ ಆ ಮುಟ್ಠಾಳ, ಮೂರ್ಖ, ಕ್ರೂರ ಆದಂಥ ಈ ವೈದಿಕಶಾಹಿ ಅರ್ಥಮಾಡ್ಕೊಕ್ತಿಲ್ಲ. ಆ ಯಾವ್ದೋ ಪಾತ್ರಾನ ನಮ್ ಸುಧಾಕರ್ ಅವರು ಹೇಳಿದ್ರು. ಅದನ್ನ ಕೇಳ್ಬಿಟ್ರೆ ನೀವು ಎಂಥ ಕ್ರೂರಿಗಳ ಬುದ್ಧಿ ಅನ್ಸುತ್ತೆ ನಿಮ್ಗೆ. ಯಾಕಂದ್ರೆ ಇವತ್ತು ನೀವು ತಿಳ್ಕೊಳಿ. ಬ್ರಾಹ್ಮಣರೆಲ್ಲ ಹೇಗಿದಾರೆ ಅಂತ ತಿಳ್ಕೋಬೇಕಾಗಿಲ್ಲ. ಒಂದು ಸಣ್ಣ Sect ಮಾತ್ರ. ಉಳಿದವರೆಲ್ಲ ತೆರ್ಕೋತಾ ಇದಾರೆ. ಅದರಲ್ಲೂ ಹೆಣ್ಮಕ್ಳು ಅವರನ್ನ ಧಿಕ್ಕರಿಸಿ ತೆರ್ಕೋತಾ ಇದಾರೆ. It is a wonderful development ಅನ್ನಿ. ಆದ್ರೆ ಕನಕದಾಸರು ಆ ಸಂದರ್ಭದಲ್ಲಿ ಇಬ್ಬರಿಗೂ ಒಂದು ಸಂದೇಶವನ್ನು ಕೊಟ್ಟಿದ್ದಾರೆ. ನಿಮ್ಮಲ್ಲಿ ಒಂದು Sustainable ಆದಂಥ ನನ್ನ Politicsನ್ನಾಗಲಿ, ನನ್ನ ಸಂಪಾದನೆಯನ್ನಾಗಲಿ ಉಳಿಸಬಹುದಾದಂಥ culture ಶೂದ್ರರಲ್ಲಿ ಇಲ್ಲ ಅನ್ನುವಂತದ್ದನ್ನ ಹೇಳುವ ಕಾರಣಕ್ಕಾಗಿ ಈ ಕಡೆಗೆ ಬಂದ್ರು ಅನ್ನುವುದನ್ನ ನಾವು ಭಾವಿಸುವಂಥದ್ದು. ಇನ್ನೊಂದು ಬ್ರಾಹ್ಮಣರಿಗೆ, ವೈದಿಕರಿಗೆ ನೀವು ಈ ದೇಶದವರೇ ಹೌದು, ನಮ್ಮವರೇ ಹೌದು ಅನ್ನುವಂತಾದ್ದು. ಆದ್ರೆ ನೀವು ಹಿಡ್ಕೊಂಡು ಕೂತಿದೀರಲ್ಲ ನಿಮ್ಮ ಐಡಿಯಾಲಜಿ ಅನ್ನುವಂತಾದ್ದಿದೆಯಲ್ಲ ಅದು ಸಂಬಂಧಾತ್ಮಕ ಪರೀಕ್ಷೆಗೆ ಒಳಗಾಗಬೇಕು. ಅದು ಕುಲದ ಬಗ್ಗೆ ಆಗಿರಬಹುದು, ಇನ್ನೊಂದರ ಬಗ್ಗೆ ಆಗಿರಬಹುದು ಆ ಸಂದೇಶವನ್ನು ಅವರಿಗೆ ಕೊಟ್ಟಿದ್ದಾರೆ. ಇವತ್ತೂ ಕೂಡ ನನಗೆ ಜಾತಿಯಿಂದ ಕಲಸಿ ಹೋಗಿರುವಂತ, ಕುಲಗೆಟ್ಟು ಹೋಗಿರುವಂಥ ರಾಜಕೀಯ ಇದ್ಯಲ್ಲ ಆ ಸಂದರ್ಭದಲ್ಲಿ ಕಂಡಂತಹ ರಾಜಕೀಯ, ಇವತ್ತಿನ ಸಂದರ್ಭದಲ್ಲಿ ಹಾಳಾಗಿರುವ ರಾಜಕೀಯ, ಅವರೇನು ಸಂದೇಶ ಕೊಟ್ರೊ ಆ ಸಂದೇಶಾನ ನಾವಿವತ್ತು ಕೊಡ್ಬೇಕಾಗಿದೆ. ಆ ಹಿನ್ನೆಲೆಯಲ್ಲಿ ಇಟ್ಕೊಂಡು ಒಂದು ಹತ್ತು ನಿಮಿಷ ನಾನು ಬರೆದಿರೋದನ್ನ ನಾನು ಓದ್ತೀನಿ. ನನಗೆ ಅದು ಸ್ಪಷ್ಟವಾಗಿರ್ಲಿ ಅನ್ನೋ ಕಾರಣಕ್ಕೋಸ್ಕರವಾಗಿ, ಚರ್ಚೆಗೆ ಅನುಕೂಲ ಆಗ್ಲಿ ಅಂತ ಅದು. ಆದ್ರೆ ನಂದೇ ಕೊನೆ ಅಂತ ತಿಳ್ಕೊಂಡು ನನ್ಮೇಲೇ ಎಲ್ಲರೂ ಪ್ರಶ್ನೆಗಳ್ಹಾಕ್ಬೇಡಿ ನೀವು. ನೀವೇ ಪರಸ್ಪರ ಚರ್ಚೆಗೆ ಅವಕಾಶ ಮಾಡಬಹುದು. ಯಾಕಂದ್ರೆ ನಮ್ಮ ಚಿಕ್ಕಣ್ಣನವರ ಹತ್ರ ನಾವು ವರ್ತಿಸಬೇಕಾದ್ರೆ ನಾನು ಬಹಳ serious ಮನುಷ್ಯ. ಆದ್ರೆ ಕೆಲ್ಸ ತಗೊಳ್ಳೋದು ಮಾತ್ರ serious ಆಗೇ ಕೆಲ್ಸ ತಗೋತಾರೆ ಅವ್ರು. ಹಾಗಾಗಿ ಆ ಕಾರಣಕ್ಕೋಸ್ಕರವಾಗಿ ನಾನು ಹೇಳೋದನ್ನ ಸ್ಪಷ್ಟವಾಗಿ ಮಂಡಿಸ್ಬೇಕು ಅನ್ನುವ ಕಾರಣಕ್ಕೋಸ್ಕರ ಇದನ್ನ ಹೇಳ್ತಾಯಿದೀನಿ.

ಇದು ಸಾಂಸ್ಕೃತಿಕ ನಾಯಕತ್ವದ ಹುಡುಕಾಟದ ಕಾಲ. ಪ್ರತಿ ಸಮುದಾಯ ತನ್ನ ರಾಜಕೀಯ ಅಸ್ತಿತ್ವ ಆ ಮೂಲಕ ಜೀವನ ಅಸ್ತಿತ್ವವನ್ನು ಕಂಡುಕೊಳ್ಳಲು ತಮಗೊಬ್ಬ ಸಾಂಸ್ಕೃತಿಕ ನಾಯಕನನ್ನು ಹುಡುಕಿಕೊಳ್ಳುತ್ತಿದೆ. ಇಡೀ ಭಾರತವೇ ರಾಜಕೀಯ ನಾಯಕತ್ವದಲ್ಲಿ ದೃಢತೆಯನ್ನು ಕಾಣುತ್ತಿಲ್ಲ. ಪ್ರತಿ ಸಮುದಾಯವು ಈ ಕೊರತೆಯನ್ನು ಅನುಭವಿಸುತ್ತಿದೆ. ಸಾಂಸ್ಕೃತಿಕ ನಾಯಕನೇ ತಮ್ಮ ಭವಿಷ್ಯ ಎಂದು ಭಾವಿಸಿದಂತಿದೆ. ದುರಂತವೆಂದರೆ ಈ ನಾಯಕನನ್ನು ಈ ಸಮುದಾಯಗಳು ಮಠಾಧಿಪತಿಗಳಲ್ಲಿ ಹುಡುಕುತ್ತಿರುವುದು. ಇದು ನಿವಾರಣೆಯಾದರೆ ಮಾತ್ರ ಸಾಂಸ್ಕೃತಿಕ ಬೆಳಕು ಸಿಗಲು ಸಾಧ್ಯ.

ಕನಕದಾಸರು ಈಗ ಕುರುಬ ಸಮುದಾಯದ ಮಧ್ಯೆ 21ನೇ ಶತಮಾನದ ಸಾಂಸ್ಕೃತಿಕ ರಾಜಕೀಯ ಹೊಸ ಮಾದರಿಯಾಗಿ ಅವತರಿಸಬೇಕಿದೆ. ನನ್ನನ್ನ ಪ್ರಶ್ನೆ ಮಾಡ್ಬಹುದು ನೀವು. I am not limiting. But ನಾನ್ಹೇಳ್ತಾಯಿದೀನಿ. ಎರಡು Identityಗಳ

ಬಗ್ಗೆ ಹೇಳ್ತಾಯಿದೀನಿ. ಒಂದು ತನ್ನ Identity. ಇನ್ನೊಂದು ರಾಷ್ಟ್ರದ Identity. ಎರಡು Identityನ ಕಂಡ್ಕೋಬೇಕು ಅನ್ನೋ ಹಿನ್ನೆಲೆಯಲ್ಲಿ ಹೇಳ್ತಾಯಿದೀನಿ ನಾನು.

ಕನಕದಾಸರು ಈಗ ಕುರುಬ ಸಮುದಾಯದಲ್ಲಿ 21ನೇ ಶತಮಾನದ ಸಾಂಸ್ಕೃತಿಕ, ರಾಜಕೀಯ ಹೊಸ ಮಾದರಿಯಾಗಿ ಅವತರಿಸಬೇಕಿದೆ. ಹೀಗೆ ಆಗುವುದರಿಂದ ಅವರು ಸಂಕೋಚಗೊಳ್ಳುವುದಿಲ್ಲ. ಕರ್ನಾಟಕ ಸಂಸ್ಕೃತಿಗೆ ಸಂಬಂಧಾತ್ಮಕವಾದ ಹೊಸ ನೆಲೆಯೊಂದನ್ನು ಕೊಡುತ್ತಾರೆ. ಒಂದು ಕಡೆಯಿಂದ ಮಠದ ಮೂಲಕ ಜಾತಿ ಜಡಗಟ್ಟಿ ಹಿಂಸೆಯಾಗುವುದನ್ನು ತಡೆಯಬಹುದಾದರೆ, ಮತ್ತೊಂದು ಕಡೆಯಿಂದ ಸಾಂಸ್ಕೃತಿಕ ನಾಯಕತ್ವದ ಮೂಲಕ ಸಮುದಾಯ ನವಚೈತನ್ಯ ಪಡೆಯುವಂತೆ ನೋಡಿಕೊಳ್ಳ ಬಹುದು. ಒಕ್ಕಲಿಗರ ಮಠ ಹುಟ್ಟಿತು, ಆದರೆ ಅದು ಒಕ್ಕಲಿಗರ ಧರ್ಮವನ್ನು ಪಡೆಯಲಿಲ್ಲ. ಜೀವ ವಿರೋಧಿಯಾದ ವೈದಿಕ ಧರ್ಮದ ನಂಬಿಕೆಯ ಆಚರಣೆಗಳನ್ನು ಅನುಸರಿಸಿ ಧಾರ್ಮಿಕವಾಗಿ ನಿಷ್ಕ್ರಿಯವಾಯಿತು. ಆರ್ಥಿಕವಾಗಿ ಬೆಳೆಯಿತು ಎಂಬುದು ನಿಜ. ಬರಿ ಹೊಟ್ಟೆ ಬೆಳೆಸಿಕೊಂಡು ಏನು ಪ್ರಯೋಜನ? ತಲೆಯಲ್ಲಿ ಸಾಮಾನು ಇಲ್ಲದೇ ಹೋದರೆ. ಇದು ನನ್ನ ಭಾಷೆ ಕ್ಷಮಿಸಬೇಕು.

ಈ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಕನಕ ಸಂಸ್ಕೃತಿಯು ಜಾತಿಮತಗಳ ಹೊರಗೆ ಜೀವನ ಸಂಸ್ಕೃತಿಯಾಗಿ ಅವತರಿಸಬೇಕಿದೆ. ಮುಂದೆ ಇದು ತಳ–ಕೆಳ ಸಮುದಾಯಗಳಿಗೆ ದೊಡ್ಡ ಮಾರ್ಗದರ್ಶನವಾಗುತ್ತದೆ. ಆದ್ದರಿಂದ ಆವತ್ತಿನ ಕನಕದಾಸರನ್ನು ಈವತ್ತಿಗೆ ವಿಸ್ತರಿಸಿಕೊಂಡರೆ ಒಂದು ಹೊಸ ಜ್ಞಾನ. ಎರಡು ಹೊಸ ಸಂಸ್ಕೃತಿ ಮತ್ತು ಮೂರನೆಯದಾಗಿ ಹೊಸ ಧರ್ಮ, ಸಂಸ್ಕೃತಿ ವಿಮರ್ಶೆ ಕಡೆಗೆ ಚಲಿಸಿದಂತಾಗುತ್ತದೆ. ಅದು ಹೇಗೆಂದರೆ ಕನಕದಾಸರು ಒಂದು – ತಮ್ಮ ಜೀವಿತ ಸಮುದಾಯದ ಜ್ಞಾನದಿಂದ ಹೊಸದೆಂದು ತಿಳಿದ ಜ್ಞಾನದ ಕಡೆಗೆ ಹೊರಟರು. ಎರಡು – ತಮ್ಮದಲ್ಲದ ಹೊಸ ಸಂಸ್ಕೃತಿಯ ಕಡೆಗೆ ಹೊರಟರು. ಮೂರು – ತಾವು ಹುಡುಕಿದ ಹೊಸ ಧರ್ಮದ ವಿಮರ್ಶೆಗೆ ತೊಡಗಿದರು. ಈ ಎಲ್ಲದರ ಮಹಾ ಪ್ರತಿಮೆಯಾಗಿ ರಾಗಿ ರಾಘವನಾದ ನವಪುರಾಣ.

ರಾಮನ ಮಾದರಿ ಈ ಹೊತ್ತಿನ ಪ್ರಸ್ತುತತೆ ಅಲ್ಲ ಎಂದು ನೀವು ವಾದಿಸಬಹುದು. ಆಗ ನಿಮ್ಮ ಮನಸ್ಸಿನಲ್ಲಿ ಯಾರೋ ಒಬ್ಬ ರಾಮ, ಯಾವುದೋ ಒಂದು ಜನ ಸಮರ್ಥಿಸುವ ರಾಮಾಯಣ ಇರಬಹುದು. ಅದು ಅವರ ರಗಳೆ ಮಾತ್ರ. ಆದರೆ ಭಾರತದಲ್ಲಿ 300 ಸಮುದಾಯಗಳಿದ್ದರೆ, ಅವುಗಳಿಗೆ ಬೇರೆ ಬೇರೆ 300 ರಾಮಾಯಣಗಳಿವೆ. 300 ಬೇರೆ ಬೇರೆ ರಾಘವರಿದ್ದಾರೆ.

ಕುರುಬರು ರಾಮಧಾನ್ಯ ಚರಿತ್ರೆ ಒಡ್ಡುವ ಸವಾಲುಗಳನ್ನ ಸ್ವೀಕರಿಸಬೇಕಾಗಿದೆ. ತಮ್ಮ ರಾಜಕೀಯಕ್ಕೆ ಸಾಂಸ್ಕೃತಿಕ ಭದ್ರತೆಯನ್ನು ಒದಗಿಸಿಕೊಳ್ಳಬೇಕಾಗುತ್ತದೆ. ಈ ಹೊತ್ತಿನ ರಾಜಕೀಯ ಮತ, ಮತದಾರರನ್ನು ಸರಕು ಮಾಡಿಕೊಂಡಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಸಮುದಾಯಗಳೂ ಕೂಡ ಮಾರಾಟವಾಗುತ್ತಿವೆ. ಇದನ್ನು ನಿರಾಕರಿಸಿ ಎದ್ದು ನಿಂತು ಚೈತನ್ಯಗೊಳ್ಳುವುದೇ ಸಾಂಸ್ಕೃತಿಕ ಅನನ್ಯತೆಯಾಗುತ್ತದೆ. ಅದು ಈ ಹೊತ್ತು ವ್ಯಕ್ತಿಯೂ ಬೇಕು. ಸಮುದಾಯಕ್ಕೂ ಅತ್ಯಗತ್ಯ. ಅಂತಹ ಪುನರ್ಜನ್ಮಕ್ಕೆ ಕನಕದಾಸರ ಮಾರ್ಗದರ್ಶನ ಅಗತ್ಯವಾಗಿದೆ. ಇದು ಅಪ್ರಸ್ತುತವಾದ ಚಿಂತನೆ ಅಲ್ಲ. ಮುಖ್ಯವಾಗಿ ಇದು ಗುರುತಿಸಬೇಕಾಗಿರುವಂತದ್ದು ನಿನ್ನನ್ನು ಉಳಿಸಿಕೋ, ನಿನ್ನ ಸಮುದಾಯವನ್ನು ಸಂರಕ್ಷಿಸು, ಇನ್ನೊಂದು ಸಮುದಾಯಕ್ಕೆ ಸಾಂಸ್ಕೃತಿಕವಾಗಿ ಮುಖಾಮುಖಿಯಾಗು, ಸಂವಾದಿಯಾಗು–ಮಾದರಿಯಾಗು. ಇದು ಇವತ್ತಿನ ಸಂಸ್ಕೃತಿ ಪರಿಕಲ್ಪನೆ ಎಂದು ನಾನು ತಿಳಿದಿದ್ದೇನೆ. ನಮಸ್ಕಾರ.

## ಕನಕದಾಸ : ಸಮುದಾಯ ನಾಯಕತ್ವ – ಚರ್ಚೆ

**ಚರ್ಚೆ : ಗೋಪಿನಾಥ್**

ವೇದಿಕೆಯ ಮೇಲಿರ್ತಕ್ಕಂತ ಎಲ್ಲ ಗುರುಗಳೇ ನಮಸ್ಕಾರ. ಮತ್ತೆ ಇಲ್ಲಿರ್ತಕ್ಕಂತ ಎಲ್ಲರಿಗೂ ನನ್ನ ನಮಸ್ಕಾರ.

ಸಮುದಾಯದ ಸಾಂಸ್ಕೃತಿಕ ನಾಯಕತ್ವದ ಆಚೆ ಮತ್ತೆ ಹಿಂದೆ ವ್ಯಕ್ತ ಆಗ್ತಕ್ಕಂತ ನನ್ನನ್ನು ಹಿ.ಶಿ.ರಾಮಚಂದ್ರೇಗೌಡ್ರು ಹೊರಗಡೆ ಇಟ್ಟಿದ್ದಾರೆ. ನಾನಿದರ ಬಗ್ಗೆ ಆಲೋಚನೆ ಮಾಡ್ತಾಯಿರೋದು ಮತ್ತೊಂದು. ಅದ್ನ ವಿಸ್ತರಿಸ್ಬೋದು ಅಂತ ನನಗನ್ಸುತ್ತೆ. ಒಂದು ಸಾಂಸ್ಕೃತಿಕ ನಾಯಕತ್ವ ಮತ್ತು ಅದರಿಂದ ಪಡೆದಂಥ ರಾಜಕೀಯ ನಾಯಕತ್ವ ಬರಬೇಕಾಗಿತ್ತು ಅದು ನಮ್ಗೆ ಸಿಕ್ಕಿಲ್ಲ ಅಂತ ನನ್ನ ಕೆಲವು ವಿಚಾರಗಳನ್ನ ಮುಂದೆ ಇಡ್ತಾನೇ ನಿಮ್ಮ ಮುಂದೆ ಇದನ್ನ ಮತ್ತೆ ಚರ್ಚೆಗೆ ಇಡುತ್ತಿದ್ದೇನೆ.

ಬಸವಣ್ಣ, ಕನಕದಾಸ ಮತ್ತೆ ಶಿಶುನಾಳ ಷರೀಫ. ಬಸವಣ್ಣ ಮತ್ತೆ ಕನಕದಾಸರು ರಾಜಕೀಯ ಮುಖಂಡತ್ವದಲ್ಲಿದ್ದಂತವರು. ಆದ್ರೆ ಅಲ್ಲೆಲ್ಲೂ ಗುರ್ತಿಸಿಕೊಳ್ಳೇ ಇಲ್ಲ ಅವ್ರು. ಬಸವಣ್ಣ ಮಹಾಮನೆಯ ಮೂಲಕ ಸಾಂಸ್ಕೃತಿಕ ನಾಯಕತ್ವವನ್ನು ಇಡೀ ಕರ್ನಾಟಕದಲ್ಲಿ ಗುರ್ತಿಸಿಕೊಂಡಂತ ವ್ಯಕ್ತಿ. ಹಾಗೆ ಕನಕದಾಸರು ಯಾವುದೋ ಒಂದು ರಾಜ್ಯದ ಪ್ರಾಂತ್ಯ ನಾಯಕನಾಗಿದ್ದು ಅದನ್ನ ತ್ಯಜಿಸಿ ಸಾಂಸ್ಕೃತಿಕ ನಾಯಕತ್ವವನ್ನ ಪಡೆದವನು. ಬಹುಶಃ ಹಿಂದೆ ಇಂಥವರ್‍ಯಾರೂ ಕಂಡಿಲ್ಲ. ಇವಿಬ್ರೂ ರಾಜಕೀಯ ನೆಲೆಯಿಂದ ಸಾಂಸ್ಕೃತಿಕ ನೆಲೆಯನ್ನ ಗುರ್ತಿಸಿ ಕೊಂಡಂತವರು. ಬೇರೆ ಯಾರೂ ಅವರನ್ನ ಗಮನಿಸಿಲ್ಲ. ಶಿಶುನಾಳ ಷರೀಫ ಸಾಂಸ್ಕೃತಿಕ ನೆಲೆಯಲ್ಲೇ ಗುರ್ತಿಸಿಕೊಂಡ ವ್ಯಕ್ತಿ. ಈ ಹಿನ್ನೆಲೆ ಕರ್ನಾಟಕಕ್ಕಿದೆ. ಆದ್ರೆ ನಮ್ ತರ ನಮಗೆ ಯೋಚ್ನೆ ಮಾಡ್ವಾಗ

ಏನು ಇಷ್ಟೊಂದು ಬಹಳ ಗಟ್ಟಿಯಾದಂತ ಸಾಂಸ್ಕೃತಿಕ ನೆಲೆಗಟ್ಟು. ಕರ್ನಾಟಕದ ಹಿನ್ನೆಲೆ ಸ್ವತಂತ್ರ ಭಾರತದ ನಂತರದಲ್ಲಿ ಈಗ ನಮ್ಮ ಕರ್ನಾಟಕವನ್ನ ನಾವು ನೋಡ್ತೋದಾದ್ರೆ ನಮಗೆ 8 ಜ್ಞಾನಪೀಠ ಪ್ರಶಸ್ತಿ ಬಂದಿದೆ. ಆ ಎಂಟೂ ಜ್ಞಾನಪೀಠ ಪ್ರಶಸ್ತಿಗಳು ಈ ನೆಲದ, ಅವರು ಎಂಟೂ ಜನಕ್ಕೆ ನೋಡಿ ವಚನ ಕ್ರಾಂತಿಯ ಪ್ರಭಾವ ಅಂತ ಅನಿಸ್ತದೆ. ಹಾಗೆ ಶಿಶುನಾಳ ಷರೀಫ ಸಂತರ ಪ್ರಭಾವನೂ ಅವರ ಮೇಲಿದೆ. ಬೇರೆ ಯಾವ್ದೇ ರಾಜ್ಯದಲ್ಲಿ ಈ ಒಂದು ಕ್ರಾಂತಿ, ವಚನ ಕ್ರಾಂತಿಯಂತ ಒಂದು ಕ್ರಾಂತಿಯನ್ನ ನಾವು ನೋಡ್ಲೇ ಇಲ್ಲ. ಆ ಒಂದು ಇದು ಕರ್ನಾಟಕಕ್ಕಿದೆ. ಇಷ್ಟು ಸಾಂಸ್ಕೃತಿಕ ಕರ್ನಾಟಕದ ಗಟ್ಟಿಯಾದ ನೆಲದಲ್ಲಿ 8 ಜ್ಞಾನಪೀಠ ಪ್ರಶಸ್ತಿಗಳಾಗಿ ಕರ್ನಾಟಕದಲ್ಲಿವೆ. ಇತ್ತೀಚಿನ ರಾಜ್ಯವನ್ನ ನಾವು ನೋಡ್ತೋದಾದ್ರೆ ನಾವೆಲ್ಲಿಂದ ಎಲ್ಲಿಗೆ ಬಂದಿದೀವಿ. ರಾಮಕೃಷ್ಣ ಹೆಗಡೆಯವರ ಕಾಲದಲ್ಲಿ ಡೆಲ್ಲಿ ಮತ್ತು ಪಶ್ಚಿಮ ಬಂಗಾಳದ ಕಡೆಯಿಂದ ಜನ ನೋಡ್ತಾ ಇದ್ದದ್ದು ಇಲ್ಲಿಂದ ರಾಷ್ಟ್ರ ನಾಯಕರು ಬರ್ತಾರೆ ಅಂತ. ಯಾಕೆ ಅಂದ್ರೆ ಇಲ್ಲಿ ವಚನ ಕ್ರಾಂತಿ ಇದೆ. ಎಂತೆಂತ ಸಂತರ ಚಳವಳಿ ಇದೆ. ಆದ್ರೆ ಇಲ್ಲಿಂದ ರಾಷ್ಟ್ರ ನಾಯಕರಾಗ್ತಾರೆ. ಬಹಳ ದೊಡ್ಡ ದೊಡ್ಡ ನಾಯಕರು ಸಿಕ್ತಾರೆ ಅಂತ ಆಲೋಚನೆ ಇತ್ತಾವಾಗ. ಆದ್ರೆ ಅದು ಆಗ್ಲೇ ಇಲ್ಲ. ಇವತ್ತಿನ ಕರ್ನಾಟಕದ ಸ್ಥಿತಿ ನೋಡಿದ್ರೆ ಇದನ್ನ ಒಂದೆರಡು... ಓದ್ಬಿಡ್ತೇನೆ. ಸಣ್ಣದು ಒಂದೇ ಒಂದು ಪ್ಯಾರಾ ಇದೆ. ಧಾರ್ಮಿಕ ಕ್ಷೇತ್ರದ ಮಠಗಳು ಈಗ ಉದ್ಯಮ ಕ್ಷೇತ್ರವಾಗಿ ಪರಿವರ್ತನೆಯಾಗಿವೆ. ಜನರ ಪ್ರತಿನಿಧಿಗಳು ಮಠಗಳಿಂದ ಹುಟ್ಟಿಕೊಳ್ಳುತ್ತಾ ಇದ್ದಾರೆ. ಜ್ಯೋತಿಷಿಗಳ ಕೈಯಲ್ಲಿ ರಾಜಕೀಯ ಪ್ರತಿನಿಧಿಗಳು ಸಿಕ್ಕಿ ಹಾಕಿಕೊಂಡಿದ್ದಾರೆ. ವ್ಯಾಪಾರಸ್ಥರು ಸರ್ಕಾರವನ್ನು ವಹಿಸಿಕೊಂಡಿದ್ದಾರೆ. ಇಂಥ ಹೀನಾಯ ಸ್ಥಿತಿಗೆ ಕರ್ನಾಟಕ ಬಂದು ನಿಂತಿದೆ. ಯಾರ ಅಂಕೆಯಲ್ಲು ಯಾರೂ ಇಲ್ಲ. ಸಿದ್ಧಾಂತಗಳು, ವಿಚಾರಗಳು ತತ್ವಗಳ ಆಧಾರದ ಮೇಲೆ ರಾಜಕಾರಣ ಮಾಡುವ ಸಮುದಾಯದ ನಾಯಕರುಗಳ ನಾಯಕತ್ವವೂ ನಮ್ಗೆ ಸಿಗುತ್ತೆ. ಇಂಥ ವಿಷಯವನ್ನು ಗಟ್ಟಿಯಾಗಿ ಹೇಳುವ ಸಾಂಸ್ಕೃತಿಕ ನಾಯಕರು ಈಗ ಇಲ್ಲ ಎಂದೇ ಭಾವಿಸಿದ್ದೇನೆ. ಇದನ್ನ ಗಟ್ಟಿಯಾಗಿ ಹೇಳ್ಬೇಕಾಗಿತ್ತು. ಇದನ್ನ ನಿಲ್ಲಿಸಬಹುದಾಗಿತ್ತು. ಈ ಮಠಗಳು ವ್ಯಾಪಾರ ಕೇಂದ್ರಗಳಾಗಿದ್ವು. ವ್ಯಾಪಾರಸ್ಥರೇನೇ ಈಗ ರಾಜಕಾರಣಿಗಳಾಗ್ಬಿಟ್ಟಿರೋದು. ಇಂಥ ಒಂದು ಸಾಂಸ್ಕೃತಿಕ ನೆಲೆಯಲ್ಲಿ ಗಟ್ಟಿಯಾಗಿ ಹೇಳುವಂಥ ಶಕ್ತಿ ಯಾರಿಗೂ ಇಲ್ಲ. ಯಾಕೆ ಇಂತ ಒಂದು ಪರಿಸ್ಥಿತಿಗೆ ಬಂದು ನಿಂತ್ಕೊಂಡಿದೆ ಕರ್ನಾಟಕದ ರಾಜಕೀಯ. ಇವತ್ತಿನ ನಾಯಕರು ಎಲ್ಲರೂವೆ ಸಾಲುಗಟ್ಟಿ ನಿಂತವ್ರೆ ಎಲ್ಲಿಗೆ ಅಂತ ಅಂದ್ರೆ ಪರಪ್ಪನ ಅಗ್ರಹಾರಕ್ಕೆ. ಒಬ್ಬ ಮುಖ್ಯಮಂತ್ರಿ ಎಂದೂ ಎಲ್ಲೂ ಕೇಳೇ ಇಲ್ಲ ಆತ ಜೈಲಿಗ್ಹೋಗಿ ಬರ್ತಾನೆ ಅಂದ್ರೆ. ಈ ಕರ್ನಾಟಕದಲ್ಲಿ ಈ ಸಾಂಸ್ಕೃತಿಕ ನೆಲೆಗಟ್ಟಿನ ಕರ್ನಾಟಕದಲ್ಲಿ ಒಬ್ಬ ಮುಖ್ಯಮಂತ್ರಿ ಜೈಲಿಗ್ಹೋಗಿ ಬಂದ್ಬಿಡ್ತಾನೆ. ಎಂಥ ಪರಿಸ್ಥಿತಿ ಎಂಥ ಹೀನಾಯ ಸ್ಥಿತಿಗೆ ಬಂದಿದೆ ಅಂತ ಅಂದ್ರೆ ನಾವು ಇನ್ಮುಂದಕ್ಕೆ ಈ ಕರ್ನಾಟಕ ಏನಾಗ್ಬಹುದು? ಎಲ್ಲಿ ನಿಂತ್ಕೋಬಹುದು? ಎಲ್ಲಿಯ ವಚನ ಕ್ರಾಂತಿ? ಎಲ್ಲಿಯ ಸಂತರ ಕ್ರಾಂತಿಗಳು ಅಥವಾ ಎಲ್ಲಿಯ ವಿಚಾರಗಳು? ಯಾಕೆ ಬರೀ ಜ್ಞಾನಪೀಠ ಪ್ರಶಸ್ತಿಗೆ ಮಾತ್ರ ಸೀಮಿತ ಆಗೋಯ್ತೇ? ಸಾಂಸ್ಕೃತಿಕ ನೆಲೆಯಿಂದ ಒಂದು ರಾಜಕೀಯ ಬೆಳೀದೇ ಇರುವಾಗ ಕರ್ನಾಟಕದಲ್ಲಿ ಯಾರೊಬ್ರೂವೇ ಸಮುದಾಯದ ನಾಯಕರಾಗ್ಲೇ ಇಲ್ಲ. ಹಿ.ಶಿ.ರಾಮಚಂದ್ರೇಗೌಡ್ರು ಹೇಳ್ತಾ ಇದ್ರು ಜಾತಿಯಿಂದ ಮಠಗಳ್ನ ಕಟ್ಕೊಂಡು ಅಲ್ಲಿಂದ ಬರೋದಕ್ಕೆ ಪ್ರಯತ್ನ ಮಾಡ್ತಾ ಇದಾರೆ. ಆದ್ರೆ ಒಬ್ಬ ಸಾಂಸ್ಕೃತಿಕ ನೆಲಗಟ್ನಲ್ಲಿ ರಾಜಕೀಯದ ನಾಯಕತ್ವವನ್ನು ಮತ್ತು ಸಮುದಾಯದ ನಾಯಕತ್ವವನ್ನು ತುಂಬಿಸ್ಕೊಳ್ಳುವಂತ ಒಬ್ಬ ವ್ಯಕ್ತಿ ಕಾಣ್ತಾ ಇಲ್ಲ. ಇಷ್ಟವರೆಗೂ ಮಾತನಾಡಿದಂತ ನಮ್ಮ ಬಂಜಗೆರೆಯವರಾಗಲಿ, ಹನೂರವರಾಗಲಿ ಹೇಳಿದರು ಆ ಒಂದು ನೆಲೆಗಟ್ಟಿನಲ್ಲಿ ನಾವು ಕನಕದಾಸನನ್ನ ನೋಡುವುದಾದರೆ ನಮ್ಮ ಮ.ನ. ಜವರಯ್ಯನವರು ಹೇಳಿದರು ಒಂದು ವಚನಕಾರರಿಗೆ ಒಂದು ಪ್ರೇಕ್ಷಕ ಗಣ ಇತ್ತು, ಆದರೆ ಕನಕದಾಸರಿಗೆ ಯಾರೂ ಇರ್ಲಿಲ್ಲ. ಅವರೇ ಹುಡುಕಿ ಕೊಂಡು ಹೋಗ್ತಾ ಇದ್ರು ಅಲ್ಲಿ ತಲುಪಿಸ್ತಾ ಇದ್ರು ಜನಕ್ಕೆ ಅಂತ ಬಂಜಗೆರೆಯವರು ಹೇಳ್ತಾ ಇದ್ರು.

ಇಂಥ ಒಂದು ಸಾಂಸ್ಕೃತಿಕ ನೆಲೆ ಈಗಾಗ್ಬೇಕಾಗಿದೆ. ನಾವು ಈ ನೆಲೆಯಿಂದ ಸಾಂಸ್ಕೃತಿಕ ನಾಯಕತ್ವವನ್ನು ಆ ನೆಲೆನಲ್ಲಿ ಗುರ್ತಿಸೋಕೆ ಸಾಧ್ಯತೆ ಇದೆಯಾ? ಅದು ಸಾಧ್ಯತೆ ಇದ್ರೆ ಮಾತ್ರ ನಾವು ಕರ್ನಾಟಕವನ್ನ ಉಳಿಸಿಕೊಳ್ಳೋಕೆ ಸಾಧ್ಯ. ಅಥವಾ ರಾಜಕೀಯದ ನಾಯಕರು ಉಳಿಸಿಕೊಳ್ಳೋದಕ್ಕೆ ಸಾಧ್ಯ. ಇಲ್ದೇ ಹೋದ್ರೆ ಇಲ್ಲ. ಇದರ ಬಗ್ಗೆ ಹೆಚ್ಚು ಹೆಚ್ಚು ಚರ್ಚೆಗಳಾಗ್ಬೇಕು ಅಂತ ನನ್ನ ಅನಿಸಿಕೆ. ಮತ್ತೆ ಇದನ್ನ ಇನ್ನೂ ವಿಸ್ತರಿಸಬಹುದಾಗಿತ್ತು. ಯಾಕೆ ಹೀಗಾಗ್ತಾ ಇದೆ. ಇದರ ಬಗ್ಗೆ ಹೆಚ್ಚು ಚರ್ಚೆ ಆಗ್ಬೇಕು ಮತ್ತೆ ಇದನ್ನ ರಾಜಕೀಯವಾಗಿ ನೋಡೋ ಅಂಥಾದ್ದುವೆ ಆಗ್ಬೇಕು ಅನ್ನುವಂತಾದ್ದು ನನ್ನ ಅನಿಸಿಕೆ. ಆದ್ದರಿಂದ ಇದರ ಬಗ್ಗೆ ಹೆಚ್ಚು ಚರ್ಚೆ ಆಗ್ಬೇಕು ಅಂತ ಹೇಳಿ ನನಗೆ ಅವಕಾಶ ಕೊಟ್ಟಂತ ಕಾ.ತ.ಚಿಕ್ಕಣ್ಣ ಅವರಿಗೆ ವಂದಿಸುತ್ತೇನೆ.

**ಚರ್ಚೆ : ಲೋಲಾಕ್ಷಿ**

ಮೊದಲು ಕನಕ ಅಧ್ಯಯನ ಪೀಠಕ್ಕೆ ಕೃತಜ್ಞತೆ ಸಲ್ಲಿಸುತ್ತೇನೆ. ಈತರದ್ದೊಂದು ಚರ್ಚೆಯನ್ನು ಏರ್ಪಡಿಸಿದ್ದಕ್ಕೆ. ಮೂರು ಜನ ವಿದ್ವಾಂಸರು ಬಹಳ ಒಳ್ಳೆಯ ಹೊಸದಾದ ಓದಿನ ಕ್ರಮವನ್ನ ನಮ್ಮ ಮುಂದೆ ತೆರೆದಿಟ್ಟಿದ್ದಾರೆ. ಮತ್ತೆ ಪ್ರಶ್ನೆಗಳೂ ಕೂಡ ಅದಕ್ಕಿಂತ ಭಿನ್ನವಾಗಿ ಚರ್ಚೆಗೆ ಒಳಪಡ್ತಾ ಇವೆ. ಬೆಳಗ್ಗೆ ಮ.ನ.ಜ. ಅವರು ಕೇಳಿದಂಥ ಒಂದು ಪ್ರಶ್ನೆ ಕೀರ್ತನೆಗಳು ಅಂತ ಯಾಕೆ ಕನಕನನ್ನ ಕಟ್ಟಿ ಹಾಕ್ಬೇಕು ಅಂತ ಹೇಳಿ. ನನಗೆ ಅನ್ಸುತ್ತೆ ನಮ್ಮಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರಕಾರ ಸಾಹಿತ್ಯ ಚರಿತ್ರೆ ಅಂತಲೂ ಕೂಡ ನಾವು ಓದ್ತೇವೆ. ಚಂಪೂವಿನಿಂದ ಆರಂಭವಾಗುವಂತಹ ಈ ಸಾಹಿತ್ಯ ಪ್ರಕಾರಗಳು. ಸಂಸ್ಕೃತ ಮಿಶ್ರಿತವಾದ ಗದ್ಯ–ಪದ್ಯದಿಂದ ಜನ ಸಾಮಾನ್ಯರಿಗೆ ನಿಲುಕದಂತಹ ಸಾಹಿತ್ಯ ಪ್ರಕಾರ ವಿಧವಿಧವಾದಂತ ಹಂತಗಳನ್ನ ದಾಟ್ತಾ ಬರುತ್ತೆ. ರಗಳೆ ಆಗುತ್ತೆ, ಷಟ್ಪದಿ ಆಗುತ್ತೆ, ಕಂದ ಆಗುತ್ತೆ, ತ್ರಿಪದಿ ಆಗುತ್ತೆ, ವಚನ ಆಗುತ್ತೆ ಮತ್ತು ಕೀರ್ತನೆ ಆಗುತ್ತೆ. ವಚನ ಆಗುವಾಗ ಜನಸಾಮಾನ್ಯರ ಬಳಿಗೆ ತಲುಪಿದೆ. ಹಾಗಾಗಿ ಸೂಳೆ ಸಂಕವ್ವನಿಗೆ ಕೂಡ ವಚನವನ್ನ ಬರೀಲಿಕ್ಕೆ ಸಾಧ್ಯವಾಯಿತು. ಕೀರ್ತನೆಯೂ ಕೂಡ ಹಾಗೆ. ಯಾಕೆ ನಾವು ಕೀರ್ತನೆಯ ಪ್ರಕಾರದಲ್ಲಿ ಕನಕನನ್ನ ಓದ್ಬೇಕು? ಬೇರೆ ಪ್ರಕಾರವೂ ಕೂಡ ಇದೆ. ಯಾಕೆ ಕೀರ್ತನೆ ಪ್ರಕಾರದಲ್ಲೇ

ಯಾಕೆ ಓದ್ಬೇಕು ಕನಕನನ್ನ. ಯಾಕೆ ಗುರ್ತಿಸಿಕೊಂಡಿದ್ದೇವೆ ಅಂತ ಅಂದ್ರೆ ಅದು ಜನಸಾಮಾನ್ಯರ ಬಳಿಗೆ ತಲುಪಿದ ಪ್ರಕಾರ ಅಂತ್ಹೇಳಿ ನಾವು ಇಡೀ ಸಾಹಿತ್ಯ ಚರಿತ್ರೆಯಲ್ಲಿ ನಾವು ಓದ್ತಾ ಹೋಗ್ತೇವೆ.

ಅದೇ ಕೀರ್ತನೇನ ಬಿಟ್ಟು ನಾವು ಕನಕನನ್ನ ಇಟ್ರೆ ಆ ಒಂದು 16ನೇ ಶತಮಾನದಿಂದ ಕನಕನನ್ನ ಎಲ್ಲಿ ಇಡೋದು? ಆ ಸಮಸ್ಯೆ ಉಂಟಾಗುತ್ತೇನೋ ಅಂತ ನನಗೆ ಅನಿಸ್ತಾ ಇದೆ. ಅಂದ್ರೆ ಕೀರ್ತನೆಯ ಜೊತೆಯಲ್ಲೇ ಕನಕನನ್ನ ಹೊಸದಾಗಿ ಓದುವಂತಹ ಬೇಕಾದಷ್ಟು ರೀತಿಗಳು ಇವೆ ಅಂತ ಅನ್ನೋದನ್ನ ಕೂಡ ಭಾವಿಸಿಕೊಳ್ಬೇಕು. ಯಾಕೆ ಅಂತ ಅಂದ್ರೆ ನಮ್ಮಲ್ಲಿ ಇಡೀ ನಮ್ಮ ಮತದ ಚರಿತ್ರೆಯನ್ನ ನೋಡಿದ್ರೆ ಬೌದ್ಧರನ್ನ ಹೊಡ್ದು ಜೈನರು, ಜೈನರನ್ನ ಹೊಡ್ದು ವೀರಶೈವರು, ವೀರಶೈವರನ್ನ ಹೊಡ್ದು ವೈದಿಕರು ಎಲ್ಲೋ ಒಂದು ಕಡೆ ಎಲ್ಲಾ ಮತಾಂತರಗಳೇ. ನಮ್ಮ... ಬಹಳ ಸ್ಪಷ್ಟವಾಗಿ ನಮಗೆ ಇವತ್ತೂ ಕೂಡ ಮೇಣ ಬಸದಿ ಅಂತೇಳಿ ಬದಾಮಿಯಲ್ಲಿ ಕರೀತೇವೆ. ಅಲ್ಲಿ ಮೇಣ ಬಸದಿ ಅಲ್ಲಿ ಇವತ್ತು ಅದು ಹಿಂದೂಗಳ ದೇವಾಲಯ. ಆದ್ರೆ ಮೇಣ ಬಸದಿ ಬಂದದ್ದು, ಅದು ಬೌದ್ಧರ ಮೇಣಗಳೂ ಜೈನರ ಬಸದಿಗಳು, ಈಗ ಹಿಂದೂ ದೇವಾಲಯ ಮೇಣ ಬಸದಿ ಅಂತ ಇಟ್ಕೊಳ್ಳುವಂತದ್ದು. ಅಂದ್ರೆ ಇಡೀ ಚರಿತ್ರೆಯಲ್ಲಿ ಹೀಗೆ ಧಾರ್ಮಿಕ ಮತಾಂತರಗಳು ಅಥವಾ ಧಾರ್ಮಿಕ ಸಂಘರ್ಷಗಳ ನೆಲೆಯಲ್ಲಿ ಕೀರ್ತನೆಯನ್ನೂ ಕೂಡ ನಾವು ಈ ನೆಲೆಯಲ್ಲೇ ಗುರ್ತಿಸಿಕೊಳ್ಬೇಕು. ಮತ್ತೆ ಮತ್ತೆ ಇಲ್ಲಿ ಚರ್ಚೆಗೆ ಒಳಗಾಗ್ತಿರುವಂಥದ್ದು ಕನಕನ ಕಿಂಡಿ ಇಡೀ ಕನಕನನ್ನ ನಾವು ಹೊಸದಾಗಿ ನೋಡಬೇಕಾದ್ದು ದಕ್ಷಿಣ ಕನ್ನಡದ ಚರಿತ್ರೆಯ ಹಿನ್ನೆಲೆಯಲ್ಲಿ. ನಮ್ಮ ದಕ್ಷಿಣ ಕನ್ನಡದ ಚರಿತ್ರೆಯನ್ನ ನಮ್ಮ ಈ ಭಾಗದ ಅಥವಾ ಉತ್ತರ ಕರ್ನಾಟಕದ ಚರಿತ್ರೆ ಅಂತ್ಹೇಳಿ ಭಾವಿಸ್ಕೊಳ್ಳಬಾರದು. ಯಾಕೆ ಇವತ್ತೂ ಕೂಡ ಇಲ್ಲಿ ನಕ್ಸಲಿಸಂ ಇದೆ ಅನ್ನುವಂತಾದ್ದು ನಮ್ಗೆ ಬೇರೆ ಬೇರೆಯ ಚರಿತ್ರೆಯನ್ನ ಗ್ರಹಿಸಿಕೊಳ್ಳೋದಕ್ಕೆ ಸಾಧ್ಯತೆಯನ್ನ ತೆರೆದುಕೊಳ್ಳುತ್ತೆ. ಅಲ್ಲಿರುವಂತಹ ಶೆಣೈ, ಪೈ, ಬಂಟ, ರಾವ್, ಶೆಟ್ಟಿ ಮತ್ತು ಬ್ರಾಹ್ಮಣ ವರ್ಗಗಳ ನಡುವೆ ಕೆಳ ವರ್ಗಗಳು, ದಲಿತ ವರ್ಗಗಳು ಇವತ್ತಿಗೂ ಕೂಡ ಧ್ವನಿ ಎತ್ತೋದಕ್ಕೆ ಸಾಧ್ಯ ಆಗಿಲ್ಲ. ಆ ಕಾರಣಕ್ಕೆ ಯಾಕೆ ನಮ್ಮ ಮೈಸೂರಲ್ಲಿ ನಕ್ಸಲೈಟ್‌ಗಳಿಲ್ಲ? ಯಾಕೆ ದಕ್ಷಿಣ ಕನ್ನಡದಲ್ಲಿ ನಕ್ಸಲೈಟ್ ಇದಾರೆ ಅನ್ನುವುದಕ್ಕೆ ಇದಕ್ಕಿಂತ ಸ್ಪಷ್ಟವಾದ ಉದಾಹರಣೆ ಬೇಕಾಗಿಲ್ಲ. ಅಂಥ ಕಾಲಘಟ್ಟದಲ್ಲಿ ಕನಕ ದಕ್ಷಿಣ ಕನ್ನಡಕ್ಕೆ ಹೋಗ್ತಾನೆ ಅನ್ನುವಂತಹ ಆ ಚರಿತ್ರೆಯನ್ನ ನಾವು ಹಾಗೆ ಪುನಾರಚನೆ ಮಾಡಿ ಓದ್ಕೊಳ್ಬೇಕಾದ್ದು ಆ ಚರಿತ್ರೆಯ ಹಿನ್ನೆಲೆಯಲ್ಲಿ.

ಆ ಪ್ರಾದೇಶಿಕ ಚರಿತ್ರೆಯ ಹಿನ್ನೆಲೆಯಲ್ಲೇ ಓದ್ಕೊಳ್ಬೇಕು. ನಮಗೆ 13ನೇ ಶತಮಾನ, 16ನೇ ಶತಮಾನದಲ್ಲಿ ಮಾಡಿದಂತಹ ಒಂದು ಪ್ರತಿಭಟನೆಯನ್ನು ಇವತ್ತು 21ನೇ ಶತಮಾನದಲ್ಲಿ ಮಾಡಿದ್ದಾರೆ. 16ನೇ ಶತಮಾನದಲ್ಲಿ ಕನಕ ದೇವಾಲಯದ ಗೋಡೆಯನ್ನ ಒಡೆದು ಒಳ ನುಗ್ಗುವ ಪ್ರಯತ್ನ ಮಾಡ್ದ. ನಮ್ಮಲ್ಲಿ ಅಂಬೇಡ್ಕರ್ ಅವರು ದೇವಾಲಯ ಪ್ರವೇಶಕ್ಕೆ ಹೋರಾಟ ಮಾಡ್ತಾರೆ. ಎಲ್ಲಿ ಬಾಗಿಲವರೆಗೆ ಕೂಡ ಪ್ರವೇಶ ಇಲ್ದ ಸಂದರ್ಭದಲ್ಲಿ ಕನಕ ಗೋಡೆಯನ್ನ ಒಡೀತಾರಾ ಅಥವಾ ಅದೇ ಓಪನ್ ಆಗ್ತದ ಅಥವಾ ದೇವ್ರೇ – ಏನಾಗ್ತದೋ ಅದು ಬೇರೆ ಪ್ರಶ್ನೆ. ಕನಕ ಮಾಡಿದ್ದು ಗೋಡೆಯನ್ನ ಒಡೆದು ದೇವರನ್ನ ನಾನು ನೋಡ್ತೀನಿ ಅನ್ನುವಂತಹ ಒಂದು ಗರ್ಭಗುಡಿಯ ನೇರ ಪ್ರವೇಶದ ಪ್ರತಿಭಟನೆಯನ್ನ ಮಾಡುತ್ತಾನೆ. ಇವತ್ತಿಗೂ ಕೂಡ ನಮಗೆ ಗರ್ಭಗುಡಿಯ ಪ್ರವೇಶ ಸಾಧ್ಯ ಆಗಿದ್ಯಾ ಅಂತ ಅಂದ್ರೆ, ಪ್ರವೇಶ ನಮಗೆ ಸಾಧ್ಯ ಆಗಿಲ್ಲ. ಯಾವ ದೇವಾಲಯಕ್ಕೆ ನೇರವಾಗಿ ಗರ್ಭ ಗುಡಿಗೆ ಹೋಗ್ತೀರ? ಯಾರಿಗೂ ಕೂಡ ಸಾಧ್ಯ ಆಗ್ತಾ ಇಲ್ಲ. ನಮಗೆ ಶಿವರಾಮು ಅವ್ರು ಪುರೋಹಿತ ಕೆಲಸವನ್ನ ಎಲ್ಲರಿಗೂ ವಿಸ್ತರಿಸಬೇಕು ಅನ್ನುವ ಕಾನೂನನ್ನ ತಂದ್ರೂ ಕೂಡ ವಿಸ್ತರಿಸಿಕೊಳ್ಳಿಲ್ಲ. 16ನೇ ಶತಮಾನದಲ್ಲಿ ಮಾಡಿದ್ದನ್ನ ನಾವಿವತ್ತು 21ನೇ ಶತಮಾನದಲ್ಲಿ ಕನಕ ಹೀಗ್ಮಾಡ್ದ ಅಂತ ಚರ್ಚೆ ಮಾಡ್ತಿದೀವೆ ಹೊರತು ನಾವು ಹೋಗಿ ಯಾವುದೋ ದೇವಾಲಯದ ಗರ್ಭಗುಡಿಗೆ ಪ್ರವೇಶ ಮಾಡ್ಲಿಕ್ಕೆ ಆಗ್ತಾ ಇಲ್ಲ. ಆಮೇಲೆ ನಾವು ಇಲ್ಲಿ ತೀರ್ಮಾನ ತೆಗೆದುಕೊಳ್ಳಬೇಕಾದ್ದು ನನಗನ್ನಿಸೋದು ಇಡೀ ಒಂದು ದಿನದ ಚರ್ಚೆಯಲ್ಲಿ, ಹಾಗಾದ್ರೆ ನಮ್ಮ ಮುಂದಿನ ನಡೆ ಏನು? ನಾವು ಹೇಗೆ ಗರ್ಭಗುಡಿಯನ್ನ ಪ್ರವೇಶ ಮಾಡ್ಬೇಕು? ಉಡುಪಿಯ ಗರ್ಭಗುಡಿಗೆ ನಾವು ಹೋಗಬಹುದಾ? ಕನಕ ಗೋಡೆ ಒಡ್ದಿದಾನೆ. ನಾವು ಗರ್ಭ ಗುಡಿಯ ದೇವರನ್ನ ಮುಟ್ಟಬಹುದಾ? ಈ ತರಹದ ತೀರ್ಮಾನವನ್ನ ತಗೊಳ್ದೇ ಇದ್ರೆ ಮತ್ತೆ ಮತ್ತೆ ಈ ಚರಿತ್ರೆಯು ಪುನಃ ಪುನಃ ಚರ್ಚೆ ಚರ್ವಿತ ಚರ್ವಣ ಆಗುತ್ತೆ ಅಂತ ನನಗೆಲ್ಲೋ ಒಂದು ಕಡೆ ಅನ್ಸುತ್ತೆ. ಹಾಗಾಗಿ ನನಗೇನನ್ಸುತ್ತೆ ಈ ಕನಕ ಪ್ರಾಚೀನ ಅಂಬೇಡ್ಕರ್ ಅಂತ ಅನ್ಸುತ್ತೆ. ಆಧುನಿಕ ಅಂಬೇಡ್ಕರ್ ಹಾಗೇ ಕನಕ ಪ್ರಾಚೀನ ಅಂಬೇಡ್ಕರ್ ಅಂತ ಅನ್ಸುತ್ತೆ. ಬಸವಣ್ಣನ್ನ ನೋಡ್ರಿ 12ನೇ ಶತಮಾನದಲ್ಲಿ ಅಂತರ್ಜಾತಿ ವಿವಾಹ ಮಾಡಿ, ಮತ್ತೆ ಮತ್ತೆ ಚರ್ಚೆಗೆ ಒಳಗಾಗ್ತಾನೆ. ಕನಕ 16ನೇ ಶತಮಾನದಲ್ಲಿ ದೇವಾಲಯ ಪ್ರವೇಶ ಮಾಡಿ ಮತ್ತೆ ಮತ್ತೆ ಚರ್ಚೆಗೆ ಒಳಗಾಗ್ಬೇಕು. ಯಾಕೆ ಅಂತ ಅಂದ್ರೆ ದೇವಾಲಯ ಅನ್ನುವಂಥಾದ್ದು ಅದು ಧಾರ್ಮಿಕ ಹಿನ್ನೆಲೆಯಲ್ಲಿ ಈ ಕಟ್ಟು ಹಾಕಿರುವ ಕಾರಣದಿಂದಾಗಿ ಕನಕನನ್ನ ನಾವು ಚರ್ಚೆ ಮಾಡ್ಲಿಕ್ಕೆ ಎಲ್ಲೋ ಒಂದು ಕಡೆ ಹಿಂದೇಟಾಕ್ತಾ ಇದೀವಿ. ಕನಕನನ್ನ ಕಟ್ಟಿ ಹಾಕ್ತಾ ಇದೀವಿ. ಅಂತ ನನಗನ್ನಿಸ್ತಾ ಇದೆ.

ಹಾಗಾಗಿ ಇವತ್ತು ನಾವು ಏನಾದ್ರೂ ತೀರ್ಮಾನ ತೆಗೆದುಕೊಳ್ಳುತ್ತೇವೆ. ಅಂತ ಅಂದ್ರೆ ಚಿಕ್ಕಣ್ಣನವರ ಸನ್ನಿಧಿಯಲ್ಲಿ, ಗರ್ಭಗುಡಿಯ ಪ್ರವೇಶದ ಕನಕನ ಮೂಲಕ ಉಡುಪಿಯ ಗರ್ಭಗುಡಿಯ ಪ್ರವೇಶದ ಒಂದು ಯೋಜನೆಯನ್ನ ಹಾಕೊಂಡು ನುಗ್ಗೋದಕ್ಕೆ ಅಥವಾ ಹೋಗ್ಲಿಕ್ಕೆ ಸಾಧ್ಯನಾ ಅಂತ್ಹೇಳಿ ತೀರ್ಮಾನ ತಗೊಂಡ್ರೆ ಅದು ಬಹಳ ಚರ್ಚೆಗೆ ಅರ್ಥಪೂರ್ಣ ಅನ್ನೋದನ್ನ ಭಾವಿಸಿಕೊಳ್ಳುತ್ತಾ ನನ್ನ ಮಾತನ್ನ ಮುಗಿಸುತ್ತೇನೆ.

**ಚರ್ಚೆ : ಹಿ.ಶಿ.ರಾ.**

ಒಂದು ಗ್ಲೋಬಲ್ ಅನ್ನೋದರ ಬಗ್ಗೆ ಮಾತಾಡಿದ್ರಿ. ಸಾಂಸ್ಕೃತಿಕ ಗ್ಲೋಬಲ್ ಆಗ್ಲಿಕ್ಕೆ ಸಾಧ್ಯ ಇಲ್ವ. ಆಮೇಲೆ ಸಂಸ್ಕೃತಿ ಸರಕೇನಲ್ಲ. ಸಂಸ್ಕೃತಿನ ಸರಕು ಮಾಡ್ಕೋತಾ ಇರುವವರು ಹೊರಗಡೆಯವರು ಅಂತ ಹೇಳಿದೀನಿ. ಸಂಸ್ಕೃತಿ ಯಾವತ್ತೂ

ಸರಕಲ್ಲ. ಯಾಕಂದ್ರೆ ಮನುಷ್ಯನ ಅಸ್ತಿತ್ವದ ಪ್ರಶ್ನೆ ಮತ್ತು ಸಂಸ್ಕೃತಿ ಯಾವತ್ತೂ ಕೂಡ ಲೋಕಲ್. ಯಾಕಂದ್ರೆ ಅದು ಒಂದು ಸಮುದಾಯ ಮತ್ತು ಜನಪದವನ್ನ ಕಟ್ಟಿಕ್ಕೆ ಹುಟ್ಕೊಂಡಿರೋ ಅಂತದ್ದಾಗಿರುವುದರಿಂದ ಅದು ಲೋಕಲ್. ಆ ಲೋಕಲ್‌ನಲ್ಲಿ ನೀವು ಯಾವುದೋ ಒಂದು ಸಣ್ಣ ಸಮುದಾಯ ಅಂತ ಕರೀಬಹುದು, ಕರ್ನಾಟಕ ಅಂತ ಕರೀಬಹುದು ಅಥವಾ ಭಾರತ ಅಂತ ಕರೀಬಹುದು. ಒಂದು ಲೋಕಲ್ ಅಥವಾ ಸ್ಥಳೀಯ ಸಂಸ್ಕೃತಿ ಅಂತ ಒಂದಿರುತ್ತೆ. ಕನ್ನಡಿಗರ ಸಂಸ್ಕೃತಿ ಇರುತ್ತೆ, ಭಾರತೀಯ ಸಂಸ್ಕೃತಿ ಇರುತ್ತೆ. ಭಾರತೀಯ ಸಂಸ್ಕೃತಿ ಪ್ರಪಂಚಕ್ಕೆ ಲೋಕಲ್. ಭಾರತಕ್ಕೆ ಕರ್ನಾಟಕ ಸಂಸ್ಕೃತಿ ಲೋಕಲ್. ಕರ್ನಾಟಕಕ್ಕೆ ಯಾವ್ದೋ ಜೇನು ಕುರುಬರ ಸಂಸ್ಕೃತಿ ಇದ್ಯಲ್ಲ ಅದು ಲೋಕಲ್. ಸಂಸ್ಕೃತಿ ಸರಕಲ್ಲ. ಸರಕು ಮಾಡ್ಕೊಂಡಿದಾರೆ ಹೊರಗಡೆಯವರು. ಯಾರು ಆರ್ಥಿಕವಾಗಿ ಸರಕನ್ನ ಮಾಡ್ಕೊಂಡಿರೋರು ಸಂಸ್ಕೃತಿಯನ್ನೂ ಸರಕು ಮಾಡ್ಕೊಂಡಿದಾರೆ. ಉದಾಹರಣೆಗೆ ಕನಕದಾಸರು ಅಂತಂದ್ರೆ ಅವರು ಒಂದು ಸಮುದಾಯದಲ್ಲಿ ಹುಟ್ಟಿ ಬೆಳೆದಿದ್ರೂ ಕೂಡ ಅವ್ರು at a time local ಹೌದು, ಭಾರತೀಯ ಇದೂ ಹೌದು, ಅಂತಾರಾಷ್ಟ್ರೀಯನೂ ಹೌದು. ನಾವು separate ಆಗಿ ಅಂತಾರಾಷ್ಟ್ರೀಯ ಅಂತೇನೂ ಕರೀಬೇಕಾಗಿಲ್ಲ. ಆ ಸಾಧನೇನೇ ಅಲ್ಲಿ Identity ಇದೆ. ಲೋಕಲ್ ಗ್ಲೋಬಲ್ ಅಂತ ಬೇರೆ ಬೇರೆ ಮಾಡಿದಾರೆ. ಯಾಕಂದ್ರೆ for Exploitation. But realy ಅದು ಆತರ discrimination ಅಂತ ಅವರಿಗೆ ಇಲ್ಲ. ಲೋಕಲ್ ಆಗಿರುವಂಥಾದ್ದು ರಾಷ್ಟ್ರೀಯನೂ ಕೂಡ ಹೌದು. Ofcourse ನಾವು ವಾದ ಮಾಡ್ತೀವಲ್ಲ ಕನ್ನಡ ರಾಷ್ಟ್ರಿಯ ಭಾಷೆ ಅಲ್ವಾ ಅಂತ ಕೇಳ್ತೀವಲ್ಲ ಯಾಕೆ ಅಂತ ಅಂದ್ರೆ ಇದೂ ರಾಷ್ಟ್ರೀಯನೇ. ಆ ಅರ್ಥದಲ್ಲಿ ಲೋಕಲ್ ಅನ್ನುವಂತಾದ್ದು ರಾಷ್ಟ್ರೀಯ ಅಂತನೇ ನಾವು ಅರ್ಥ ಮಾಡ್ಕೋಬೇಕು. ರಾಷ್ಟ್ರೀಯತೆಯನ್ನ ಆರೋಪ ಮಾಡ್ಕೋಬೇಕಾದಂಥದ್ದೇ ಇಲ್ಲ.

ಲೋಕಲ್ ಆಗಿರುವಂತದ್ದು, ಸಾಮುದಾಯಿಕ ಆಗಿರುವಂತದ್ದು ನಮ್ಮ Indian contextಲ್ಲಿ ಇದ್ದಕ್ಕಿದ್ದಂಗೆ ಭಾರತೀಯ, ಇದಕ್ಕಿದ್ದಂಗೆ ಅಂತಾರಾಷ್ಟ್ರೀಯ ನಾಯಕತ್ವ ಅನ್ನುವಂತಾದ್ದು ಅದು. ಪೊಳ್ಳು ನಾಯಕತ್ವ. ಅದು ಬೋಗಸ್ ನಾಯಕತ್ವ. ಅದ್ರಲ್ಲಿರದಿಲ್ಲ. ರಾಷ್ಟ್ರೀಯ ನಾಯಕತ್ವ ಅನ್ನೋದು ಇದ್ದಕ್ಕಿದ್ದಂಗೆ ಇರೋದಿಲ್ಲ. ಒಂದು ಸಮುದಾಯದಲ್ಲಿ ಹುಟ್ಟಿ ಬೆಳೆದು ಅಲ್ಲಿ Identityಯನ್ನ ಮಾಡ್ಕೊಂಡು ಆಮೇಲೆ ಬೇರೆ ಬೇರೆ ಸಮುದಾಯಗಳ ಜೊತೆಗೆ ಮುಖಾಮುಖಿಯಾಗುವುದರ ಮೂಲಕ ಅದು ರಾಷ್ಟ್ರೀಯ ನಾಯಕ ಆಗುತ್ತೇ ಹೊರತು separate ನಾಯಕ, ರಾಷ್ಟ್ರೀಯ ನಾಯಕ ಅನ್ನುವಂತಾದ್ದು ಯಾವತ್ತೂ ಇರದಿಲ್ಲ. ನೀವು ಬುದ್ಧನ್ನ ತಗೋಳಿ, ಕನಕನ್ನ ತಗೋಳಿ, ಇನ್ನೊಬ್ಬರನ್ನ ತಗೋಳಿ ಒಂದು ಸಮುದಾಯದಲ್ಲಿ ಹುಟ್ಟಿದರು, ಆ ಸಮುದಾಯದ ಸಾಂಸ್ಕೃತಿಕ ನಾಯಕರೂ ಆದರು. At the same time ಅವರು ನಾಡಿನ, ರಾಷ್ಟ್ರದ ನಾಯಕರೂ ಕೂಡ. ಸಾಂಸ್ಕೃತಿಕ ನಾಯಕರುಗಳೂ ಕೂಡ.

**ಪ್ರಶ್ನೆ :**

ಕನಕನನ್ನ ನಮ್ಮ ಹಿಂದೂ ಸಮುದಾಯಕ್ಕಿಂತ ಎಲ್ಲ ಸಮುದಾಯಗಳ ನೆಲೆಗೆ ಅವರನ್ನ ವಿಸ್ತರಿಸಿಕೊಳ್ಳೋದು ಹೇಗೆ?

**ಚರ್ಚೆ : ಹಿ.ಶಿ.ರಾ.**

ಕನಕದಾಸರನ್ನ ಮೊದ್ಲು ತರೋವಾಗ ನೀವು ಆ ಸಮುದಾಯದವರು ಅಂತ ತಗೊಬೇಕು ನೀವು. ಆ ಸಮುದಾಯದ Identityಗೆ ಬೇಕು. ನೋಡಿ ನಮ್ಮ Indian contextಲ್ಲಿ ಇಷ್ಟೆಲ್ಲಾ ನಾವು ಜಾತಿ ವಿರೋಧವಾಗಿ ಮಾತಾಡ್ತಾ ಬಂದಿದೀವಿ, ಮತ್ತೆ Settle ಆಗ್ತಿರುವಂತಾದ್ದು ಜಾತಿಲೇನೇ. ಹಾಗಾಗಿ ಜಾತಿ ಹೊರಗಡೆ ಒಂದು ನಾಯಕತ್ವ ಸೃಷ್ಟಿಯಾಗ್ಬೇಕು ಅಂತ ಅಂದಾಗ ಮೊದ್ಲು ಅಲ್ಲಿ ಬೆಳ್ದು ಅದು ದೊಡ್ಡದಾಗುತ್ತೆ. ಮೊದ್ಲು ಇದನ್ನ ಒಪ್ಕೋಬೇಕು. ಇವತ್ತು ನಾನು ಯಾರೋ ಒಬ್ಬರಿಗೆ ದಲಿತ ನಾಯಕರಿಗೆ ಹೇಳ್ತಾ ಇದ್ದೆ. ಮೊದಲು ನೀವು ಮಹಾನಾಯಕರು ಹೌದು. ಎಸ್.ಸಿ. ಹೌದು. ಮೊದಲ ಹಾಗೆ ಇವತ್ತು ದಲಿತ ಸಮುದಾಯವನ್ನ ಒಂದುಗೂಡಿಸಿ. ದಲಿತ ಸಮುದಾಯವನ್ನ ಒಂದು ಗೂಡಿಸಿದ್ರೆ ಈ ಕರ್ನಾಟಕದಲ್ಲಿ ಅದು ದೊಡ್ಡ ಸಾಧನೆ ಆಗುತ್ತೆ. ಅದು ಕರ್ನಾಟಕಕ್ಕೆ ಸಾಧನೇನೂ ಆಗುತ್ತೆ. ಹೊರಗಡೆಗೆ ಸಾಧನೇನೂ ಆಗುತ್ತೆ. ಆ ಮೊದ್ಲು ಇವತ್ತು ಆಯಾ ಸಮುದಾಯಗಳನ್ನ ಸಾಂಸ್ಕೃತಿಕವಾಗಿ, ಜಾತೀಯವಾಗಿ ಅಲ್ಲ, ಸಾಂಸ್ಕೃತಿಕವಾಗಿ. ನಿಮಗ್ಗೊಳ್ದೆ. ಒಕ್ಕಲಿಗರ ಉದಾಹರಣೆ ಕೊಟ್ಟೆ. ಒಕ್ಕಲಿಗರಿಗೆ Agricultural ಸಂಸ್ಕೃತಿ ಬರ್ಬೇಕಿತ್ತು, ಇಲ್ಲಾಂದ್ರೆ ಕುವೆಂಪು ಸಂಸ್ಕೃತಿ ಬರ್ಬೇಕಿತ್ತು. ಎರಡೂ ಬರ್ಲಿಲ್ಲ. ಅವೆರಡರಲ್ಲಿ ಒಂದು ಬಂದಿದ್ರೆ ಇದು Separate Identity ಆಗೋದು. ಇನ್ನೂ ಒಂದು ಹೇಳ್ತೀನಿ. ಸಿದ್ಧರಾಮಯ್ಯನವರು ನಮ್ಮ ತರ ಸೋಷಿಯಲಿಸ್ಟಿಕ್ ಆಗಿ ಬೆಳೆದವರು. ನನಗೆ ಅವರ ಬಗ್ಗೆ ಬಹಳ ಪ್ರೀತಿ ಇದೆ. ನಾನು ಅವರನ್ನ ನಾಯಕ ಅಂತ ಒಪ್ಕೊಳೋನು. ಬೇರೆವ್ರು ಆತರ ಅಂತ ಒಪ್ಕೊಳಲ್ಲ. ಕುರುಬ ಜನಾಂಗದಿಂದ ಬಂದಿರ್ಲಿ ಎಲ್ಲಿಂದನಾದ್ರೂ ಬಂದಿರ್ಲಿ ಒಪ್ಕೊಳ್ಳಿ ಅಂದ್ರೆ ನಾನು ಒಪ್ಕೊಳಲ್ಲ. ಎಂದೂ ಕೂಡ ಸಿದ್ಧರಾಮಯ್ಯನವರು ಮಠವನ್ನ ಆರಾಧನೆ ಮಾಡೋದಿಲ್ಲ ಮತ್ತು ಮಠವನ್ನು glorify ಮಾಡೋದಿಲ್ಲ. ಮತ್ತೆ ಬೇರೆಯವರ ತರ ಯಜ್ಞ, ಯಾಗ ಅದೂ ಇದೂ ಮಾಡ್ಕೊಂಡು ಡಂಭಾಚಾರ ಮಾಡೋದಿಲ್ಲ. ಆ ಕಾರಣಕ್ಕೋಸ್ಕರವಾಗಿ ಬೇರೆ ಎಲ್ಲರಿಗಿಂತ ಸಿದ್ರಾಮಯ್ಯ ಹೆಚ್ಚು ಪ್ರಸ್ತುತ. Not because of he is from Kuruba Community. He is a socialist ಎನ್ನೋ ಕಾರಣಕ್ಕಾಗಿ ಅಂತ ನಾನು ಹೇಳ್ತೀನಿ. ಹಾಗೆ ಬೆಳವಣಿಗೇಗೆ ನಾಯಕತ್ವ ಸಾಧ್ಯವಾಗುವಂತಾದ್ದು. ಇವತ್ತು ಅದ್ನೆ ನಾನು ನಿಮ್ಗೆ ಹೇಳಿದೆ. ಈ ಕನಕನ ಆದರ್ಶ ಪಡಕೊಳ್ಳೋದರಿಂದ ಆ ಸಂಸ್ಕೃತಿ ಸಮುದಾಯಕ್ಕೆ Supporting ಆಗೋದರ ಜೊತೆಗೆ ಒಂದು ದೊಡ್ಡ ಮಾಹಿತಿ ಅಲ್ಲಿಂದ ಹೋಗುತ್ತೆ – ತಳ ಕೆಳ ಸಮುದಾಯಗಳಿಗೆ ಅಂತ ಹೇಳಿದೆ ನಾನು. ಕುರುಬ ಸಮುದಾಯದ ಸಾಂಸ್ಕೃತಿಕ ನಾಯಕ ಅಂತನೇ ತಗೊಳಿ ಕನಕದಾಸರನ್ನ. ಅಪರಾಧ ಆಗೋದಿಲ್ಲ. ಆದ್ರೆ ಆ ರೀತಿ ಆಗೋದ್ರಿಂದ ಬೇರೆ ಸಮುದಾಯಕ್ಕೆ ಮಾಹಿತಿ ಹೋಗುತ್ತೆ ತಳ ಕೆಳ ಸಮುದಾಯಗಳಿಗೆ. ಯಾಕಂದ್ರೆ ತಳ ಕೆಳ

ಸಮುದಾಯಗಳಿಗೆ ಹೋಗಿದಾರೆ ಅಂತ ಅಂದ್ರೆ ಅವರನ್ನ ಯಾವಾಗ ಬೇಕಾದ್ರೂ ಹೊಸಕಿ ಹಾಕ್ಬಹುದು. ಅಂತ ಪರಿಸ್ಥಿತಿ ಇವತ್ತಿದೆ. ಅದಕ್ಕೆ ಮಾಹಿತಿ ಕೊಡ್ಬೇಕಾದವರು ಯಾರು ಅಂತ ಅಂದ್ರೆ ಕನಕದಾಸರು ಮಾಹಿತಿ ಕೊಡ್ಬೇಕಾಗಿದೆ ಅಂತನೇ ನಾನು ಹೇಳಿದ್ದು. ಇನ್ನೇನಾದ್ರೂ ಇದ್ರೆ ನೀವು ಪ್ರಶ್ನೆ ಮಾಡ್ಬಹುದು.

ಇನ್ನೊಂದು ಹೇಳ್ತೀನಿ ನಾನು, ನಮ್ಮ ಲೋಲಾಕ್ಷಿಯವರು ಹೇಳಿದ್ರು ಗರ್ಭಗುಡಿ ಪ್ರವೇಶ ಮಾಡ್ಬೇಕು ಅಂತ. ಅವ್ರು ನನಗೆ ಪ್ರಶ್ನೆ ಏನೂ ಕೇಳ್ಲಿಲ್ಲ. ನಾನು ಕೇಳ್ತೀನಿ ಯಾಕೆ ಪ್ರವೇಶ ಮಾಡ್ಬೇಕು? ಇದುವರೆಗೂ ನಾವು ಕೆಟ್ಟ ಅನುಕರಣೆನೇ ಮಾಡಿರೋದು. ಇದರ ಮೂಲಕ ಏನು ಅಂತ ಅಂದ್ರೆ ಶೂದ್ರರು ಬೋಳೇ, ಸಂಸ್ಕೃತಿ ಇಲ್ದೇ ಇರೋರು ಅಂತ ತೋರಿಸ್ಕೊಳೋದಾಗುತ್ತೆ ಹೊರತು ನಾನು ಈ 10 ವರ್ಷದಿಂದ ಹೇಳ್ತಿದ್ದೆ ನನ್ನನ್ನ ಯಾವ್ದಾದ್ರೂ ಧರ್ಮಕ್ಕೆ ಸೇರಿಸ್ಕೊಳಿ. ದೊಡ್ಡ ಮೊತ್ತ ಕೊಡಿ. ಇವತ್ತು ಕ್ರಿಶ್ಚಿಯನ್‌ಗೆ ಸೇರಿಸಿರಿ. ಆದ್ರೆ ಮುಸ್ಲಿಂಗೆ ಸೇರಿಸ್ಕೊಳಿ. ಇನ್ನೊಂದಕ್ಕೆ ಸೇರಿಸಿ ಸೇರ್ಕೊಳ್ತೀನಿ. ಆದ್ರೆ ನಾನೆಲ್ಲಿರ್ತಿನೋ ಅಲ್ಲೇ ಇರ್ತೀನಿ. ಯಾಕೆ ಅಂತ ಅಂದ್ರೆ ನನಗೆ ಒಂದು ಸಂಸ್ಕೃತಿಯಿಂದ Identity ಬಂದಿದೆ. ಯಾವುದು ಏನು ಅಂತ ಗೊತ್ತಿದೆ. ಹಾಗಾಗಿ ನಮಗೆ ಮೊದಲು ಮಾಡ್ಬೇಕಾಗಿರೋದು ನಮ್ಮ ದೌರ್ಬಲ್ಯವನ್ನ ಯಥಾ ಪ್ರಕಾರ ಶೂದ್ರ ಶೂದ್ರ ಅಂತ ಯಾಕೆ ಪ್ರತಿಪಾದನೆ ಮಾಡ್ಬೇಕು? It is discriminatory ideology. ಶೂದ್ರ ಪಂಚಮ ಅಂತ ಹೇಳ್ಬೇಕಾದ್ರೆ discriminatoryನೇ ಇರೋದು. ಅದನ್ನ ಬಿಟ್ಟು ಯೋಚ್ನೆ ಮಾಡಿ. ನಾವದನ್ನ ಒಂದು ಸಲ ಸೃಷ್ಟಿ ಮಾಡ್ಕೊಂಡ್ವಿ, ಇನ್ನೊಂದು ಸಲ ಫಾರಿನರ್ಸ್ ಬಂದು ಆ discriminationನ ಸೃಷ್ಟಿ ಮಾಡಿದ್ರು. ನಾವು ಇಂಟಗ್ರಿಟಿಯಾದ ಐಡಿಯಾಲಜಿನ ಸೃಷ್ಟಿ ಮಾಡ್ಕೊಳೋಣ. ಆ ಗರ್ಭಗುಡೀನೂ ಬೇಡ. ಏನೂ ಬೇಡ. ಅವರಾದ್ರೂ ಪೂಜೆ ಮಾಡ್ಕೊಳ್ಳಿ. ನನಗೆ ಯಾವತ್ತೂ ಕೂಡ, ನಾನು ಪಕ್ಕಾ ಜನಿವಾರ, ಉಡುದಾರ, ಶಿವದಾರ ವಿರೋಧಿಯಾದಂತವನು. ಆದ್ರೆ ನಾನು ಪ್ರಕೃತಿ ಆರಾಧಕ. ಯಾಕಂದ್ರೆ ಸರ್ವಶಕ್ತಿ ಪ್ರಕೃತಿ ಅನ್ನೋ ಕಾರಣಕ್ಕೋಸ್ಕರವಾಗಿ. ಮಧ್ಯವರ್ತಿ ಇಲ್ಲದೇ ಇರುವಂತ ಯಾವುದೇ ಧರ್ಮವನ್ನ ಸಂಸ್ಕೃತಿಯನ್ನ ನೀವು ಅನುಸರಿಸಿ. ನಿಮ್ಮ ಮಧ್ಯೆ ಇನ್ನೊಬ್ಬ ಬರಬಾರದು. ಪೂಜೆ ಮಾಡೋದಿರಬಹುದು. ಶ್ಲೋಕ ಹೇಳೋನಿರ್ಬಹುದು. ಮದುವೆ ಮಾಡೋನಿರ್ಬಹುದು ಯಾರೂ ಬರಕೂಡದು. ನಿಮ್ಮ ನಿಮ್ಮ ಧರ್ಮ, ನಿಮ್ಮ ನಿಮ್ಮ ಸಂಸ್ಕೃತಿ. ಯಾಕೆ ಅಂತ ಅಂದ್ರೆ ಬೇರೆ ವಿಚಾರವಂತರಿಗಿಂತ ನಾನು ಭಿನ್ನ. ಯಾಕಂದ್ರೆ ನಾನು ಫೋಕ್ಲೋರಿಸ್ಟ್, ಜನ ಸಮುದಾಯದಲ್ಲಿ ಕೆಲಸ ಮಾಡಿರೋನು. ಜನಸಮುದಾಯಗಳಿಗೆ ನೀವು ಧರ್ಮವನ್ನ, ಸಂಸ್ಕೃತಿಯನ್ನ, ದೇವರನ್ನ ನಿರಾಕರಿಸಿ ಅಂತ ಹೇಳಿದ್ರೆ ಅವರು ನಮ್ಮನ್ನ ನಿರಾಕರಿಸ್ತಾರೆ. ನಾನು ನಮ್ಮ ಸಂಬಂಧಿಗಳ ಮದುವೆಗಳಿಗೆ ಹೋದಾಗ ನಾನು ಹೇಳ್ದಂಗೆ ಮದುವೆ ಮಾಡ್ಲಿಲ್ಲ ಅಂತ ಮದುವೆಗಳಿಗೆ ಹೋಗೋದು ಬಿಟ್ಟೆ. ನನ್ನನ್ನ ಬಿಟ್ರೇ ಹೊರತು ಅವರು ಮದುವೆ ಶಾಸ್ತ್ರಗಳನ್ನ ಬಿಡ್ಲಿಲ್ಲ. ಇವತ್ತಿಗೂ ಕೂಡ ನನ್ನ ಸಂಬಂಧಿಕರು, ರಕ್ತ ಸಂಬಂಧಿಗಳು ಕರೀತಾರೆ. ಆದ್ರೆ ಅವರ ರೀತಿಗೆ ಸಂಬಂಧಪಟ್ರೆ ಮಾತ್ರ ಕರೀತಾರೆ ಹೊರತು ಇಲ್ಲಾಂದ್ರೆ ನನ್ನನ್ನ ನಿರಾಕರಿಸ್ತಾರೆ. ಆದ್ರೆ ನಾನು ವಿಚಾರವಂತ ಆಗಿ ನಿರಾಕರಣೆಗೊಳಗಾಗ್ತಿದೀನಿ ಅಂತ ಅಂದ್ರೆ ನನ್ನ ವಿಚಾರದ ಪರಿಣಾಮ ಏನು? ಹಾಗಾಗಿ ನಾನು ಕನಕದಾಸರನ್ನ ಡಿಫ್ರೆಂಟ್ ಆಗಿ ಯಾಕೆ ನೋಡ್ತೀನಿ ಅಂದ್ರೆ ಅವರು ಧರ್ಮವನ್ನೂ ಇಟ್ಕೊಂಡು, ಸಂಸ್ಕೃತಿಯನ್ನು ಇಟ್ಕೊಂಡು ಮಾತಾಡೋಕೆ ಶುರು ಮಾಡಿದ್ರಲ್ಲ ಅದೇ ಇವತ್ತು ನಾವು ಮಾತಾಡ್ಬೇಕಾಗಿರೋದು. ನಿರಾಕರಿಸಿ ಅಲ್ಲ. ಆದ್ರೆ ಯಾವ ಧರ್ಮ, ಯಾವ ಸಂಸ್ಕೃತಿ ವಿರುದ್ಧ ನಾವು ತೀರ್ಮಾನ ಮಾಡ್ಬೇಕು. ನಮಗಿನ್ನೊಬ್ಬರ ಸಂಸ್ಕೃತಿ ಬಗ್ಗೆ, ಇನ್ನೊಬ್ಬರ ಧರ್ಮದ ಬಗ್ಗೆ, ದಾಳಿ ಮಾಡೋದು ಬೇಡ, ಆಕ್ರಮಿಸಿಕೊಳ್ಳೋದೂ ಬೇಡ, ನಂದೇನು ಅಂತ ಕಂಡುಕೊಳ್ಳೋದು, ನಾನಿರೋದು ಯಾಕೆ? ಎಂಬುದರ ಅರಿವು ಮೂಡಿಸುತ್ತದೆ.

**ಚರ್ಚೆ : ಜಿ.ಪಿ. ಬಸವರಾಜು**

ರಾಮಚಂದ್ರೇಗೌಡರ ಮಾತಿಂದಾಗಿ ಸ್ವಲ್ಪ ಅದನ್ನ ಕ್ಲಾರಿಫೈ ಮಾಡ್ಬೇಕಾಗುತ್ತೆ. ಒಂದು ಕನಕನ್ನ ನಾವು ಕುರುಬರ ಸಾಂಸ್ಕೃತಿಕ ನಾಯಕ ಅಂತ ಇಟ್ಕೊಬೇಕಾ? ಹಾಗಿಟ್ಕೊಬಾರ್ದು ಅಂತ ನನ್ನ ಅಭಿಪ್ರಾಯ. ಯಾಕೆ ಅಂದ್ರೆ ಇವತ್ತು ನಮ್ಮ ಎಲ್ಲ ಸಮಸ್ಯೆಗಳು ಶುರುವಾಗಿರೋದು ಇಲ್ಲಿ? ಒಂದೊಂದು ಜಾತಿ–ಸಾಂಸ್ಕೃತಿಕ ನಾಯಕ ಎಲ್ಲರಿಗೂ ಸೇರಿದವನು. ಅವನ ಸತ್ವವನ್ನು ನಾವು ಅರ್ಥ ಮಾಡ್ಕೋಬೇಕು. ಅವನ ಬೇರುಗಳನ್ನ ನಾವು ನಿರಾಕರಿಸಬಾರದು. ಆದ್ರೆ ಅವನು ಈ ಜಾತಿಗೆ ಸೇರಿದವನು ಅನ್ನುವಂಥ ಆ ಜಾತಿಯ ತತ್ವವನ್ನೇ ನಾವು ಒಡೀಬೇಕಾಗಿರೋದು. ನೀವೊಂದು ವೇಳೆ ಅವನ ಸತ್ವದಲ್ಲಿ ಅವನ್ನ ಹಿಡೀತೀವಿ ಅಂತ ಹೋದಾಗ ಏನಾಗುತ್ತೆ ಅಂದ್ರೆ ಅದನ್ನ ಜನ ಸರಿಯಾಗಿ ಗ್ರಹಿಸ್ತಾರೆ ಅನ್ನೋಕಾಗಲ್ಲ. ಇಮಿಡಿಯೇಟ್ ಆಗಿ ನಮ್ಮ ರಾಜಕಾರಣಿಗಳು ಅದನ್ನ ಒಂದು ಶಕ್ತಿಯಾಗಿ ಮಾಡ್ಕೊಬಿಡ್ತಾರೆ. ವೋಟ್ ಆಗಿ ಮಾಡ್ಕೊಬಿಡ್ತಾರೆ. ಅದರಿಂದ ಕನಕ ಎಲ್ಲರಿಗೂ ಸೇರಿದವನು. ಬಸವಣ್ಣ ಎಲ್ಲರಿಗೂ ಸೇರಿದವನು. ಬುದ್ಧ ಎಲ್ಲರಿಗೂ ಸೇರಿದವನು. ಅದರ ತತ್ವ ಇದೆಯಲ್ಲ ಆ ತತ್ವದಲ್ಲಿ ಯಾಕೆ ಬಹಳ ಮುಖ್ಯ ಅವರು ಅಂತ ಅಂದ್ರೆ ಸಮಾನತೆ ಇದೆ. ಮನುಷ್ಯರನ್ನ ಸಮಾನವಾಗಿ ನೋಡ್ತಾರೆ. ಹೆಣ್ಣು ಗಂಡನ್ನ ಸಮಾನವಾಗಿ ನೋಡ್ತಾರೆ. ಅಲ್ಲಿ ವರ್ಗ ಇಲ್ಲ. ಜಾತಿ ಇಲ್ಲ. ಅಧ್ಯಾತ್ಮ ಅನ್ನುವುದು ಎಲ್ಲರಿಗೂ ಇದೆ. ಹುಟ್ಟಿನಿಂದ ಇವನಿಗೆ ಮಾತ್ರ ಅಧ್ಯಾತ್ಮವನ್ನ ಓದುವ ಹಕ್ಕಿದೆ. ಶಿಕ್ಷಣದ ಹಕ್ಕಿದೆ. ಧರ್ಮವನ್ನ ತಿಳ್ಕೊಳೋ ಹಕ್ಕಿದೆ. ಇನ್ನುಳಿದವರಿಗೆ ಇಲ್ಲ. ಇವನು ನೀಚ ಕುಲದಲ್ಲಿ ಹುಟ್ಟಿದ–ಅದಲ್ಲ. ಅದನ್ನ ಎಲ್ಲರೂ ಕೂಡ ಬುದ್ಧ, ಬಸವ, ಕನಕದಾಸ, ಗಾಂಧಿ, ಅಂಬೇಡ್ಕರ್ ಸಾಮೂಹಿಕವಾಗಿ ನಿರಾಕರಿಸಿರೋದ್ರಿಂದ ನಾವದನ್ನ ಎಲ್ಲರೂ ಇಷ್ಟಪಡ್ತೀವಿ. ಎಲ್ಲಿ ನಮಗೆ ತತ್ವ ಬೇಕಾಗುತ್ತೆ ಅಂದ್ರೆ ಅವನು ಬಂದ ಒಂದು ಸಮುದಾಯ ಇದ್ಯಲ್ಲ ಆ ಸಮುದಾಯವನ್ನ ನಾವು ಲೆಕ್ಕಕ್ಕೇ ತಗೊಂಡಿಲ್ಲ. ಅಲ್ಲಿಯ ಸಾಂಸ್ಕೃತಿಕ ವಿವರವನ್ನ ನಾವು ಲೆಕ್ಕಕ್ಕೆ ತಗೊಂಡಿಲ್ಲ. ಅದನ್ನೆಲ್ಲವನ್ನ ನಾವು ಬಿಟ್ಟುಬಿಡ್ತೀವಲ್ಲ ಅವು ಬಹಳ ಮುಖ್ಯವಾದದ್ದು. ತಳ ಸಂಸ್ಕೃತಿಯಲ್ಲಿ ಬಂದಿರುವ ಎಲ್ಲವೂ ಇದ್ಯಲ್ಲ ಬಹಳ ಮುಖ್ಯವಾದುದು ಅಂತ ಮೇಲೆತ್ತಿದಾಗ ಏನಾಗುತ್ತೆ ಅಂದ್ರೆ ಈ ಸಂಸ್ಕೃತಿಯಲ್ಲಿ ಎಲ್ಲರಿಗೂ ಸ್ಥಾನ ಇದೆ. ಅದು Identity ಪ್ರಶ್ನೆ ಅಂತ ಗೌಡ್ರು ಹೇಳ್ತಾ ಇದ್ದಿದ್ದು ಅದನ್ನೇ.

Identityಯನ್ನ identityಯ ಸತ್ವಗಳನ್ನು ಉಳಿಸಿಕೊಳ್ಳಬೇಕು. ಈ ಸತ್ವಗಳನ್ನ ಹಿಡಿದು ಇವರು ಇಡೀ ಮಾನವ ಕುಲಕ್ಕೆ ಸಂಬಂಧಿಸಿದವರು ಅಂತ ನಾವು ಗುರ್ತಿಸಿಕೊಳ್ಬೇಕು. ಹಾಗಾಗಿ ರಾಷ್ಟ್ರೀಯ ಮತ್ತು ಸ್ಥಳೀಯ ಅನ್ನೋದಿದ್ಯಲ್ಲ ಸ್ಥಳೀಯಕ್ಕೆ identity ಇದೆ. ಬರೀ ರಾಷ್ಟ್ರೀಯ ಅನ್ನೋದಕ್ಕಿಲ್ಲ. ರಾಷ್ಟ್ರೀಯ ಅನ್ನೋದು ಕೂಡ ಸ್ಥಳೀಯವಾಗಿ ನಿಜ ಆಗಿದ್ರೆ ಮಾತ್ರ ಅದು ರಾಷ್ಟ್ರೀಯವಾಗಿ ನಿಜ ಆಗಿರುತ್ತೆ. ಸ್ಥಳೀಯವಾಗಿ ಅದಕ್ಕೆ ಬೇರಿಲ್ಲ ಅಂದ್ರೆ ರಾಷ್ಟ್ರೀಯವಾಗಿ ಬೇರುಗಳಿಲ್ಲ ಅದಕ್ಕೆ. ಆದ್ರಿಂದ ನಾವು ಇವತ್ತು ರಾಷ್ಟ್ರೀಯ ಅನ್ನೋದು, ಬಹಳ ಸರಿಯಾಗಿ ಹೇಳಿದ್ರು ಗೌಡ್ರು– ಅದು ಒಂದು ರಾಜಕೀಯ ಆಗಿ ಬಳಸ್ತೀವಿ. ರಾಷ್ಟ್ರೀಯ ಅಂದ ಕೂಡಲೆ ಜಾಗತಿಕ, ವಿಶ್ವ ಕವಿ ಅಂದ ಕೂಡಲೆ ನಮಗೆಲ್ಲರಿಗೂ ಬಹಳ ಸಂತೋಷ ಆಗ್ಬಿಡುತ್ತೆ. ಆದರೆ ಬೇಂದ್ರೆ ವಿಶ್ವಕವಿನೋ ಧಾರವಾಡದ ಕವಿನೋ, ಕುವೆಂಪು ಮಲೆನಾಡಿನ ಕವಿಯೋ ಅಥವಾ ಜಗತ್ತಿನ ಕವಿಯೋ ಇಂತ ಪ್ರಶ್ನೆಗಳನ್ನಿಟ್ಕೊಂಡಾಗ ಮೊದಲು ಮಲೆನಾಡು ಮುಖ್ಯ. ಮೊದಲು ಧಾರವಾಡ ಮುಖ್ಯ, ಮೊದಲು ಮೈಸೂರು ಮುಖ್ಯ, ನಂತರ ಅದು ಕರ್ನಾಟಕ, ನಂತರ ಭಾರತೀಯ, ನಂತರ ಅದು ಜಾಗತಿಕವಾದುದು.

**ಚರ್ಚೆ : ಡಾ. ಹಿ.ಶಿ. ರಾಮಚಂದ್ರೇಗೌಡ**

ನಾನೊಂದು ಕ್ಲಾರಿಫಿಕೇಷನ್ ಕೊಡ್ತೀನಿ. ನನ್ನ ಮಿತ್ರ ಬಸವರಾಜು ಅವರ ಅಭಿಪ್ರಾಯಕ್ಕೆ ವಂದನೆಗಳು. ನೀವು ಯಾವಾಗ್ಲೂ ಕೂಡ universal ಆಗಿ, ಅಮಾರ್ಫಸ್ ಆಗಿ ಮಾತನಾಡುವಾಗ ಇದು ಮೇಲ್ವರ್ಗ ಮೇಲ್ಜಾತಿಗೆ ಸುಲಭ. ಆದ್ರೆ ಅಸಂಘಟಿತ ಸಮುದಾಯ ಕಳೆದುಹೋಗುತ್ತಿರುವ ಸಮುದಾಯಕ್ಕೆ ನಾನು ಪ್ರಸ್ತುತವಾಗಿ ಯೋಚ್ನೆ ಮಾಡ್ತಾಯಿರುವಂತದ್ದು ಅದು. ಬಸವಣ್ಣ ಹೌದು universal. ಕನಕನೂ universal ನಾವು ಮಾತಾಡ್ಬಿಡಬಹುದು. ಅಮಾರ್ಫಸ್ ಅದು. ಯಾವತ್ತೂ ಯಾವತ್ತೂ ಸಾಧ್ಯ ಆಗ್ದೇ ಇರುವಂತಾದ್ದು. ನಾವು ಮಾತಾಡ್ಕೊಂಡೇನೇ ಹೋಗ್ತೀವಿ. ಅದು ಬರಿ ಚಿಂತನೆ ಮಾತ್ರ ಅಗಿರುತ್ತೆ. ರಿಯಾಲಿಟಿ ಪ್ರಶ್ನೆ ಬಂದಾಗ ಸಣ್ಣ ಸಣ್ಣ ಸಮುದಾಯಗಳು, ತುಳಿತಕ್ಕೆ ಒಳಗಾಗಿರುವಂತ ಸಮುದಾಯಗಳು ಇರ್ತಾವಲ್ಲ ಅವುಗಳಿಗೆ ಸಾಂಸ್ಕೃತಿಕ ನಾಯಕತ್ವ ಬಂದು ಅವರನ್ನ ಸುಸಂಘಟಿತವನ್ನಾಗಿ ಮಾಡದೇ ಇದ್ರೆ ಅವರೆಂದೂ ಕೂಡ ಮೇಲಕ್ಕೆ ಬರೋಕೆ ಸಾಧ್ಯ ಇಲ್ಲ. ಇದನ್ನ ನಾನು ಇವತ್ತಿನ ಸಂದರ್ಭದಲ್ಲಿ ಮಾತನಾಡಲ್ಲ. ಆದಿವಾಸಿ ಕಾಲದಿಂದಲೂ ನೀವು ತಗೊಂಡ್ರೆ ಪ್ರತಿ ಆದಿವಾಸಿ ಗುಂಪುಗಳೂ ಕೂಡ ತಮ್ಮ ಅಸ್ತಿತ್ವವನ್ನ ಸ್ಥಾಪಿಸಿಕೊಂಡಿರೋದು ತಮ್ಮ ಸಾಂಸ್ಕೃತಿಕ ನಾಯಕರಿಂದಲೇ. ವಾಸ್ತವವಾಗಿ ಆ ಸಮುದಾಯಗಳಲ್ಲಿ ಸಾಂಸ್ಕೃತಿಕ ನಾಯಕತ್ವ ಇಲ್ಲ ಅಂತ ಹೇಳಿದ್ರೆ ಅವರು ಬದುಕೋದೇ ಇಲ್ಲ. ಉದಾಹರಣೆಗೆ ಹೇಳೋದಾದ್ರೆ ಆತ್ಮಹತ್ಯೆನೂ ಮಾಡ್ಕೊಂಡಂತ ಸಂದರ್ಭಗಳಿವೆ. ಅಷ್ಟರಮಟ್ಟಿನ ಸಾಂಸ್ಕೃತಿಕ ಅವಲಂಬನೆ ಅವುಗಳಿಗೆ ಬಂದಿರುವಂತಾದ್ದು. ಎಷ್ಟೋ ಸಮುದಾಯಗಳಿಗೆ ಸಾಂಸ್ಕೃತಿಕ ನಾಯಕತ್ವ ಸಿಕ್ಕಿಲ್ಲ. ನನಗೆ ಗೊತ್ತಿರುವಂತಹ ಸಾಮಾಜಿಕ ಕಾಳಜಿ ಏನು ಅಂತ ಅಂದ್ರೆ ದೊಡ್ಡದಾಗಿ ಮಾತನಾಡುವಂತಾದ್ದಲ್ಲ. ಕಳೆದು ಹೋಗಿರುವಂತ ಸಮುದಾಯಗಳಿಗೆ ಅಗತ್ಯವಾದ ರಾಜಕಾರಣದ ಬಗ್ಗೆ–10,000, 20,000, 30,000, 50,000 ಮಾತ್ರ ಇರುವಂತ ಜನಗಳಿಗೆ ರಾಜಕೀಯ ನಾಯಕತ್ವ ಎಲ್ಲಿ ಸಿಗುತ್ತೆ? ಒಂದು ಜಿಲ್ಲಾ ಪಂಚಾಯ್ತಿ ಎಲೆಕ್ಷನ್‌ಗೆ ನಿಲ್ಲೋಕೂ ಅವಕಾಶ ಕೊಡಲ್ಲ ಅವರಿಗೆ.

**ಪ್ರಶ್ನೆ :**

ಒಂದೊಂದ್ಸಾರಿ ಎಥಿಕಲ್ ರಾಜಕೀಯ ಮಾತಾಡ್ತೀರಿ, ಇನ್ನೊಂದ್ಸಾರಿ ಲೋಕಲ್ ಐಡೆಂಟಿಟಿ ಮಾತಾಡ್ತೀರಿ ಹೆಂಗೆ ಸಾರ್ ಅದು.

**ಚರ್ಚೆ : ಡಾ॥ ಹಿ.ಶಿ.ರಾಮಚಂದ್ರೇಗೌಡ**

ನೀವು ಇನ್ನೊಂದು ಸ್ವಲ್ಪ ಯೋಚ್ನೆ ಮಾಡಿ ನಿಮಗೆ ಗೊತ್ತಾಗುತ್ತದೆ. ಲೋಕಲ್ ಎಥಿಕಲ್ ಅಲ್ವಾ? ನನಗಿವತ್ತು ಅಮಾರ್ಫಸಾಗಿ ಮಾತಾಡೋಕ್ಕಿಂತ ನನಗೆ ಕಳೆದು ಹೋಗ್ತಿರುವಂತ ಜನಗಳನ್ನ ಸಾಂಸ್ಕೃತಿಕವಾಗಿ ಆ ವರ್ಗಗಳನ್ನ ಇವತ್ತಿನ ಜಾತಿ ಭರಾಟೆ, ಧರ್ಮ ಭರಾಟೆಯಲ್ಲಿ ಅವರಿಗೆ ಸಾಂಸ್ಕೃತಿಕದಾಯಿತ್ವ ಬೇಕು, ಆ ರೀತಿಯಲ್ಲಿ ಅವರನ್ನ ಬಳಸ್ಕೊಂಡ್ರೆ ಅಪರಾಧ ಅಲ್ಲ ಅನ್ನೋದು ನನ್ನ ಅಭಿಪ್ರಾಯ. ಇನ್ನು ಜನರಲ್ ಆಗಿ ನಾವು ಎಲ್ಲರನ್ನೂ ವಿಶ್ವ ಮಾನವರನ್ನಾಗೇನೇ ನೋಡ್ಲಿಕ್ಕೆ ಅವಕಾಶ ಇದೆ.

**ಚರ್ಚೆ :**

ಸಾಂಸ್ಕೃತಿಕ ನಾಯಕತ್ವದ ಬಗ್ಗೆ ಪ್ರೊ॥ ಗೌಡ್ರು ಹೇಳಿದ್ರು, ಅದಕ್ಕೆ ಉದಾಹರಣೆಗಳ ಮುಖಾಂತರ ನಮ್ಮ ಸ್ನೇಹಿತರಿಗೆ ಹೇಳೋದಕ್ಕೆ ನಾನು ಇಷ್ಟಪಡ್ತೀನಿ. ನಾರಾಯಣ ಗುರು ಅಂತ ಕೇಳಿರ್ತೀರಿ. ದಕ್ಷಿಣ ಭಾರತದಲ್ಲಿ, ಕೇರಳದಲ್ಲಿ ನಾರಾಯಣ ಗುರು ಈಳವರನ್ನ ಹಿಡಿದು ಸಂಘ ಕಟ್ಕೊಂಡು, ನಮ್ಮ ಕರ್ನಾಟಕದಲ್ಲಿ ಆರ್ಯ ಈಡಿಗರು ಅಂತೀವಲ್ಲ. ಅವರನ್ನು ಸಾಂಸ್ಕೃತಿಕವಾಗಿ, ಅದೇ ತರ ರಾಜಕೀಯವಾಗಿ ಇವೆರಡೂ ಉದಾಹರಣೆಗೆ ನಾನು ಆಮೇಲೆ ಡಿಎಂಕೆ ಪಾರ್ಟಿ, ಡಿ.ಕೆ.ಪಾರ್ಟಿ, ತಮಿಳುನಾಡಲ್ಲಿ, ದ್ರಾವಿಡ ಕಜಗಂ ರಾಮಸ್ವಾಮಿ ನಾಯ್ಕರ್ ಸಾಂಸ್ಕೃತಿಕ ಐಡೆಂಟಿಟಿ ಕ್ರಿಯೇಟ್ ಮಾಡಿ ಆನಂತರ ಅವರು ರಾಜಕೀಯಕ್ಕೆ ಬಂದ್ರು. ಎರಡು ಉದಾಹರಣೆ ಕಣ್ಮುಂದೆ ಇರೋದು 19ನೇ ಶತಮಾನ, 20ನೇ ಶತಮಾನಕ್ಕೆ.

ಈಗ ಗೌಡ್ರು ಹೇಳ್ತಾ ಇರೋದು ಲೋಕಲ್ ಸಾಂಸ್ಕೃತಿಕ ಐಡೆಂಟಿಟಿ ಬೇಕು. ಈಗ ರಾಜಕೀಯ ಸಾಧನೆಗಿರ್ಬಹುದು, ಇನ್ನಾವುದೇ ಸಾಧನೆಯಾಗಿರ್ಬಹುದು. ಆರ್ಥಿಕ ಸಾಧನೆ ಅಗತ್ಯ ಇರುತ್ತೆ. ವಿಶ್ವ ಮಾನವ ಆಗುವ ಮೊದಲು ನೀನು ಮಾನವನಾಗಿರು. ಮಾನವ ಸಂಸ್ಕೃತಿ ಮೈಗೂಡಿಸಿಕೊ ಅಂತ ಹೇಳಿರುವುದರಲ್ಲಿ ಸತ್ಯಾಂಶ ಇದೆ ಅಂತ ನನ್ನ ಅನಿಸಿಕೆ. ಆನಂತರ

ಈ ಸಂದರ್ಭದಲ್ಲಿ ನಾವೆಲ್ಲ ಮಾತಾಡ್ಬೊ ಏನಂದ್ರೆ ಮಧ್ಯಕಾಲೀನ ಭಾರತದಲ್ಲಿ, ಈಗ ವಿಷಯ ಚರ್ಚೆ ಮಾಡ್ತಿರೋದು ಮಧ್ಯಕಾಲೀನ ಭಾರತದಲ್ಲಿ ನಡೆದಂತಹ ಒಂದು ಮಹತ್ತರವಾದ ಚಳುವಳಿ. ಭಕ್ತಿ ಚಳುವಳಿ ಅಂತ. ಅವಾಗ ಯಾರು ರೂಲಿಂಗ್ ಕ್ಲಾಸ್ ಮಧ್ಯಕಾಲೀನ ಭಾರತದಲ್ಲಿ? ಟರ್ಕರು, ಮೊಘಲರು, ಮುಸ್ಲಿಮರ ಆಳ್ವಿಕೆ, ಸುಮಾರು 600 ವರ್ಷ. ಸುಮಾರು 600 ವರ್ಷ ಮುಸಲ್ಮಾನರು ನಮ್ಮ ಈ ದೇಶವನ್ನ ಹಿಂದೂಸ್ಥಾನವನ್ನ ಆಳಿದರು. ಭರತ ಖಂಡವನ್ನ ಆಗ ನಮ್ಮ ದೇಶದಲ್ಲಿದ್ದಂತಹ ಸಾಂಸ್ಕೃತಿಕವಾಗಿ ಮೇಲ್ಮಟ್ಟದಲ್ಲಿದ್ದ ನಮ್ಮ ದೇಶೀಯ ಮೇಲ್ಜಾತಿ ಮೇಲ್ವರ್ಗದವರು ಒಂದು ದೊಡ್ಡ ಸಮಸ್ಯೆ ಉಂಟಾಯ್ತು ಅವರಲ್ಲಿ. ಈಗ ನಾವೆಲ್ಲ ಕೂತ್ಕೊಂಡು ಚರ್ಚೆ ಮಾಡ್ತಿರೋಹಂಗೆ. ನಮ್ಮ ಸಾಂಸ್ಕೃತಿಕ ನಾಯಕತ್ವ ಏನಾಯ್ತು? ಎಲ್ಲ ಮುಸ್ಲಿಮರಾಗ್ಬಿಟ್ರೆ, ಮುಸ್ಲಿಂ ರಾಜಕೀಯ ಅಧಿಕಾರ ಇದೆ. ಮಸೀದಿಗಳು ಜಾಸ್ತಿ ಆಗ್ತಾ ಇದಾವೆ. ಅಲ್ಲ ಈಗ ಈ ಸಮಸ್ಯೆ ಹೇಳ್ತಾಯಿದೀನಿ. To save Hinduism ತಮ್ಮ ಅನಾದಿ ಕಾಲದಲ್ಲಿದ್ದಂತ ಒಂದು ಸಾಂಸ್ಕೃತಿಕ ನಾಯಕತ್ವವನ್ನು ಉಳಿಸ್ಕೋಬೇಕು ತಮ್ಮ ಅಧಿಕಾರ ಉಳಿಸ್ಕೋಬೇಕು ಅದಕ್ಕೋಸ್ಕರ ಅವರು ಭಕ್ತಿಪಂಥ all India level. ರಾಷ್ಟ್ರೀಯನೇ ಅದು. ಬಂಗಾಳ, ಗುಜರಾತ್, ದೆಹಲಿ, ಹರಿಯಾಣ, ದಕ್ಷಿಣ ಕನ್ನಡ ಎಲ್ಲವೂ ಕೂಡ ಅಖಿಲ ಭಾರತ ಮಟ್ಟದಲ್ಲಿ ಈ ಚಳುವಳಿ ನಡೀತು. ನಮ್ಮ ಕರ್ನಾಟಕದಲ್ಲಿ ದಾಸ ಚಳುವಳಿ ಅಂತ ಹೇಳ್ತೀವಿ. ಈ ಚಳುವಳಿ ಅಂದ್ರೆ ಈ ಆಳ್ವಿಕೆ ಮುಸಲ್ಮಾನರು ರಾಜಕೀಯವಾಗಿ ಪ್ರಬಲವಾಗಿದ್ದಾರೆ. ಹಿಂದೂ ಸಮಾಜದ ಅನೇಕ ಮಂದಿ ಹೋಗ್ತಾ ಇದಾರೆ ಆಕಡೆಗೆ. ಎಲ್ಲ ಆಕಡೆ ಹೋದ್ರೆ ಇಲ್ಲಿ ಅಸ್ತಿತ್ವ ಹಾಳಾಗೋಗುತ್ತೆ. ಅದಕ್ಕೋಸ್ಕರ ಭಕ್ತಿ ಒಂದು ಸಾಧನವಾಗಿ ಎಲ್ರೂ ಸೇರಿಸ್ಕೊಬೇಕು. ಇಲ್ಲಿ ಕೆಳವರ್ಗದವರನ್ನ ಹಿಡಿದಿಡ್ಬೇಕು. ಆದರೆ ಮೂಲ ಉದ್ದೇಶ ಇಷ್ಟೆ ಇಲ್ಲಿ. ಕೆಳವರ್ಗದವರನ್ನ ಉದ್ಧಾರ ಮಾಡೋದಿರಲಿ, ಕೆಳಮಟ್ಟದ ಜನ ಶೂದ್ರಾದಿಗಳಿರ್ತಾರಲ್ಲ, ಇವರು ವಲಸೆ ಹೋಗಿ ಆ ಧರ್ಮಕ್ಕೆ ಸೇರಿದ್ರೆ ಇಲ್ಲಿ ನಮ್ಮ ಅಸ್ತಿತ್ವ ಇರೋದಿಲ್ಲ. ಇವರನ್ನ ಉಳಿಸ್ಕೋಬೇಕಾದ್ರೆ ಏನು ಮಾಡ್ಬೇಕು? ಔದಾರ್ಯೀಕರಣ. ಉದಾರ ಅಂದ್ರೇನು? ದೇವ್ರು, ಪರಮಾತ್ಮ, ನೀವು ಭಕ್ತಿಯಿಂದ ಪೂಜೆ ಮಾಡಿದ್ರೆ ನಿಮ್ಗೂ ಒಲಿತಾನೆ. ಕೃಷ್ಣ ಎಲ್ಲರಿಗೂ ಒಲೀತಾನೆ. ವಿಷ್ಣು ಪವಾಡ ಎಲ್ಲಾ ಕಡೆ ಪ್ರಚಾರವಾಯ್ತು. ಯಾಕೆ ಹೇಳ್ತಿದೀನಿ ಅಂತ ಅಂದ್ರೆ ಈ ಚಿಂತಕರಿದಾರಲ್ಲ, ಮಧ್ಯಕಾಲೀನ ಭಾರತದ ಚಿಂತಕರು ಹಿಂದೂ ಥಿಂಕರ್ಸ್ ಅವರು. ಕೆಳವರ್ಗ ಉದ್ಧಾರ ಮಾಡೋದಕ್ಕಿಂತ ಮುಖ್ಯವಾಗಿ ತಮ್ಮ ವರ್ಗದ ಹಿತವನ್ನ ಕಾಪಾಡ್ಬೇಕು. ಅದಕ್ಕೋಸ್ಕರ ಈ ಶೂದ್ರಾದಿಗಳನ್ನೆಲ್ಲ ಅಡ್ಮಿಷನ್ ಮಾಡೋದಕ್ಕೆ ಶುರು ಮಾಡಿದ್ರು. ಯಾವುದಕ್ಕೆ? ಈ ಚಳುವಳಿಗೆ. ಕನಕದಾಸರು ಸೇರಿಕೊಂಡ್ರು ನಿಜ. ನೀವೇಳಿದಂಗೆ ಅದೇನೇ ಇರ್ಲಿ ಕಾರಣಗಳು. ಇಷ್ಟೇಳ್ತೀನಿ ಈಗ ಇವರು ವಲಸೆ ಹೋಗೋದ್ನ ತಪ್ಸೋಕೆ medieval thinkers to save Hinduism ಒಂದು ದೊಡ್ಡ ಸಿದ್ಧಾಂತವನ್ನಿಟ್ಕೊಂಡು ಚಳುವಳಿ ಶುರು ಮಾಡಿದ್ರು. ಇದ್ರಿಂದ ಎಷ್ಟರಮಟ್ಟಿಗೆ ಪ್ರಯೋಜನ ಆಯ್ತು? ಈವಾಗ ಹೋಗೋರ್ನ ಹಿಡಿದು ನಿಲ್ಸೋಕಾಗ್ಲಿಲ್ಲ. ಹೊರಟ್ಹೋದ್ರು. ಅನೇಕ ಮಂದಿ ಈ ಭಕ್ತಿ ಪಂಥದ ಮುಖಾಂತರ ತಿರುಪತಿ ತಿಮ್ಮಪ್ಪನಿಗೆ, ಮೇಲುಕೋಟೆ ಚೆಲುವನಾರಾಯಣ ಸ್ವಾಮಿಗೆ ಅದೂ ಇದೂ ಅಂತ ದೇವರುಗಳಿಗೆ ಹಿಂಬಾಲಕರಾದ್ರು. ಅಷ್ಟರಮಟ್ಟಿಗೆ ತಡೆಗಟ್ಟಿದರು. ಇಸ್ಲಾಂಗೆ ಹೋಗದಿರುವಂತೆ ಜನ ಸಮೂಹಗಳನ್ನು ಆ ಮಟ್ಟಿಗೆ ತಡೆದರು. ಇದು ಸುಧಾರಣಾವಾದ ಅಂತ. ಇದು ಕ್ರಾಂತಿವಾದ ಅಲ್ಲ. ಯಾಕೆ ಅಂದ್ರೆ ನಮ್ಮ ಭಾರತ ದೇಶದಲ್ಲಿ ಕ್ರಾಂತಿವಾದ ಪದಗಳು ಬಳಕೆಯಾಗೋಕೆ ಸಾಧ್ಯನೇ ಇಲ್ಲ. ಅದನ್ನ ಕ್ರಾಂತಿ ಅಂದ್ರೆ there should be a radical change. ಈಗ ಪ್ರಜಾಪ್ರಭುತ್ವ, ಬಹಳ ಕಾಲದಿಂದ ರಾಜ ಪ್ರಭುತ್ವ ಇದೆ. ಆ ಸ್ಥಳದಲ್ಲಿ ಪ್ರಜಾಪ್ರಭುತ್ವ ಬಂತು. ಈಗ ಬ್ರಾಹ್ಮಣರೆಲ್ಲ ಪುರೋಹಿತರಿರ್ತಾರೆ. ಇದ್ದಕ್ಕಿದ್ದಂಗೆ ದಲಿತರು ಪುರೋಹಿತರಾಗಿಬಿಡ್ತಾರೆ. ಅದು ರ್‍ಯಾಡಿಕಲ್ ಚೇಂಜ್. ಆಮೇಲೆ ಇದು ಬಸವಣ್ಣನವರಿಗೆ ಮಾತ್ರ ಹೇಳ್ಬಹುದು. ಆ ಒಂದು ವಿಷಯದಲ್ಲಿ–ಅಂತರ್ಜಾತೀಯ ವಿವಾಹ. ಕನಕದಾಸರಿಗೆ ಅದನ್ನ ಹೇಳೋಕೆ ಸಾಧ್ಯವಾಗೋದಿಲ್ಲ. ಯಾಕಂದ್ರೆ ಅವರು ಸೌಮ್ಯ, ವಿನಯದಿಂದ ಅವರು ಬದಲಾವಣೆಯನ್ನ ಸುಧಾರಣಾವಾದದ ಮೂಲಕ ತರೋದಕ್ಕೆ ಬಯಸಿದರೇ ಹೊರತು ಕ್ರಾಂತಿಕಾರಿಯಾಗೋಕೆ ಸಾಧ್ಯ ಇಲ್ಲ. ನೀವೆಲ್ಲ ಇದನ್ನ ಚರ್ಚೆ ಮಾಡಿದೀರ. ಆದ್ರೆ ಕ್ರಾಂತಿ ಅನ್ನೋ ಪದ ಬಳಕೆ ತಪ್ಪು. ಸುಧಾರಣಾವಾದಿ. ಹೀಗೆ ವಚನಕಾರರು ಮತ್ತು ಕೀರ್ತನಾಕಾರರ ಚರ್ಚೆ ಮಾಡ್ಬೇಕಾದಾಗ reformers ಸುಧಾರಣಾವಾದಿಗಳು ಅಂತ ಚರ್ಚೆ ಮಾಡ್ಬೇಕು.

**ಚರ್ಚೆ :**

ಇದು ಬಹಳ ವಾಸ್ತವವಾಯಿತು. ಸರ್ಕಾರದ ಬಹಳ ಪ್ರಭಾವಯುತ ಅಧಿಕಾರಿ ಯಾಗಿರುವ ವ್ಯಕ್ತಿ ನಿವೃತ್ತಿ ಆದ ತಕ್ಷಣವೇ ತನ್ನ ಜಾತಿಯ ಮೂಲದ ಒಬ್ಬ ವಚನಕಾರರನ್ನ ಹಿಡೀತಾ ಇದಾನೆ. ಅದು ಮಡಿವಾಳ ಮಾಚಯ್ಯ ಆಗ್ಬಹುದು, ಹರಳಯ್ಯ ಆಗ್ಬಹುದು, ಯಾರಾದ್ರೂ ಆಗ್ಬಹುದು. ಸಂಸದರ ನಿಧಿ ಮೂಲಕ ಗ್ರಾನೈಟ್‌ಗಳನ್ನು ಹಾಕಿ ಜಗಮಗ ಅನ್ನುವಂತ ಭವನಗಳು ರೆಡಿ ಆಗ್ತಾ ಇದಾವೆ. ಅದಕ್ಕೊಂದು ಸ್ಥಳೀಯ ಐತಿಹ್ಯನೂ ಕ್ರಿಯೇಟ್ ಆಗ್ತಾ ಇದೆ. ಇದು ಇವತ್ತು ಎಲ್ಲ ವಚನಕಾರರಿಗೆ ಆಗ್ತಾ ಇರುವಂಥ ಗತಿ. ಈಗ ಕನಕನ ಬಗ್ಗೆ ನಾವು ಬೆಳಗ್ಗೆಯಿಂದ ಮಾತಾಡ್ತಾ ಇದೇವೆ. ಸಾಂಸ್ಕೃತಿಕ ನಾಯಕ ಆಗ್ಬೇಕು. ಆದರೆ ಇಲ್ಲಿ ಕನಕ ಪ್ರತಿನಿಧಿಸಿದ ಸಂಸ್ಕೃತಿ ಯಾವುದು ಅನ್ನೋದರ ಬಗ್ಗೆ ಚರ್ಚೆ ಆಗ್ಲೇ ಇಲ್ಲ. ಒಂದು ಸಣ್ಣ ಉದಾಹರಣೆ ಬಂಜಗೆರೆ ಜಯಪ್ರಕಾಶ್ ಕೊಟ್ರು. ಪುರಂದರ ಹೇಳ್ತಾರೆ–'ನಿನ್ನಂಥ ದೊರೆ ಎನಗುಂಟು. ನಿನಗಿಲ್ಲ ನಿನಗಿಲ್ಲ, ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ ನಿನಗಿಲ್ಲ. ನಿನ್ನ ಹೆಂಡತಿ ಲಕುಮಿ. ನನ್ನ ತಾಯಿ. ನಿನ್ನ ತಾಯ ತೋರೊ' ಅಂತ. ಕೊನೆಯಲ್ಲಿ ಏನ್ಮಾಡ್ತಾರೆ, ನೀನೆ ಪರದೇಶಿ ನಾನೆ ಸ್ವದೇಶಿ ಅಂತಾರೆ. ಯಾವ ಪರದೇಶಿಯನ್ನ ಕುರಿತು ದಾಸ ಸಾಹಿತ್ಯ ಮಾತಾಡ್ತಾ ಇತ್ತು? ಇವತ್ತು ರಾಮಚಂದ್ರೇಗೌಡ್ರು ಹೇಳ್ತಾ ಇರುವ ಗ್ಲೋಬಲ್ ಮತ್ತು ಅದಕ್ಕೂ ಇದಕ್ಕೂ ತಾಳೆ ಇದೆಯಾ? ಈ ರೀತಿಯಾಗಿ ಮೊದಲು ಕನಕ ಯಾವ ಸಂಸ್ಕೃತಿಯನ್ನ ಪ್ರತಿಪಾದಿಸ್ತಾ ಇದ್ರು ಒಂದು, ಎರಡು ದಾಸ ಸಾಹಿತ್ಯ ನನಗೆ ಬಹಳ ಪ್ರಾಮುಖ್ಯ ಆಗೋದ್ಯಾಕೆ ಅಂದ್ರೆ ಜನ ಸಾಮಾನ್ಯರಿಗೆ ಅರ್ಥವಾಗುವಂತ ಕನ್ನಡ ಭಾಷೆಯಲ್ಲೆ ಅದು ಮೂಡಿ ಬಂದಿದ್ದು. ಈ ವಿಶಾಲಾರ್ಥದಲ್ಲಿ ಗ್ರಹಿಸ್ಕೊತಾ

ಹೋಗ್ಬೇಕಾ? ಅಥವಾ ಕೇವಲ ಆಚರಣೆಗಳ ಮಟ್ಟದಲ್ಲಿ ಇವತ್ತುಳಿದಿರುವಂತಹ ಸಾಂಸ್ಕೃತಿಕ ಚಹರೆಗಳಲ್ಲಿ ಚರ್ಚೆ ಮಾಡ್ತಾ ಹೋಗ್ಬೇಕಾ. ಆಮೇಲೆ ಸಾಂಸ್ಕೃತಿಕ ನಾಯಕತ್ವವನ್ನ ರಾಜಕೀಯ ನಾಯಕತ್ವವಾಗಿ ಹೇಗೆ ಗ್ರಹಿಸಬೇಕು. ಸರಿ. ಅಣ್ಣಾ ಹಜಾರೇನ ನೋಡಿ ಒಬ್ಬ ನಾಯಕ ಸರಿ ಇರ್‍ತಾನೆ. ಸುತ್ತಮುತ್ತಲು ಸರಿ ಇಲ್ದೀರೋರು ಇದ್ದಾಗ ಟುಸ್ ಆಗ್ಬಿಡುತ್ತೆ. ಇವತ್ತಿನ ಸಂಸ್ಕೃತಿ ಯಾವುದನ್ನ ಅಪೇಕ್ಷೆ ಮಾಡ್ತಾ ಇದೆ, ಜನ ಸಾಮಾನ್ಯರು–ಒಬ್ಬನ್ನೇ ಅಪೇಕ್ಷೆ ಮಾಡ್ತಾ ಇಲ್ಲ. ಅವನ ಸುತ್ತಮುತ್ತಲ ಜನರನ್ನೂ ಗಮನಿಸುತ್ತೆ. ದಯವಿಟ್ಟು ಇದನ್ನ ಗಮನಿಸಿ. ಒಮ್ಮೆ ನೀವು ಭ್ರಷ್ಟಾಚಾರವನ್ನು ವಿರೋಧಿಸ್ತೀನಿ ಅಂದ್ರಿ, ಪಾರ್ಟಿ ಕಟ್ತೀನಿ ಅಂದ ತಕ್ಷಣನೇ ತಿರಸ್ಕಾರಕ್ಕೆ ಒಳಗಾಗ್ತಾ ಇದೀರ. ಈ ಎಚ್ಚರ ನಿಮಗಿಲ್ದೇ ಹೋದ್ರೆ ನಾವು ಕನಕನ್ನ ಹೇಗೆ ಗ್ಲೋಬಲ್ ಆಗಿ ಲೋಕಲ್ ಆಗಿ ಅರ್ಥೈಸೋಕೆ ಸಾಧ್ಯ? ಈ ಒಂದು ಸಂದರ್ಭದಲ್ಲಿ ಅಥವಾ ದಾಸ ಸಾಹಿತ್ಯದ ಆ ಕೊಡುಗೆಯ ಮೂಲಕ. ಇದು ಹೆಚ್ಚು ಚರ್ಚೆ ಆದಾಗ ಮೊದಲು ನಾವು ಕನಕನನ್ನ ಕ್ಲಾರಿಫೈ ಮಾಡ್ಕೋಬೇಕು. ಯಾವ ಸಾಂಸ್ಕೃತಿಕ ನಾಯಕ? ಅದು ಈವತ್ತಿನ ಸಂಸ್ಕೃತಿಗೆ ಹೇಗೆ ನಾವು ಅರ್ಥೈಸಬಹುದು. ಅದನ್ನ ನಾವು ಮುಂದುವರೀತಾ Empowerment of caste ಬಗ್ಗೆ ಮಾತಾಡ್ತೀವಿ. ಅಥವಾ ನೀವು ರಾಜಕೀಯ ಜಾತಿ ಬಗ್ಗೆ ಮಾತಾಡ್ತೀವಿ. ರಾಜಕೀಯದ ಸಂಸ್ಕೃತಿ ಬಗ್ಗೆ ಮಾತಾಡ್ತೀವಿ. ಈವತ್ತು ಏನು ನೋಡ್ತಾ ಇದೀವಿ ನಾವು Marginalized caste ಗಳನ್ನು ಬಿಟ್ಬಿಡಿ. ಸ್ವಲ್ಪ ಫ್ಯೂಡಲ್ ಜಾತಿ ಬಿಟ್ಟು next caste ಏನಾಗ್ತಾ ಇದೆ? ತಾನು ಪವರ್‌ಗೆ ಬಂದಾಗ ತನ್ನ ಪವರ್‌ನ next casteಗೆ ಸಿಗ್ದೇ ಇರೋ ಹಾಗೆ ನೋಡ್ಕೊತಾ ಇದೆ. ಒಮ್ಮೆ ಪವರ್ ಬಂದ್ರೆ ಕೆಳಗಡೆ ಹರಿತಾನೇ ಇಲ್ಲ ಅದು. ಸರಿ ಫ್ಯೂಡಲ್ ಕ್ಯಾಸ್ಟ್‌ನಿಂದ ಕಿತ್ವಿ. ಕಾರ್ಪೊರೇಟ್ ಎಲ್ಲ ಕಿತ್ವಿ. ಯಾವುದರೊಳಗೆ ಕೊಟ್ವಿ? ಏನಾಯ್ತು. ಅದರ next caste ನಾವು ನೋಡ್ಲೇ ಇಲ್ಲ. ಅದಕ್ಕೆ ಈ ಒಂದು ದುರಂತ ಒಮ್ಮೆ ಜಾತಿಯನ್ನ ಎಂಪವರ್ ಮಾಡಿದ್ರೆ ಅದು ಸಂಸ್ಕೃತಿ ಮೂಲಕ ಮಾಡಿ, ರಾಜಕೀಯ ಮೂಲಕ, ಅದು ಇನ್ನೂ marginalize ಅಂಚಿಗೆ ತಳ್ಳಲ್ಪಟ್ಟವರಿಗೆ ಯಾಕೆ ಹರೀತಾ ಇಲ್ಲ. ಆ ವಿಶಾಲತೆ ನಾವು ಹೆಂಗೆ ಪಡ್ಕೋಬಹುದು ಕನಕ–ಪುರಂದರ ಮೂಲಕ ಅನ್ನೋ ಚರ್ಚೆ ಹೆಚ್ಚಾಗ್ಬೇಕು. ಮತ್ತೆ ಸಂಸ್ಕೃತಿ ಸರಿ. ಸಂಸ್ಕೃತಿ ಇದನ್ನ ಇಲ್ಲಿ ನಾನು ಬಹಳ ಸೂಕ್ಷ್ಮವಾಗಿ ಗಮನಿಸಿದ್ದೀನಿ. ವಿಶ್ವ ಮಾನವ ಅಥವಾ ಒಕ್ಕಲಿಗ ವೇದಿಕೆಗೆ ಕುವೆಂಪು ಐಕಾನ್ ಅಥವಾ ಬ್ಯಾನರ್ ಮೇಲೆ ಬರುವ ಒಂದು ಚಿತ್ರ ಅಷ್ಟೆ. ಏನೂ ಇಲ್ಲ ಮುಂದೆ ಅದು. ದಯವಿಟ್ಟು ಇದು ಗಮನಿಸಿ. ಅದೇ ರೀತಿ ಆಗಿರೋದು ನಮ್ಮ ಕನಕನ ಕಥೆ. ಇದು ನಮಗಿರಬೇಕಾದ ಎಚ್ಚರ. ಇದರ ಬಗ್ಗೆ ಹೆಚ್ಚು ಚರ್ಚೆಯಾಗ್ಬೇಕು ಅನ್ನೋದು ನನ್ನ ಕಳಕಳಿ.

**ಚರ್ಚೆ : ಹೊರೆಯಾಲ ದೊರೆಸ್ವಾಮಿ**

ಹಿ.ಶಿ.ರಾಮಚಂದ್ರೇಗೌಡ್ರು ನೇರ ನಿಖರವಾಗಿ, ಕೆಲವರಿಗೆ ಒರಟಾಗಿ ಆದ್ರೆ ಖಚಿತವಾಗಿ ಹೇಳುವಂಥದ್ದನ್ನ ಅವರ ಅಭಿಪ್ರಾಯವನ್ನ ಹೇಳಿದ್ದಾರೆ. ನಮ್ಗೆ ಆ ತರದ ಹೇಳುವಂತ ಜನಗಳು ನಮ್ಮ ಸುತ್ತ ತುಂಬ ಕಡಿಮೆ. ವೇದಿಕೆಯಲ್ಲಿ ನಿಂತ್ಕೊಂಡಾಗ ಬೊಗಳೆ ಹೊಡೆಯೋನು, ಸಭಿಕರನ್ನ ನೋಡಿ ಮೆಚ್ಚಿಸಿಕೊಳ್ಳುವಂತ ಜನ ನಮ್ಮಲ್ಲಿ ಸಾಕಷ್ಟು ಜನ ಇದಾರೆ. ನೇರವಾಗಿ ಮಾತಾಡಲ್ಲ, ಯಾಕಂದ್ರೆ ಪ್ರಾಮಾಣಿಕತೆ ನಮ್ಮಲ್ಲಿ ತುಂಬಾ ಜನಕ್ಕೆ ಕಡಿಮೆ. ತುಂಬಾ ಜನ ಅಪ್ರಾಮಾಣಿಕರು ನಮ್ಮ ದೇಶದಲ್ಲಿ ಇದಾರೆ. ಆದ್ರಿಂದ ವೇದಿಕೆಯ ಮೇಲೆ ಹತ್ತಿದಾಗ ಅವ್ರೂ ಅದೇ ರೀತಿ ಮಾತಾಡ್ತಾರೆ. ಆದ್ರೆ ಅಪರೂಪಕ್ಕೆ ಮಾತನಾಡಿದಂತ ನನ್ನ ಗೆಳೆಯರಾದಂಥ ರಾಮಚಂದ್ರೇಗೌಡ್ರು, ಒಪ್ಪಲೀ ಬಿಡಲೀ, ತಪ್ಪೋ–ಸರಿಯೋ ಆದ್ರೆ ನೇರವಾಗಿ, ನಿಖರವಾಗಿ ಹೇಳ್ತಾರೆ. ಅದಕ್ಕೆ ಮೊದಲ್ನೇದಾಗಿ ಅವರನ್ನ ಅಭಿನಂದಿಸ್ತೇನೆ.

ಈ ಮಠಗಳು, ಸ್ವಾಮಿಗಳು ಇದಾರಲ್ಲ ಇವರ ಬಗ್ಗೆ ನಾವು ಅಷ್ಟೆಲ್ಲ ತಲೆ ಕೆಡಿಸ್ಕೋಬೇಕಾಗಿಲ್ಲ. ಮಠಗಳು ಸ್ವಾಮಿಗಳು ಅಂದ್ರೇನು ಮೈಗಳ್ಳರು, ಕೆಲಸಗಳ್ಳರು. ಅವರೇನೂ ಕೆಲಸ ಮಾಡಲ್ಲ ಕಣ್ರೀ, ಮೂರ್‌ಕಾಸೂ ಕೆಲಸ ಮಾಡಲ್ಲ. ಇನ್ನೊಬ್ಬರದನ್ನ ಕದ್ಕೊಂಡು ಬದುಕ್ತಾರೆ. ಅವರೇನೂ ದೊಡ್ಡ ಮನುಷ್ಯರಲ್ಲ. ದೊಡ್ಡ ಮನುಷ್ಯರ್‍ಯಾರು ಅಂತ ಅಂದ್ರೆ, ಕನಕದಾಸ, ಅಂಬೇಡ್ಕರ್, ಕುವೆಂಪು, ಮಠಗಳಲ್ಲಿರೋರಲ್ಲ. ಕಾಲಿಗೆ ಬೀಳ್ಬಾರ್‍ದು. ಅವರ ಕಾಲು ನಮ್ ಕಾಲಿದ್ದಂಗೆ. ಅವರಿಗ್ಯಾಕೆ ಬೀಳ್ಬೇಕು. ಮಠಗಳ ಬಗ್ಗೆ ನಾವ್ ಹೆದರಿಕೊಂಡು ನಡೆಯುವಂತದ್ದು ಏನೂ ಇಲ್ಲ. ಎಲ್ಲಿವರೆಗೆ ನಾವು ಬಗ್ಗಿ ಬಗ್ಗಿ ಹೋಗ್ತೀವೋ ಅಲ್ಲಿವರೆಗೆ ನಮಗೆ ಯಾವ ಮಠವಾದರೂ ಅಷ್ಟೆ. ಬ್ರಾಹ್ಮಣ ಮಠವಾಗಲಿ, ಮಾಧ್ವರ ಮಠವಾಗ್ಲೀ, ಕುರುಬರ ಮಠವಾಗಲೀ, ನಾನು ಕಾಗಿನೆಲೇಲಿ ಮೂರು. ತಿಂಗಳಿದ್ದೋನು. 3 ತಿಂಗಳು ಮಠದಲ್ಲೇ ವಾಸ್ತವ್ಯ ಮಾಡ್ಕೊಂಡಿದ್ದೆ. ಅದರ ಮೇಲೆ ಒಂದು ಪುಸ್ತಕ ಬರ್ದಿದ್ದೀನಿ. ಕಾಗಿನೆಲೇಲಿ ಇದ್ದು 3 ತಿಂಗಳು ಇಡೀ ಊರು ಹ್ಯಾಗಿದೆ ಅನ್ನೋದನ್ನ ಒಂದು ಪುಸ್ತಕ ಬರೆದೆ. ಸ್ವಾಮೀಜಿಗಳು ನನಗೆ ಬಹಳ ಹತ್ತಿರದಲ್ಲಿದ್ರು. ದೊಡ್ಡ ಸ್ವಾಮೀಜಿಗಳು. ಬಹಳ ಪ್ರೀತಿಯಿಂದ ಮಾತಾಡ್ತಿದ್ದೊ, ನನಗೂ ಅವರಿಗೂ ಬಹಳ ಒಳ್ಳೆಯ ಸಂಬಂಧಗಳಿತ್ತು. ಆದ್ರೆ ಯಾವತ್ತೂ ನಾನು ನಮಸ್ಕಾರ ಮಾಡ್ಲಿಲ್ಲ. ಆದ್ರೆ ಯಾವತ್ತೂ ನನ್ನ ಅವರು ಪ್ರೀತಿಯಿಂದ ಅಲ್ಲದೆ ದ್ವೇಷದಿಂದ ಕಾಣ್ಲಿಲ್ಲ. ಅವರಿಲ್ಲ ಇವತ್ತು. ಅವರ್‍ನ ನೆನೆಸ್ಕೋತೀನಿ. ಮಠದ ಸ್ವಾಮೀಜಿ ಅಂತಲ್ಲ, ಮಾನವೀಯತೆಯಿಂದ ನಡ್ಕೊಂಡ್ರು ಅಂತ. ಆ ತರದ ದೃಷ್ಟಿಕೋನಗಳನ್ನ ನಾವು ಬೆಳೆಸ್ಕೋಬೇಕು.

ಭಕ್ತಿ ಬಗ್ಗೆ ಬೆಳಗ್ಗೆ ನಾನೊಂದು ಪ್ರಶ್ನೆಯನ್ನ ಕೇಳ್ತೀನಿ ಅಂತ ಹೇಳಿದ್ದೆ. ನಾನು ಹೇಳಬಹುದಾದ್ದನ್ನ ಇಲ್ಲೊಬ್ರು ಹಿಂದೆ ಬಂದವ್ರು ಮಾತ್ನಾಡಿದಾರೆ.

ಭಕ್ತಿ ಪಂಥ ಚಳುವಳಿ ಇದ್ಯಲ್ಲ ಅದು ಭಾರತದಲ್ಲಿ... ಇವ್ರು ಎಲ್ಲವನ್ನೂ ಬಹಳ ಚೆನ್ನಾಗಿ ಹೇಳಿದಾರೆ. 13ನೇ ಶತಮಾನದಿಂದ ಈಚೆಗೆ ಅದು ರಾಜಸ್ಥಾನ, ಗುಜರಾತ್, ಬಂಗಾಲದಿಂದ ಹಿಡಿದು ಕರ್ನಾಟಕದಲ್ಲಿ ಈ ಭಾಗದ ಕರ್ನಾಟಕ ಅಲ್ಲಿ ಉತ್ತರ ಭಾಗದ ಕರ್ನಾಟಕದಿಂದ ಮಹಾರಾಷ್ಟ್ರದವರೆಗೆ, ಜ್ಞಾನದೇವ, ತುಕಾರಾಮ ಈ ತರ ಬಹಳ ಸಂತರು ಬಂದ್ರು. 13ನೇ ಶತಮಾನದಲ್ಲಿ ಭಾರತದಲ್ಲಿ ಮುಸ್ಲಿಮರ ಆಳ್ವಿಕೆ ಪ್ರಾರಂಭವಾಯ್ತು. ಪ್ರವೇಶ ಅಲ್ಲ ಪ್ರವೇಶ ಹಿಂದೇನೇ ಆಯ್ತು. ಆಳ್ವಿಕೆ ಪ್ರಾರಂಭ ಆಯ್ತು. ಆಳ್ವಿಕೆ

ಪ್ರಾರಂಭವಾದಾಗ ಅಂದಿನ ಭಾರತದಲ್ಲಿದ್ದಂತ ವಿವಿಧ ರಾಜ ಸಮೂಹಗಳು ನಾನಾ ಕ್ಷೇತ್ರಗಳಲ್ಲಿ ನಾನಾತರ ಬರ್ತಾರೆ. ಈ ಎಲ್ಲಾ ಸಮುದಾಯಗಳೂ ಕೂಡ ಅವರನ್ನ ಎದುರಿಸುವಷ್ಟು ಚೈತನ್ಯ ಸಾಲದೆ ಸೋತು ಹೋದಾಗ, ಎದುರಿಸೋಕಾಗ್ಲಿಲ್ಲ. ಆಗ ಈ ಮೇಲುವರ್ಗದ ಜನರು ಈ ದೇಶದ ಸಂಸ್ಕೃತಿ ಅಂತ ಏನಿತ್ತು ಅಥವಾ ವೈದಿಕ ಸಂಸ್ಕೃತಿ ಅಂತ ಯಾವುದಿತ್ತು ಅದನ್ನ ಉಳಿಸಿಕೊಳ್ಳುವ ಒಂದು ಕಾರಣದಿಂದ ಭಕ್ತಿ ಪಂಥವನ್ನ ಆರಂಭಿಸಿದರು. ಭಕ್ತಿ ಅಂತ ಅಂದ್ರೆ ಅದು ಅಪೇಕ್ಷಿಸುವುದು ಶ್ರದ್ಧೆ, ಹೆದರಿಕೆ. ಹೆದರಿಕೆ ಇದ್ದರೆ ಮಾತ್ರ ಅದು ಭಕ್ತಿ. ಆಮೇಲೆ ಚರ್ಚೆಯನ್ನ ಅಪೇಕ್ಷಿಸುತ್ತದೆ. ಭಕ್ತಿಯಲ್ಲಿ ಎರಡು ಅಂಶ. ಅದಿಲ್ದೇ ಇದ್ರೆ ಭಕ್ತಿ ಮಾಡುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಈ ಭಕ್ತಿ ಪಂಥ ಚಳುವಳಿಯನ್ನ ಎಷ್ಟರ ಮಟ್ಟಿಗೆ ನಾವು ಕ್ಲಾರಿಫೈ ಮಾಡ್ಬೇಕು ಅನ್ನುವುದರ ಬಗ್ಗೆ ಒಂದು ಎರಡು ನಿಮಿಷವಾದರೂ ಚರ್ಚೆ ಆದ್ರೆ ಬಹಳ ಸಂತೋಷ.

ಇನ್ನೊಂದು ನಮ್ಮ ರಾಮಚಂದ್ರೇಗೌಡರ ಒಂದು ಮಾತನ್ನ ಹೇಳಿ ನನ್ನ ಮಾತನ್ನ ಮುಗಿಸ್ತೇನೆ. ಗರ್ಭಗುಡಿ ಪ್ರವೇಶ ಇದೆಲ್ಲ ಬೇಡ ಅಂದ ಮೇಲೆ ದೇವಸ್ಥಾನದ ಒಳಗೆ ಯಾಕೆ ಹೋಗ್ಬೇಕು? ಅದೇನು ಹೋಗ್ಬೇಕಾಗಿಲ್ಲ. ಹೋಗಿ ಅಲ್ಲಿ ಮಾಡ್ಬೇಕಾದ್ದೇನಿರ್ತದೆ, ಎಲ್ಲ ಕೊಳೆತು ನಾರ್ತಾ ಇರ್ತದೆ. ಆ ಪ್ರಶ್ನೆಗಳು ಬೇರೆ. ಗರ್ಭಗುಡಿ ಪ್ರವೇಶ ಒಂದು ಗ್ರಾಮಾಂತರ ಪ್ರದೇಶದಲ್ಲಿ ಅಂದ್ರೆ ಗುಡಿ ಪ್ರವೇಶ ಗರ್ಭನೂ ಅಲ್ಲ ಗುಡಿ ಪ್ರವೇಶ ಗ್ರಾಮಾಂತರ ಪ್ರದೇಶಗಳಲ್ಲಿ ಬರಿಯ ಒಂದು ಸಮಸ್ಯೆಯಾಗಿ ಉಳಿದಿಲ್ಲ. ಅದರ ನಿರಾಕರಣೆ ಅಷ್ಟು ಸುಲಭವಾಗೋದಿಲ್ಲ. ಯಾಕಂದ್ರೆ ಸಮಾನತೆಯ ಪ್ರಶ್ನೆಗಳು ಅಲ್ಲಿ ಬರ್ತವೆ. ನಾನು ಒಂದು ಉದಾಹರಣೆಯನ್ನ ಹೇಳ್ತೀನಿ. ನಾನು ಈಗ್ಗೆ ಕೆಲವು ವರ್ಷಗಳ ಹಿಂದೆ ಗುಂಡ್ಲುಪೇಟೆ ತಾಲೂಕಿನಲ್ಲಿ ಲಿಂಗಾಯತರ ಜೊತೆ ಮಾತ್ನಾಡ್ತಾಯಿದ್ದೆ. ಲಿಂಗಾಯತರಿಗಂದೆ, ಓ ಬಸವಣ್ಣನವರೇ ನೆಲ ಒಂದೇ ಹೊಲೆಗೇರಿ ತಡೆ ಶಿವಾಲಯಕೆ ಅಂತ ಹೇಳಿದಾರೆ. ಆದ್ರೆ ಈ ಗುಡಿ ಯಾಕೆ ನುಗ್ಗಿಸ್ದೇನೇ ಯಾಕೆ ತಡೆ ಮಾಡಿದಿರಿ, ಬಸವಣ್ಣ ಅವರೇ ಹೇಳಿದ ಮೇಲೆ ನುಗ್ಸಿ ಅದೇನಾದದು ಅಂದೆ. ಅದಕ್ಕೆ ಅವನೇನಂದ– ಅದೇನಾದದ ನುಗ್ಗುಸ್ಕೊಬುಡ್ತೀನಿ, ಹೊಲಾರ ಹೊನ್ನಯ್ಯನ್ನ ಕರ್ಕೊಬನ್ನಿ ಅಂದ. ಹೊಲಾರ ಹೊನ್ನಯ್ಯ ಅಂದ್ರೆ ವಚನ ಕಾಲದಲ್ಲಿದ್ದಂತ ಒಬ್ಬ ಶರಣ ಅಂತ ದಾಖಲೆ ಇದೆ. ಅದಕ್ಕೆ ನಾನಂದೆ ಹೊಲಾರ ಹೊನ್ನಯ್ಯನ್ನ ನಾನು ಈ ಊರ್ನಲ್ಲೇ ನೂರು ಜನರನ್ನು ಕರ್ಕೊಬರ್ತೀನಿ. ಒಬ್ಬ ಜಗಜ್ಯೋತಿ ಒಬ್ರೇ ಒಬ್ರು ಇದ್ರೆ ಕರ್ಕೊಂಬನ್ರಿ ಈಗ ಅಂದೆ.

**ಪ್ರಶ್ನೆ :**

ಭಕ್ತಿ ಪಂಥ ಮುಸ್ಲಿಮರ ವಿರುದ್ಧನೋ ಅಥವಾ ವೈದಿಕರ ವಿರುದ್ಧನೋ

**ಚರ್ಚೆ : ಬಂಜಗೆರೆ**

ಸಾಮಾಜಿಕ ಪ್ರಕ್ರಿಯೆ ನೋಡ್ಬೇಕಾದ್ರೆ ಅದರಲ್ಲಿ ಎರಡು–ಮೂರು ಅಂಶಗಳನ್ನೂ ನೀವು ಗಮನಿಸಬೇಕು. ಒಂದು ನಮಗೆದುರಾಗಿರುವ ಒಂದು ಸಾಂಸ್ಕೃತಿಕ ಸನ್ನಿವೇಶವನ್ನ ಸವಾಲಾಗಿ ತೆಗೆದುಕೊಂಡು ಯಾವ್ದಾದ್ರೂ ಇನ್ನೊಂದು ಹೇಗೆ ಪ್ರತಿಕ್ರಿಯಿಸಿತು ಅನ್ನುವಂತಾದ್ದು. ಇನ್ನೊಂದು ಅದರೊಳಗಡೆ ಇರುವ ಅಂಶಗಳನ್ನ ತಾನು ಒಳಗು ಮಾಡ್ಕೊಳ್ಳೋದಕ್ಕೆ ಯಾವ ರೀತಿ ಪ್ರಯತ್ನಪಟ್ಟು ಅಂತ. ಮುಸ್ಲಿಮರಾಗಿ ಇವರೆಲ್ಲರೂ ಕೂಡ ವರ್ಗಾವಣೆಗೊಂಡು ಬಿಡಬಹುದು ಅನ್ನುವ ಕಾರಣಕ್ಕೆ ಭಕ್ತಿಪಂಥ ಹುಟ್ಟು ಅಂತ ಹೇಳೋದು ಅಷ್ಟು ಚಾರಿತ್ರಿಕವಾದಂತಹ ಮಾತಾಗಿರೋದಿಲ್ಲ. ಯಾಕೆ ಅಂದ್ರೆ ಭಕ್ತಿಪಂಥಕ್ಕೆ ಭಾಗವತ ಅನ್ನೋದು ಮೂಲ ತಳಹದಿ. ಅದು ಶುರುವಾಗೋದು ವೇದಗಳ ಕಾಲದ ಕಡೆಕಡೆಯಲ್ಲಿ. ಪಂಚರಾತ್ರ ಮತ್ತು ಪಾಶುಪತ ಸಿದ್ಧಾಂತಗಳ ಕಾಲ ಅದು. ಆಗ ಯಾವ ಮುಸ್ಲಿಮರೂ ಪ್ರೆಸೆನ್ಸ್‌ನಲ್ಲಿರ್ಲಿಲ್ಲ, ನಮ್ಮನ್ನ ವಿರೋಧಿಸೋದಕ್ಕೆ ಅಥವಾ ಹೋಗ್ಬಿಡ್ತಾರೆ ಅನ್ನುವ ಕಾರಣಕ್ಕೆ. ಚಿಂತನೆಯ ದಾರಿಗಳಲ್ಲಿ ಕರ್ಮ ಮಾರ್ಗವೋ, ಭಕ್ತಿ ಮಾರ್ಗವೋ, ಜ್ಞಾನ ಮಾರ್ಗವೋ; ಭಕ್ತಿ ಮಾರ್ಗ ಅನ್ನೋದು ಬಡವರ ಮಾರ್ಗ, ಬಿಡುಗಡೆಯ ಮಾರ್ಗ. ಯಾಕೆ ಅಂದ್ರೆ ಭಕ್ತಿ ಸಾಮಾನ್ಯತೆಯನ್ನ ಅಸಾಮಾನ್ಯವಾಗಿ ಕಾಣುವ ಮತ್ತು ಸಾಮಾನ್ಯತೆಯಲ್ಲೇ ಶ್ರೇಷ್ಠತೆಯನ್ನ ಕಾಣುವ ಒಂದು ದೊಡ್ಡ ತಾತ್ವಿಕ ಸಿದ್ಧಾಂತ ಅದು. ಆಮೇಲೆ ಅದರ ರೂಪಾಂತರಗಳು ಅದೆಷ್ಟು ಕುರೂಪವಾಗಿವೆ ಅನ್ನೋದು ಬೇರೆ ವಿಷಯ. ಅದು ಎಲ್ಲ ಕಡೆಯಲ್ಲೂ ಆಗಿದೆ. ಶರಣ ಚಳವಳಿಗೂ ಆಗಿದೆ. ಜೈನರಲ್ಲೂ ಆಗಿದೆ. ಜೈನರು ಮೂಲತಃ ವೈದಿಕ ವಿರೋಧಿಗಳು. ಹಿಂದೂ ಸನ್ನಿವೇಶದಲ್ಲಿ ಬಾಳಬೇಕಾದ್ರೆ ಜನಿವಾರ ಧರಿಸಿದರು. ಜಾತಿಗಳನ್ನ ಮಾಡಿದ್ರು. ಹಿಂದೂ ದೇವರುಗಳನ್ನ ಪೂಜೆ ಮಾಡಿದ್ದಾರೆ. ಮುಸ್ಲಿಮರು ನಾವಂದುಕೊಂಡಿರುವ ಹಾಗೆ ಇಲ್ಲಿಲ್ಲ. ಮುಸ್ಲಿಮರು ಇಲ್ಲಿ ಬಂದು ಜಾತಿಗಳಾಗೋದ್ರು. ಎಷ್ಟು ಮೇಲು ಕೀಳುಗಳ ವಿಂಗಡಣೆ ಇದೆ ಅಂದ್ರೆ ನಮ್ಗೆ ಜಾತಿ ಹೊರಗಡೆಯಿಂದ ಗೊತ್ತಾಗ್ತಿಲ್ಲ. ನಾವು ಒಳಗಡೆಗೋದ್ರೆ ಎಷ್ಟು ಶ್ರೇಣೀಕರಣ ಮಾಡಿದಾರೆ ಅಂತ್ಹೇಳಿ ತಿಳಿಯುತ್ತೆ. ಪ್ರತಿ ಸನ್ನಿವೇಶದಲ್ಲೂ ಕೂಡ ಆ ರೀತಿಯಾಗಿರುವಂತ ಬದಲಾವಣೆಗಳಿರುತ್ತೆ. ಭಕ್ತಿಪಂಥ ಮೂಲತಃ ವೈದಿಕ ಕರ್ಮಠತನಕ್ಕೆ ವಿರೋಧಿಯಾಗಿ ಹುಟ್ಟಿತು. ವೇದಗಳಲ್ಲಿ ಕರ್ಮವನ್ನು ಜ್ಞಾನವನ್ನು, ಪಾಂಡಿತ್ಯವನ್ನ ಬಹಳ ದೊಡ್ಡ ವಿಷಯ ಅಂತ ಹೇಳಿದ್ರೆ, ಇದು ಅನುಭವವನ್ನ ಪ್ರಾಮಾಣಿಕತೆಯನ್ನ, ಶ್ರದ್ಧೆಯನ್ನ ಬಹಳ ದೊಡ್ಡ ವಿಷಯ ಅಂತ ಹೇಳುತ್ತೆ. ಅದನ್ನು ರೂಪಕಗಳಲ್ಲೂ ಹೇಳಿತು. ಸತ್ಯಭಾಮೆ ತನ್ನ ಅಷ್ಟೂ ಬಂಗಾರವನ್ನು ಹೇರಿದ್ರೂ ಕೂಡ ಕೃಷ್ಣನನ್ನ ತೂಗೋಕೆ ಆಗ್ದೇ ಇದ್ರೆ ಭಕ್ತಿಯಿಂದ ರುಕ್ಮಿಣಿ ತಂದ ಬರೀ ಒಂದು ತುಳಸಿ ಎಲೆ ತಕ್ಕಡಿಯನ್ನು ಮೇಲಕ್ಕೆತ್ತಿತು. ಈ ರೀತಿಯಾಗಿರುವ ಕಥನಗಳೇನೇ ಸಾಮಾನ್ಯವಾದುದನ್ನ ಶ್ರೇಷ್ಠತೆಗೆ ಏರಿಸುವುದು. ಆದ್ದರಿಂದ ನಿರಾಕರಣೆ; ಹಣ, ಅಧಿಕಾರ ಇತ್ಯಾದಿ ಕೇಂದ್ರಗಳನ್ನ ನಿರಾಕರಣೆ ಮಾಡೋದು, ಶ್ರೀಕೃಷ್ಣ, ದುರ್ಯೋಧನನ ಅರಮನೆಗೆ ಹೋಗಿ ಆತಿಥ್ಯ ಪಡೆಯದೆ ವಿದುರನ ಮನೆಗೆ ಸೀದಾ ಹೋಗಿಬಿಡೋದು, ಮಾದಾರ ಚನ್ನಯ್ಯನ ಮನೆ ಅಂಬಲಿ ಬಹಳಾ ರುಚಿಯಾಗಿತ್ತು ಊಟ ಮುಗಿಸಿಬಂದ್ಬುಟ್ಟೆ ಅಂತ ಶಿವ ಕರಿಕಾಳ ಚೋಳನ ಊಟ ನಿರಾಕರಿಸಿಬಿಡೋದು. ನೋಡಿ ಇವೆಲ್ಲವೂ ನಮಗೆ ತೋರಿಸೋದು ಏನಂದ್ರೆ ಅಧಿಕಾರ ಕೇಂದ್ರಗಳ, ಸಂಪತ್ತಿನ ವೈಭವೀಕರಣಗಳ ನಿರಾಕರಣೆ. ಅದರ

ಹಿನ್ನೆಲೆಯಲ್ಲಿ ಯಾಕೆ ಜನಕ್ಕೆ ಅದು ಬಹಳ ಇಷ್ಟ ಆಯ್ತು ಅಂತ ಹೇಳಿದ್ರೆ, ನಾನು ನಿಮಗೆ ಮೊದ್ಲೇ ಹೇಳ್ದೆ ಅವನಿಗೆ ಆಚರಣೆಗಳೂ ಇಲ್ಲ, ವ್ರತಗಳೂ ಇಲ್ಲ, ಕ್ರಮಗಳೂ ಇಲ್ಲ. ಸ್ನಾನ ಯಾಕೆ ಮಾಡ್ಬೇಕು ಅಂತಾನೆ. ಸಜ್ಜನರ ಸಂಗ ಇದ್ರೆ ಅದೇ ಒಂದು ಸ್ನಾನ. ಒಳ್ಳೆ ಯೋಚ್ನೆ ಮಾಡಿದ್ರೆ ಅದೇ ಒಂದು ಸ್ನಾನ. ಅಂದ್ರೆ ಅಷ್ಟು ಸರಳಗೊಳಿಸುವ ಕಾರಣಕ್ಕೇನೇ ಭಕ್ತಿ ಪಂಥ ಅನ್ನೋದು ಮೊದಲಿಂದನೂ ಕೂಡ ಇಲ್ಲಿ ಜನಸಾಮಾನ್ಯರ ಶ್ರದ್ಧೆಯ ಆರಾಧ್ಯ ಕೇಂದ್ರ ಆಗಿ ಉಳ್ಕೊಂಡಿದೆ. ಅವರು ಕೃಷ್ಣನನ್ನ ದೈವವನ್ನಾಗಿ ತಗೊಂಡಿದ್ದೇ ಒಂದು ಪಲ್ಲಟ. ವೈದಿಕರ ದೇವರಲ್ಲ ಕೃಷ್ಣ, ವಿಠಲ; ಹನುಮಂತ. ಅವರಿಗೆ ದೇವರೇ ಅಲ್ಲದೇ ಇರೋರನ್ನೆಲ್ಲ ಯಾಕೆ ಅವರು ಅನಿವಾರ್ಯವಾಗಿ ತಗೊಂಡ್ರು. ಅದು ವೈದಿಕರು ಮಾಡ್ಕೊಂಡ ಹೊಂದಾಣಿಕೆ. ಭಕ್ತಿಪಂಥವನ್ನ ಎದುರಿಸೋದಕ್ಕಾಗದೆ ಭಕ್ತಿಪಂಥೀಯರನ್ನ ಹೆಂಗಾದ್ರೂ ಮಾಡಿ ಹಿಂದೂಕರಣ ಗೊಳಿಸಬೇಕು ಅಂತ್ಹೇಳಿ ಅವರೇ ಪೂಜೆಗೆ ನಿಂತುಬಿಟ್ರು ವೈದಿಕರು. ಅವ್ರು ಬದಲಾಗ್ಬೇಕಿತ್ತು. ಅದ್ರಿಂದ ಇದನ್ನ ನಾವು ಹೆಂಗೆ ನೋಡ್ಬೇಕು ಅಂತ ಹೇಳಿದ್ರೆ ಇದರ ವಿರುದ್ಧವಾಗಿ ಇದು ನಡೆದದ್ದಾ ಅಥವಾ ಹಿಂದೂಧರ್ಮದಲ್ಲಿ ಜನರನ್ನ ಉಳಿಸೋದಕ್ಕೆ ಮಾಡಿದ್ದಾ ಅಂತ. ವೈದಿಕ ಧರ್ಮ ಅನ್ನೋ ಹೆಸರಲ್ಲಿ ಏನು ಉಸಿರುಗಟ್ಟಿಸುವ ಪರಿಸ್ಥಿತಿ ಇತ್ತು? ಅದು ಜಾತಿ ಪದ್ಧತಿಯಾಗಿತ್ತು. ಅದನ್ನ ಸ್ಪಷ್ಟವಾಗಿ ನಿರಾಕರಿಸಬೇಕು ಇದು ಮುಗಿದೋಯ್ತು. ಅವರಿಗೆ ಅಷ್ಟೇ ಇದ್ದದ್ದು. ಒಂದು ಸಲ ಮನುಷ್ಯನಾಗಿ ಹುಟ್ಟಿದಾನೆ ಅಂದ ಮೇಲೆ ಅವನಲ್ಲಿ ಮೇಲುಕೀಳು ಇರೋಕೆ ಸಾಧ್ಯ ಇಲ್ಲ. ಯಾಕಂದ್ರೆ ಭಕ್ತಿಪಂಥ ನಂಬೋದು ಏನು ಅಂತ ಹೇಳಿದ್ರೆ ಎಲ್ಲವೂ ದೇವರ ಸೃಷ್ಟಿಯೇ ತಾನೆ. ಆದರೆ ಅದು ಫಿಲಾಸಫಿಕಲ್ ಚರ್ಚೆ. ಕೊನೆಗೆ ನಮ್ಮಲ್ಲಿ ಚರ್ಚೆಗಳಾಗಿ ಹೊರಗೆ ಬರಬೇಕಾದ್ರೆ ಆಚರಣೆಗಳಲ್ಲಿ ಯಾವ ರೂಪಗಳಲ್ಲಿ ಬರುತ್ತೆ ಅನ್ನೋದು ಬೇರೆ ವಿಷಯ. ನನಗೆ ಅದು ಯಾಕೆ ಹಿಂದೂಧರ್ಮವೇ ಮುಸ್ಲಿಂ ಧರ್ಮವನ್ನ ನೋಡಿ ಸಡಿಲಗೊಂಡಿರಬಾರದು? ಅಲ್ಲಿ ಸಮಾನತೆಯನ್ನ ಜಾಸ್ತಿ ಹೇಳ್ತಾರೆ ಆದ್ರಿಂದ ಈ ರೀತಿಯಾಗಿ ಜಾತಿಗಳನ್ನ ವಿಂಗಡಿಸಬಾರದು ಅಂತ ಅವರ ಪ್ರಭಾವವನ್ನ ನೋಡ್ಬುಟ್ಟು, ಇಲ್ಲ ನಾವು ಹಂಗಾದ್ರೆ ಎಲ್ಲರೂ ಒಂದೇ ಆಗಿ ಓಡಾಡ್ಬೇಕು ಅಂತ ಯಾಕಾಗಿರ್ಬಾರ್ದು? ಈ ದಾರಿಯಲ್ಲಿ ಯಾವುದು ಯಾವುದನ್ನ ಬೆಂಬಲಿಸ್ತು, ಬಳಸ್ತು ಅನ್ನೋದು ಬಹಳ ಜಟಿಲವಾದ ಪ್ರಕ್ರಿಯೆ.

**ಚರ್ಚೆ : ಪ್ರೊ. ಸುಧಾಕರ್**

ಅದೇ ಕುರುಬದಾಸ ಅಂತ ಹೇಳ್ತಾರೆ. ನಾನು ಆಕಸ್ಮಿಕವಾಗಿ ಕುರುಬ ಜಾತಿಯಲ್ಲಿ ಹುಟ್ಟಿದ್ದರೂ ನಾನು ಕುಲಾತೀತ ಎಂಬುದನ್ನು ಅವರು ಘೋಷಣೆ ಮಾಡ್ಕೊಂಡಿದಾರೆ. ಅಷ್ಟೇ ಅಲ್ಲ ಮಾದಿಗ ದಾಸ, ಹೊಲೆಯ ದಾಸ ಅಂತ ಹೇಳ್ಕೊಳ್ಳೋದರ ಮುಖಾಂತರ ಜಾತಿಗೋಡೆಯನ್ನ ಒಡೆಯೋದಕ್ಕೆ ಪ್ರಯತ್ನಿಸಿದ್ದಾರೆ. ಅದೇ ಇನ್ನೊಂದು ಕೀರ್ತನೆಯಲ್ಲಿ ಅವರು ಒಂದು ಮಾತನ್ನ ಹೇಳ್ತಾರೆ – ಒಬ್ಬರಂತೆ ಎಲ್ಲರ ನೋಡು. ಕೀರ್ತನೆಯಲ್ಲಿ ಬರುವ ಒಂದು ಸಾಲು ಒಬ್ಬರಂತೆಲ್ಲರ ನೋಡು. ಇದು ಬಹಳ ಸರಳವಾದ ಅಭಿವ್ಯಕ್ತಿ. ಬಹುಶಃ ನಮ್ಮ ರಾಮಚಂದ್ರೇಗೌಡರಿಗೆ ಗೊತ್ತು. ಬಂಜಗೆರೆಯವರಿಗೂ ಗೊತ್ತು ಅಂತ ಕಾಣ್ತದೆ. ಪಂಕ್ತಿಲಿ ಪರ್ಪಂಚ ಮಾಡ್ಬಾರ್ದು ಅಂತ. ಪರ್ಪಂಚ ಅಂದ್ರೆ ಪ್ರಪಂಚದಿಂದ ಬಂದಿರ್ಬಹುದು ಆದ್ರೆ ಪರ್ಪಂಚ ಅನ್ನೋದಕ್ಕೆ ಪಕ್ಷಪಾತ ಅನ್ನುವ ಅರ್ಥಉಂಟು ಜನಪದರಲ್ಲಿ. ಅಂದ್ರೆ ಪಂಕ್ತಿಲಿ ಪರ್ಪಂಚ ಮಾಡ್ಬಾರ್ದು ಅಂದ್ರೆ ನಮ್ಮಲ್ಲೊಂದು ಗಾದೆ ಇದೆ. ನಮ್ಮವರ್ನ ಕಂಡ್ರೆ ಮುಳುಗಿ ಬಾ ಸಟ್ಗ, ಅನ್ಯರನ್ನ ಕಂಡ್ರೆ ತೇಲಿ ಬಾ ಸಟ್ಗ ಅಂತೇಳಿ. ಸಟ್ಗ ಅಂದ್ರೆ ಸೌಟು. ನಮ್ಮವರ್ನ ಕಂಡ್ರೆ ಮುಳುಗಿ ಬಾ ಸಟ್ಗ, ಸೌಟಿನ ತುಂಬ ಮಾಂಸವನ್ನ ತರಕಾರಿಯನ್ನ ಹಾಕೋದು. ಬೇರೆಯವರ್ನ ಕಂಡ್ರೆ ತೇಲಿ ಬಾ ಸಟ್ಗ. ಕನಕದಾಸರು ಏನೇಳಿದಾರೆ ಒಬ್ಬರಂತೆಲ್ಲರ ನೋಡು. ಕುರುಬರನ್ನ ನೋಡಿದ ಹಾಗೆಯೇ ಒಬ್ಬ ಅಂತ್ಯಜನನ್ನ ನೋಡು ಅಂತಕ್ಕಂತ ಒಂದು ಸ್ವಸ್ಥ ಮನೋಭಾವದ ನಿಲುವನ್ನ ಅವರು ತಾಳಿದಾರೆ. ಆದ್ರಿಂದ ಕೇವಲ ಕುರುಬ ಜನಾಂಗಕ್ಕೆ ಮಾತ್ರ ಸೀಮಿತವಾಗಿ ಆತ ಇಲ್ಲ. ಆತನ ಕೀರ್ತನೆಗಳನ್ನ ಮತ್ತೆ ಕಾವ್ಯಗಳನ್ನ ಓದಿದಾಗ ಇದು ನಮಗರ್ಥ ಆಗ್ತದೆ. ಎರಡನೇದಾಗಿ ನಮ್ಮ ಹಿ.ಶಿ.ರಾಮಚಂದ್ರೇಗೌಡ್ರು ಹೇಳಿದ್ರು, ಈ ಸ್ಥಳೀಯ ಅಥವಾ ಪ್ರಾಂತೀಯ ರಾಷ್ಟ್ರೀಯದಷ್ಟೇ ಅಥವಾ ಅಂತಾರಾಷ್ಟ್ರೀಯದಷ್ಟೇ ಪ್ರಮುಖವಾದುದು ಅನ್ನುವ ಅವರ ಅಭಿಪ್ರಾಯವನ್ನ ನಾನು ಅನುಮೋದಿಸ್ತೇನೆ. ಯಾಕೆ ಅಂದ್ರೆ ಕೆಲವು ಸಾರಿ ನಾವು ನಮ್ಮ ಸುತ್ತ ಮುತ್ತಿನದನ್ನ ಬಿಟ್ಟು ಬೇರೆಯದನ್ನ  ಹೊಗಳ್ತೇವೆ. ಅದಕ್ಕಿಂತ ನಿಮಗೆ ಸುಮ್ಮನೆ ಇಲ್ಲಿ ಒಂದು ಉದಾಹರಣೆಯನ್ನ ಕೊಡ್ತೇನೆ. ಬೆಳಗ್ಗೆ ಕನಕೋಪನಿಷತ್ತು ಎನ್ನುವ ಗ್ರಂಥವನ್ನ ಹೇಳ್ದೆ. ಇತ್ತೀಚೆಗೆ ಬಂದಿದೆ. ಅದರಲ್ಲಿ 'ಎನ್ನ ಕಂದ ಹಳ್ಳಿಯ ಹನುಮ ಚೆನ್ನಾಗೈದಾರ ಲಕ್ಷ್ಮಣ ದೇವರು' ಅಂತ ಒಂದು ಕೀರ್ತನೆ ಶುರುವಾಗ್ತದೆ–ಕನಕದಾಸರದು. ಎನ್ನ ಕಂದ ಹಳ್ಳಿಯ ಹನುಮ, ಚೆನ್ನಾಗೈದಾರ ಲಕ್ಷ್ಮಣ ದೇವರು ಅಂದರೆ ಹನುಮಂತನನ್ನ ಆ ಎತ್ತರದಿಂದ ನಮ್ಮ ಎತ್ತರಕ್ಕೆ ಎಳೆತರುತ್ತಾರೆ. ಹಳ್ಳಿ ಹನುಮನನ್ನಾಗಿ ಮಾಡಿಬಿಡ್ತಾರೆ. ಚೆನ್ನಾಗೈದಾರ ಲಕ್ಷ್ಮಣ ದೇವರು. ಲಕ್ಷ್ಮಣ ದೇವರು ಚೆನ್ನಾಗಿದಾರಾ? ಅಂತ ಈ ಸೀತೆ ಆಂಜನೇಯನನ್ನ ಕೇಳ್ತಾ ಇದಾಳೆ. ಅವಳು ಕೇಳ್ಬೇಕಾಗಿದ್ದದ್ದು ರಾಮ ಚೆನ್ನಾಗಿದಾನೆಯೇ ಅಂತ. ರಾಮ ಹೆಸರನ್ನೇಳದೆ ಅಂದ್ರೆ ಲಕ್ಷ್ಮಣನ ಹೆಸರನ್ನ ಹೇಳ್ತಾಳೆ. ಬಹುಶಃ ನಮ್ಮ ಸಮಾಜದಲ್ಲಿ ಇದಿದೆ. ಗಂಡನ ಹೆಸರನ್ನ ಹೇಳೋದಿಲ್ಲ. ಇವತ್ತಿಗೂ ನಮ್ಮ ಹಳ್ಳಿಗಾಡ್ನಲ್ಲಿ ನೀವು ಗಮನಿಸಿದ್ರೆ ಕೋಣೆಯಲ್ಲಿ ಹೆಂಡತಿ ಇರ್ತಾಳೆ. ನಡುಮನೆಯಲ್ಲಿ ಗಂಡ ಇರ್ತಾನೆ. ಏನೂ ಕೇಳಿಸ್ತಾ ಅಂತಾಳೆ. ಏನೂ ಅಂತ ಗಂಡನನ್ನ ಅಂತಾಳೆ. ಆಮೇಲೆ ಇವನು ಅನ್ನೋದು ಏನೇ ಕೇಳಿಸ್ತಾ ಅಂತ, ಈ ಏನೀ ಅಂತ ಅನ್ನೋದು ಇವತ್ತಿನ ಏನ್ರಿ ಅಂತ ಅಂತೀರಲ್ಲ ಅದು ಅವತ್ತಿನ ಏನೀ ನಮ್ಮ ಜನಪದದಲ್ಲಿ. ಅದ್ರಿಂದ ಇದು ಬಹುಶಃ ಗಟ್ಟಿಯಾಗ್ಬೇಕು. ಕನಕದಾಸರು ಈ ಜನಪದದ ಮುಖವನ್ನ ಕನಕದಾಸರ ಸಾಹಿತ್ಯವನ್ನ ಸಮೀಕ್ಷೆ ಮಾಡೋವಾಗ, ಅದು ಅದರ ಬೆಲೆಕಟ್ಟುವಾಗ ಈ ಜನಪದ ಮುಖವನ್ನ ನಾವು ಮರೀಬಾರ್ದು ವಿಮರ್ಶೆಯಲ್ಲಿ. ಇವತ್ತು ನವೋದಯ, ನವ್ಯ ಎಲ್ಲ ವಿಮರ್ಶೆ ಬಂದಿದೆ. ಆದ್ರೆ ಈ ಜಾನಪದವನ್ನೂ ನಾವು ಕೂಡಿಸಿಕೊಳ್ಬೇಕು. ಒಂದು ಉದಾಹರಣೆಯನ್ನ ನಿಮಗೆ ಹೇಳ್ತೀನಿ. ಮೋಹನ ತರಂಗಿಣಿಯಲ್ಲಿ ತೆಗೆದುಹೋಗು ಅನ್ನುವ ನುಡಿಗಟ್ಟು ಬಳಸಿದ್ದಾರೆ. ಏನು 'ತೆಗೆದು ಹೋಗು' ಅಂದ್ರೆ?

**ಚರ್ಚೆ : ಬಂಜಗೆರೆ** : ಬಡವಾಗಿದಾನೆ ಅಂತ.

**ಪ್ರೊ. ಸುಧಾಕರ್**

ಸರಿಯಾಗಿದೆ. ಇವತ್ತೂ ನಮ್ಮ ಹಳ್ಳಿಗಾಡ್ನಲ್ಲಿ ಮಾತಾಡ್ತಾರೆ – ತುಂಬ ತೆಗೆದೋಗಿದಾನೆ, ಅಂದ್ರೆ ಬಡಕ್ಲು ಬಡಕ್ಲಾಗಿದಾನೆ ಅಂತ. ಇದನ್ನ ಕನಕದಾಸರು ಮೋಹನ ತರಂಗಿಣಿಯಲ್ಲಿ ವಿವರಿಸ್ತಾರೆ. ಅಷ್ಟೇ ಅಲ್ಲ. ಬಾಯೊಳಗೆ ಬಿದ್ದಂಗೆ ಅಂತ ಒಂದು ಮಾತು ಬಳಸ್ತಾರೆ. ಇವತ್ತಿಗೂ ಕೂಡ ಮಕ್ಕಳು ಥೇಟ್ ಅಪ್ಪನಂತೆ ಇದ್ರೆ ನಮ್ ಹಳ್ಳಿ ಒಳ್ಗೆ ಒಂದು ಮಾತದೆ. ಅಯ್ಯೊ ನಿನ್ ಬಾಯೊಳಗೆ ಬಿದ್ದಂಗವ್ನಲ್ಲೊ ಅಂತ. ಇದರರ್ಥ ತಾಯಿಗೇಳಲ್ಲ ಅದನ್ನ. ಆ ಮಾತನ್ನ ತಂದೆ ತರ ಮಗ ಇದ್ದಾಗ ಮಾತ್ರ ನಿನ್ ಬಾಯೊಳಗೆ ಬಿದ್ದಂಗಿದಾನೆ ಅಂತ ಹೇಳ್ತರೆಯೇ ಹೊರತು, ತಾಯಿಯಂಗಿದ್ದಾಗ ಹೇಳೋದಿಲ್ಲ. ಅದು ಬೇರೆ ಮಾರ್ಗ ಅಂತ ಅವರು ತಿಳ್ಕೊಂಡಿರಬಹುದು. ಈ ಎಲ್ಲ ಜನಪದ ನುಡಿಗಟ್ಟುಗಳನ್ನ ಒಂದು ಕಾವ್ಯದಲ್ಲಿ ಬಳಸ್ತಾರೆ. ಅಷ್ಟೇ ಅಲ್ಲ. ಈಗ ಸಂಸ್ಕೃತ ದೈವ ಭಾಷೆ ಅನ್ನೋದನ್ನು ವೈದಿಕರೆಲ್ಲ ಕುಣಿದು, ಕುಪ್ಪಳಿಸಿ, ಮೆರೆಸಿರೋದು ನಿಮಗೆ ಗೊತ್ತಿದೆ. ಅವರು ಎಷ್ಟು ಸದ್ದು ಗದ್ದಲವಿಲ್ಲದೆ ಮೌನವಾಗಿ ಆ ವೈದಿಕರ ಅಹಂ ಅನ್ನ ಮುರ್ದಿದಾರೆ ಅಂತ ಅಂದ್ರೆ ಮೋಹನ ತರಂಗಿಣಿಯಲ್ಲೇ 'ನಾನು ಪೇಳುವೆ ದೇವ ಭಾಷೆ ಕನ್ನಡದೀ' ಅಂತ ಹೇಳ್ತಾರೆ. ತನ್ನ ಪತ್ನಿಯ ಜೊತೆಗೆ. ದೇವ ಭಾಷೆ ಕನ್ನಡದಿ ನಾನು ಹೇಳ್ತಾನೆ ಅಂತ. ಬಹುಶಃ ಕನ್ನಡದ ಯಾವ ಕವಿಗಳೂ ಕನ್ನಡ ದೇವ ಭಾಷೆ ಅಂತ ಹೇಳಿಲ್ಲ. ಕನಕದಾಸ ಅದನ್ನ ಹೇಳಿದಾರೆ. ಅಂದ್ರೆ ಎಲ್ಲಾ ಭಾಷೆಯೂ ದೇವ ಭಾಷೆಯೇ, ಸಂಸ್ಕೃತವೇ ಯಾಕಾಗ್ಬೇಕು ಅನ್ನುವಂಥದ್ದನ್ನ ಮೌನವಾಗಿ ದಾಖಲಿಸಿದಾರೆ. ಆದ್ರಿಂದ ಹಳ್ಳಿಯ ಹನುಮ ಚೆನ್ನಾಗೈದಾರ ಲಕ್ಷ್ಮಣ ದೇವರು ಅಂದಾಗ ಗಂಡನ ಹೆಸರನ್ನ ಹೇಳೋದಿಲ್ವಲ್ಲ ಆಗ ನಮ್ಮ ಕನಕೋಪನಿಷತ್ತು ಗ್ರಂಥಕರ್ತರು ಅದಕ್ಕೇನು ವ್ಯಾಖ್ಯಾನ ಮಾಡಿದಾರೆ ಗೊತ್ತ. ಮೈದುನ ಚೆನ್ನಾಗಿದ್ರಾ ಅಂದರೆ ತಮ್ಮ ಚೆನ್ನಾಗಿದ್ರೆ ಅಣ್ಣ ಚೆನ್ನಾಗಿದ್ದಾನೆ ಅಂತ ನಿಶ್ಚಿತ ಅಂತ ಯಾರು ಹೇಳ್ತಾ ಇದಾರೆ? ಬನ್ನಂಜೆ ಗೋವಿಂದಾಚಾರ್ಯರು. ತಮ್ಮ ಚೆನ್ನಾಗಿದ್ರೆ ಅಣ್ಣ ಚೆನ್ನಾಗಿರ್ತಾನೆ ಅಂತ ಹೇಳಿ ತಮ್ಮನ ಯೋಗಕ್ಷೇಮ ಕೇಳಿದ್ಲು ಅಂತ ಇವರು ವ್ಯಾಖ್ಯಾನ ಮಾಡ್ತಾರೆ. ನನಗನಿಸ್ತದೆ ಇದು ಎಚ್ಚರಾವಸ್ಥೆಯ ಬರವಣಿಗೆಯೋ ಅಥವಾ ಮಂಪರಾವಸ್ಥೆಯ ಬರವಣಿಗೆಯೋ ಅಂತ.

ಮಂಪರಾವಸ್ಥೆ ಅನ್ನೋದನ್ನ ನೀವು ಚೆನ್ನಾಗಿ ಅರ್ಥಮಾಡ್ಕೊಳಿ. ಇಲ್ದಿದ್ರೆ ಆ ರೀತಿ ಹೇಳ್ತಾ ಇರ್ಲಿಲ್ಲ. ಆಮೇಲೆ ಎರಡನೇದು ಈ ಸ್ಥಳೀಯವಾಗಿ ಅಷ್ಟೇ ಮಾನ್ಯತೆಯನ್ನ ಕೊಡ್ಬೇಕು ಅಂತ ರಾಮಚಂದ್ರೇಗೌಡ್ರು ಹೇಳಿದ್ರಲ್ಲ. ಅದರ ಬಗ್ಗೆ ಮೋಹನ ತರಂಗಿಣಿಯ ಒಂದು ಸಾಂಗತ್ಯ ಪದ್ಯವನ್ನ ನಿಮ್ಮ ಮುಂದೆ ಇಟ್ಟು ನನ್ನ ಮಾತುಗಳನ್ನ ಮುಗಿಸ್ತೇನೆ. ಆಮೇಲೆ ಚಿಕ್ಕಣ್ಣ ಅವರು ಮಾತಾಡ್ತಾರೆ. ಇದಿದೆ ನೋಡ್ರಿ, ಮೋಹನ ತರಂಗಿಣಿಯನ್ನ ರಾಮಾನುಜ ಅಯ್ಯಂಗಾರ್ ಅವರು ಎಡಿಟ್ ಮಾಡಿದ್ದಾರೆ ಮೊದಲು. ಆಮೇಲೆ ಆರ್.ಸಿ.ಹಿರೇಮಠ್ ಅವರು ಎಡಿಟ್ಮಾಡಿದಾರೆ. ಇತ್ತೀಚೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಜಿ.ಸಿ.ಮಂಜುನಾಥ್, ಕನ್ನಡ ಅಧ್ಯಯನ ಸಂಸ್ಥೆಯವರು ಎಡಿಟ್ ಮಾಡಿದಾರೆ. ಆ ಮೂವರು ಎಡಿಟ್ ಮಾಡಿರುವ ಕೃತಿಯಲ್ಲಿ ಹೆಂಡ್ತಿ ಸುಜ್ಞಾನಿ ವಧೂಟಿ ಕೇಳ್ತಾಳೆ ನೀವು ಹೇಳಬೇಕಾಗಿರುವ ಕಥೆಯನ್ನ ರಸಪೂರ್ಣವಾಗಿ ನನಗೆ ಹೇಳಿ ಅಂತ. ಅದಕ್ಕವನು ಉತ್ತರ ಹೇಳ್ತಾನೆ. ಉತ್ತರ ಹೇಳ್ಬಿಟ್ಟು ಕಥೆ ಹೇಳ್ತಾನೆ. ಬಹುಶಃ ಇದರ ತಂತ್ರ ನಿಮಗೆ ಗೊತ್ತಿದೆ. ಹೆಂಡ್ತಿ ಒಂದು ಪ್ರಶ್ನೆ ಕೇಳೋದು, ಗಂಡ ಉತ್ತರ ಹೇಳೋದು. ಅಂದ್ರೆ ಹೆಂಡ್ತಿ ಕಿವಿಯಾಗ್ತಾಳೆ. ಗಂಡ ಕವಿಯಾಗ್ತಾನೆ. ಇಲ್ಲಿ ಒಂದು ಪದ್ಯ ಇದೆ ನೋಡ್ರಿ. ರಸವತ್ತಾಗಿ ಹೇಳು ಅಂದಾಗ – ಕೆಂಚ ಕೇಳಧಿಕ – ಕೇವಲ ಜಾಣೆ, ರಜಿತ ಪ್ರಪಂಚ, ಶೃಂಗಾರ ರಸಪೂರ್ಣ... ವಿಶ್ರಮಿಸು.

ಮೂರು ಜನ ಎಡಿಟ್ ಮಾಡಿದಂತಹ ಈ ಕಾವ್ಯಗಳಲ್ಲಿ ಈ ಪದ್ಯ ಮೊದಲಿಂದಲೂ ಇಲ್ಲಿಯವರೆಗೆ ಯಥಾಸ್ಥಿತಿಯಲ್ಲಿದೆ. ಅದನ್ನ ಕೇಳೋರಿಲ್ಲ, ಹೇಳೋರಿಲ್ಲ. ಒಬ್ಬರು ಅಯ್ಯಂಗಾರ್ರು. ಮತ್ತೊಬ್ರು ಲಿಂಗಾಯತರಾಯರು, ಮತ್ತೊಬ್ರು ವೈದಿಕರು. ಈಗ ನಾನು ಒಬ್ಬ ಕುರುಬರೋನು ಇದಕ್ಕೆ ಏನು ಸರಿಯಾದ ಪಾಠ ಶುದ್ಧಪಾಠ. ಇದು ಅಪಪಾಠ, ಶುದ್ಧಪಾಠ ಏನು ಅನ್ನೋದನ್ನ ನಾನು ಕೊಟ್ಟಿದ್ದೇನೆ. ಯಾಕೆ ಅಂತ ಅಂದ್ರೆ ನೋಡು ನಾನು ಬಹಳ ರಸಪೂರ್ಣವಾಗಿ ಹೇಳ್ತಾ ಇದೇನೆ. ನೀನು ವಿಶ್ರಮಿಸು ಅಂತ ಸುಜ್ಞಾನ ವಧೂಟಿಗೆ, ಹೆಂಡ್ತಿಗೆ ಹೇಳ್ದ ಅಂತ. ವಿಶ್ರಮಿಸು ಅನ್ನೋಪಾಠ ಇದೆ. ಈ ಮೂರೂ ಜನಕ್ಕೆ ಇದು ತಪ್ಪಾಗಿದೆ ಅಂತ ಅನ್ನಿಸಿಯೇ ಇಲ್ಲ. ಇಲ್ಲಿ ವಿಶ್ರಮಿಸು ಅಂದ್ರೆ ತನ್ನ ಕಾವ್ಯವನ್ನು ಕೇಳಬೇಕಾದ ಹೆಂಡತಿಯೇ ನಿದ್ರೆ ಹೊರಟೋದ್ರೆ ಇವನ್ಯಾರಿಗೆ ಹೇಳ್ತಾನೆ? ಅದಕ್ಕೆ ಯೋಚ್ನೆ ಮಾಡಿ ಹೇಳ್ದ. ಅದು ವಿಶ್ರಮಿಸು ಅಲ್ಲ, ವಿಶ್ರವಿಸು ಅಂತ.

ಶ್ರವ ಅಂದ್ರೆ ಕಿವಿ. ಶ್ರವಿಸು ಅಂದ್ರೆ ಕೇಳು. ವಿಶ್ರವಿಸು ಅಂದ್ರೆ ವಿಶೇಷವಾಗಿ ಕೇಳು. ನಮ್ ಹಳ್ಳಿಗಾಡಿನಲ್ಲಿ ಹೇಳ್ತಾರಲ್ಲ ಮೈಯೆಲ್ಲಾ ಕಿವಿಯಾಗಿ ಕೇಳು ಅಂತ. ಹಾಗೆ ವಿಶ್ರವಿಸು ಅಂತ ಕನಕ ಹೇಳಿದ್ದನ್ನ ಎಲ್ಲ ಎಡಿಟ್ ಮಾಡ್ದೋರು ಅದನ್ನ ವಿಶ್ರಮಿಸು ಅನ್ನೋ ಸ್ಥಿತಿಗೆ ತಂದಿಟ್ಟಿದ್ದಾರೆ. ಆದ್ರಿಂದ ಕಾ ತ ಚಿಕ್ಕಣ್ಣ ಅವರು ರಾಷ್ಟ್ರೀಯ ಮಟ್ಟದ ಚಿಂತನೆ, ಸಂಶೋಧನೆ ಅನ್ನುವ ಬದಲಾಗಿ ಸ್ಥಳೀಯ ಮಟ್ಟದ ಪ್ರಾಂತೀಯ ಮಟ್ಟದ ಇಂತ ಒಂದು ಸಂಶೋಧನೆಯನ್ನು ಕೈಗೊಂಡು, ಇದರ ಬಗ್ಗೆನೂ ನೀವು ವಿಚಾರ ಸಂಕಿರಣವನ್ನ ಏರ್ಪಡಿಸಿದರೆ ಬಹಳ ಒಳ್ಳೇದು ಅಂತ ಅಂದ್ಕೊಳ್ತಾ ಇದೀನಿ. ಯಾಕೆ ಅಂದ್ರೆ ಕಡಿಯಾದವು ಅಂಬುದಿ. ಈ ವಿಷ್ಣುವಿನ ಕಡೆಯವರಿಗೂ ಮತ್ತೆ ಶಿವನ ಕಡೆಯವರಿಗೂ ಯುದ್ಧ ಸಂಭವಿಸಿದಾಗ ಏನೇಳ್ತನೆ. ಕಡಿಯಾದವು ಅಂಬುದಿ ಅಂತ. ಏನು ಅರ್ಥೈಸ್ತೀರಿ ನೀವು? ನನಗೆ ಈ ಹಳ್ಳಿಗಾಡುಗಳಲ್ಲಿ ಹುಟ್ಟಿದ್ರಿಂದ, ನನ್ನ ಶಬ್ದ ಸಂಪತ್ತು ನನ್ನ ಕಲಿಕೆಗಿಂತಲೂ ಹೆಚ್ಚಾಗಿ ನನ್ನ ನಮ್ಮ ಜನಪದರ ಬಾಯಿಂದ ನನಗೆ ಬಂದಿದೆ. ನಾನು ಹುಡುಗನಾಗಿದ್ದಾಗ ನಮ್ಮನೆಗ್ಯಾರೋ ನೆಂಟರು ಬಂದಿದ್ರು. ಮೀನು ಹಿಡಿದು ತಂದಿದ್ರು. ನಮ್ಮ ತಂದೆ ಪಕ್ಕದಲ್ಲಿ ಒಬ್ಬ ನೆಂಟ ಕುಳ್ತಿದ್ದ. ನಮ್ಮ ಮನೆಯ ಹೆಂಗಸರು ಸಾರು ಬಿಟ್ಟಿದ್ದಾರೆ. ನಮ್ಮ ತಂದೆಯ ತಟ್ಟೆಗೆ ಮೂರ್ನಾಲ್ಕು ಪೀಸ್ ಬಿದ್ದಿವೆ. ಪಕ್ಕದ ನೆಂಟನ ಅಗಲಿಗೆ ಪೀಸೇ ಇಲ್ಲ. ಅಯ್ಯೊ ಒಂದು ಮೀನಿನ ಕಡೀನು

ಬಿದ್ದಿಲ್ವಲ್ಲ ಅವನ ಅಗಲಿಗೆ ಅಂದ್ರು ನಮ್ ತಂದೆ. ಒಂದು ಮೀನಿನ ಕಡಿಯೂ ಬಿದ್ದಿಲ್ವಲ್ಲ. ಕಡಿ ಅಂದ್ರೆ ಕಡಿದದ್ದು ಯಾವ್ದೋ ಅದು ಕಡಿ. ಪೀಸ್–ಅದನ್ನ ಬಳಸ್ತಾರೆ ನೋಡಿ. ಕಡಿಯಾದವು ಅಂಬುದಿ. ಸಮುದ್ರ ತುಂಡು ತುಂಡು ಆಗುವವು. ಆದ್ದರಿಂದ ಈ ಮಟ್ಟದಲ್ಲಿ ಚಿಂತನೆ ಮಾಡುವಂತದ್ದು, ಸಂಶೋಧನೆ ಮಾಡುವಂತಾದ್ದು ಬಹಳ ಇವೆ. ಯಾಕಂದ್ರೆ 1000 ಪುಟದ್ದನ್ನ ಎಡಿಟ್ ಮಾಡಿದೇನೆ. ಗದ್ಯಾನುವಾದವನ್ನ ಮಾಡಿದೇನೆ. ನಾನು ಕಾಯಿಲೆ ಬಿದ್ದುಬಿಟ್ಟು 2 ತಿಂಗಳು ಆಯ್ತು. ನಾನು ಇರ್ತೀನೋ ಬಿಡ್ತೀನೋ ಇದನ್ನ ಯಾರಾದ್ರೂ ಮಾಡ್ತರೋ ಇಲ್ವೋ ಅಂತ ಹೇಳಿ ಆ ಅವಧಿಯಲ್ಲೇ ಸಾವಿರ ಪುಟದ ಕರಡನ್ನ ತಿದ್ದಿದೇನೆ. ಒಂದು ಪುಟ ಕರಡು ತಿದ್ಬೇಕಾದ್ರೆ ಎಷ್ಟು ಕಷ್ಟ ಅಂತ ನಿಮಗೆ ಗೊತ್ತು ಅಂತ್ಹೇಳಿ ನನ್ನ ಮಾತನ್ನ ಮುಗಿಸ್ತೇನೆ.

**ಕಾ ತ ಚಿಕ್ಕಣ್ಣ**

ಸ್ನೇಹಿತರೇ, ಬಹುಶಃ ಇಲ್ಲಿಗೆ ಮುಗೀತು ಅಂತ್ಹೇಳಿ ಅಂದ್ಕೊತಾ ಸುಧಾಕರ್ ಅವರು ಹೇಳಿದ ಸಲಹೆಗೆ ಒಂದು ಉತ್ತರ ಏನಪ್ಪ ಅಂದ್ರೆ, ಈಗಾಗ್ಲೇ ಅಧ್ಯಯನ ಕೇಂದ್ರ ಕೆಲವು ಶಿಷ್ಯ ವೇತನಗಳನ್ನ ಕೊಡ್ಲಿಕ್ಕೆ ಪ್ರಚಾರ ಮಾಡಿದೆ. ಅದಕ್ಕೆ ನಮ್ಮ ಡಾ. ಟಿ.ಎನ್.ನಾಗರತ್ನ ಕೂಡ ಇಲ್ಲಿದಾರೆ. ಅವರೂ ಕೂಡ ಸಮಿತಿ ಸದಸ್ಯರು. ಅವರನ್ನೂ ಕೂಡ ನಾನು ನೆನೆಸ್ಕೋಬೇಕು. ಕನಕದಾಸರ ಕೃತಿಗಳ ಸಂಪಾದಕೀಯ ರಾಜಕೀಯ ಅನ್ನುವಂತಾದ್ದು. ಸಂಪಾದಕೀಯ ರಾಜಕೀಯ ಅನ್ನುವ ಒಂದು ವಿಷಯವನ್ನು ಇಟ್ಕೊಂಡು ಈಗಾಗ್ಲೇ ಫೆಲೋಷಿಪ್‌ಗೆ ಪ್ರಕಟಣೆ ಮಾಡಿದ್ದೇವೆ. ಅದೀಗ ನಡೀತಾ ಇದೆ. ಕನಕದಾಸರ ಕೃತಿಗಳ ಸಂಪಾದಕೀಯ ರಾಜಕಾರಣ.

**ಬಂಜಗೆರೆ** – ಸಂಪಾದನೆಯ ರಾಜಕೀಯ

**ಕಾ ತ ಚಿಕ್ಕಣ್ಣ** – ಅದರರ್ಥ ಏನು ಅಂತ ಅಂದ್ರೆ

**ಪ್ರಶ್ನೆ**: ಆ ಎರಡು ಪದಗಳಿಗೆ ವ್ಯತ್ಯಾಸ ಏನು? ಅವುಗಳ ಆಶಯ ಏನು?

**ಚರ್ಚೆ : ಕಾ ತ ಚಿಕ್ಕಣ್ಣ**

ನಾನ್ಯಾಕೆ ಇಲ್ಲಿ ಪ್ರಸ್ತಾಪ ಮಾಡ್ದೆ ಅಂತ ಅಂದ್ರೆ, ಕನಕ ಅಧ್ಯಯನ ಕೇಂದ್ರ ಇದೆಯಲ್ಲ ಕನಕ ಅಧ್ಯಯನ ಕೇಂದ್ರದ ವ್ಯಾಪ್ತಿ, ಆ ವ್ಯಾಪ್ತಿಯನ್ನ ನಾನು ಕಾಮ ಇಟ್ಟು ಯಾವ್ದೊ ಒಂದು ಘಟನೆಯನ್ನ ನೆನೆಸ್ಕೋತೀನಿ. ಬಹುಶಃ ನೀವು ಒಂದೈದು ನಿಮಿಷ ನನಗೆ ಟೈಮ್ ಕೊಟ್ರೆ. ಏನಪ್ಪ ಅಂತಂದ್ರೆ, ಅಲ್ಲಿ ಕೂತಿದ್ದವರೆಲ್ಲ ಮಾತಾಡ್ತಾ ಇದ್ದಾಗ ನಾನು ಯೋಚ್ನೆ ಮಾಡ್ತಾ ಇದ್ದೆ. ಗ್ಲೋಬಲ್ ಮತ್ತು ಸ್ಥಳೀಯ ಇತ್ಯಾದಿ. ನಾನು ಚಿಕ್ಕವನಿದ್ದಾಗ ಸುಮಾರು ಹೈಸ್ಕೂಲಲ್ಲಿ ಮಿಡ್ಲಸ್ಕೂಲ್ ಲೆವೆಲ್‌ನಲ್ಲಿ ಓದ್ತಾ ಇರ್ಬೇಕಾದ್ರೆ ನಮ್ ಕಡೆ ಕುರಿ ಮಂದೆ ಬಂದ್ಬಿಡೋವು ಸಿಕ್ಕಾಪಟ್ಟೆ. ಇಡೀ ರಾತ್ರಿಯೆಲ್ಲ ಹೊಲದೊಳಗೆ ಕುರಿ ಕೂಡೋರು, ಈಗಿಲ್ಲ. ಈಗ ಕೂಡ್ಲಿಕ್ಕೆ ಕುರಿಗಳೂ ಇಲ್ಲ. ಜಾಗಾನೂ ಇಲ್ಲ. ಅಕ್ಕಿ, ಹಿಟ್ಟು, ಹಸಿಟ್ಟು ಇತ್ಯಾದಿ ಎಲ್ಲ ತಗೊಂಡ್ಹೋಗೋರು. ನನಗೇನು ನೆನಪಾಗ್ತದೆ. ನಾವು ಎಲ್ಲಾ ಮನೇಲಿ ಅಡುಗೆ ಮಾಡ್ತೀವಿ, ಉಣ್ತೀವಿ ಅದು ಬೇರೆ ವಿಚಾರ. ಆದ್ರೆ ಆ ಕುರಿಯ ಹಾಲನ್ನ ಹಿಂಡಿ, ಹುರುಳೀ ಕಾಳು ಸಾರಿಗೂ ಕೂಡ, ಅದು ಅದ್ಭುತ, ಅದು ಬಿಡಿ, ಆ ಹುರುಳೀ ಕಾಳು ಸಾರಿಗೂ ಕೂಡ ಆ ಕುರಿಯ ಹಾಲನ್ನ ಹಾಕಿ ಮಾಡಿದ್ರೆ ಆ ರುಚಿ, ಏನ್ರಿ ಅದು? 35 ವರ್ಷ ನಾನು ಬೆಂಗಳೂರಿನಲ್ಲಿ ಬದುಕ್ತಾ ಇದೀನಿ. ಅದಕ್ಕೆ ಇನ್ನೊಂದು ಹದಿನೈದು ವರ್ಷ ಆಚೆಗೋದ್ರೆ ಅಂದರೆ ಈ ಐವತ್ತು ವರ್ಷದ ಅವತ್ತಿನ ಆ ರಾತ್ರಿಯಲ್ಲಿ ಉಣ್ಣುವ ಆ ಕುರಿಯ ಮಂದೆಯ ಊಟ ಇದ್ಯಲ್ಲ, ಆ ಕುರಿಮಂದೆಯ ಆ ಸಾರಿಗೆ, ಸರಿಯಾಗಿ ಹೇಳ್ಬೇಕು ಅಂದ್ರೆ ಎಸರಿಗೆ ಕುರಿಯ ಹಾಲನ್ನ ಬಿಟ್ಟು ಮಾಡುವಂತ ರುಚಿ ಇದೆಯಲ್ಲ ಅದರ ಸವೀನೇ ಸವಿ. ಅದ್ರೆ ಇದನ್ಯಾಕೆ ಪ್ರಸ್ತಾಪ ಮಾಡ್ದೆ ಅಂತ ಅಂದ್ರೆ ನಾನು ಎಲ್ಲಿ ನಿಂತಿದೀನಿ? ನಾನು ಏನು ಯೋಚಿಸ್ತಿದೀನಿ? ಅವೆಲ್ಲ ಸ್ಥಳೀಯವಾಗಿ ನನಗೆ ಗಟ್ಟಿಯಾಗ್ಲಿಲ್ಲ ಅಂತ ಅಂದ್ರೆ, ನಾನು ಆಡೋದು, ನಾನು ಓಡೋದು, ನಾನು ನಲಿದಾಡೋದು ಅದೆಲ್ಲ ಕೂಡ ಡಾಂಬಿಕತೆ. ಅದೊಂಥರಾ ನಟನೆ, ಒಂಥರಾ ಪ್ರದರ್ಶನ ಆಗ್ತದೆ. ಬಹುಶಃ ಈ ಶೀರ್ಷಿಕೆ ಬಗ್ಗೇನೂ ಚರ್ಚೆ ಆಯ್ತು. ಚರ್ಚೆ ಆದ್ಮೇಲೇ ನಂಗೆ ಹೌದಾ ಅಂತ ಅನ್ಸಿದ್ದು. ರಾಷ್ಟ್ರೀಯ ಸಂತಕವಿ ಆದಕೂಡಲೆ ಕನಕದಾಸನಿಗೆ ಒಂದು ವಿಶೇಷಣವನ್ನ ಹಚ್ಚಿದ ಪದ ಅದು ಅಲ್ಲ. ಅಂದ್ರೆ ರಾಷ್ಟ್ರಕವಿ ಅಂತ್ಹೇಳ್ಬಿಟ್ಟು ನಾವು ಹೆಸರು ಹೇಳ್ತೀವಲ್ಲ ಅದಲ್ಲ. ಅದಲ್ಲ ಅಂತ ಅಂದ್ರೆ ಈ ಕನಕದಾಸರನ್ನ ಕುರಿತಂತ ಚಿಂತನೆಗಳು, ಚರ್ಚೆಗಳು ಇತ್ಯಾದಿಗಳೆಲ್ಲವೂ ಕೂಡ ಸ್ಥಳೀಯದಿಂದ ಉದ್ಭವ ಆದವು ವ್ಯಾಪಿಸ್ಬೇಕು. ವ್ಯಾಪಿಸೋದಕ್ಕೆ ನನ್ನ ಹತ್ತಿರ ಶಕ್ತಿ ಇದೆ. ನಿಮಗೆ ತಾಕತ್ತಿದ್ರೆ ನನ್ನ ವ್ಯಾಪಿಸಿ ಅಂತ ಹೇಳಿ ಕನಕದಾಸ ನಮಗೆ ಹೇಳ್ತಾ ಇದಾನೆ.

ಹಿ.ಶಿ. ರಾಮಚಂದ್ರೇಗೌಡ್ರು ಒಂದು ಮಾತನ್ನ ಹೇಳಿದ್ರು. ಸಾಂಸ್ಕೃತಿಕ ರಾಜಕಾರಣದಲ್ಲಿ ಚಿಕ್ಕಣ್ಣ ಆ ಅಧ್ಯಯನ ಪೀಠದಲ್ಲಿರೋದು ಸೇರುತ್ತೆ ಅಂತ ಹೇಳಿದ್ರು. ಇದು ನನ್ನ ವೈಯಕ್ತಿಕ ಆಗುತ್ತದೆ. ಹೇಳ್ಬೇಕೋ ಬೇಡ್ವೋ ಗೊತ್ತಿಲ್ಲ. ನಾನೀಗ ನಿವೃತ್ತಿ ಹೊಂದಿದೀನಿ. ಕನ್ನಡ ಮತ್ತು ಸಂಸ್ಕೃತಿ ಇಲಾಖೇಲಿದ್ದೆ. ಆದರೆ ಈ ಅಧ್ಯಯನ ಕೇಂದ್ರವನ್ನ ಸ್ಥಾಪನೆ ಮಾಡೋ ಸಂದರ್ಭದಲ್ಲಿ ನನ್ನ ಕೇಳಿದ್ರು. ನೀನು ಈ ಅಧ್ಯಯನ ಕೇಂದ್ರಕ್ಕೆ ಬೇಕು ಅಂತ್ಹೇಳಿ. ನಾನು ಅಷ್ಟೊತ್ತಿಗೆ 35 ವರ್ಷ ಸರ್ವೀಸ್ ಮಾಡಿದ್ದೆ. ಹ್ಯಾಗೆ ಮಾಡಿದ್ದೆ ಅಂತ ಅಂದ್ರೆ ಒಂದು ರೀತಿಯ ಪದ ಕಟುವಾದದ್ದು ಅದು, ವಿಷಾದ ಇಲ್ಲ, ಅದು ಬಳಸ್ತೀನಿ. ಒಂದು ತರ ಗುಲಾಮ ತರದ ಕೆಲಸ ಮಾಡಿದ್ದೆ. ಯಾಕಂದ್ರೆ, ಒಪ್ಕೊಂಡ್ಹೋಗಿದ್ದದ್ದು. ಕನಕದಾಸ ನಾನು ಭಾಗವತನಾಗಿ ಬಾ ನೀನು ಅಂತ ಕರ್ದಿಲ್ಲ ಅಂತ ಬೆಳಗ್ಗೆ ಪ್ರಸ್ತಾಪ ಮಾಡಿದ ಹಾಗೆ ನಾನು ಸರ್ಕಾರಿ ಕೆಲಸವನ್ನ ಒಪ್ಕೊಂಡೇ ಹೋಗಿದ್ದೆ. ಹಾಗಾಗೇ ನಿಷ್ಠೆಯಿಂದ ನಾನು ಕೆಲಸ ಮಾಡ್ದೆ. ಪ್ರೀತಿಯಿಂದ ಕೆಲ್ಸ ಮಾಡ್ದೆ. ಆದ್ರೂ ಕೂಡ ಏನು ಮಾಡು ಅಂತ ಹೇಳ್ತಾರೋ ಅದನ್ನ ಮಾಡ್ಕೊಂಡು ಹೋಗಿದೀನಿ.

**ಹಿ.ಶಿ.ರಾ.**

ಗುಲಾಮರಾಗಿ ಮಾಡಿಲ್ಲ. ನಿಷ್ಠೆಯಿಂದ, ನಿಷ್ಠುರವಾಗಿ ಮಾಡಿದೀನಿ ಅಂತ ಹೇಳಿ.

**ಕಾ ತ ಚಿಕ್ಕಣ್ಣ**

ಅದರರ್ಥ ಏನಪ್ಪ ಅಂದ್ರೆ, ಆ ಚೌಕಟ್ಟಿನಲ್ಲಿ ನೀನು ಹಿಂಗೆ ಮಾಡ್ಬೇಕು, ಮಾಡು ಅಂತ ಹೇಳಿಸ್ಕೊಂಡು ಮಾಡ್ಕೊ ಬಂದೆನಲ್ಲ ಅದು ನನಗೆ ಸಾಕು, ಬೇಡ ಅನ್ನುವಂತದ್ದು ತುಂಬ ಸ್ಪಷ್ಟವಾಗಿ, ನಿಷ್ಠುರವಾಗಿ ಹೇಳ್ದೆ. ಟಿ.ಎನ್.ನಾಗರತ್ನ ಅವರು ಇಲ್ಲಿದ್ದಾರೆ. ನೀವು ಬಂದಿದ್ರಾ ಮೊದಲನೇ ಸಭೆಗೆ ಮೇಡಂ. ಅಲ್ಲಿ ಬರ್ಲಿಲ್ಲ. ಕೊನೆಗೆ ನೀನು ಫ್ರೀಯಾಗಿರು. ಫ್ರೀಯಾಗಿ ಯೋಚ್ನೆ ಮಾಡು, ನಿನ್ನ ಚಿಂತನೆ ಅಲ್ಲಲ್ಲೆ ವಿದ್ವಾಂಸರ ಜೊತೆ ಚರ್ಚೆ ಮಾಡೋದರ ಮೂಲಕ ಕಾರ್ಯಕ್ರಮಗಳನ್ನ ಇನ್ನೊಂದಷ್ಟು ಗಟ್ಟಿ ಮಾಡಿ, ಫ್ರೀ ಆಗಿ ಕೆಲಸ ಮಾಡೋಕೆ ನಿನ್ಗೆ ಬಿಡ್ತೀವಿ. ಕೆಲ್ಸ ಮಾಡು ಅಂದಿದಾರೆ. ಆದ್ರಿಂದ ನಾನು ಅದನ್ನು ಒಪ್ಕೊಂಡೆ. ಯಾಕೆ ಅಂದ್ರೆ 1987ರಲ್ಲಿ ಬಹುಶಃ ಕನಕದಾಸರ ಬಗ್ಗೆ ಆ ತನಕ ಆ ತರದ್ದೊಂದು ಪುಸ್ತಕ ಬಂದಿರ್ಲಿಲ್ಲ... ನೀವು ಹೆಸರು ಕೇಳಿರ್ಬೇಕು. ಕನಕ ಕಿರಣ ಅಂತೊಂದು ಪುಸ್ತಕ ತಂದ್ವಿ. ಕನಕದಾಸರ ಜೀವನ ಮತ್ತು ಸಾಹಿತ್ಯ ಕುರಿತಂತೆ ಒಂದು ವಿಮರ್ಶಾತ್ಮಕ ಗ್ರಂಥ. ಪ್ರೊ. ಸುಧಾಕರ್ ಅವರೂ ಕೂಡ ಲೇಖನ ಬರ್ದಿದಾರೆ. ಮತ್ತೆ ನಾಗರತ್ನ ಅವರೂ ಕೂಡ. ಆ ತರದವರದ್ದೆಲ್ಲರದ್ದೂ ಕೂಡ ಅದರಲ್ಲಿದೆ. ನನಗೆ ಅಲ್ಲಿಂದ ಕನಕದಾಸ ನನ್ನನ್ನ ಆಕರ್ಷಣೆ ಮಾಡ್ದ. ಹಾಗಾಗಿ ಇಲ್ಲಿ ಜಾತಿ ಪ್ರೇಮದಿಂದಾಗಿ ಮತ್ತು ಆತರ ವಿಚಾರ ಮಾಡೋದೇನೇ ಏನೋ ಒಂಥರ ಗಿಲ್ಟ್ ಕಾಡ್ತದೆ. ಅದಲ್ಲ. ಹಾಗಾಗಿ ಹಾಗೆ ನಾನು ಕನಕದಾಸರ ಬಗ್ಗೆ ಪ್ರೀತಿ ಬೆಳೆಸಿಕೊಂಡದ್ದಕ್ಕೋಸ್ಕರ ಒಂದು ಮತ್ತು ನನಗೆ ನನ್ನ ಕೆಲಸಗಳಿಗೆ ಇವರು ಫ್ರೀ ಬಿಡ್ತಾರೆ ಅಂತ್ಹೇಳಿ ಅವರಿಂದ ನನಗೆ ವಚನ ಸಿಕ್ಕಿದ್ದಕ್ಕೋಸ್ಕರ ಈ ಸಾಂಸ್ಕೃತಿಕ ರಾಜಕಾರಣಕ್ಕೆ ನಾನು ತಲೆ ಒಡ್ಡಿದೆ. ಇದಿಷ್ಟು ಹೇಳಿ ಸ್ನೇಹಿತರೇ ಕೊನೆಯದಾಗಿ ನಾನು ಹೇಳುವುದು ಏನು ಅಂತ ಅಂದ್ರೆ, ಈ ಕನಕದಾಸರು ನಾವು ಈಗಾಗ್ಲೇ ಬೆಳಗ್ಗೆಯಿಂದ ಚರ್ಚೆ ಮಾಡಿದೀವಿ, ಭಕ್ತ ಅಥವಾ ಸಂತ ಅಂತ ಕರೆಯೋರು ಕರೀರಿ. ಅದಕ್ಕೆ ನಾನು ಭಕ್ತ, ಸಂತ ಅನ್ನೋದಕ್ಕೆ ಅತ್ಯಂತ ಶ್ರೇಷ್ಠ ಕೃತಿ ಯಾವುದು ಅಂದ್ರೆ ಹರಿಭಕ್ತಿ ಸಾರ. ತಮಗೆಲ್ಲರಿಗೂ ಗೊತ್ತಿದೆ. ಅದಕ್ಕೆ ಅಂದ್ರೆ ದೀನ ನಾನು ಸಮಸ್ತ ಲೋಕಕೆ ಇತ್ಯಾದಿ ಇತ್ಯಾದಿ. ಹಾಗೆ ಎಲ್ಲವನ್ನೂ ಒಪ್ಪಿಸ್ಕೋಬಿಡ್ತಾನೆ ನಂದೇನು ಅಲ್ಲ ಅಂತ ಹೇಳ್ತಾನೆ ಆತ. ಹಾಗೆ ಹೇಳಿದ ಮೇಲೆ ಪ್ರತೀ ಪದ್ಯಗಳಲ್ಲಿ ಅವನು ಕೊನೇಲಿ ಒಂದು ಮಾತು ಹೇಳ್ತಾನೆ. ನನಗದು ಬಹಳ ಕಾಡಿದೆ. ರಕ್ಷಿಸು ನಮ್ಮನನವರತ. ರಕ್ಷಿಸು ನನ್ನನ್ನ ಅನವರತ ಅಂತ ಕೇಳ್ತಾ ಇಲ್ಲ ಅವನು. ರಕ್ಷಿಸು ನಮ್ಮನ್ನು ಅನವರತ. ಕನಕದಾಸರ ಮೆಸೇಜ್ ಇದ್ಯಲ್ಲ ಇದು ಲೋ ಅಯ್ಯಾ ನೀನಿದ್ರೆ, ದೇವಾ ನೀನಿದ್ರೆ ನನ್ನೊಬ್ಬನ್ನಲ್ಲ ಬದುಕಿಸಬೇಕಾಗಿರೋದು ನನ್ನ ಸಮೂಹ ಇದೆಯಲ್ಲ, ಸಮೂಹ ಅಂದ್ರೆ ಇಲ್ಲಿ ಜಾತಿ, ಜಾತಿ ಅನ್ನೋ ಅರ್ಥ ಅದಲ್ಲ, ಈ ಸಮುದಾಯ ಇದ್ಯಲ್ಲ, ಈ ಸಮಾಜ ಇದ್ಯಲ್ಲ ಇದೆಲ್ಲನೂ ಕೂಡ ನೀನು ರಕ್ಷಿಸು ಅನ್ನುವಂಥಾದ್ದು ಒಂದು ಛಾಯೆ ನನಗೆ ಸಿಕ್ಕಿದ್ದು. ಮತ್ತೊಂದು ಛಾಯೆ ಯಾವ್ದು ಅಂತ ಅಂದ್ರೆ ಅವನು ಈ ದೇಹ ಬೇಡ, ಏನೂ ಬೇಡ ನನ್ನನ್ನ ಕರ್ಕೊಂಬಿಡು ಅಂತ ಹೇಳ್ತಾನಲ್ಲ ಹಂಗೆ ಹೇಳೋದರ ಮೂಲಕನೂ ಕೂಡ ಅವನು ಇನ್ನೊಂದು ಹೇಳ್ತಾನೆ, ರಕ್ಷಿಸು ನಮ್ಮನ್ನ ಅಂತ ಅಂದ್ರೆ ನನ್ನ ದೇಹ ಇದೆಯಲ್ಲ– ದೇಹದ ಪ್ರೀತಿಯನ್ನ ಆ ಕನಕದಾಸ ಬಿಟ್ಟಿಲ್ಲ. ಅಂದ್ರೆ ಸ್ಥಿರವಾದ, ಯೋಗ್ಯವಾದ, ಒಳ್ಳೆಯ ಶಾಶ್ವತವಾದಂಥ ಈ ಕಾರ್ಯವನ್ನು ರಕ್ಷಿಸು. ಕೆಟ್ಟದ್ದನ್ನಲ್ಲ. ಅಂದ್ರೆ ಇವತ್ತು ಕನಕದಾಸ ಬೇರೆ ಬೇರೆ ಆ್ಯಂಗಲ್‌ಗಳಿಂದ ಯೋಚನೆ ಮಾಡ್ಲಿಕ್ಕೆ ಅವಕಾಶ ಮಾಡಿಕೊಡ್ತಾ ಇದಾನೆ. ಅಷ್ಟು ಸ್ಕೋಪ್ ಇದೆ ಅನ್ನುವಂಥದ್ದು ಈತನ ಹೇಳಿಕೆ. ಅಂದರೆ ಆ ತರದ ಭಕ್ತಿಯಲ್ಲೂ ಕೂಡ ಅವನು ನಂದೆಲ್ಲ... ನಾನು ಬೆಳಗ್ಗೆ ಹೇಳ್ತಾ ಇದ್ದೆ ಏನು... ಮಣ್ಣಿನಲ್ಲಿ ಬಂದಿಹ ದೇಹವ ಮಣ್ಣುಗೂಡಿಸಬೇಡ. ಅಲ್ಲ, ಹುಟ್ಟಿರೋದು ಮಣ್ಣಿನಿಂದ ಅಂತ ಆದ್ರೆ ಅಲ್ಲಿ ಸೇರಿಸ್ಬೇಡ ಅಂತ. ಮನುಷ್ಯ ಪ್ರಯತ್ನಕ್ಕೆ ಏನೂ ಇಲ್ಲ ಅಂತಾಗೋಯ್ತು. ಅಲ್ಲಿ ನಮ್ಮ ಸೋಲಿದೆ. ಕನಕದಾಸನ ಸೋಲು ಅಲ್ಲಿಲ್ಲ ಇರೋದು ಹಂಗಂತ ಹೇಳ್ತಾನೆ ಇದನ್ನ ಒಪ್ಕೊಳ್ತಾನೇ ಹೀಗೇಳ್ತಾನೆ. ರಕ್ಷಿಸು ನಮ್ಮನನವರತ ಅಂತ ಅಂದ್ರೆ ನನ್ನ ದೇಹಾನ ನಾನು ಪ್ರೀತಿಸ್ತಾ ಇದೀನಿ. ಎಂಥಾ ದೇಹ ಬೇಕು? ಎಂಥಾ ಕಾಯ ಬೇಕು? ಎಂಥಾ ಬದುಕು ಬೇಕು ಅಂತ ಅಂದ್ರೆ ಶುದ್ಧವಾದ, ಚಿರವಾದ, ಒಳ್ಳೆಯ, ಒಳ್ಳೆಯ ಸಮಾಜವನ್ನ ಕೊಡುವಂತ ಈ ದೇಹವನ್ನ ನೀನು ಕಾಪಾಡು. ಕಾಪಾಡೋದು ನಿನ್ನ ಜವಾಬ್ದಾರಿ ಅಂತ ಹೇಳ್ತಾರೆ. ಬಹುಶಃ ಕನಕದಾಸನ ಹಿರಿಮೆ, ಗರಿಮೆ ಇಷ್ಟಿದೆ. ಅಷ್ಟೇ ಅಲ್ಲ ಸಾಕಷ್ಟು ಮಿತಿಗಳೂ ಕೂಡ ಇವೆ ಅನ್ನೋ ಅಂಥದನ್ನ ನಾವು ಮರೆಯೋ ಅಗತ್ಯ ಇಲ್ಲ, ಮರೀಬೇಕಾಗಿಲ್ಲ. ಇತಿ–ಮಿತಿಗಳ

ನಡುವೆಯೂ ಕೂಡ ಅವನ ಒಳ್ಳೆಯ ಕಾಂಟ್ರಿಬ್ಯೂಷನ್ಸ್ ಏನಿದೆ ಅದನ್ನೆಲ್ಲಾ ಚರ್ಚೆ ಮಾಡೋಣ. ಇವತ್ತು ನಾನು ಮೈಸೂರಿನಲ್ಲಿ ಒಂದು ಇಂಥ ಚಿಂತಕರ ನಡುವೆ ಕನಕದಾಸರನ್ನ ಇಟ್ಟು ಚರ್ಚೆ ಮಾಡೋಣ ಅಂತ್ಹೇಳಿ ಅಂದ್ಕೊಂಡಿದ್ನಲ್ಲ, ನಿಜ ಹೇಳ್ತಾ ಇದೀನಿ– ನನಗೆ ಖುಷಿ ಆಗಿದೆ. ಒಳ್ಳೆ ವಿದ್ವಾಂಸರು ಒಳ್ಳೆ ವಿಷಯವನ್ನ ಎತ್ತಿದಾರೆ. ಅಷ್ಟೆ ಸಮರ್ಥವಾದಂಥ ಒಂದಷ್ಟು ಚಿಂತನೆಗಳನ್ನ ನೀವು ವಿನಿಮಯ ಮಾಡ್ಕೊಂಡಿದೀರಿ. ಹಾಗಾಗಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರದ ಪರವಾಗಿ ನಿಮ್ಮೆಲ್ಲರಿಗೂ ಕೂಡ ಧನ್ಯವಾದಗಳು.

## ಕವಲು – ಮೂರು

## ಕನಕದಾಸರ ಸಾಮಾಜಿಕ ಸಂವೇದನೆಯ ನೆಲೆಗಳು
## (ಚಿಂತನಾ ಗೋಷ್ಠಿ) ಬೀದರ

1. **ಕನಕ–ವರ್ತಮಾನದ ನಿರೂಪಣೆಗಳು**
2. **ವಿಶ್ವಸಂಸ್ಥೆಯ ಸಂವಿಧಾನ ಮತ್ತು ಕನಕದಾಸರು**
3. **ಕನಕದಾಸರ ಕಾರ್ಪಣ್ಯ**
4. **ಈತನೀಗ ವಾಸುದೇವನು–ಕನಕದಾಸರ ಒಂದು ಕೀರ್ತನೆ**
5. **ನಳ ಚರಿತ್ರೆ–ವಸ್ತು ಶೈಲಿಯ ವಿಶಿಷ್ಟತೆ**

## ಕನಕ : ವರ್ತಮಾನದ ನಿರೂಪಣೆಗಳು

n **ಡಾ. ಹೆಚ್. ಜಯಪ್ರಕಾಶ್ ಶೆಟ್ಟಿ**

ಇಂದಿನ ಈ ಗೋಷ್ಠಿಯಲ್ಲಿ ಕನಕನನ್ನು ಕುರಿತ ವರ್ತಮಾನದ ನಿರೂಪಣೆಗಳನ್ನು ಪ್ರಸ್ತಾಪಿಸುವ ಮೊದಲಿಗೆ, ವರ್ತಮಾನವೆಂದು ನಾವು ಗಟ್ಟಿಯಾಗಿ ನಂಬಲೇಬೇಕಾದ ನಮ್ಮ ಸುತ್ತಣ ವರ್ತಮಾನದಿಂದ ಕನಕನನ್ನು ಬೇರೆಯಾಗಿಸಿಕೊಂಡು ಚರ್ಚಿಸಲಾಗದು. ಅಂದರೆ ನಮ್ಮ ಸುತ್ತಲೇ ಇಂದು ನಿನ್ನೆ ನಡೆದ ಘಟನೆ, ಬೆಳವಣಿಗೆಗಳಿಂದ ನಮ್ಮನ್ನು ಕತ್ತರಿಸಿಕೊಂಡು ಕನಕನ ಕುರಿತಾದ ನಿರೂಪಣೆಗಳ ವೈವಿಧ್ಯದ ಕುರಿತು ಮಾತನಾಡುವುದು ಸೋಗಲಾಡಿತನವಾಗುತ್ತದೆ. ಅದೇ ಸಂದರ್ಭದಲ್ಲಿ ನಮ್ಮದೇ ಕನಕನನ್ನು ನಮಗೆ ತೋರಿಸಿಕೊಡುತ್ತಲೇ ಬಂದ ಚರಿತ್ರೆಯ ಕರುಳಬಳ್ಳಿಯನ್ನೂ ಜತನದಿಂದ ಕಾಪಿಟ್ಟುಕೊಳ್ಳುತ್ತಲೇ ನೆಲದ ದನಿಗೆ ಹತ್ತಿರವಾಗುವ ಕನಕನೇನಾದರೂ ನಮಗೆ ಲಭ್ಯವಾಗಬಲ್ಲನೇ ಎಂಬುದು ಪ್ರಾಯಶಃ ನಮ್ಮ ಇಡಿಯ ಗೋಷ್ಠಿಯ ಆಶಯವೆಂದೇ ನಾನು ಭಾವಿಸುತ್ತೇನೆ. ಹೀಗೆ ಹೇಳುವಾಗ ನಮ್ಮ ಸುತ್ತಲಿನ ಎರಡು ಘಟನೆಗಳನ್ನು ದಾಖಲಿಸುವುದು ಈ ಸಂದರ್ಭದಲ್ಲಿ ಅತೀ ಜರೂರತ್ತಿನದೆಂದೇ ನಾನು ಭಾವಿಸುತ್ತೇನೆ. ಈ ಎರಡರಲ್ಲಿ ಒಂದು ಕೆಳಜಾತಿಯ ಜನ ಮೇಲ್ಜಾತಿಯವರು ಉಂಡುಬಿಟ್ಟ ಎಂಜಲಲ್ಲಿ ಹೊರಳುವುದನ್ನು ನಿಷೇಧಿಸುವಂತೆ ಒತ್ತಾಯಿಸಿ, ಆ ಮಡೆಸ್ನಾನದ ತಾಯಿಬೇರಿನಂತಿರುವ ಪಂಕ್ತಿಭೇದವನ್ನು ವಿರೋಧಿಸಿ ಕನಕನ ಜೊತೆಗೆ ಹೇಗೋ ಲಗತ್ತಾಗಿರುವ ಉಡುಪಿಯ ಮಠವೊಂದರ ಎದುರು ದುಡಿಮೆಗಾರರ ಮುಖವಾಣಿ ಎನಿಸಿದ ರಾಜಕೀಯ ಪಕ್ಷವೊಂದರ ನೇತಾರಿಕೆಯಲ್ಲಿ ನಡೆದ ಪ್ರತಿಭಟನೆ ಮತ್ತು ಅದು ಆ ಸಂದರ್ಭದಲ್ಲಿ ನಡೆದ ಲಾಠಿಪ್ರಹಾರಕ್ಕೆ ಸಂಬಂಧಿಸಿದುದು. ಇನ್ನೊಂದು ದಕ್ಷಿಣ ಕನ್ನಡದ ಮತ್ತೊಂದು ಮೂಲೆಯಲ್ಲಿ ಊರ ಯುವಕರು ಅತ್ಯುತ್ಸಾಹದಿಂದ ಭಾಗವಹಿಸಿ ಆಗುಗೊಳಿಸಿದ ದೇಗುಲವೊಂದರ ದೈವೀಕಾರ್ಯಕ್ಕೆ ಸಂಬಂಧಿಸಿದುದು. ನಾವೆಲ್ಲರೂ ಒಂದೇ ಎಂದೇ ಕೂಗಿಕೊಳ್ಳುತ್ತಾ ಆಯೋಜಿಸಲಾದ ಬಯಲ ಭೋಜನದಲ್ಲಿ ಜಾತಿ ಶ್ರೇಷ್ಠರಿಗೆ ಊಟದ ಪ್ರತ್ಯೇಕ ಪಂಕ್ತಿಯೇ ನಡೆದು ನಾವೆಲ್ಲರೂ ಒಂದಲ್ಲ ಎಂಬ ಸ್ಪಷ್ಟ ಸಂದೇಶವೇ ಹೊರಬಿದ್ದಿತಲ್ಲಿ. ಈ ಮೂಲದಿಂದಲೇ ಸಮರೋತ್ಸಾಹದ ಗಿಳಿಪಾಠವನ್ನು ಕಲಿತು ಸ್ವಾಭಿಮಾನ ಪ್ರಕಟಣೆಯ ನೈತಿಕ ಸೊಗಸನ್ನೇ ಬತ್ತಿಸಿಕೊಂಡು, ಸೇವೆಗೆಂದೇ ಮೀಸಲಾದ ನಮ್ಮದೇ ಅಣ್ಣ–ತಮ್ಮಂದಿರು ಅಸಹಾಯಕವಾಗಿ ಗೊಣಗಿಕೊಂಡರು. ಈ ಸಂಬಂಧವಾದ ವಿವರವಾದ ಸುದ್ದಿಯನ್ನು ಗಮನಿಸಿದ್ದೇವೆ (ಅದು ಶರ್ಟ್ ತೆಗೆದು ಉಣ್ಣುವ ಮನಸ್ಸುಳ್ಳವರ ಪಂಕ್ತಿಯಷ್ಟೇ ಎಂಬ ಸಮಜಾಯಿಷಿಯೂ (18/103) ಈ ದಿನದ ಪತ್ರಿಕೆಯಲ್ಲಿಯೇ ಇದೆ. ಆದರೆ ಕೃಷಿಯೇ ಮೊದಲಾದ ದುಡಿಮೆಯ ಜಗತ್ತಿಗೆ ಸೇರಿದ ಜನ ಮೈತುಂಬ ಬಟ್ಟೆ ಹಾಕುವ ದಿನಗಳು ವರ್ಷಕ್ಕೆ 30ನ್ನು ಮೀರುವುದಿಲ್ಲ ಎಂಬ ಸತ್ಯವನ್ನು ಇದಕ್ಕೆದುರಾಗಿ ಹಿಡಿಯುವ ಹಕ್ಕನ್ನು ಊಳಿಗದ ಹೊರೆಹೊತ್ತ ಆ ಯುವಕರು ಉಳಿಸಿಕೊಂಡಂತಿಲ್ಲ!).

ನಾವು ಬದುಕಿರುವ ಈ ಕಾಲಘಟ್ಟದ ಇನ್ನೊಂದು ಬೆಳವಣಿಗೆಯನ್ನೂ ನಾವಿಲ್ಲಿ ಮೆಲುಕು ಹಾಕಿಕೊಳ್ಳಬೇಕಿದೆ. ಅದು ಆಹಾರ ಕ್ರಮಗಳನ್ನು ವೈರುಧ್ಯದ ನೆಲೆಯಲ್ಲಿ ಜೋಡಿಸಿಕೊಳ್ಳುವಂತೆ ಪ್ರೇರೇಪಣೆ ನೀಡುವ ಮೂಲಕ ವೈಷಮ್ಯದ ಬಿತ್ತುವಿಕೆಯನ್ನು

ಆಗುಗೊಳಿಸುತ್ತಿರುವ ಬೆಳವಣಿಗೆ. ಆಹಾರವನ್ನು ಗುಣದೊಂದಿಗೆ, ಜಾತಿಯೊಂದಿಗೆ, ಧರ್ಮದೊಂದಿಗೆ ಜೋಡಿಸಿ ಶ್ರೇಷ್ಠ–ಕನಿಷ್ಠ, ಸಾತ್ವಿಕ–ತಾಮಸ, ಸಂತರ್ಪಣ–ಅಕ್ರಮಣ, ಪುರಸ್ಕೃತ–ಬಹಿಷ್ಕೃತದ ವಿರುದ್ಧ ರೂಪಗಳಲ್ಲಿ ಸ್ಥಾಯೀಗೊಳಿಸಿ ಸಾಮಾಜಿಕ ಶ್ರೇಣೀಕರಣದ ಜೊತೆಗೆ ಪರಸ್ಪರ ನಂಬಿಕೆ ಇಲ್ಲದ ಸಾಮಾಜಿಕ ಕಂದರವನ್ನು ಸೃಷ್ಟಿಸಿಕೊಡುತ್ತಿರುವ ಬಗೆ ಆತಂಕಕಾರಿಯಾದುದು. ಮಾತು ಕಲಿಯಲೆಂದು ಶಾಲೆಯ ಮೆಟ್ಟಿಲೇರುವ ಬಡಮಕ್ಕಳ ಬಾಯಿಗೆ ಸತ್ವಯುತವಾದ ಆಹಾರವಾದೀತೆಂದು ಸರ್ಕಾರ ಇಕ್ಕಲು ಹೊರಟ ಮೊಟ್ಟೆಯ ತುತ್ತನ್ನೇ ತಾಮಸ ಆಹಾರದ ಹುಯ್ಯಲೆಬ್ಬಿಸಿ ಕಸಿದು ಇಲ್ಲವಾಗಿಸಿದ ಆಹಾರ ರಾಜಕಾರಣದ ಕಾಲವಿದು. ಅಕ್ಕಿಯ ಬಣ್ಣ, ಅನ್ನವಾಗುವ ಧಾನ್ಯದ ಮೂಲವನ್ನಾಧರಿಸಿಯೂ ಶ್ರೇಣೀಕರಣಗಳು ಚಾಲನೆಯಲ್ಲಿರುವ ಕಾಲವೂ ಹೌದು. ಹಲವರಿಗಿಂತ ಕೆಲವರಷ್ಟೇ ತಿನ್ನುವುದನ್ನೇ ಆರೋಗ್ಯಕರ ಆಹಾರ ಮಾದರಿಯೆಂಬ ಸಾಮಾಜಿಕ ಹಾಗೂ ವೈಜ್ಞಾನಿಕ ಸತ್ಯವನ್ನೂ ಉತ್ಪಾದಿಸಿಕೊಂಡು ಬರಲಾಗುತ್ತಿದೆ. ಇದರ ಜೊತೆಗೆ ಆಳುವ ಕಾರಣಕ್ಕಾಗಿ ನೆಲದ ಭೌಗೋಳಿಕ ಗಡಿರೇಖೆಗಳನ್ನು ರಾಷ್ಟ್ರವೆಂಬ ನಿರ್ವಚನದಡಿಗೆ ವಿವರಿಸಿಕೊಡಲೆಂದು ಮೈದಳೆದ 'ನೇಷನ್‌ಸ್ಟೇಟ್' ಪರಿಕಲ್ಪನೆ ಸಮುದಾಯಗಳ ನಡುವಿನ ಇನ್ನೊಂದು ಬೇಲಿಯಾಗಿ ಪರಿಣಮಿಸುತ್ತಿದೆ. ನೆಲದ ಚರಿತ್ರೆಗೆ ಸಂಬಂಧಿಸಿ ಕಟ್ಟಿಕೊಳ್ಳಲಾಗುತ್ತಿರುವ ರಾಷ್ಟ್ರ–ದೇಶದ ಕುರಿತಾದ ಸಂಕಥನಗಳು ವರ್ತಮಾನದ ಸಮುದಾಯವನ್ನು ವಿಭಜಿಸಿ ವಿವರಿಸಿಕೊಳ್ಳಲು ಒತ್ತಾಯಿಸುತ್ತಿವೆ.

ಈ ಹಿನ್ನೆಲೆಯಲ್ಲಿ ಕನಕನ ಕಾಲದ ಸಾಂಸ್ಕೃತಿಕ ಬಿಕ್ಕಟ್ಟುಗಳಿಗೂ ನಮ್ಮ ಕಾಲದ ಸಾಂಸ್ಕೃತಿಕ ಬಿಕ್ಕಟ್ಟುಗಳಿಗೂ ನಡುವೆ ಇರುವ ಸಾಮ್ಯತೆ ಯಾವುದು? ಜಾತಿ–ಧರ್ಮಗಳ ಧ್ರುವೀಕರಣ ಸಂಭವಿಸುತ್ತಿರುವ ಈ ಕಾಲಘಟ್ಟದಲ್ಲಿ ಕನಕನನ್ನು ಸಮಕಾಲೀನಗೊಳಿಸಿ ಕೊಳ್ಳುವ ಬಗೆ ಹೇಗೆ? ಎಂಬ ಪ್ರಶ್ನೆಯೇ ಮೇಲಣ ಸಂಗತಿಗಳನ್ನು ಯಾಕೆ ನೆನೆಪಿಸಿ ಕೊಳ್ಳಬೇಕಾಗಿದೆ ಎನ್ನುವುದಕ್ಕೆ ಉತ್ತರವೂ ಆಗುತ್ತದೆ. ವಾಸ್ತವಿಕವಾಗಿ ಈ ಮೇಲಣ ಸಂಗತಿಗಳೇ ಕನಕನನ್ನು ನಾವು ಮತ್ತೆ ಮತ್ತೆ ನೆನಪಿಸಿಕೊಳ್ಳುತ್ತಲೇ ಬರುತ್ತಿರುವ ಕಾರಣಗಳ ಹಿಂದಿನ ಸತ್ಯಗಳು. ಶ್ರೇಷ್ಠತೆ ಮತ್ತು ಪ್ರತ್ಯೇಕತೆಯನ್ನು ಅತ್ಯಂತ ಅಚ್ಚುಕಟ್ಟಾಗಿ ಶತಶತಮಾನಗಳಿಂದ ಪರಿಪೋಷಿಸಿಕೊಂಡು ಬರಲಾಗುತ್ತಿರುವ ಮಾದರಿಗಳಿವು. ಈ ಮಾದರಿಗಳೊಂದಿಗೆ ಕನಕನ ಮುಖಾಮುಖಿಯನ್ನು ಯೋಚಿಸುವುದರಲ್ಲಿ, ಉಣ್ಣುವ ಅನ್ನ ಮತ್ತು ತಾಣದ ಪ್ರತ್ಯೇಕತೆಯೊಂದಿಗೆ ಉಚ್ಚ–ನೀಚ ಎನ್ನುವ ದೇಹಾಧಾರಿತ ಕುಲಾಚರಣೆಯನ್ನು ಚಾಲ್ತಿಯಲ್ಲಿರಿಸಿದ ಸಾಮಾಜಿಕ ಅಧಿಕಾರ ಕೇಂದ್ರಕ್ಕೆ ಕನಕನದು ಆತ್ಮ–ಜೀವಗಳ ಕುಲ ಯಾವುದು? ಎನ್ನುವ ತರ್ಕಬದ್ಧ ಪ್ರಶ್ನೆ. ಅನ್ನದ ಹೆಸರಿನಲ್ಲಿ ತರತಮವನ್ನೆಣಿಸಿದ ಭೇದಕಾರರಿಗೆ ಭತ್ತ–ರಾಗಿಗಳೆಂಬ ಆಹಾರ ಬಗೆಗಳ ಸಂವಾದದ ಮೂಲಕವೇ ಒಡ್ಡಿದ ಸಾಂಸ್ಕೃತಿಕ ಪ್ರತಿರೋಧ. ನೋಯುವ ಹಲ್ಲಿಗೆ ತುಡಿಯುವ ನಾಲಗೆಯಂತೆ ಕನಕನನ್ನು ಹೀಗೆ ಮತ್ತೆ ಮತ್ತೆ ಮುಖಾಮುಖಿಯಾಗುತ್ತಲೇ ಬರುತ್ತಿರುವುದು ಆತ ಕುದಿಗೊಂಡ ಈ ಸಾಮಾಜಿಕ ತರತಮಕ್ಕಾಗಿ.

**–2–**

ಮೂಲಭೂತವಾಗಿ ಭಕ್ತಿಚಳುವಳಿಯ ಮೂಲಧಾತುವಾಗಿರುವುದು ಹೊಸ ಮನುಷ್ಯನ ಪರವಾದ ಹುಡುಕಾಟ. ಅದು ವ್ಯವಸ್ಥೆಯನ್ನು ಮೀರುವ ಯತ್ನವೆನ್ನಲಾಗುತ್ತದೆ. ಆದರೆ ಕರ್ನಾಟಕದ ಮಟ್ಟಿಗಂತೂ ವೈಷ್ಣವ ಪಂಥೀಯ ಭಕ್ತಿಚಳುವಳಿಯ ಹುಟ್ಟಿನ ಕಾಲಘಟ್ಟದ ಚಾರಿತ್ರಿಕ ವಾಸ್ತವತೆ ಮತ್ತು ಮರುಪ್ರಸಕ್ತಿಗಾಗಿ ಅದು ಆಯ್ದುಕೊಳ್ಳುವ ಪುರಾಣ ಪರಿಕರಮೂಲಗಳು ಈ ಮಾತಿಗೆ ಪೂರಕವಾಗಿಲ್ಲ. ಮಧ್ಯಕಾಲೀನ ಸಂದರ್ಭದ ಭಕ್ತಿಚಳುವಳಿಯ ಉಪಉತ್ಪನ್ನದಂತೆ ಬಂದ ಭಾಗವತ ಪರಂಪರೆಯ ಭಕ್ತಿಕಾವ್ಯಗಳೂ ಇದನ್ನೇ ಸಮರ್ಥಿಸುತ್ತವೆ. ಯಾಕೆಂದರೆ ಭಕ್ತಿಚಳುವಳಿಯ ಭಾಗವೇ ಆದ ಮಧ್ಯಕಾಲೀನ ಸಂದರ್ಭದ ಈ ಕಾವ್ಯಗಳು ರಚನೆಯಾದ ಆವರಣ, ಅವುಗಳ ವಸ್ತು ಸ್ವರೂಪಗಳು ಹಾಗೂ ತಮ್ಮ ಪ್ರಸಾರಕ್ಕಾಗಿ ಅವು ಸಾಂಸ್ಕೃತಿಕ ಮಾಧ್ಯಮಗಳನ್ನು ಬಳಸಿಕೊಂಡ ರೀತಿಗಳು ಒಟ್ಟು ಚಳುವಳಿಯ ಸಾಂಪ್ರದಾಯಿಕ ಆಶಯವನ್ನೇ ಧ್ವನಿಸುತ್ತವೆ. ಈ ಹಿನ್ನೆಲೆಯಲ್ಲಿ ಯಾವ ಸ್ವರೂಪ ಮತ್ತು ಉದ್ದೇಶದಲ್ಲಿ ಈ ಕಾಲದ ಕಾವ್ಯಗಳು ರಚನೆಯಾದುವು? ಈ ಕಾವ್ಯಗಳು ಎಂತಹ ಆವರಣಗಳಲ್ಲಿ ಹುಟ್ಟಿಕೊಂಡವು? ಇವು ಆಯ್ದುಕೊಂಡ ವಸ್ತುಗಳಾವುವು? ಈ ವಸ್ತುಗಳನ್ನು ಜನಸಮುದಾಯವನ್ನು ತಲುಪಿಸುವುದಕ್ಕಾಗಿ ಸಮುದಾಯದ ನಡುವಿನ ಯಾವ್ಯಾವ ಸಾಂಸ್ಕೃತಿಕ ಮಾಧ್ಯಮಗಳನ್ನು ಬಳಸಿಕೊಳ್ಳಲಾಯಿತು? ಇತ್ಯಾದಿ ಪ್ರಶ್ನೆಗಳು ಮುಖ್ಯವಾಗುತ್ತವೆ. ಹೀಗೆ ಗಮನಿಸುವಲ್ಲಿ ಗೇಯ ಪ್ರಧಾನ ಚುಟುಕು ರೂಪಗಳಾದ ಕೀರ್ತನೆಗಳು ಹಾಡಿನ ಮೂಲಕವೂ, ಭಾಗವತ ಕಾವ್ಯಗಳು ಗಮಕದ ಮೂಲಕವೂ ತಲುಪಲು ಹವಣಿಸಿದ್ದು ಕಾಣಿಸುತ್ತದೆ. ಇವುಗಳ ಜೊತೆಗೆ ಜನಪದ ಮಾದರಿಗಳಾದ ಯಕ್ಷಗಾನ, ದೊಡ್ಡಾಟದಂತಹ ರಂಗಮಾಧ್ಯಮದ ಮೂಲಕ ರಾಮಾಯಣ–ಭಾರತಗಳೆಂಬ ವೈದಿಕ ಕಾವ್ಯವಸ್ತುಗಳ ಮರು ನಿರೂಪಣೆ ಗೊಂಡ ಪ್ರಸಂಗಗಳು ಬಂದುದನ್ನು ಕಾಣುತ್ತೇವೆ. ಹೆಚ್ಚೂ ಕಡಿಮೆ ಇವೆಲ್ಲವೂ ಒಂದೇ ಮಾದರಿಯ ಕಥಾವಸ್ತುವನ್ನು ತಮ್ಮ ಉದ್ಯೋಗಕ್ಕಾಗಿ ಬಳಸಿಕೊಂಡಿವೆ. ಅವೆಲ್ಲವೂ ವಿಷ್ಣು ಕಥೆಗಳೇ ಆಗಿವೆ. ಭಕ್ತಿಚಳವಳಿಯ ಪ್ರಭಾವಲಯದಲ್ಲಿ ಯಾಕೆ ಈ ಎಲ್ಲ ಮಾದರಿಗಳಲ್ಲಿಯೂ ವಿಷ್ಣು ಕಥೆಗಳೇ ಸೃಷ್ಟಿಯಾದುವು? ಯಾಕೆ ರಾಮಾಯಣ, ಭಾರತ, ಭಾಗವತಗಳನ್ನೇ ಚಿಕ್ಕ–ದೊಡ್ಡ ರೂಪಗಳಲ್ಲಿ ಇಡಿಯ ಚಳುವಳಿ ಪುನರ್ ರೂಪಿಸುತ್ತಾ ಹೋಯಿತು? ಎಂಬ ಪ್ರಶ್ನೆಗಳನ್ನು ಇಲ್ಲಿ ನಾವು ಅಗತ್ಯವಾಗಿ ಕೇಳಿಕೊಳ್ಳಲೇಬೇಕಾಗುತ್ತದೆ.

ಗಮನಿಸಬೇಕಾದ ಸಂಗತಿಯೇನೆಂದರೆ ಮೇಲೆ ಹೇಳಲಾದ ಭಕ್ತಿಚಳುವಳಿ ಮತ್ತು ಭಾಗವತ ಪರಂಪರೆಯ ಕಥಾವಸ್ತುಗಳ ಪುನರುತ್ಪಾದನೆಯ ಕಾಲಘಟ್ಟ, ಕರ್ನಾಟಕದ ಸಾಂಸ್ಕೃತಿಕ ಸಂದರ್ಭದಲ್ಲಿ ಮಹತ್ತರ ಬದಲಾವಣೆ ಸಂಭವಿಸಿದ ಸಂಕ್ರಮಣೋತ್ತರ ಅವಧಿಯೆಂಬುದನ್ನು ಗಮನಿಸಬೇಕು. ವೈದಿಕತೆ ಅತಿ ಹೆಚ್ಚು ಸವಾಲುಗಳನ್ನು ಎದುರಿಸಿದ ಕಾಲಘಟ್ಟವಿದು. ತಂತ್ರ, ಬೌದ್ಧ, ಜೈನ, ಆದಿವಾಸಿ, ಜಾನಪದ ಮೊದಲಾದ ಅವೈದಿಕ ದರ್ಶನಗಳ ಗೆರಿಲ್ಲಾ ಹೊಡೆತಕ್ಕೆ ಸಿಕ್ಕು ಘಾಸಿಗೊಳ್ಳುತ್ತಿದ್ದ ವೈದಿಕತೆಗೆ, ಹೊಸದಾಗಿ ಪ್ರವೇಶ ಪಡೆದ ಇಸ್ಲಾಂ ಮತ್ತು ಬಹುಸಂಖ್ಯಾತ ತಳಜಾತಿಗಳನ್ನು ಒಂದು ಛತ್ರಿಯಡಿಗೆ ತಂದ ಶರಣ ಚಳುವಳಿಗಳು

ಕರ್ನಾಟಕದಲ್ಲಿ ಬಲವಾದ ಏಟನ್ನೇ ಕೊಟ್ಟಿದ್ದವು. ಜೈನಧರ್ಮ ಹಾಗೂ ಅನೇಕ ಶಮಣ ಧಾರೆಗಳ ಉಪಸ್ಥಿತಿಗಿಂತಲೂ ದೊಡ್ಡಪ್ರಮಾಣದಲ್ಲಿ ತಳಸಮುದಾಯಗಳ ದ್ರುವೀಕರಣದ ಯಶಸ್ಸು ಸಾಧಿಸಿದ ಶರಣ ಚಳುವಳಿ ವೈದಿಕತೆಯ ಬಿಕ್ಕಟ್ಟನ್ನು ಇನ್ನಷ್ಟು ತೀವ್ರಗೊಳಿಸಿತ್ತು. ಶರಣ ಚಳುವಳಿ ನಡೆದು ಹೋದ ತರುವಾಯದ ಸರಿಸುಮಾರಿಗೆ ವಿಜಯನಗರದ ಆಡಳಿತವೂ ಕುಸಿತ ಕಂಡು, ಸಹಜವಾಗಿಯೇ ವೈದಿಕತೆಗಿದ್ದ ಪ್ರಭುತ್ವದ ಬೆಂಬಲವೂ ಅಸ್ಥಿರಗೊಂಡಿತ್ತು. ಈ ಎಲ್ಲಾ ಸವಾಲುಗಳಿಂದ ಅಗ್ರಹಾರಗಳು ಅಸ್ತಿತ್ವವನ್ನು ಖಾತರಿಗೊಳಿಸಿಕೊಳ್ಳಬೇಕಾದ ಒತ್ತಡಕ್ಕೆ ಸಿಲುಕಿ ವೈದಿಕ ಸಂಪ್ರದಾಯ ಶರಣತೆ ಇನ್ನಷ್ಟು ಬಿಗಿಯಾಗತೊಡಗಿತ್ತು. ನಿಷ್ಠುರವಾಗತೊಡಗಿತ್ತು. ಶರಣ ಚಳುವಳಿಯ ಕಾರಣದಿಂದಾಗಿ ಕೆಳಜಾತಿ ಜನವರ್ಗಗಳನ್ನು ಸಂಘಟನೆಯ ಮೂಲಕ ಲಿಂಗಾಯತ ಮತವಾಗಿ ಒಂದು ಸದೃಢ ಬಲವಾಗಿ ತೆರೆದುಕೊಂಡುದರ ಪರಿಣಾಮ ಇಂದಿಗೆ ಹೆಚ್ಚು ಪ್ರಕಟವಾಗಿಯೇ ಗೋಚರವಾಗುತ್ತಿದೆ. ಲಿಂಗಾಯತರನ್ನು ಬದಿಗೆ ಸರಿಸಿ ಕರ್ನಾಟಕದ ರಾಜಕಾರಣವನ್ನು ಮಾಡಲಾಗದು ಎಂಬ ನೇರ ಎಚ್ಚರಿಕೆ ನಮ್ಮ ನೆರಳಿನಡಿಗೆ ತರುವಲ್ಲಿ ಯಶಸ್ವಿಯಾಗಿದ್ದು ಶರಣ ಚಳುವಳಿಯ ಚಾರಿತ್ರಿಕ ಕಾರಣದಿಂದ. ಇದು ಶೂದ್ರ ಸಮುದಾಯಕ್ಕೆ ಶಿವಸಂಸ್ಕೃತಿಯ ನೆಲೆಯಡಿಗೆ ಬಸವ ಚಳುವಳಿ ತುಂಬಿಟ್ಟ ಶಕ್ತಿ. ಇಂದಿನ ಪ್ರಜಾಪ್ರಭುತ್ವ ಯುಗದ ಮತಶಕ್ತಿಯಾಗಿ ಪರಿಣಮಿಸಿರುವ ಈ ಶರಣಕೂಟ ಅಂದಿಗೂ ದೊಡ್ಡ ಶಕ್ತಿಯಾಗಿಯೇ ಇತ್ತು. ಇಂದಿನ ಈ ರಾಜಕೀಯ ಶಕ್ತಿ ಸಂಚಯನದ ಚರಿತ್ರೆ ಶರಣ ಚಳುವಳಿಯ ಕಾಲಘಟ್ಟಕ್ಕೆ ವಿಸ್ತರಿಸಿಕೊಂಡಿದೆ ಎಂಬುದನ್ನು ಗಮನಿಸಿದಾಗ, ಆವೊತ್ತಿಗೆ ಸಾಂಪ್ರದಾಯಿಕ ಶಕ್ತಿಗಳು ಅನುಭವಿಸಿರಬಹುದಾದ ಬಿಕ್ಕಟ್ಟಿನ ಚಹರೆಗಳು ಸಹಜವಾಗಿಯೇ ಗೋಚರವಾಗುತ್ತವೆ. ಅಗ್ರಹಾರಗಳು ಇನ್ನಷ್ಟು ವೈದಿಕೀಕರಣಕ್ಕೊಳಗಾದ ಇಂತಹ ಕಾಲಘಟ್ಟದಲ್ಲಿಯೇ ಒದಗಿ ಬಂದ ವಿಷ್ಣುಕಥೆಗಳಿವು. ಅಂದಿಗೂ ಮತ್ತು ಇಂದಿಗೂ ಸಮಾನವಾಗಿ ಇಡಿಯ ದೇಶದ ವ್ಯಾಪಕ ಕ್ಯಾನ್‌ವಾಸ್‌ನಲ್ಲಿ ಶಿವಸಂಸ್ಕೃತಿಯ ದೇಶೀ ಪರಂಪರೆಯ ನೆಲೆಯನ್ನು ಅಭದ್ರಗೊಳಿಸಲು ವೈದಿಕರು ಬಳಸಿದ ಪ್ರಭಾವಶಾಲಿ ಆಯುಧಗಳೆಂದರೆ, ವಿಷ್ಣುಪಾರಮ್ಯದ ಆಡುಂಬೊಲವಾದ ಈ ಎರಡು ಮಹಾಕಾವ್ಯಗಳು. ಅನೇಕ ಸಣ್ಣ–ದೊಡ್ಡ ಸಮುದಾಯಗಳು ಕಾಪಿಟ್ಟುಕೊಂಡು ಬಂದಿದ್ದ ತಮ್ಮದೇ ಆದ ಸಮುದಾಯ ಸ್ಮೃತಿಯ ಮಹಾಕಾವ್ಯಗಳ ನೆಲೆಗಟ್ಟನ್ನು ಕದಲಿಸುವ ಕೆಲಸವನ್ನು ಇವು ಇಂದಿಗೂ ಮುಂದುವರಿಸಿವೆ. ಇದರಿಂದಲೇ ಅವುಗಳಿಗೆ ಪಾನ್ ಇಂಡಿಯನ್ ಆದ ಗುಣವೊಂದಿದೆ ಎಂದು ಸ್ಥಾಪಿಸಲು ಸಾಧ್ಯವಾಯಿತು. ಇದನ್ನು ಚರಿತ್ರೆಯ ವಿಕಾಸಗತಿಯಲ್ಲಿ ವೈದಿಕತೆ ಸಾಧಿಸಿದ ಯಶಸ್ಸೆಂದೇ ಗಮನಿಸಬೇಕಾಗುತ್ತದೆ. ಕನ್ನಡವನ್ನೂ ಒಳಗೊಂಡು ಇತರ ದೇಸೀ ಭಾಷೆಗಳಲ್ಲಿ ರಾಮಾಯಣ ಮತ್ತು ಭಾರತಗಳ ಲಿಖಿತ ಪುನರಾವೃತ್ತಿಗಳನ್ನು ಯಾರು ತಂದರು ಎಂಬ ಪ್ರಶ್ನೆಯನ್ನು ಹಾಕಿಕೊಂಡರೆ ಉತ್ತರಗಳು ಅಗ್ರಹಾರಕ್ಕೆ ಕರೆದೊಯ್ಯುತ್ತವೆ. ಕನ್ನಡದಲ್ಲಿ ಜೈನ ಪರಂಪರೆಯಿಂದ ಹೊರತಾದ ರೂಪದಲ್ಲಿ ರಾಮಾಯಣ–ಭಾರತಗಳ ಆವೃತ್ತಿಗಳಾವುವು ಎಂಬುದು ನಮ್ಮ ಕಣ್ಣ ಮುಂದೆಯೇ ಇವೆ. ಮಧ್ಯಕಾಲೀನ ಕನ್ನಡದ ಚರಿತ್ರೆಯವರೆಗೆ ಅಂದರೆ ಭಕ್ತಿಚಳುವಳಿಯ ಕಾಲಘಟ್ಟದವರೆಗೆ ಈ ಪ್ರಕ್ರಿಯೆ ಸಂಭವಿಸಲಿಲ್ಲ ಎಂಬುದನ್ನೂ ಗಮನಿಸಬೇಕು. ಇದೇ ಕಾಲಘಟ್ಟದ ಕನ್ನಡದ ಶೈವಕವಿಗಳ ಕಾವ್ಯವಸ್ತುವಿನ ಆಯ್ಕೆ–ನಿರಾಕರಣೆಯನ್ನು ಈ ಹಿನ್ನೆಲೆಯಲ್ಲಿಯೇ ಗಮನಿಸಬೇಕು. ಅದರಲ್ಲಿಯೂ ಹರಿಹರನಂತಹ ಕವಿಗಳು ಯಾವ ಪುರಾಣಕ್ಕೆ ವಲಸೆ ಹೋದರು, ಯಾವುದರ ಕುರಿತಾಗಿ ಸಲ್ಲದ ನಿರಾಕರಣೀಯ ಮಾದರಿಯೆಂಬ ಅತ್ಯುಗ್ರ ನಿಲುವನ್ನು ತಾಳಿದರೆಂಬುದನ್ನು ಗಮನಿಸಿಕೊಳ್ಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಹರಿಹರನಲ್ಲಿರುವ ಕನ್ನಡ ಪ್ರಜ್ಞೆಗೆ ವಿಶೇಷ ಮಹತ್ವವಿದೆ.

ಕರ್ನಾಟಕದ ಸಾಂಸ್ಕೃತಿಕ ಸಂದರ್ಭದಲ್ಲಿ ನಡೆದ ಈ ಬೆಳವಣಿಗೆಗಳಿಗೂ, ಮಧ್ಯಕಾಲೀನ ಯುಗದಲ್ಲಿ ವೈದಿಕ ಕವಿಗಳು ಪ್ರಚುರಗೊಳಿಸಿದ ಹರಿಕೀರ್ತನೆ ಮತ್ತು ಹರಿಕಥಾವಸ್ತುವುಳ್ಳ ಹಾಡುಗಬ್ಬಗಳಿಗೂ ನೇರ ಸಂಬಂಧವಿದೆ. ಶರಣ ಚಳುವಳಿ ಶಿವಸಂಸ್ಕೃತಿ ಹಿನ್ನೆಲೆಯಲ್ಲಿ ಕ್ರೋಢೀಕರಿಸಿದ ಬಲಕ್ಕೆ ಪ್ರತಿರೋಧವಾಗಿಯೇ ವೈದಿಕರು ದೇವಾಲಯದಂತಹ ಅಗ್ರಹಾರದ ನೆಲೆಗಳಿಂದ ವೈದಿಕ ಮೌಲ್ಯಗಳನ್ನು ನಿಸ್ಸಂಕೋಚವಾಗಿ ತುಂಬಿದ ವಿಷ್ಣು ಕಥನವನ್ನು ಪ್ರಸಾರಿಸಿದರು. ಮನುಸ್ಮೃತಿಯ ಅನೇಕ ಮೌಲ್ಯಗಳನ್ನು ಹಾಗೆ ಹಾಗೆಯೇ ತಂದರು. ಪ್ರಾಯಶಃ ವೈದಿಕರು ಅನುಭವಿಸಿದ ಸಾಂಸ್ಕೃತಿಕ ಬಿಕ್ಕಟ್ಟಿನಿಂದ ಪಾರಾಗಲು ಮತ್ತು ತಮ್ಮ ಅಧೀನ ಸಮುದಾಯಗಳ ಮೇಲಿನ ಹಿಡಿತವನ್ನು ಗಟ್ಟಿಗೊಳಿಸಿಕೊಳ್ಳಲು ಕಂಡುಕೊಂಡ ದಾರಿಗಳಿವು. ವಿಜಯನಗರ ಪತನಾನಂತರ ಇನ್ನಷ್ಟು ಬಿಕ್ಕಟ್ಟನ್ನು ಎದುರಿಸಿರಬಹುದಾದ ಈ ಸಮುದಾಯ ಶಿವಸಂಸ್ಕೃತಿಗೆ ಉತ್ತರಿಸಲು ಮೂರು ಮುಖ್ಯದಾರಿಗಳನ್ನು ಕಂಡುಕೊಂಡಂತಿದೆ–(1) ಅಕ್ಷರ ಕಾವ್ಯಗಳನ್ನು ಹಾಡುಗಬ್ಬದ ಧಾಟಿಯಲ್ಲಿ ಬರೆದುದಲ್ಲದೆ ಹೀಗೆ ಬರೆಯಲಾಗಿದ್ದ ಅಕ್ಷರ ಕಾವ್ಯಗಳನ್ನು ದೇವಾಲಯದಂತಹ ಸಾಂಸ್ಕೃತಿಕ ಕೇಂದ್ರಗಳಲ್ಲಿ ಹಾಡಿ ಅದಕ್ಕೆ ವಿವರಣೆ/ವ್ಯಾಖ್ಯಾನ ಹೇಳುವ 'ಗಮಕ' ಎನ್ನುವ ಕಾವ್ಯ ಪ್ರಸರಣದ ಹೊಸದಾರಿಯನ್ನು ಕಂಡುಕೊಂಡುದು. (2) ಜಾನಪದ ರಂಗಭೂಮಿಯ ಸೋಗಿನಲ್ಲಿ ವಿಷ್ಣುಕತೆಗಳನ್ನು, ವೈದಿಕ ಮೌಲ್ಯಗಳನ್ನು ತುಂಬಲು ದಾರಿ ಕಂಡುಕೊಂಡುದು. ಉದಾಹರಣೆಗೆ ವಿಷ್ಣುಕಥೆಯನ್ನು ಪ್ರಸಾರಿಸುವ ಕೃಷ್ಣಪಾರಿಜಾತದಂತಹ ರಂಗಪ್ರಕಾರವನ್ನು ಅಭಿವೃದ್ಧಿಪಡಿಸಿದ್ದು. ವೈದಿಕೇತರ ಶಾಕ್ತ ಗುಡಿಗಳಲ್ಲಿ ವಿಷ್ಣುದಶಾವತಾರ ಮೇಳಗಳನ್ನು ಅಣಿಗೊಳಿಸಿ ಈ ನಡುಗನ್ನಡ ಮೂಲದ ಕಾವ್ಯಗಳಿಂದ ಹರಿಕಥನದ ಪ್ರಸಂಗಗಳನ್ನು ಪುನರುತ್ಪಾದಿಸಿ ಆಡಿಸಿದ್ದು. (3) ಕೆಳಜಾತಿಗಳಿಗೆ (ದಕ್ಷಿಣ ಕರ್ನಾಟಕದ ದಾಸಪ್ಪಗಳು ಮತ್ತು ಉತ್ತರ ಕರ್ನಾಟಕದ ಚೆನ್ನದಾಸರು) ವೈಷ್ಣವ ದೀಕ್ಷೆಕೊಟ್ಟು ದಾಸದೀಕ್ಷೆಯ ಮೂಲಕ ಹರಿಕಥನವನ್ನು ಪ್ರಸಾರಿಸುವ ವೈರಮುಡಿ ಯಂತಹ ಸಮುದಾಯಗಳ ಹುಟ್ಟಿಗೆ ಕಾರಣವಾದುದು. ಈ ಮೂರು ದಾರಿಗಳನ್ನು ಪರಿಣಾಮಕಾರಿಯಾಗಿ ಬಳಸಿದ್ದರಿಂದಲೇ ಇವತ್ತಿಗೆ ಕರ್ನಾಟಕದಲ್ಲಿ ಶಿವಸಂಸ್ಕೃತಿಯ ಸಂಖ್ಯಾಬಾಹುಳ್ಯದ ನಡುವೆಯೂ, ಗುಪ್ತ ರಾಜಕೀಯ ಶಕ್ತಿಯಾಗಿ ಅದಕ್ಕೆ ನೆಲೆಗೊಳ್ಳಲು ಸಾಧ್ಯವಾಗಿದೆ ಎಂಬುದನ್ನು ಮರೆಯಬಾರದು. ಹಾಗಾಗಿಯೇ ಭಾರತೀಯ ವಿಶಾಲ ಕ್ಯಾನ್‌ವಾಸ್‌ನಲ್ಲಿಯೇ ಕಾಣಿಸಿಕೊಳ್ಳುವ ಭಕ್ತಿ ಚಳವಳಿಯನ್ನು ಕುರಿತು ಪ್ರಭುತ್ವ ವಿರೋಧಿ, ಪ್ರಗತಿಪರವೆಂಬ ಸರಳ ತೀರ್ಮಾನಗಳು ಸಹಜವಾಗಿಯೇ ಅವಸರದ ತೀರ್ಮಾನ ವಾಗುತ್ತವೆ. ಈ ಹಿನ್ನೆಲೆಯಲ್ಲಿ "ಸಾಮಾನ್ಯವಾಗಿ ಭಕ್ತಿಪಂಥವನ್ನು ಒಂದು ಪ್ರತಿಭಟನಾತ್ಮಕ ಚಳುವಳಿ ಎಂಬರ್ಥದಲ್ಲಿ ವ್ಯಾಖ್ಯಾನಿಸುವುದುಂಟು. ರಾಜತ್ವದ ವಿರುದ್ಧದ ಪ್ರತಿಭಟನೆ

ಎಂದೂ ವ್ಯಾಖ್ಯಾನಿಸುವುದುಂಟು. ಆದರೆ, ಇವೆರಡೂ ಅರ್ಧಸತ್ಯಗಳು. 'ಹಿಂದೂ' ಧರ್ಮದ ಚೌಕಟ್ಟಿನೊಳಗೆ ನಿಂತು 'ಮಧ್ಯಯುಗ'ದ ಭಾರತೀಯ ಚರಿತ್ರೆಯ ಸಂದರ್ಭದಲ್ಲಿ ಈ ಭಕ್ತಿಪಂಥ ಪ್ರಭುತ್ವ ಮತ್ತು ಸಾಂಪ್ರದಾಯಿಕತೆಯನ್ನು ಸ್ಥಿರೀಕರಿಸುವ ಕೆಲಸ ಕೂಡಾ ಮಾಡಿದೆ ಎನ್ನುವುದೂ ನಿಜ. ಅದರಲ್ಲೂ ಆದಿವಾಸಿ ಮತ್ತು ಕೆಳಜಾತಿಗಳನ್ನು ಹಿಂದೂ ಧರ್ಮದ ಕೇಂದ್ರೀಕೃತ ವ್ಯವಸ್ಥೆಯೊಳಗೆ ಅದು ತಂದುಬಿಟ್ಟಿತು" ಎನ್ನುವ ಡಿ.ಆರ್.ನಾಗರಾಜ ಅವರ ಗುರುತಿಸುವಿಕೆ ಸರಿಯಾಗಿಯೇ ಇದೆ ಎನ್ನಬೇಕು. ಹಾಗಾಗಿ ಇಂತಹ ಚಳುವಳಿಯೊಂದನ್ನು ಕರ್ನಾಟಕದ ಸಂದರ್ಭದಲ್ಲಿ ಅದರ ಕ್ರಿಯಾಚರಣೆಯ ಸ್ವರೂಪವನ್ನು ಮರೆತು ಪ್ರಗತಿಪರ ಆಶಯದ ಚಳುವಳಿಯಾಗಿ ಗುರುತಿಸಬೇಕಾಗಿಲ್ಲ.

ಈ ಸಂಗತಿಯ ಜೊತೆಗೆ ನಮಗಿರಬೇಕಾದ ಇನ್ನೊಂದು ಎಚ್ಚರವನ್ನೂ ಇಲ್ಲಿಯೇ ಪ್ರಸ್ತಾಪಿಸಬೇಕು. ಅದೇನೆಂದರೆ ಭಾರತವೆನ್ನಲಾಗುವ ಭೂಖಂಡದ ಇತಿಹಾಸವನ್ನು ಕೆದಕಿಕೊಳ್ಳುವುದಾದರೆ, ಈ ಭೂಭಾಗಕ್ಕೆ ಸಂಬಂಧಿಸಿದ ಮಧ್ಯಯುಗೀನ ಕಾಲಘಟ್ಟವು ತಳಮಳಗಳ ಕಾಲಘಟ್ಟವೂ ಹೌದು. ರಾಜಕೀಯ, ಧಾರ್ಮಿಕ, ತಾತ್ವಿಕವೆನ್ನಬಹುದಾದ ಬಹು ಆಯಾಮಗಳಲ್ಲಿ ಇದು ಸಂಘರ್ಷಗಳ ಕಾಲಘಟ್ಟ. ಆದರೆ ಭಾರತದ ಪುರಾತನ ಹಾಗೂ ಈ ಮಧ್ಯಯುಗಕ್ಕೆ ಸಂಬಂಧಿಸಿದ ಸಮಾಜೋ–ಧಾರ್ಮಿಕ ಚರಿತೆ, ಜೀವನ/ಲೋಕ ವಿವರಣ ಕ್ರಮವಾದ ಮೀಮಾಂಸೆ ಹಾಗೂ ತಾತ್ವಿಕವಾದ ಸಂಘರ್ಷಗಳನ್ನು ವಿವರಿಸಿಕೊಂಡು ಬರುವಲ್ಲಿ ಕೆಲವು ಸಿದ್ಧಕ್ರಮಗಳು ನೆಲೆನಿಂತುಬಿಟ್ಟಿವೆ. ಈ ಸಿದ್ಧಕ್ರಮಗಳು ಯಾವುದನ್ನು ಹೇಗೆ ಓದಿಸಬೇಕು, ಯಾವುದನ್ನು ಹೇಗೆ ನೋಡಬೇಕು ಎಂಬ ನಿರಂತರ ತರಬೇತಿಯನ್ನು ಆಗುಗೊಳಿಸುವ ಮೂಲಕ ನಮ್ಮದೇ ಗತದ ಕುರಿತಾಗಿ ನೋಡಿಕೊಳ್ಳಲು ಇರಿಸಿಕೊಳ್ಳಬೇಕಾದ ನಮ್ಮದೇ ಕಣ್ಣುಗಳನ್ನು ಅಪಹರಿಸಿಬಿಟ್ಟಿವೆ. ಕೃತಿಯೊಂದರ ರಚನೆಯಂತೆಯೇ ಅದರ ಓದೂ ಕೂಡಾ ರಾಜಕಾರಣದ ಭಾಗವೇ ಆಗಿರುವುದರಿಂದ ಈ ಸಿದ್ಧಕ್ರಮಗಳು ಯಾವುದನ್ನು ಸಮೂಹಕ್ಕೆ ಓದಿಸಬೇಕು ಮತ್ತು ಯಾವುದನ್ನು ಸಮೂಹಕ್ಕೆ ಸಿಗದ ಹಾಗೆ ನೋಡಿಕೊಳ್ಳಬೇಕು ಎಂಬ ವಿಚಾರದಲ್ಲಿಯೂ ತಮ್ಮ ಜಾಣ ಎಚ್ಚರವನ್ನು ಉಳಿಸಿಕೊಂಡು ಬಂದಿವೆ. ಅದನ್ನು ಇನ್ನಷ್ಟು ಸ್ಪಷ್ಟಪಡಿಸುವುದಾದರೆ, ಇಂತಹ ಗಂಭೀರ ಎಚ್ಚರದೊಂದಿಗೆ ಸಮೂಹವನ್ನು ನಿಯಂತ್ರಿಸುವ ಪರೋಕ್ಷ ರಾಜಕಾರಣವನ್ನು ಹಿತಾಸಕ್ತ ಗುಂಪೊಂದು ಈ ಸಿದ್ಧಕ್ರಮಗಳನ್ನು ಚಾಲ್ತಿಯಲ್ಲಿಡುವ ಮೂಲಕವೇ ಅನೂಚಾನವಾಗಿ ಕಾದುಕೊಂಡು ಬಂದಿದೆ ಎನ್ನಬಹುದು. ಹಾಗಾಗಿ ನಾವುಗಳು ಕಟ್ಟಿಕೊಳ್ಳಬೇಕಾದ ಪ್ರತಿರಾಜಕಾರಣ ಸಾಧ್ಯವಾಗಬೇಕಾದರೆ ಈವರೆಗಿನ ನಮ್ಮ ಚರಿತ್ರೆ ಮೀಮಾಂಸೆ ಮತ್ತು ತಾತ್ವಿಕ ಅನುಸಂಧಾನಗಳನ್ನು ಈ ಸಿದ್ಧಕ್ರಮಗಳಿಂದ ಹೊರತಾದ ಬೇರೆಯದೇ ಆದ ರೀತಿಯಲ್ಲಿ ಓದಿಕೊಳ್ಳಬೇಕಾಗಿದೆ. ಅಂತೆಯೇ ಕನಕನನ್ನು ಈವರೆಗೆ ಓದಿ ಒಪ್ಪಿಸಿರುವ ಬಗೆಯನ್ನು ಕೆದಕುತ್ತಾ ನಮಗೆ ಬೇಕಾದ ವರ್ತಮಾನದ ಕನಕನನ್ನು ಹೊಸದಾಗಿ ಹುಡುಕಿಕೊಳ್ಳಬೇಕಾಗಿದೆ. ಯಾಕೆಂದರೆ ಈವರೆಗೆ ಕನಕನನ್ನು ಓದಿರುವ ಕ್ರಮ ಯಾವುದು? ಮತ್ತು ನಮ್ಮ ಮುಂದಿರುವ ಕನಕನನ್ನು ಕಟ್ಟಿಕೊಟ್ಟ ಓದು ಯಾವುದು? ಆ ಓದು ಕನಕನ ಯಾವ ಹೊರಚಾಚುಗಳನ್ನು ಅನುಮತಿಸಿದೆ ಮತ್ತು ಯಾವುದನ್ನು ನಿರಾಕರಿಸಿದೆ ಎಂಬ ವಿಶ್ಲೇಷಣೆಯ ಬೆಳಕಿನಲ್ಲಿಯೇ ಚಾಲ್ತಿಯಲ್ಲಿರುವ ಕನಕ ಮತ್ತು ನಮಗೆ ಬೇಕಾದ ಕನಕ ಎಂಬ ನೆಲೆಗಳನ್ನು ವಿಭಜಿಸಿ ವಿವರಿಸಿಕೊಳ್ಳಬೇಕಾಗುತ್ತದೆ. ಓದು ಮತ್ತು ಓದುವ ಕ್ರಮದ ಮೂಲಕ ಮಾಡುವ ರಾಜಕಾರಣಗಳನ್ನು ಅರ್ಥೈಸುವ ನಿಟ್ಟಿನಲ್ಲಿ ಈ ವಿಶ್ಲೇಷಣೆ ಅನಿವಾರ್ಯವೂ ಹೌದು.

**–3–**

ಕನಕದಾಸನನ್ನು ಏಕರೂಪಿಯಾದ ಮಾದರಿಯಲ್ಲಿ ನಿರೂಪಿಸಿಕೊಳ್ಳಲಾಗದು. ಆತ ಏಕರೂಪಿಯಾಗಿ ದಕ್ಕುವುದಿಲ್ಲ. ಹಾಗೆ ದಕ್ಕದಂತೆ ಮಾಡಲಾಗಿದೆಯೇ? ದಕ್ಕಿಸಿಕೊಳ್ಳ ಲಾಗಿಲ್ಲವೇ? ಎನ್ನುವುದು ನಿಜಕ್ಕೂ ಪ್ರಶ್ನೆ. ಒಂದಂತೂ ಸ್ಪಷ್ಟ. ಕನಕ ಒಂದು ಅಚ್ಚಿಗೆ ಸಿಗಲಾರ. ಕನಕನ ರಚನೆಗಳ ಭಾಷಿಕ ಅಧ್ಯಯನವನ್ನು ಮಾಡಿದ ಕೆ.ವಿ.ನಾರಾಯಣ ಅವರು ಕಥಕ ಮತ್ತು ಕೀರ್ತನಕಾರನೆಂಬ ಉಭಯ ಮಾದರಿಯಲ್ಲಿ ಕನಕನನ್ನು ವಿವರಿಸಿಕೊಳ್ಳುತ್ತಾ, ಕಥಕ ಕನಕನಿಗಿಂತ ಕೀರ್ತನಕಾರ ಕನಕನಲ್ಲಿರುವ ಭಾಷೆಯ ಹೊಸಚಹರೆಯನ್ನು ಗುರುತಿಸುತ್ತಾರೆ. ನಮಗೆ ಕನಕ ಇನ್ನೂ ಒಂದು ವಿಧದಲ್ಲಿ ಸೀಳಾಗಿಯೇ ದಕ್ಕಬಲ್ಲ. ಅದು ಆತನ ಪ್ರವೃತ್ತಿಗೆ ಸಂಬಂಧಿಸಿದ್ದು. ಅಲ್ಲಿ ಕನಕ ಮತ್ತು ದಾಸ ಎಂಬೆರಡೂ ಹೊಂದಾಣಿಕೆಯಾಗದ, ಬೇರಾಗಿಯೇ ನಿಲ್ಲುವ ಸೀಳುಗಳಿವೆ. ದಾಸ ಕನಕ, ನೆಲದ ಕನಕನಿಗಿಂತ ಬೇರೆಯಾಗಿಯೇ ಕಾಣುತ್ತಾನೆ. ಇದರ ಜೊತೆಗೆ ಕನಕನನ್ನು ಭಕ್ತ, ಕೀರ್ತನಕಾರ ಎಂಬ ಕಟ್ಟಿಗೆ ಕಟ್ಟಿಡಲು ಎಷ್ಟೇ ಪ್ರಯತ್ನಿಸಿದರೂ, ವೈಷ್ಣವಭಕ್ತಿಗೆ ಆತ ಸೀಮಿತಗೊಳ್ಳದೇ ಹೋಗುತ್ತಾನೆ. ಕನಕನಲ್ಲಿ ವೈಷ್ಣವ ಚಹರೆಗಳಿಲ್ಲವೇ ಎಂದರೆ ಖಂಡಿತಾ ಅಂತಹ ಚಹರೆಗಳಿವೆ. ಹಾಗಾಗಿಯೂ ಆತ ಅದಕ್ಕೊಂದಕ್ಕೆ ಬಂಧಿಯಾಗಿ ಉಳಿಯುವುದಿಲ್ಲ ಎನ್ನುವುದು ಬಹಳ ಮುಖ್ಯ. ಆ ಅರ್ಥದಲ್ಲಿ ದಾರ್ಶನಿಕವಾಗಿ, ಪ್ರಾಂಥಿಕವಾಗಿ ಕನಕ ಜಂಗಮನೇ ಹೊರತು ಜಡನಲ್ಲ. ರಾಮಧಾನ್ಯಚರಿತೆ, ನಳಚರಿತೆಯಂತಹ ಕೃತಿ ರಚಿಸಿದ ಕನಕನಿಗೆ ಬದುಕೆಂದರೆ ಬರಿಯ ಭಕ್ತಿ ಅಷ್ಟೇ ಅಲ್ಲ. ಆತನ ಹರಿಭಕ್ತಿಸಾರವೂ ಬರಿಯ ಹರಿಸಂಕೀರ್ತನವಲ್ಲ. ಆತನಿಗೆ ತನ್ನ ಕೃತಿಗಳೆಲ್ಲವೂ ಸಾಮಾಜಿಕ ಸಂದರ್ಭದಲ್ಲಿಯ ಅನುಭವ ಶೋಧದ ಮಾಧ್ಯಮಗಳು. ಅಲ್ಲಿ ಕುಲಶ್ರೇಷ್ಠತೆ, ಅಸಮಾನತೆ, ವರ್ಣಾಶ್ರಮದ ನಿರಾಕರಣೆಯ ಸಾಮಾಜಿಕ ಜರೂರಿದೆ. ಸಾಂಸಾರಿಕ ಬದುಕಿನ ಔನ್ನತ್ಯದ ಜೊತೆಗೆ ಇಂದ್ರಿಯ ಸಮುಚಿತವಾಗಿ ಬಾಳುವ ಮನುಷ್ಯನ ಸಂಕಟಗಳನ್ನು ಒಳಗೊಂಡ ಬಹು ಆಯಾಮಗಳಿವೆ. ಹಾಗಾಗಿ ಆತನ ವ್ಯಕ್ತಿತ್ವಕ್ಕೆ ಕವಿ ಮತ್ತು ಕೀರ್ತನಕಾರನ ಆಚೆಗೆ ಒಂದು ಸಾಮಾಜಿಕತೆಯ ಮುಖವಿದೆ.

ಬಹಳ ಮುಖ್ಯವಾದ ಸಂಗತಿಯೆಂದರೆ ಕನಕ ಇವತ್ತು ಕೇವಲ ಕೀರ್ತನಕಾರ. ಕವಿ, ಜಂಗಮ, ಶಮಣಧಾರೆಯ ಸೂಚನೆಯಿರುವ ಅವಧೂತನಾಗಿ ಮಾತ್ರವೇ ಉಳಿದಿಲ್ಲ. ಅದರಾಚೆಗೆ ಒಂದು ಸಮುದಾಯ ಆತನನ್ನು ತನ್ನ ಅಸ್ಮಿತೆಯ ಧ್ಯೋತಕವಾಗಿ ಒಪ್ಪಿಕೊಂಡಿದೆ. ಇವತ್ತು ಕನಕನನ್ನು ತನ್ನ ಸಾಂಸ್ಕೃತಿಕ ಐಕಾನ್ ಆಗಿ ಬಹುಮಟ್ಟಿಗೆ ಒಪ್ಪಿಕೊಂಡಿರುವ ಹಾಗೂ ಸ್ಥಾಪಿಸಿಕೊಳ್ಳುವಲ್ಲಿ ಯಶಪಡೆದಿರುವ ಕುರುಬಕುಲ ಈ ದೇಶದ ಬುನಾದಿಯ ಕುಲಗಳಲ್ಲೊಂದು. ಮಹಾಕವಿ ಕಾಳಿದಾಸನೂ

ಇದೇ ಕುಲಕ್ಕೆ ಸೇರಿದವನೆನ್ನಲಾಗಿದೆ. ಇದಕ್ಕೆ ಕನಕ ದಕ್ಕುವುದು ಅದರ ಸಾವಿರಾರು ವರ್ಷಗಳ ಸಾಂಸ್ಕೃತಿಕ ಪಯಣದ ನಂತರ. ಸಾವಿರಾರು ವರ್ಷಗಳ ಈ ನಿಡಿದಾದ ಪಯಣದಲ್ಲಿ ಅದರ ಆರಾಧನಾತ್ಮಕ ಚಹರೆಗಳು ಏನಾಗಿದ್ದವು? ಈ ದೇಶದ ತಾತ್ವಿಕ ಸಂಘರ್ಷಗಳಿಗೆ ಈ ಕುಲ ಯಾವ ಪ್ರಮಾಣದಲ್ಲಿ ಸಾಕ್ಷಿಯಾಗಿದೆ? ಅದು ತನ್ನ ದೈವವನ್ನು ಕಟ್ಟಿಕೊಳ್ತಾ ಬಂದ ಬಗೆ ಎಂತಹದ್ದು? ಎಂಬ ಪ್ರಶ್ನೆಗಳನ್ನು ನಮಗೆ ನಾವೇ ಕೇಳಿಕೊಳ್ಳಬೇಕಾಗುತ್ತದೆ. ಈ ದೇಶದ ಮೂಲ ಕುಲಗಳಲ್ಲೊಂದಾದ ಕುರುಬಕುಲ ಮೂಲತಃ ಶೈವ–ಶಾಕ್ತ್ಯ ಪರಂಪರೆಯದು. ಹಾಲು–ರಸ–ಜಲಸಂಸ್ಕೃತಿಯ ಮಾತೃ ಪ್ರಧಾನತೆಯ ಚಹರೆಯುಳ್ಳದ್ದು. ಕುರಿಹಿಕ್ಕೆ–ಬಳ್ಳಗಳನ್ನು ಶಿವನೆಂದು ಆರಾಧಿಸಿಕೊಂಡು ದ್ವೈತಾದ್ವೈತಗಳನ್ನು ದಾಟಿಕೊಂಡು ಬದುಕಿದ ಸಮುದಾಯವಿದು. ಕುರಿಗಳು ಮೇಯಲು ಹೋದಲ್ಲೆಲ್ಲಾ ತಮ್ಮದೇ ವಿಠಲ–ಬೀರಪ್ಪನನ್ನು ಸಿಕ್ಕಿದ ಇಟ್ಟಿಗೆಯ ಮೇಲಿಟ್ಟು ಆರಾಧಿಸಿಕೊಳ್ಳಬಲ್ಲ ಆಹ್ವಾನ–ವಿಸರ್ಜನಗಳ ಸಹಜತೆಯನ್ನು ಮೈಗೂಡಿಸಿಕೊಂಡ ಕುಲವಿದು. ಪ್ರಧಾನವಾಗಿ ಬೆವರಿನ ಸಂಸ್ಕೃತಿಗೆ ಸಮೀಪವಾದ ಶಿವಪರಂಪರೆಯ ದಟ್ಟ ಛಾಯೆಯಿರುವ ಸಮುದಾಯವೆಂಬುದು ಸ್ಪಷ್ಟ. ಪ್ರತಿನಿಧೀಕರಣದ ಕಾರಣಕ್ಕಾಗಿ, ಅಸ್ಮಿತೆಯ ಕಾರಣಕ್ಕಾಗಿ ಈ ಸಮುದಾಯವು ತನ್ನ ಸಾಂಸ್ಕೃತಿಕ ಪ್ರತಿನಿಧಿಯಾಗಿ ಕಟ್ಟಿಕೊಳ್ಳುವ ಕನಕ ಯಾರಿಂದ ನಿರ್ದೇಶಿತನಾದ ಮಾದರಿ ಎಂಬ ಎಚ್ಚರ ಬಹಳ ಮುಖ್ಯ. ಯಾಕೆಂದರೆ ಸಮುದಾಯದ ಸಾಮಾಜಿಕ ಮತ್ತು ಆರಾಧನಾತ್ಮಕ ಇತಿಹಾಸವನ್ನೂ ಇಂತಹ ಸಾಂಸ್ಕೃತಿಕ ಅಸ್ಮಿತೆಯ ಅಚ್ಚುಗಳ ಮೂಲಕ ಕಳೆದುಕೊಳ್ಳುವಂತಾದರೆ ಉಂಟಾಗುವ ಅಪಾಯಗಳ ಕಡೆಗೂ ಎಚ್ಚರ ಹೊಂದಿರ ಬೇಕಾಗುತ್ತದೆ. ಹಾಗಾಗಿ ಸಮುದಾಯವೊಂದು ಕನಕನಂತವನನ್ನು ತನ್ನ 'ಐಕಾನ್' ಆಗಿ ಬಳಸಿಕೊಳ್ಳುವಲ್ಲಿ ಆತನ ಪಾಂಥಿಕ ಚಹರೆಯನ್ನು ಹೇಗೆ ವಿವರಿಸಿಕೊಳ್ಳುತ್ತದೆ, ಯಾವ ಪಾಂಥಿಕ ಧಾರೆಯಲ್ಲಿ ಅನುಸಂಧಾನ ಮಾಡಿಕೊಳ್ಳುತ್ತಿದೆ ಎನ್ನುವುದು ಮುಖ್ಯವಾಗುತ್ತದೆ.

ಈಗ ನಮ್ಮೆದುರಿಗಿರುವುದು ಬಹುಮಟ್ಟಿಗೆ ವೈಷ್ಣವ ಪಾಂಥಿಕ ಅಚ್ಚಿನಲ್ಲಿಯೇ ಎರಕಹೊಯ್ದು ನೀಡಲಾದ ಕನಕ. ಹಾಗಾಗಿಯೇ ಕನಕ ಎಂದ ತಕ್ಷಣ ತಮಗೆ ಆತನ ಬಾಡ ನೆನಪಾಗುವುದಕ್ಕಿಂತಲೂ ಉಡುಪಿ, ವಿಜಯನಗರಗಳೆಂಬ ಇನ್ನೆರಡು ನೆಲೆಗಳು ತಟ್ಟನೆ ನೆನಪಾಗುವಂತೆ ನಮ್ಮನ್ನು ಸಿದ್ಧಗೊಳಿಸಲಾಗಿದೆ. ಉಡುಪಿಯ ದೇಗುಲದಲ್ಲಿಯ ಕಿಂಡಿಯೊಂದಕ್ಕಿರುವ ಕನಕನ ಕಿಂಡಿಯೆಂಬ ಹೆಸರು ಮತ್ತು ದೇಗುಲದ ಹೊರಗೆ ನಿಲ್ಲಿಸಲಾದ ಕನಕನ ಮೂರ್ತಿಗಳೇ ಕನಕನಿಗಿರುವ ಉಡುಪಿಯ ಸಂಬಂಧದ ಕುರುಹುಗಳಾಗಿ ನಿಂತುಬಿಟ್ಟಿವೆ. ಆದರೆ ವಾಸ್ತವಿಕವಾಗಿ ನೀಲಗಂಗಯ್ಯ ಪೂಜಾರ ಅವರೆನ್ನುವಂತೆ "ಅನುಕೂಲಕ್ಕೆ ತಕ್ಕಂತೆ ಒಮ್ಮೆ ನವಗ್ರಹಕಿಂಡಿಯೆಂದು ಮಾಧ್ವ ಮಡಿವಂತರೆದುರು, ಮತ್ತೊಮ್ಮೆ ಸಾಹಿತ್ಯ ಸಂದರ್ಭದಲ್ಲಿ ಕನಕನ ಕಿಂಡಿಯೆಂದು ಕರೆಯುವ ಈ ಕಿಂಡಿ ಹುಟ್ಟಿಕೊಂಡದ್ದೇ ಕ್ರಿ.ಶ.1436ರ ಅಣ್ಣಪ್ಪ ಒಡೆಯನ ದಾಳಿಯ ನಂತರದ ದೇವಾಲಯದ ಪುನಾರಚನೆಯ ಕಾಲಕ್ಕೆ. ಈ ಕಾಲಕ್ಕೂ ವ್ಯಾಸ–ಕನಕದಾಸರ ಕಾಲಕ್ಕೂ ಏನಿಲ್ಲವೆಂದರೂ ಒಂದು ನೂರು ವರ್ಷಗಳ ಅಂತರವಿದೆ. ಕನಕನನ್ನು ಉಡುಪಿಯ ಜೊತೆಗೆ ಜೋಡಿಸಲಾಗುವ ಸಂಕಥನದ ಅಸಲಿಯತ್ತುಗಳೇನೇ ಇದ್ದರೂ ಈ ಸಂಕಥನದ ಮೂಲಕವಾಗಿ, ಕನಕನನ್ನು ಹೊರಗೆ ನಿಲ್ಲಿಸಿ, ದೇಗುಲದ ಮೂರ್ತಿ ತಿರುಗಿದ ಕಥೆ ಕಟ್ಟಿ ಸಾಮಾನ್ಯರ ಸಮ್ಮತಿಯನ್ನು ಉತ್ಪಾದಿಸಿದ ಬಗೆ ಬೆರಗುಗೊಳಿಸುವಂತಹದ್ದು. ಈ ಕಿಂಡಿಯ ವೃತ್ತಾಂತ ಮತ್ತು ಮೂರ್ತಿಯ ಇರುವಿಕೆಗಳು ಕೆಳಸಮುದಾಯದ ಸಮ್ಮತಿಯ ಉತ್ಪಾದಕಗಳಾಗಿ ದುಡಿಯುವ ಜೊತೆಗೆ ಕನಕನನ್ನು ದ್ವೈತದಾರ್ಶನಿಕತೆಯ ವೈಷ್ಣವ ಪಂಥಕ್ಕೆ ಬಂಧಿಸಿಯೂ ಇಟ್ಟಿವೆ. ಕನಕನ ಉಡುಪಿಯ ಭೇಟಿ, ಆತನಿಗಾಗಿ ತಿರುಗಿದ ಮೂರ್ತಿ ಇವುಗಳನ್ನು ಕುರಿತ ಅಧಿಕೃತ ಚಾರಿತ್ರಿಕ ಸತ್ಯವನ್ನು ಕೆದಕಲಾರದಷ್ಟು ಪ್ರಮಾಣದಲ್ಲಿ ಕನಕನಿಗೆ ಸಂಬಂಧಿಸಿದ ಕಿಂಡಿಯ ಕುರಿತಾದ ಸಂಕಥನವನ್ನು ಜನಮನದಲ್ಲಿ ನೆಲೆಗೊಳಿಸುವಲ್ಲಿ ಹಿತಾಸಕ್ತ ಗುಂಪು ಯಶಸ್ಸು ಪಡೆದಿದೆ. ಅದೇ ಹೊತ್ತಿಗೆ ಆತನ ಸಾಹಿತ್ಯ ಕೃತಿಗಳನ್ನು ಕುರಿತ ನಿರೂಪಣೆಗಳೂ ಆತನನ್ನು ವೈಷ್ಣವ ಪಾಂಥಿಕ ಬೇಲಿಯಲ್ಲಿಯೇ ಇರಿಸಿ, ಸಮಾಜದ ಕೆಳಸ್ತರದ ಒಪ್ಪಿಗೆಯನ್ನು ಉತ್ಪಾದಿಸುವ ಮಾಧ್ಯಮವಾಗಿ ಆತನನ್ನು ವೈಷ್ಣವ ಭಕ್ತಿಯ ಅಚ್ಚಿಗೆ ಒಗ್ಗಿಸಿಟ್ಟಿವೆ. ಹಾಗಾಗಿ ಕನಕನಂತಹ ಚಾರಿತ್ರಿಕ ವ್ಯಕ್ತಿತ್ವವನ್ನು ತಮ್ಮ ಅಸ್ಮಿತೆಯ ರೂಪಕವಾಗಿ ಬಳಸುವಾಗ ಈಗಾಗಲೇ ನಿರೂಪಿತವಾದ ಸಿದ್ಧನಿರೂಪಣೆಯನ್ನು ಮರುಪರಿಶೀಲನೆಗೆ ಒಡ್ಡಬೇಕಿದೆ. ಆವಾಹಿಸಿ ಕೊಳ್ಳುತ್ತಿರುವ ಸಮುದಾಯದ ಸಾಮಾಜಿಕ, ಪಾಂಥಿಕ ಇತಿಹಾಸಗಳ ಅರಿವಿನೊಂದಿಗೆ ಅಸ್ಮಿತೆಯಾಗುವ ವ್ಯಕ್ತಿತ್ವದ ತಾತ್ವಿಕತೆಯ ಹೊರಚಾಚುಗಳನ್ನು ಸರಿಯಾಗಿ ಗಮನಿಸಿ ಕೊಳ್ಳಬೇಕಾಗುತ್ತದೆ. ಹಾಗಾದಾಗ ಮಾತ್ರ, 'ಕನಕದಾಸರು ಮಾಧ್ವಯತಿ ವ್ಯಾಸರಾಯ ಸ್ವಾಮಿಗಳ ಸೇವೆಗೈದು ಅವರ ಕೃಪೆಪಡೆದು ಜ್ಞಾನಿಗಳಾದರು ಎಂಬ ಮಾತಾಗಲಿ, ಕನಕರ ದಾಸಸಿದ್ಧಿಗೆ ವ್ಯಾಸಕೃಪೆಯೇ ಕಾರಣವೆಂಬ ಸಂಗತಿಯಾಗಲಿ ಮಾಧ್ವ ಸಮುದಾಯದಲ್ಲಿ ಪ್ರಾಚುರ್ಯಪಡೆದ ದಂತಕಥೆಯಷ್ಟೇ. ಬ್ರಾಹ್ಮಣ ಜಗತ್ತಿಗೆಂದೇ ಸಂಸ್ಕೃತದಲ್ಲಿ ಸಮೃದ್ಧ ಪಂಥೀಯ ಸಾಹಿತ್ಯವನ್ನು ಸೃಷ್ಟಿಸಿ ಅದನ್ನೇ ಮೆದ್ದು, ಅದರದೇ ತೇಗು ಬಿಡುತ್ತಿರುವ ಮಾಧ್ವ ಸಂಪ್ರದಾಯದೊಂದಿಗೆ, ಉಡುಪಿಯ ಶ್ರೀಕೃಷ್ಣನೊಂದಿಗೂ ಕನಕರಂಥ ಉದಾರ ಪಂಥೀಯ ಕವಿಗಳಿಗೆ ಯಾವ ಸಂಬಂಧವಿರಲೂ ಸಾಧ್ಯವಿಲ್ಲ ಎಂಬ ಖಚಿತವಾದ ಅಭಿಪ್ರಾಯಗಳು ಹೊಮ್ಮಲು ಸಾಧ್ಯವಾಗುತ್ತದೆ. ಈ ಅಭಿಪ್ರಾಯಗಳು ಯಾಕೆ ಮುಖ್ಯವೆಂದರೆ ನಮ್ಮ ಸಾಂಸ್ಕೃತಿಕ ರೂಪಕದ ತಾತ್ವಿಕ ಸ್ವರೂಪವು ಅನ್ಯ ನಿರ್ದೇಶಿತವಾಗ ಬಾರದೆಂಬ ಎಚ್ಚರಕ್ಕಾಗಿ. ಹೇಗೆ ಶಂಕರರನ್ನೋ, ರಾಮಾನುಜರನ್ನೋ ತಮ್ಮ ಸಂಕೇತವಾಗಿಸಿಕೊಂಡವರು ಅನ್ಯ ತಾತ್ವಿಕತೆ ಮತ್ತು ಅನ್ಯತಾತ್ವಿಕರ ಅಂಕೆ/ಹಿಡಿತ ಉಂಟಾಗದಂತೆ ನೋಡಿಕೊಳ್ಳುತ್ತಾರೋ ಅಂತಹ ಎಚ್ಚರವೊಂದು ಬಾಹ್ಯಮೂಲದಿಂದ ಸಿದ್ಧಗೊಂಡ ರೂಪವನ್ನು ಸ್ವೀಕರಿಸುವ ಮುನ್ನ ಸಮುದಾಯ ಹೊಂದಿರಬೇಕು. ಈ ಎಚ್ಚರವಿಲ್ಲದೆ ಈಗಾಗಲೇ ನಿರೂಪಿತವಾದ ಸಿದ್ಧರೂಪವನ್ನು ತಮ್ಮ ಅಸ್ಮಿತೆಯ ಸಂಕೇತವಾಗಿ, ಸಮಾಜೋ–ರಾಜಕೀಯ ಸಂಕೇತವಾಗಿ ಬಳಸುವಲ್ಲಿ, ಆ ಐಕಾನಿನ ತಾತ್ವಿಕ ಆಕೃತಿಯು ಸಮುದಾಯದ ತಾತ್ವಿಕ ಆಕೃತಿಯನ್ನು ಕಬಳಿಸಿಬಿಡುವ ಅಪಾಯವಿದೆ.

ಈ ತಾತ್ವಿಕತೆಯ ಪ್ರಶ್ನೆಯ ಜೊತೆಗೆ ಸಾಂಸ್ಕೃತಿಕ ಐಕಾನ್ ಒಂದನ್ನು ಬಳಸುವಲ್ಲಿ ಎದುರಾಗುವ ಸಾಮಾಜಿಕ ರಾಜಕೀಯ ವಾಸ್ತವದ ಸಮಸ್ಯೆಯ ಕುರಿತೂ ನಾವು ಎಚ್ಚರ ತಪ್ಪಬಾರದು. ಮುಖ್ಯವಾಗಿ ಕನಕ, ಅಂಬೇಡ್ಕರ್, ಗಾಂಧಿ ಇವೆಲ್ಲವೂ ಬಹುಮುಖ್ಯವಾಗಿ ಸಾಂಸ್ಕೃತಿಕ ಪ್ರತಿರೋಧದ ಮಾದರಿಗಳು. ಇಂತಹ ಸಾಂಸ್ಕೃತಿಕ ಪ್ರತಿರೋಧದ ಮಾದರಿಯೊಂದನ್ನು ಕೇವಲ

ಸಾಮಾಜಿಕ ಪ್ರತಿನಿಧೀಕರಣದ ಮಾದರಿಯಾಗಿಸಿ, ತನ್ಮೂಲಕವಾದ ರಾಜಕೀಯ ಪ್ರತಿನಿಧೀಕರಣವನ್ನು ಸಾಧಿಸುವ ಮಟ್ಟದಲ್ಲಿ ಬಳಸಿಕೊಂಡಲ್ಲಿ, ಅದು ಕೇವಲ ಸಮುದಾಯವನ್ನು ಸಾಂತ್ವನಗೊಳಿಸುವ ಪ್ರಜಾಪ್ರಭುತ್ವ ಸಂದರ್ಭದ ಮತರಾಜಕಾರಣದ ವರಸೆಗಷ್ಟೇ ಅನುಕೂಲವಾಗುತ್ತದೆ. ಅಂದರೆ ಚುನಾವಣಾಧಾರಿತ ಮತರಾಜಕಾರಣದ ಚಲಾವಣೆಯ ನಾಣ್ಯವಾಗಿ ಆ ಮಾದರಿ ಬಳಕೆಗೊಂಡಂತಾಗುತ್ತದೆ. ಅದಲ್ಲದೆ ಕನಕ ಆತ್ಮ-ಜೀವಗಳೆಂಬ ಬಯಲನ್ನು ಎದುರಿಗಿಟ್ಟು ಇವುಗಳ ಜಾತಿ ಹೇಳಿ ಎಂದು, 'ಜಾತಿಪದ್ಧತಿಯನ್ನು ಪರಿಪೂರ್ಣಗೊಳಿಸಿ ಬಹುಸಂಖ್ಯಾತ ಜನಸ್ತೋಮವನ್ನು ಅವಮಾನಗೊಳಿಸಿದ' ಹಿತಾಸಕ್ತ ಮಂದಿಯನ್ನು ಪ್ರಶ್ನಿಸಿದವನು. ಅಸಮಾನತೆಯೇ ಹೂರಣವಾದ ಜಾತಿವ್ಯವಸ್ಥೆಯ ವಿರೋಧಿಯನ್ನು ಜಾತಿ ಸಮಾಜ ವೊಂದಕ್ಕೆ ಸರಿಹೊಂದಿಸಿಕೊಂಡು, ಜಾತಿ ಗುರುತಲ್ಲಿ ಬಂಧಿಸುವಲ್ಲಿ ಬಹುಮುಖ್ಯವಾಗಿ ಎರಡು ಅಪಾಯಗಳಿವೆ. ಮೊದಲನೆಯದಾಗಿ ಕನಕನಂತಹ ಸಾಂಸ್ಕೃತಿಕ ಪ್ರತಿರೋಧದ ದಟ್ಟಧ್ವನಿಯೊಂದನ್ನು ಸರ್ಕಾರಿ ಆಚರಣೆಯ ಸಾಂಕೇತಿಕ ಮಟ್ಟಕ್ಕೆ ಇಳಿಸಿದಂತಾಗುತ್ತದೆ. ಎರಡನೆಯದಾಗಿ ದೊಡ್ಡ ಜನಸಮುದಾಯವೊಂದನ್ನು ಕನಕನ ಮೂಲಕ ಸಾಂತ್ವನ ಗೊಳಿಸಬಹುದಾದ 'ಅಪ್ರಜಾಸತ್ತಾತ್ಮಕ' ಒಳದಾರಿಯನ್ನು ಅಧಿಕಾರ ರಾಜಕಾರಣಕ್ಕೆ ಒದಗಿಸಿದಂತಾಗುತ್ತದೆ ಎಂಬುದನ್ನು ನಾವು ಗಮನಿಸಲೇಬೇಕಾಗುತ್ತದೆ. ಯಾಕೆಂದರೆ ಕನಕ ಹುಟ್ಟುಹಾಕಿದ್ದು ಸಾಂಸ್ಕೃತಿಕ ಪ್ರತಿರೋಧವನ್ನೇ ಹೊರತು ಆತನದು ಜಾತಿನಾಯಕನಾಗುವ ಯತ್ನವಲ್ಲ.

**-4-**

ಕನಕ ಸಾಹಿತ್ಯದ ಮೌಲ್ಯೀಕರಣದ ಸಂದರ್ಭದಲ್ಲಿ ಆತನ ಕಾವ್ಯಗಳಿಗೆ ಸಿಗಬೇಕಾದ ಮಾನ್ಯತೆ ಅಗತ್ಯ ಪ್ರಮಾಣದಲ್ಲಿ ದಕ್ಕಿಲ್ಲವೆಂದೇ ಹೇಳಬೇಕು. ಆತನ ಕಾವ್ಯಗಳನ್ನು ಪುರಾಣದ ಅನುಬಂಧಗಳಾಗಿ ಗಮನಿಸುವ ಕ್ರಮವೊಂದಿದೆ. ಆತ ಪುರಾಣ ವಸ್ತುಗಳನ್ನೇನೋ ಬಳಸುತ್ತಾನೆ. ಆತನಲ್ಲಿ ಆ ಪುರಾಣ ವಸ್ತುಗಳು ಕೇವಲ ಅಸ್ಥಿಪಂಜರಗಳಷ್ಟೇ. ಆದರೆ ಆತ ಅದರೊಳಗೆ ತುಡಿಯುವುದು ತನ್ನ ಕಾಲದ ಜನರ ಬದುಕಿನ ಇರುವಿಕೆ ಹಾಗೂ ಸಮಸ್ಯೆಯ ಸ್ವರೂಪವನ್ನು ಹೇಳಲು. ನಾನು ಕೇಳಿದ ಮಾಹಿತಿ ಯೊಂದರ ಮೇರೆಗೆ ದಾಂಪತ್ಯದ ಕಲಹಗಳಾದಾಗ 'ನಳಚರಿತೆ'ಯನ್ನು ಓದಿಸುವ ಪರಿಪಾಠ ಕೆಲವು ಹಳ್ಳಿಗಳ ಕಡೆ ಇದೆಯಂತೆ. ಇಂತಹ ರೂಢಿಗಳು ಪುರಾಣಕ್ಕಿಂತ ಬದುಕನ್ನು ದೊಡ್ಡದಾಗಿ ಕಾಣುವ ನೋಟ ಕ್ರಮದಿಂದ ಮಾತ್ರ ಸಾಧ್ಯವಾಗುವಂತಹದ್ದು. ಸೂಕ್ಷ್ಮವಾಗಿ ಗಮನಿಸಿದರೆ ನಳಚರಿತೆಯಲ್ಲಿರುವುದು ಭೋಗದ ನೆಲೆಯೂ, ಅತೃಪ್ತಿಯ ತಾಣವೂ ಆದ ಸ್ವರ್ಗದವರ ಕುಹಕಕ್ಕೆ ಸಿಕ್ಕಿ ಮೂರಾಬಟ್ಟೆಯಾದ ಬದುಕನ್ನು ಅನುಭವಿಸುವ ಗಂಡಹೆಂಡಿರು. ತಮ್ಮದಲ್ಲದ ತಪ್ಪಿಗೆ ಪಾಡುಪಡುವ ಈ ಜೋಡಿ ಮತ್ತೆ ಒಂದಾಗುವ ಮೂಲಕ ಸ್ವರ್ಗದವರ ವಿರುದ್ಧ ಜಯಗಳಿಸಿ ಲೋಕವನ್ನು ದೊಡ್ಡದೆನಿಸುತ್ತದೆ. ಹೀಗೆ ಆತ ಪುರಾಣವನ್ನು ಬಳಸುವುದು ಅದರ ಮರುವ್ಯಾಖ್ಯಾನಕ್ಕಾಗಿಯೇ ವಿನಃ ಪುರಾಣದ ಪ್ರಚಾರಕ್ಕಲ್ಲ. ಆತನ ಕೀರ್ತನೆಗಳಲ್ಲಿಯೂ ಪುರಾಣದ ಮರುವ್ಯಾಖ್ಯಾನದ ಈ ಗುಣವಿದೆ. ಅಂದರೆ ಆತನಿಗೆ ಪುರಾಣವಿರುವುದು ಮುರಿದು ಕಟ್ಟಲೆಂದಲ್ಲದೆ ಚಾಚೂತಪ್ಪದೆ ಅನುಸರಿಸುವ ಕುರುಡು ಅನುಸಂಧಾನಕ್ಕಲ್ಲ.

ಕನಕ ಗುರುತಿಸಿಕೊಂಡ ದಾಸಕೂಟ ಆತ ಪ್ರತಿನಿಧಿಸುವ ಬೆವರ ಬಳಗಕ್ಕೆ ಒಗ್ಗುವ ಮಾದರಿಯದಲ್ಲ. ಇನ್ನೊಂದು ರೀತಿಯಿಂದ ನೋಡುವುದಾದರೆ ಕನಕ ಸಮಾಜದ ಕೆಳಸ್ತರದ ಸಮ್ಮತಿಯನ್ನು ಉತ್ಪಾದಿಸುವ ಮಾಧ್ಯಮವಾಗಿ ವೈದಿಕ ಯಜಮಾನ್ಯದ ದಾಸಕೂಟಕ್ಕೆ ಒದಗಿಬಂದ ಸಂಪತ್ತಾಗಿದ್ದ. ಇಂತಹ ಕೂಟದೊಳಗೆ ಪ್ರವೇಶ ಪಡೆದ ಕನಕನಿಗೆ, ವೈದಿಕದ ಕೊಂಡಿ ಕಳಚಿಕೊಳ್ಳುವ ನಿರ್ಗಮನದ ಮೂಲಕ ವಚನಕಾರರು ಉಳಿಸಿಕೊಂಡಿದ್ದ ಸವಲತ್ತು ಕಳೆದು ಹೋಗಿತ್ತು. ಆದರೆ ಕನಕನ ಜಾಗೃತ ಪ್ರಜ್ಞೆ ಕರ್ಮಠರ ನಡುವಿದ್ದೇ ಅವರ ಜಡತ್ವವನ್ನು ಕಟುವಿವೇಚನೆಗೊಳಪಡಿಸಿ ಗುದ್ದು ಕೊಡುತ್ತದೆ. ಕನಕನಲ್ಲಿರುವ ವೈದಿಕ ವಿರೋಧವೂ ಆದೇ ವೈದಿಕದ ತೆಕ್ಕೆಯಲ್ಲಿದ್ದೇ ಸಂಭವಿಸಿದುದು. ಅವರ ನಡುವಿದ್ದೇ 'ಹೊಟ್ಟೆ ಗುಡುಮಗಳೆಲ್ಲ ಪರಮ ವೈಷ್ಣವರೇ?' ಎಂದು ಪ್ರಶ್ನಿಸಿ ಮುಜುಗರಗೊಳಿಸುವಷ್ಟು ಸ್ವಾತಂತ್ರ್ಯವನ್ನು ಬದುಕಿನುದ್ದಕ್ಕೂ ಆತ ಕಳೆದುಕೊಂಡವ ನಾಗಿರಲಿಲ್ಲ. ಆತನಲ್ಲಿದ್ದುದು ಶಾಸ್ತ್ರವನ್ನು ಮೀರಿದ ಸಾಮಾಜಿಕತೆ. ಆತ ವೈದಿಕವನ್ನು ವಿರೋಧಿಸುವುದು ಅದನ್ನೊಂದು ಜಡತತ್ವವಾಗಿಯೇ. ಹಾಗಾಗಿ ಆತನ ವಿರೋಧಕ್ಕೆ ಒಂದು ನೈತಿಕ ನೆಲೆಗಟ್ಟಿದೆ. ಸೋಗಲಾಡಿತನವನ್ನು ವಿರೋಧಿಸುವ ಆತನಲ್ಲಿ ಸಮುದಾಯವನ್ನು ಕುರಿತ ಕುರುಡು ವಿರೋಧವಿದೆ ಎನ್ನಲಾಗದು. ಇಂತಹ ಕನಕನನ್ನು ವರ್ತಮಾನದ ನೆಲೆಯಲ್ಲಿ ವಿವರಿಸಿಕೊಳ್ಳುವಾಗ ಕೇವಲ ಜಡಸ್ವರೂಪಿಯಾದ ಬ್ರಾಹ್ಮಣ-ಶೂದ್ರ ಎಂಬ ವಿಂಗಡಣೆ ಉಪಯುಕ್ತವಲ್ಲ. ಅಲ್ಲಿ ಬೆವರು ಅನ್ನುವುದು ಬಹಳ ಮುಖ್ಯವಾದ ಸಂಗತಿಯಾಗಬೇಕು. ಆತನ 'ರಾಮಧಾನ್ಯಚರಿತೆ'ಯನ್ನು ವಿವರಿಸಿ ಕೊಳ್ಳುವಲ್ಲಿ ನಮಗೆ ಈ ಎಚ್ಚರ ಇರಬೇಕು. ಯಾಕೆಂದರೆ ನಾವು ಬದುಕುತ್ತಿರುವ ಈ ವರ್ತಮಾನ ಶೂದ್ರ ವರ್ಗದಲ್ಲಿಯೇ ಒಳಶ್ರೇಣೀಕರಣ-ಒಳಸಂಘರ್ಷ-ಒಳ ಅಸಹನೆಗಳನ್ನು ಬೆಳೆಸಿದ ಅಸಹನೆಗಳ ಸಂಕೀರ್ಣ ಸಂದರ್ಭ. ಕನಕನ ರಾಮಧಾನ್ಯ ಚರಿತೆಯಲ್ಲಿರುವುದು ಕೇವಲ ಬ್ರಾಹ್ಮಣ-ಶೂದ್ರ ಸಂಘರ್ಷವಲ್ಲ. ಅಲ್ಲಿ ಶೂದ್ರತ್ವದ ಜೊತೆಗೆ ಬೆವರೂ ಸೇರಿಕೊಂಡು, ದುಡಿದು ಬದುಕುವವರು ತಿನ್ನುವ ಅನ್ನವೆಂಬ ನೈತಿಕ ಆಯಾಮವೂ ಇದೆ ಎಂಬುದನ್ನು ಮರೆಯಲಾಗದು.

ಆದರೆ ಕನಕನ 'ಕಥಾವಸ್ತು' ಮತ್ತು 'ದಾಸಕೂಟ'ಗಳು ಆತನನ್ನು ಅನೇಕ ಬಾರಿ ಸವರ್ಣೀಯ ಸಂವೇದನೆಯ ಕವಿಯಾಗಿಯೇ ನಿಲ್ಲಿಸಿಬಿಡುತ್ತವೆ. ಆತ ಒಪ್ಪಿಕೊಳ್ಳುವ ಪುರಾಣ, ಕೀರ್ತಿಸುವ ಕೇಶವ/ಕೃಷ್ಣ ಇವೆಲ್ಲವೂ ಮತ್ತೆ ಮತ್ತೆ ಬಹುದೊಡ್ಡ ಸಮುದಾಯವನ್ನು ಕರ್ಮ ಸಿದ್ಧಾಂತದಲ್ಲಿ ಬಂಧಿಸಿಡಲು ವೈದಿಕರಿಗೆ ಒದಗಿಬಂದ ಮೂಲಗಳೇ ಆಗಿವೆ. ವಾಸ್ತವಿಕವಾಗಿ 'ವೈದಿಕ ಚೌಕಟ್ಟಿನಲ್ಲಿ ಬರೆಯುವುದು ಎಂದರೇನೇ ಸಂಪ್ರದಾಯ ಶರಣರಾಗುವುದು ಎಂಬ ಪರಿಸ್ಥಿತಿ' ಈ ರೀತಿಯ ಇಕ್ಕಟ್ಟು ಕನಕನಿಗಿದೆ. ಕನಕ ಈ ನಡುವೆಯೂ ಭಾಗವತ ಪ್ರಚಾರಕನಿಗಿಂತ, ಅದರೊಳಗಿನ ವಿಮರ್ಶಕನಾಗಿಯೂ ಕಾಣಿಸಿಕೊಳ್ಳುತ್ತಾನೆ. ಕೀರ್ತನೆಗಿಂತಲೂ ಅಧಿಕವಾಗಿ ಈ ತೀಕ್ಷ್ಣತೆ ವ್ಯಕ್ತವಾಗುವುದು ಆತನ ಕಾವ್ಯಗಳಲ್ಲಿ 'ಹರಿಭಕ್ತಿಸಾರ'ದಂತಹ ಸ್ತುತಿ ಕಾವ್ಯವೂ ಈ

ದಿಸೆಯಲ್ಲಿ ತನ್ನ ಎಚ್ಚರದ ಕೂಗನ್ನು ಅಲ್ಲಲ್ಲಿ ಮೊಳಗಿಸುತ್ತದೆ. 'ನಳಚರಿತೆ'ಯಂತೂ ಸೂಕ್ಷ್ಮವಾಗಿ ಬೇರೆ ಬೇರೆ ಸಾಮಾಜಿಕ ಸ್ತರದ ಬಹುಚರಿತೆಯನ್ನೇ ಧ್ವನಿಸಿಬಿಡುವ ಮೂಲಕ ನಾಡಿನ ಸಾಂಸ್ಕೃತಿಕ ಚರಿತ್ರೆಯಾಗಿಯೇ ಮೈದಳೆಯುತ್ತದೆ. 'ಮೋಹನ ತರಂಗಿಣಿ'ಯಂತಹ ಕೃತಿ ಸಮಕಾಲೀನ ಇತಿಹಾಸದ ಅನೇಕ ಸಂಗತಿಗಳಿಗೆ ಮುಖವಾಣಿಯಾಗುತ್ತದೆ. ಆದರೆ ಅದೇ ಸಂದರ್ಭದಲ್ಲಿ ಕನಕನ ಸಾಹಿತ್ಯದಲ್ಲಿನ ಚಾರಿತ್ರಿಕತೆಯಲ್ಲಿ ಸಮುದಾಯ ದ್ವೇಷವನ್ನು ಉದ್ದೀಪಿಸುವ ಕಿಲುಬಿಲ್ಲ ಎನ್ನುವುದನ್ನು ಗಮನಿಸಬೇಕು. ಯಾಕೆಂದರೆ ಕನಕನ ಕಾವ್ಯದಲ್ಲಿರುವ ಚರಿತ್ರೆಯ ಎಳೆಗಳಲ್ಲಿ ಅಂಚಿನ/ಪರಿಧಿಯ ಧ್ವನಿಗಳಿವೆ. ರಾಜಚರಿತೆಯ ಸೋಗಿನೊಳಗೆ ದೇಶಪ್ರೇಮವೆಂಬಂತೆ ಬಿಕರಿ ಮಾಡಲು ನಿಂತಿರುವ ಸಾಂಸ್ಕೃತಿಕ ರಾಷ್ಟ್ರೀಯವಾದದ ಅಸಹನೆಯ ರಾಜಕಾರಣಕ್ಕೆ ಒದಗಿಬರುವ ಸರಕು ಅಲ್ಲಿಲ್ಲ. ಹಾಗಾಗಿ ಕನಕನ ಕೃತಿಗಳನ್ನಿರಿಸಿಕೊಂಡು ಮಧ್ಯಯುಗೀನ ಇಸ್ಲಾಂ ದಾಳಿಯ ಕಥೆಯನ್ನು ಬೆಳೆಸಲಾಗದು.

**–5–**

ಮಾತು ಮುಗಿಸುವ ಮುನ್ನ ನಾನು ಪ್ರಸ್ತಾಪಿಸಲೇಬೇಕಾದ ಸಂಗತಿ ಕನಕನ ಕೃತಿಗಳ ಅಪಹರಣದ ಕುರಿತಾದ ಹುಯ್ಯಲಿನದು. ಕನಕನ ಕೃತಿಗಳ ಪ್ರಕ್ಷಿಪ್ತದ ಬಗೆಗಿನ ತಕರಾರುಗಳದು. ಇಲ್ಲಿ ನನಗಿರುವ ಪ್ರಶ್ನೆ ಕನಕನ ಕೃತಿಗಳಷ್ಟೇ ಅಪಹರಣವಾಗಿರುವುದೆ? ಕನಕನ ಕೃತಿಗಳಿಗಿಂತ ಅಧಿಕವಾಗಿ ಆತನ ಬಗೆಗಿನ ಪ್ರಕ್ಷಿಪ್ತಗಳೇ ನಮಗೆ ಮುಖ್ಯವಲ್ಲವೇ? ಕನಕನನ್ನು ಭಕ್ತಕವಿಯಾಗಿಯೇ ನಿಲ್ಲಿಸಿ ಅದರಾಚೆಗಿನ ಅವನ ಕಾವ್ಯಸತ್ವವನ್ನು ಅನುಬಂಧವಾಗಿ ಮಾತ್ರ ಬಳಸಿಕೊಂಡು ಬಂದ ಕುರಿತು ನಮಗೆ ನಿಜಕ್ಕೂ ಅಸಮಾಧಾನ ಇರಬೇಕಲ್ಲವೇ? ಅವನ ಕೃತಿಗಳ ಅಪಹರಣದ ಬಗೆ ಮಾತನಾಡುವ ವೇಳೆ ಕನಕನು ಆರಾಧಿಸಿದ ವಿಠಲ–ಬೀರಪ್ಪನ ಕತೆ ಏನಾಗಿರಬಹುದು? ಯಾಕೆ ನಮಗೆ ಕೃತಿಗಳ ಅಪಹರಣವಷ್ಟೇ ಮುಖ್ಯವಾಗಬೇಕು? ನಾವು ಕಳೆದುಕೊಂಡ ದೈವಗಳು ನಮಗೆ ಯಾಕೆ ಮುಖ್ಯವಾಗುತ್ತಿಲ್ಲ? ಕನಕ ಸೇರಿದ ಸಮುದಾಯವನ್ನೂ ಒಳಗೊಂಡು ತಳಮೂಲದ ಸಮುದಾಯಗಳ ದೈವಗಳನ್ನು ಅಪಹರಿಸಿರುವ ಚರಿತ್ರೆಯ ನಿಡುಗಥೆಯೇ ಈ ನಾಡಿಗಿದೆ. ಹಾಗಾಗಿಯೇ ನಮಗೆ ನಮ್ಮದಲ್ಲದ ನೆಲೆಗಳು ಮುಖ್ಯವಾಗಿ ನಾವು ಅಲ್ಲಿನ ಹುಂಡಿ ತುಂಬಿಸುತ್ತಾ, ಕೃತಿಚೌರ್ಯದ ಮಾತಾಡುತ್ತಿದ್ದೇವೆ ಅನಿಸುತ್ತಿದೆ. ಹಾಗೆಯೇ ಇನ್ನೊಂದು ಸಂಗತಿ ಕರ್ನಾಟಕ ಸಂಗೀತದ ವಾಗ್ಗೇಯಕಾರರಲ್ಲಿ ಕನಕನನ್ನು ಎಲ್ಲಿಡಲಾಗಿದೆ ಎಂಬುದು. ಅಲ್ಲಿಯೂ ಕನಕನ ಬಗೆಗಿನ ನಿಲುವು ಉದಾರವಾದುದೇ ಅಂದರೆ ಹಾಗೆನಿಸುವುದಿಲ್ಲ. ಕರ್ನಾಟಕ ಸಂಗೀತದ ವಾಗ್ಗೇಯಕಾರರಲ್ಲಿ ಕನಕನ ಹೆಸರೇನಾದರೂ ಸೇರಿಕೊಂಡಿದ್ದರೆ, ಅದಕ್ಕೆ ಆತನ ವೈಷ್ಣವಭಕ್ತಿಯೇ ಮಾನದಂಡವಾಗಿರಲೂಬಹುದು. ಯಾಕೆಂದರೆ ಈ ವಾಗ್ಗೇಯಕಾರರ ಯಾದಿಯಿಂದ ವೈಷ್ಣವೇತರರನ್ನು ಹೇಗೆ ಹೊರಗಿಡಲಾಗಿದೆ ಎಂಬುದನ್ನು ಗಮನಿಸಿದರೆ ಇದು ಸ್ಪಷ್ಟವಾದಿತು. ಇಂತಹ ವಾಸ್ತವಗಳ ನಡುವೆಯೂ ವ್ಯಾಸರಾಯರು ಕನಕನಿಗೆ ಮೊದಲ ತೀರ್ಥ ಕೊಡುತ್ತಿದ್ದರು ಎನ್ನುವ ಕಥೆ ಹೇಳಿಕೊಂಡೇ ಬದುಕುತ್ತಿದ್ದೇವೆ. ಇದರ ಬದಲಿಗೆ ದಾಸ–ಕನಕನನ್ನು ಭೇದಿಸಿ ಬರಿಯ ಅಸಲು ಕನಕನನ್ನು ಹುಡುಕಿಕೊಳ್ಳುವ ನಮಗೆ, ಅವರ ತೀರ್ಥಕ್ಕಿಂತ ನಮ್ಮ ಪ್ರತಿನಿಧಿಯಾದ ಕನಕನನ್ನು, ಸಾಂಸ್ಕೃತಿಕ ಪ್ರತಿರೋಧದ ಮಾದರಿಯಾದ ಕನಕನನ್ನು ಇಲ್ಲಿರಿಸಲಾಗಿದೆ? ಹೇಗೆ ಇರಿಸಿದ್ದಾರೆ? ಯಾಕೆ ಮತ್ತೆ ಮತ್ತೆ ನಾವು ಕಿಂಡಿಯ ಹೊರಗಿರಿಸಲಾದ ಕನಕನನ್ನು ನೋಡಿ ಹುಂಡಿ ತುಂಬಿಸಿ ಬರಬೇಕು? ಎಂಬ ಪ್ರಶ್ನೆಗಳು ಮುಖ್ಯವಾಗುತ್ತವೆ. ಇಲ್ಲವಾದರೆ ಚರಿತ್ರೆಯನ್ನು ಮರೆತು ಸಮುದಾಯವನ್ನು ದಿಕ್ಕು ತಪ್ಪಿಸಲು ನಾವೂ ಕೈಜೋಡಿಸುತ್ತೇವೆ ಎಂದಷ್ಟೇ ಹೇಳಬಹುದು.

**ಕೊನೆ ಟಿಪ್ಪಣಿ**

- ಸಾಹಿತ್ಯ ಕಥನ, ಪುಟ:113
- ಕನ್ನಡ ಅಧ್ಯಯನ, ಸಂ–6, ಸಂಚಿಕೆ–3, ಪುಟ:24
- ಕನ್ನಡ ಅಧ್ಯಯನ, ಸಂ–6, ಸಂ–3, ಪುಟ:25
- ಸಾಹಿತ್ಯ ಕಥನ, ಪುಟ:96
- ಸಾಹಿತ್ಯ ಕಥನ, ಪುಟ:87

**ಪರಾಮರ್ಶನ ಗ್ರಂಥಗಳು, ಲೇಖನಗಳು**


- ದೇ.ಜವರೇಗೌಡ (ಸಂ), ಕನಕ ಸಾಹಿತ್ಯ ದರ್ಶನ ಸಂ–1, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1990
- ಡಾ. ಸಾ.ಶಿ.ಮರುಳಯ್ಯ (ಸಂ), ಕನಕ ಸಾಹಿತ್ಯ ದರ್ಶನ ಸಂ–2, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1991
- ಜಿ.ಜಿ.ಮಂಜುನಾಥನ್ (ಸಂ), ಕನಕ ಸಾಹಿತ್ಯ ದರ್ಶನ ಸಂ–3, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1999
- ಸುಧಾಕರ (ಸಂ), ಕನಕ ಸಾಹಿತ್ಯ ದರ್ಶನ ಸಂ–2, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1999
- ಕೆ.ವಿ.ನಾರಾಯಣ, ತೊಂಡುಮೇವು ಕಂತೆ–2, ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು, 2010
- ಡಿ.ಆರ್.ನಾಗರಾಜ, ಸಾಹಿತ್ಯ ಕಥನ, ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ, 2006
- ಡಾ. ಎಸ್.ನಟರಾಜ ಬೂದಾಳು, 'ಶ್ರಮಣಧಾರೆಗಳ ತಾತ್ವಿಕತೆ–ಕನಕದಾಸರ ಅನುಸಂಧಾನ', ಉಜ್ಜಜ್ಜಿ ರಾಜಣ್ಣ (ಸಂ) 'ಕಾಲಾತೀತ' ಮಾಸಿಕ, ಜನವರಿ 2013
- ನೀಲಗಂಗಯ್ಯ ಪೂಜಾರ, 'ಕನಕಕಿಂಡಿ ಮತ್ತು ವಿಠಲ ಪರಂಪರೆ', ರಹಮತ್ ತರೀಕೆರೆ (ಸಂ) ಕನ್ನಡ ಅಧ್ಯಯನ, ಸಂ–6, ಸಂ–3, 2000



**ಜಯಪ್ರಕಾಶ್ ಶೆಟ್ಟಿ ಹೆಚ್**

ಸಹಪ್ರಾಧ್ಯಾಪಕ

'ತೆನೆ' ಸರ್ವಪ್ರಕಾಶನಗರ
ಅಂಕದಕಟ್ಟೆ ಕೋಟೇಶ್ವರ, ಕುಂದಾಪುರ

(ಇದು ದಿನಾಂಕ 18–1–2013ರಂದು ಮಂಗಳೂರಿನ ಕೊಂಕಣಿ ಅಕಾಡೆಮಿಯ ಸಹಯೋಗದೊಂದಿಗೆ ರಾಷ್ಟ್ರೀಯ ಸಂತಕವಿ ಕನಕದಾಸ ಸಂಶೋಧನಾ ಕೇಂದ್ರವು ಆಯೋಜಿಸಿದ 'ಕನಕ; ವರ್ತಮಾನದ ನಿರೂಪಣೆಗಳು' ಕುರಿತ ಗೋಷ್ಠಿಯಲ್ಲಿ ಮಾಡಿದ ಭಾಷಣದ ಲೇಖನ ರೂಪ)

# ವಿಶ್ವ ಸಂಸ್ಥೆಯ ಸಂವಿಧಾನ ಮತ್ತು ಕನಕದಾಸರು

**ಪ್ರೊ. ವಸಂತ ಕುಷ್ಟಗಿ, ಎಂ.ಎ., ಡಿ.ಲಿಟ್**

**United Nations Charter**

United Nation Charter signed on June 26, 1945 (enterted into 24, 1945)

We the people of the united nations determined to save succeeding generations from the seourge of war, which twice in one life time has brought untold sorrow to mankind and

- To reaffirm faith in fundamental human rights in the dignity and worth of the human person in the equal rights of men and women, and of nations large and small and
- To establish conditions under which justice and respect for the obligations araising from treaties and other sources of Inter National Law can be maintainded and
- To promote social progress and better standards of life in large freedom and for these ends
- To practice tolerance and live together in peace with one another as good neighbours and
- To unite our strength to maintain international peace and security and
- To ensure, by the acceptance of principles and the institution of methods that armed force shall not be used, save in the common interset and
- To employ international machinery for the promotion of the economic and social advancement of all the peoples,

Have resolved to combine our efforts to accomplish there AIMS

According our respective commeettees, through representatives assembled in the city of SANFRANCISCO we have exhibited their full powers found to be good and due fro, have agreed to the present charter of the United Nations organization and to here by establish an international organization to be known as the United Nations.

ಇಪ್ಪತ್ತನೆಯ ಶತಮಾನದಲ್ಲಿ ಎರಡು ಜಾಗತಿಕ ಮಹಾಯುದ್ಧಗಳನ್ನು ಎದುರಿಸ ಬೇಕಾಯಿತು. ಮುಂಗೈ ಜೋರಿನ ರಾಷ್ಟ್ರಗಳ ನಾಯಕರ ದುರಾಸೆಯಾದ ಅಹಂ ಸ್ಥಾಪನೆಯಲ್ಲಿ ದುಸ್ಸಾಹಸಗಳು ನಡೆದವು. 1914ರಿಂದ 1918 ರವರೆಗೆ ಮೊದಲನೆಯ ಜಾಗತಿಕ ಮಹಾಯುದ್ಧವು ನಡೆಯಿತು. ಜರ್ಮನ್ ಅಗ್ರಮಾನ್ಯ ಶಕ್ತಿಶಾಲಿಯಾದ ಯುದ್ಧೋತ್ಸಾಹ ರಾಷ್ಟ್ರವಾಯಿತು. ಅದನ್ನು ಸಹಿಸದ ಯುರೋಪ್ ಬೃಹತ್ ರಾಷ್ಟ್ರಗಳ ಕಾರ್ಯಸೂಚಿಯಿಂದಾಗಿ ಜಗತ್ತಿನ ಶಾಂತಿ, ಭದ್ರತೆ ಕುಸಿದು ಅನುಮಾನ ದ್ವೇಷಾಸೂಯೆ, ವಿರೋಧಗಳ ಬಗ್ಗೆ ಅಪಪ್ರಚಾರವೇ ಆಯಿತು. ಬ್ರಿಟಿಷರು, ಫ್ರೆಂಚರು, ಅಮೆರಿಕನ್‌ರ ಸಂಯುಕ್ತ ಸೇನೆ ಜರ್ಮನ್‌ರನ್ನು ಸೋಲಿಸಿತು. 1918ರ 11ನೆಯ ತಿಂಗಳು, 11ನೆಯ ತಾರೀಖು 11 ಗಂಟೆಗೆ ಯುದ್ಧ ನಿಲುಗಡೆಗೆ ಒಪ್ಪಂದವಾಯಿತು.

ಮೊದಲನೆಯ ಜಾಗತಿಕ ಯುದ್ಧದ ಸಂದರ್ಭದಲ್ಲಿ ಅಮೆರಿಕಾ ಅಧ್ಯಕ್ಷ ಉಡ್ರೊ ವಿಲ್ಸನ್ನನು 'ಯುದ್ಧವನ್ನು ಕೊನೆಗಾಣಿಸುವುದಕ್ಕಾಗಿ ಯುದ್ಧ' ಎಂದು ಯುದ್ಧ ನೀತಿ ಪ್ರಕಟಿಸಿದ, ಎರಡನೆಯ ಜಾಗತಿಕ ಯುದ್ಧದ ಸಂದರ್ಭದಲ್ಲಿ ಆಗ ಅಮೆರಿಕಾ ಅಧ್ಯಕ್ಷನಾಗಿದ್ದ ರೂಸ್‌ವೆಲ್ಟನು 'ಸ್ವಾತಂತ್ರ್ಯವನ್ನು ಕಾಪಾಡುವುದಕ್ಕಾಗಿ ಯುದ್ಧ' ಎಂದು ಪ್ರಕಟಿಸಿದ. ಎರಡನೆಯ ಜಾಗತಿಕ ಯುದ್ಧವು 1939ರಿಂದ ಸುಮಾರು ಏಳು ವರ್ಷಗಳ ಕಾಲ ನಡೆಯಿತು. 1945ರ ಆಗಸ್ಟ್ 6ರಂದು ಆಗಿನ ಅಮೆರಿಕಾದ ಅಧ್ಯಕ್ಷನಾಗಿದ್ದ ಹ್ಯಾರಿಟ್ರೂಮನ್, ಅಣುಬಾಂಬನ್ನು ಜಪಾನಿನ ಹಿರೋಷಿಮಾದ ಮೇಲೆ ಹಾಕಿಸಿದ, ಮೂರು ದಿನಗಳ ನಂತರ 9ನೆಯ ತಾರೀಖಿನಂದು ನಾಗಾಸಾಕಿಯ ಮೇಲೆ ಬಾಂಬ್ ಪ್ರಯೋಗವಾಯಿತು (ಈ ವಿಧ್ವಂಸಕ ಘಟನೆಯಿಂದ ಪ್ರಪಂಚವು ಇನ್ನು ಎಚ್ಚೆತ್ತಿದ್ದಿಲ್ಲ). ಆಗಸ್ಟ್ 14ರಂದು, ಜಪಾನ್ ಅಮೆರಿಕಾಗೆ ಶರಣಾಗತವಾಯಿತು. ಜಾಗತಿಕ ಯುದ್ಧ ಬೇಷರತ್ತಾಗಿ ಅಂತ್ಯ ಗೊಂಡಿತು. ತತ್ಪರಿಣಾಮವಾಗಿ ಮಾನವ ಕುಲವು ಸಂತ್ರಸ್ತವಾಯಿತು. ರೋಗರುಜಿನಗಳಿಗೆ ಆಹ್ವಾನ ನೀಡಿತು. ಮುಗ್ಧ ಮಾನವರೆಲ್ಲ ಅಪಾಂಗರಾದರು. ಅನೇಕರು ವಿಧವೆಯರಾದರು. ಬಾಂಬು ಬಿದ್ದ ನೆಲೆಯಲ್ಲಿ ಕಾಳು ಬೆಳೆಯದೇ ಹೋಯಿತು. ಮಕ್ಕಳೆಲ್ಲ ದಿಕ್ಕು ಕಳೆದು ಕೊಂಡರು. ಇದರ ಪರಿಣಾಮವು ಕೇವಲ ಯುದ್ಧ ನಡೆದ ಸ್ಥಳಗಳಲ್ಲಷ್ಟೇ ನಡೆಯಲಿಲ್ಲ. ಜಗತ್ತಿನ ಎಲ್ಲ ಖಂಡಗಳ,

ಉಪಖಂಡಗಳ, ರಾಷ್ಟ್ರಗಳ ಹಳ್ಳಿಹಳ್ಳಿಗೂ ಈ ಸಂತ್ರಸ್ತತೆಯು ಸೋಂಕಾಗಿ ತನ್ನ ದುಷ್ಟ ಪ್ರಭಾವವನ್ನು ಬೀರಿ ಮುಗ್ಧ ಬದುಕುಗಳನ್ನು ನರಕಕ್ಕೆ ತಳ್ಳಿತು.

ಕಳಿಂಗ ಯುದ್ಧದ ಅನಂತರ ಅಶೋಕ ಸಾಮ್ರಾಟನು ಜಗತ್ತಿನಲ್ಲಿ ಸುಭಿಕ್ಷೆಯನ್ನು ಪುನಃ ಸ್ಥಾಪಿಸಲು, ಶಾಂತಿ ಸಮಾಧಾನಗಳನ್ನು ಪುನಃ ನೆಲೆಸಲು ಬುದ್ಧನ ಪ್ರಕಾಶದಲ್ಲಿ ಸಂಘಗಳನ್ನು ಕಟ್ಟಿದನು. ಸತ್ಯ ಅಹಿಂಸೆಗಳ ನೆಲೆಯಲ್ಲಿ ವಿಶ್ವಶಾಂತಿಯನ್ನು ಸ್ಥಾಪಿಸಿ ಮಾನವ ಸಂಪನ್ಮೂಲವನ್ನು ವಿವೇಕ ಪೂರ್ಣವಾಗಿ ಚೈತನ್ಯಗೊಳಿಸಲು ಶಾಸನಗಳನ್ನು ಆ ಸೇತು ಹಿಮಾಚಲ ನೆಡಿಸಿದನು. ನೀತಿ ನಿಯಮಗಳಿಂದ ಬದುಕುವ ಹಕ್ಕು–ಕರ್ತವ್ಯಗಳನ್ನು ಪ್ರಚುರಗೊಳಿಸಿದನು. ಸೂಕ್ಷ್ಮವಾಗಿರುವ ಮನಸ್ಸುಗಳನ್ನು ಏಕೋಭಾವನೆಯಲ್ಲಿ ಕೊಂಡು ಕೊಳ್ಳಲು ಶ್ರಮ ಮೀರಿ ಪ್ರಯತ್ನಿಸಿದ. ಇಂತಹ ಘಟನೆಗಳು ಜಗತ್ತಿನ ಇತಿಹಾಸದಲ್ಲಿ ಸಾಕಷ್ಟು ಸಿಗುತ್ತವೆ. ಅಲ್ಲಿ ಮಾನವ ಸಂಪನ್ಮೂಲದ ಮಾಹಿತಿಯನ್ನರಿತು, ವಿವೇಕದಲ್ಲಿ ಅಂತಃಕರುಣೆಯು ಉನ್ಮೀಲಿತವಾಗಿ, ಅದರಲ್ಲಿರುವ ದುಸ್ಸಾಹಸದ ಪೀಡೆಗಳನ್ನೆಲ್ಲ ಬೇರುಸಹಿತ ಕೀತ್ತು, ಸುಪ್ರಸನ್ನತೆಯನ್ನು ನಿರ್ಮಿಸಲು ಪ್ರಯತ್ನಿಸುವ ಅಧ್ಯಾತ್ಮ ಜೀವಿಗಳು ಇದ್ದದ್ದನ್ನು ಕಾಣುತ್ತೇವೆ. ಆ ವ್ಯಕ್ತಿಗಳು ಮಾನವ ಪ್ರೀತಿಗಾಗಿ, ಅದರ ಮುಂಬೆಳಗಾಗಿ ಸ್ಫೂರ್ತಿಯಾಗಿ ನಿಂತು ಮಾನವ ಸಂಪತ್ತನ್ನು ಬೆಳೆಸುವಲ್ಲಿ ಸನ್ನದ್ಧರಾಗುತ್ತಾರೆ.

ಅಂತಹ ಒಂದು ದುರ್ಧರ ಪ್ರಸಂಗ 20ನೆಯ ಶತಮಾನದಲ್ಲಿ ಸಂಘಟಿತವಾದಾಗ ಮಾನವ ಕುಲದ ಹಿತಾಸಕ್ತಿಯುಳ್ಳ ಸದಸದ್ವಿವೇಕದ ವಿಶ್ವಚೇತನರು ಸೇರಿ, ವಿಶ್ವದಲ್ಲಿಯ ಸಹಜ ಜೀವನವು ಶಾಂತಿ ಸೌಹಾರ್ದತೆಯಿಂದ ನಡೆಯಬೇಕೆಂದು ಯೋಚಿಸಿದರು. ಆಗ ಬಹುತೇಕ ರಾಷ್ಟ್ರಗಳ ಪ್ರತಿನಿಧಿಗಳು ಸೇರಿ, ಜಗದ ಬದುಕು ಆರ್ಥಿಕ, ಸಾಮಾಜಿಕ, ಶೈಕ್ಷಣಿಕವಾಗಿ ಸಕಲ ಸ್ವಾಸ್ಥ್ಯಗಳನ್ನು ಪಡೆದು ನಿರಾತಂಕವಾಗಿ ನಡೆಯಬೇಕೆಂದು ಯೋಚಿಸಿದರು. ಮಾನವ ಕುಲವನ್ನು ತತ್ತರಗೊಳಿಸಿ ನಾಶ ಮಾಡುವ ಯೋಚನೆ ಯಾರಿಗೂ ಬರಬಾರದೆಂಬ ಸದಿಚ್ಛೆಯಿಂದ ಸಂಯುಕ್ತ ರಾಷ್ಟ್ರ ಸಂಸ್ಥೆ ಅರ್ಥಾತ್ ವಿಶ್ವಸಂಸ್ಥೆಯು ರೂಪುಗೊಂಡಿತು. ಅದರ ಚಾರ್ಟರಿನ ಪ್ರಿಯಾಂಬಲ್ಲಿನಲ್ಲಿರುವ ವಿಷಯಗಳು ಮುಖ್ಯವಾಗಿ ಮಾನವ ಹಕ್ಕು–ಕರ್ತವ್ಯಗಳ ಬಗ್ಗೆ ಪುನಃ ವಿಶ್ವಾಸವನ್ನು ಸ್ಥಾಪಿಸಿ ಮಾನವರೆಲ್ಲರೂ ಪರಸ್ಪರ ಗೌರವದಿಂದ ಬಾಳಲು ಅನುಸರಣೆಗೊಳಿಸುವುದು. ಸಮಬಾಳು, ಸಮಪಾಲು, ಸಮಭಾವ, ಸಮದುಡಿತಗಳ ಬಗ್ಗೆ ಜಾಗೃತಿ ಮೂಡಿಸಿ, ಲಿಂಗಭೇದವನ್ನಡಗಿಸಿ, ಬದುಕುವ ಹಕ್ಕಿನ ಸಮಾನತೆಯನ್ನು ಸಣ್ಣ–ದೊಡ್ಡ ರಾಷ್ಟ್ರಗಳೆನ್ನದೆ ಜಗದಲ್ಲಿಯ ಅಂತಿಮ ಪ್ರಜೆಯವರೆಗೂ ಒದಗಿಸಿಕೊಡುವುದು ಇತ್ಯಾದಿ.

ಈ ಉದ್ದೇಶವನ್ನು, ಈ ಸ್ಥಿತಿಯಲ್ಲಿ ಅನುಷ್ಠಾನಕ್ಕೆ ತರುವುದಕ್ಕಾಗಿ ಮಾಡಬೇಕಾದ ನ್ಯಾಯಯುತ ಕರ್ತವ್ಯಗಳ ಪಾಲನೆಗೆ ಅಂತಾರಾಷ್ಟ್ರೀಯ ಕಾನೂನನ್ನು ಸ್ಥಾಪಿಸುವುದು; ಹೀಗೆ ಸಾಮಾಜಿಕರಲ್ಲಿ ವಿಶ್ವಾಸವನ್ನು ಮೂಡಿಸಿ ಅವರಿಗೆ ಉತ್ತಮ ಸ್ಥಿತಿಗತಿಗಳಿಂದ ಕೂಡಿದ ಬದುಕನ್ನು ನೀಡಲು ಜಗಹಿತಕಾರಿಯಾದ ಸ್ವಾತಂತ್ರ್ಯವನ್ನು ಅಭಿವೃದ್ಧಿ ಗೊಳಿಸುವುದು.

ಇವುಗಳ ಉದ್ದೇಶಗಳನ್ನು ಸಾಧಿಸಲು ಸಹಿಷ್ಣುತೆಯಲ್ಲಿ ಶಾಂತಿ ಸೌಹಾರ್ದಗಳಿಂದ ಪರಸ್ಪರ ನೆರೆಹೊರೆಯಲ್ಲಿ ಬದುಕುವ ಕಲೆಯನ್ನು ಸಾಧಿಸಬೇಕು ಮತ್ತು ಸಂಘಟಿತರಾಗಿ ಅಂತಾರಾಷ್ಟ್ರೀಯ ಶಾಂತಿ ಮತ್ತು ಸುರಕ್ಷತೆಗಳನ್ನು ಕಾಪಾಡಬೇಕು. ಮನುಷ್ಯನ ಸಾಮಾನ್ಯ ಹಿತವನ್ನು ಕಾಪಾಡಲು ಶಸ್ತ್ರಾಸ್ತ್ರಗಳನ್ನು ಬಳಸಿ ರಕ್ತಪಾತಕ್ಕೆಡೆಕೊಡದೆ ಜನಹಿತ ಸಾಧನೆಯ ಸಾಮಾನ್ಯ ತತ್ತ್ವಗಳನ್ನು ಒಪ್ಪಿಕೊಂಡು ಆ ಮೂಲಕ ನಡೆದುಕೊಳ್ಳಬೇಕು; ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಆರ್ಥಿಕ ಮತ್ತು ಸಾಮಾಜಿಕ ಸ್ಥರದಲ್ಲಿ ಪರಸ್ಪರ ಪೂರಕವಾಗಿರುವ ಅಭಿವೃದ್ಧಿ ಸಾಧಿಸಲು ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು.

ವಿಶ್ವಸಂಸ್ಥೆಯ ಈ ಚಾರ್ಟರಿಗೆ (ಹಕ್ಕನ್ನು ನೀಡುವ ಸನ್ನದು, ಅಧಿಕೃತ ದಾಖಲೆ, ಸಂವಿಧಾನಕ್ಕೆ) ಆಗ 46 ರಾಷ್ಟ್ರಗಳ ಪ್ರತಿನಿಧಿಗಳು ಒಪ್ಪಿಗೆ ನೀಡಿದಾಗ ಈ ಸಂಸ್ಥೆ 26ನೆಯ ಜೂನ್ 1945ರಲ್ಲಿ ಅಸ್ತಿತ್ವಕ್ಕೆ ಬಂದಿತು. ಇದರ ಮೂಲ ಉದ್ದೇಶ ಪ್ರಪಂಚದ ಸಾಮಾನ್ಯ ಪ್ರಜೆ ನಿರಾತಂಕವಾಗಿ ಸ್ವಾತಂತ್ರ್ಯದ ನೆಮ್ಮದಿಯ ಬದಕನ್ನು ಸೌಹಾರ್ದಯುತವಾಗಿ ಬಾಳಬೇಕೆಂಬುದೇ ಆಗಿದೆ. ಸುರಕ್ಷೆ ಸುಭಿಕ್ಷೆಗಳಿಂದ ಮಾನವ ಜನ್ಮದ ಸಾರ್ಥಕತೆಯನ್ನು ಸಾಧಿಸಿಕೊಡುವ ನಿಮಿತ್ತ ಈ ಸಂಸ್ಥೆ ತನ್ನ ಕಾರ್ಯವ್ಯಾಪ್ತಿಯನ್ನು ವಿಶ್ವಶಾಂತಿದೂತನಾಗಿ ಮಾಡುತ್ತಿದೆ. ಈಗ ಈ ವಿಶ್ವಸಂಸ್ಥೆಯ ಅಡಿಯಲ್ಲಿ ಒಪ್ಪಂದಕ್ಕೆ ಬಂದ ರಾಷ್ಟ್ರಗಳು ಸುಮಾರು 191–200 (1980ರ ಪ್ರಕಾರ)

ಈ ನಿಟ್ಟಿನ ಪ್ರಯತ್ನವು ಜಗತ್ತು ನಡೆದು ಬಂದ ದಾರಿಯಲ್ಲಿ ಇದೇ ಮೊದಲನೆಯದಲ್ಲ. ಏಕೆಂದರೆ ಸೃಷ್ಟಿ ವಿಕಾಸಕೊಳ್ಳುತ್ತ ಬಂದಿರುವ ಕ್ಷಣದಿಂದಲೇ, ಈ ಕಾರ್ಯವು ನಡೆಯುತ್ತಲೇ ಬಂದಿದೆ. ಪ್ರಕೃತಿಯು ಆಕ್ರೋಶಗೊಂಡಾಗಲೆಲ್ಲ ಸಮತೆಯನ್ನು ಕಾಪಾಡಿ ಸ್ವಾಸ್ಥ್ಯ ಸ್ಥಾಪಿಸಲು ಕ್ರಮಗಳು ಸಾಗಿ ಬರುತ್ತಲೇ ಇವೆ. ಸ್ವರೂಪವಿಲ್ಲದ ಸದಸದ್ವಿವೇಕದ ಒಂದು ಚೇತನ ಈ ಪ್ರಕೃತಿಯ ನಿಗೂಢದಲ್ಲಿದ್ದುಕೊಂಡು ಮಾರ್ಗದರ್ಶನ ಮಾಡುತ್ತಲೇ ಇದೆ. ಅದನ್ನು ಕೇಳುವ ಅಥವಾ ಬಿಡುವ ಅರ್ಥಾತ್ ಸ್ವೀಕರಿಸುವುದಕ್ಕಾಗಿ ಅಲ್ಲೊಂದು ಕರ್ತಾನರೂಪದಲ್ಲಿ ಮನಸ್ಸಿರುತ್ತದೆ. ಆ ಮನಸ್ಸು ಸಂಪೂರ್ಣವಾಗಿ ಸದಸದ್ವಿವೇಕವನ್ನು ಆವರಿಸಿದರೆ, ಸರ್ವಹಿತಕಾರಿಯಾದ ಸುಪ್ರಸನ್ನ ವಾತಾವರಣದ ಸಂಬಂಧದಲ್ಲಿ ಹಿತವಾದ ಬದುಕು ಸಾಧ್ಯವಾಗುತ್ತದೆ. ವ್ಯತಿರಿಕ್ತವಾದರೆ ಅಹಿತಕರ ಬದುಕು. ಇಂತಹ ಮನಸ್ಸಿನ ವಿರಾಟವನ್ನು ವ್ಯಕ್ತಿಯೇ ನಿಯಂತ್ರಿಸಿಕೊಂಡು ಸಹಕಾರಿ ಮುಖಿಯಾದ ಬದುಕಿನ ಒಟ್ಟಂದದ ಹಿತಕ್ಕಾಗಿ ಸಿದ್ಧಗೊಳ್ಳಲು ಕಾಲಾನುಕಾಲಕ್ಕೆ ತತ್ತ್ವ ಸಿದ್ಧಾಂತಗಳು ಒಡಮೂಡಿವೆ. ಹೀಗಾಗಿ ಅನುಕೂಲಕ್ಕೂ ಪ್ರಕೃತಿಯು ರೂಪಾಂತರವಾಗುತ್ತ ಪುರುಷ ಪ್ರಯತ್ನದಿಂದ ಬದುಕಿನ ಹಕ್ಕಿನ ಬಗ್ಗೆ ಎಚ್ಚರಿಸುತ್ತ, ಅದರ ಸಾಧನೆಗಾಗಿ ಸಂಘಟಿತ ವ್ಯವಸ್ಥೆಗಳನ್ನು ರೂಪುಗೊಳಿಸುತ್ತ ಬಂದಿರುವುದೆಲ್ಲವನ್ನು ಇತಿಹಾಸವು ದಾಖಲಿಸಿಕೊಂಡಿದೆ. ಸಮಷ್ಟಿಯ ಹಿತದಿಂದ, ಸಾಧನೆಯ ಬಲದಲ್ಲಿ ವ್ಯಷ್ಟಿಯು ಬೆಳೆದು, ಅವತಾರ ಪುರುಷನಾಗಿ, ಜಗತ್ತಿನಲ್ಲಿ ಶಾಂತಿ ಸಮಾಧಾನ ನೆಮ್ಮದಿಗಳನ್ನು ಸ್ಥಾಪಿಸಲು ಪ್ರಯತ್ನಿಸುತ್ತಲೇ ಬಂದಿದ್ದಾನೆ. ಆ ಪರಂಪರೆಯಲ್ಲಿ ಬಂದವರನ್ನು ನಾವು ಅವತಾರಗಳೆಂದು ಕರೆದಿರಬಹುದು. ಆದರೆ ಆ ಅವತಾರಗಳು ತೋರಿಸಿದ ನಡೆಯನ್ನು ಜೀವನ ತತ್ತ್ವಮಾರ್ಗವೆಂದಿದ್ದೇವೆ.

ಈ ನೆಲೆಯಲ್ಲಿ ಚಿಂತನಕ್ಕೊಳಗಾದಾಗ ಈಶ–ದಾಸ ಜೀವನ ತತ್ತ್ವಮಾರ್ಗವೊಂದು ನಮ್ಮ ಕಣ್ಣೆದುರು ಬರುತ್ತದೆ. ಈ ತತ್ತ್ವಮಾರ್ಗದ ಸೂತ್ರಗಳಲ್ಲಿ ಸಮಷ್ಟಿಯ ಜೀವನ ಲೀಲೆಗೆ ವ್ಯಷ್ಟಿಯೇ ಮೂಲ ಘಟಕವಾಗುತ್ತಾನೆ. ಈ ಮೂಲ ಘಟಕ ವ್ಯಷ್ಟಿ ಎಕ್ಕಟಿಯಾಗಿ ಬದುಕನ್ನು ಸಾಗಿಸಲು ಆಗಲಾರದು. ಅವನು ಸಹಜೀವಿಯಾಗಿ ಬೆಳೆಯಬೇಕಾಗುತ್ತದೆ. ಆದ್ದರಿಂದ ವ್ಯಷ್ಟಿಯ ಮನಸ್ಸನ್ನು ಸದಸದ್ವಿವೇಕದಿಂದ ವರ್ತಿಸಲು ಸಂಸ್ಕಾರಗೊಳಿಸಬೇಕಾಗುತ್ತದೆ. ಇದರ ತೀವ್ರತೆಯನ್ನು ಅರಿತ ಈಶ–ದಾಸ ತತ್ತ್ವವು, ದಾಸನು ಅರ್ಥಾತ್ ಚೇತನ ಸ್ವರೂಪಿಯಾದ ಮನಸ್ಸನ್ನು ಸುಂದರವಾಗಿ, ರೂಪಿಸಲು ವ್ಯಷ್ಟಿ ವ್ಯಷ್ಟಿಗಳನ್ನು ಸೌಹಾರ್ದಯುತವಾಗಿ ಬೆಳೆಸಲು ಕಾಲಕಾಲಕ್ಕೆ ಅವತಾರ ಪುರುಷರ ಮಟ್ಟಕ್ಕೆ ಜಾರಿದ ಮಹಾಮಾನವ ಶಕ್ತಿಗಳನ್ನು ಅರಳಿಸಿದ. ಅದೇ ಪರಿಸರದಿಂದ ಮೇಲೆದ್ದು ಈಶ ಸ್ವರೂಪಿಯಾದ ಸಮಷ್ಟಿಯನ್ನು ನೆಮ್ಮದಿಯಿಂದ ಇಡಲು ಸಂದೇಶ ನೀಡಿದ್ದಾರೆ. ಅಂತಹವರಲ್ಲಿ ಕರ್ನಾಟಕದ ಹರಿದಾಸರು ಕೂಡ, ಅಂತಹ ಮಾನವ ಶಕ್ತಿಯನ್ನು ಪಡೆದುಕೊಂಡು, ತಮ್ಮ ನಿಟ್ಟಿನಲ್ಲಿ ಶಾಂತಿ ಸಮಾಧಾನಗಳಿಂದ ಕೂಡಿದ ಸುಂದರವಾದ ವಿಶ್ವನಿರ್ಮಾಣಕ್ಕೆ ವ್ಯಷ್ಟಿಗೆಲ್ಲ ಬದುಕಿನ ಸ್ವಾರಸ್ಯವನ್ನು ತಿಳಿಸಿ ಅವರೆಲ್ಲ ಮಾನವ ಧರ್ಮವನ್ನು ಆಲಂಗಿಸಿ ನಡೆಯಲು ತತ್ತ್ವ ಪ್ರಸಾರ ಮಾಡಿದ್ದಾರೆ. ಆ ಬಲದಿಂದ ಒಳ್ಳೆಯ ಮಾನವ ಸಮಾಜವು ತನ್ನ ಅಸ್ತಿತ್ವವನ್ನು ಪ್ರಕಾಶಿಸುತ್ತಲೇ ಸಾಗಿದೆ.

ಹರಿದಾಸರ ತತ್ತ್ವ ಚಿಂತನೆಯಲ್ಲಿ ಇಹಲೋಕದ ಬದುಕು ಸುವ್ಯವಸ್ಥಿತವಾಗಿ ಪ್ರಗತಿ ಸಾಧಿಸಿದರೆ, ಪರವನ್ನು ಈ ನೆಲೆಯಲ್ಲಿಯೇ ಸಾಕ್ಷಾತ್‌ಗೊಳಿಸಿಕೊಳ್ಳಲು ಸಾಧ್ಯವಿದೆ ಯೆಂಬುದನ್ನು ಕಾಣಬಹುದು. ಅವರ ಪ್ರಕಾರ ವ್ಯಷ್ಟಿ ವ್ಯಷ್ಟಿಯು (ಹಾಗೆ ನೋಡಿದರೆ ಜೀವಿ ಜೀವಿಗಳೆಲ್ಲ) ಹುಟ್ಟಿದಾರಭ್ಯದಿಂದ ದತ್ತ ಸ್ವಾತಂತ್ರ್ಯವನ್ನು ಪಡೆದೇ ಜನ್ಮತಾಳಿರುತ್ತದೆ. ಅದನ್ನು ಬಳಸುವ ಹೊಣೆ ಆತನದೇ ಆಗಿರುತ್ತದೆ. ಆದರೆ ಆತನಿಗೆ ಅರ್ಥಾತ್ ಆತನ ಮನಸ್ಸಿಗೆ ಪ್ರೇರಣೆಯಾಗಿ ಸದಸದ್ವಿವೇಕ/ಅಸದಸದ್ವಿವೇಕ ನಿಂತಿರುತ್ತದೆ. ಇದು ಪೃಥಕ್ಕರಣವಾಗಿರುವ ಮನಸ್ಸಿನ ಸ್ವರೂಪ. ಆ ಮನಸ್ಸು ಸದಸದ್ವಿವೇಕಕ್ಕೆ ವಾಲಿದರೆ ಸಮಷ್ಟಿಯಲ್ಲಿ ಆ ವ್ಯಷ್ಟಿ ಗೌರವ ಪಡೆಯುತ್ತಾನೆ. ಅಂತಹವನಿಗೆ ತನ್ನ ಸ್ವರೂಪ ದರ್ಶನದಲ್ಲಿ ಆನಂದ ಪ್ರಾಪ್ತಿಯಾಗುತ್ತದೆ. ಇದರ ವ್ಯತಿರಿಕ್ತವಾಗಿ ಎಂದರೆ ಅವಿವೇಕಕ್ಕೆ ವ್ಯಷ್ಟಿಯ ಮನಸ್ಸು ವಾಲಿದ್ದರೆ ಆ ನಿಟ್ಟಿನಲ್ಲಿಯೇ ಸ್ವರೂಪ ದರ್ಶನವಾಗಿ ಆ ಮೌಲ್ಯದ ಆನಂದ ಪ್ರಾಪ್ತಿ ಅಲ್ಲಿ ಎಂದರೆ ಜಗತ್ತನ್ನು ಭಯಭೀತಗೊಳಿಸುವ ಭಯಂಕರತೆಯ ನಿಲುವು ಅಖಂಡವಾಗಿರುತ್ತದೆ. ಈ ಎರಡರಲ್ಲಿ ಮೊದಲನೆಯ ತರಹದ ವ್ಯಕ್ತಿಯಿಂದ ಸಾರ್ವಜನಿಕ ಹಿತಾಸಕ್ತಿಗಳು. ಆತ ಎಲ್ಲರೊಳಗೆ ಒಂದಾಗಿ ಬದುಕಿ ನೆಮ್ಮದಿಯನ್ನು ಸಾಧಿಸುತ್ತಾನೆ. ಇಂತಹ ವ್ಯಷ್ಟಿಗಳ ಸಮುದಾಯ ಹೆಚ್ಚಾದಂತೆ ಸಮಷ್ಟಿಯಾದ ಜಗತ್ತು ಪುರುಷಾರ್ಥ ಸಾಧನೆಯಲ್ಲಿ ವಿಶ್ವವೆಲ್ಲ ಒಂದಾಗಿ ನೆಮ್ಮದಿಯನ್ನು ಸಾಧಿಸುತ್ತಾನೆ. ಇಂತಹ ವ್ಯಷ್ಟಿಗಳ ಸಮುದಾಯ ಹೆಚ್ಚಾದಂತೆ ಸಮಷ್ಟಿಯಾದ ಜಗತ್ತು ಪುರುಷಾರ್ಥ ಸಾಧನೆಯಲ್ಲಿ ವಿಶ್ವವೆಲ್ಲ ಒಂದಾಗಿ ನೆಮ್ಮದಿಯನ್ನು ಅನುಭವಿಸತೊಡಗುತ್ತದೆ. ಆಗ ಆ ವಿಶ್ವವು, ಪರಸ್ಪರ ಹೃದಯ ದಾರಿದ್ರ್ಯವನ್ನು ಕಳೆದುಕೊಂಡ, ಈ ವಿಶ್ವದಲ್ಲಿ ಎಲ್ಲರೂ ಪರಸ್ಪರ ಪೂರಕವಾಗಿದ್ದು ಬದುಕುವ ಹಕ್ಕನ್ನು ಪಡೆದಿರುವ ಪ್ರಕೃತಿಯ ಮೂಲತತ್ತ್ವದ ವಿಕಾಸ, ಆ ವಿಕಾಸದಲ್ಲಿಯ ಪ್ರಕಾಶವನ್ನು ವಿಶ್ವದ ಎಲ್ಲ ಜೀವಿಗಳಿಗೂ, ಪಡೆದುಕೊಳ್ಳಲು ಯಾವ ಅಭ್ಯಂತರವೂ ಇರುವುದಿಲ್ಲ, ಹಾಗೆ ಪಡೆದಾದವರೆಲ್ಲ ವಿಶ್ವ ನೆಮ್ಮದಿಯನ್ನು ಕಾಪಾಡುವ ಮಹಾಚೇತನಗಳಾಗುತ್ತಾರೆ. ಅಂತಹ ಚೇತನಗಳು ರೂಪುಗೊಳ್ಳುವುದಕ್ಕೆ ಕನಕದಾಸರ ಸಾಹಿತ್ಯದಲ್ಲಿ ಬೇಕಾದಷ್ಟು ಪ್ರೇರಣೆಯಾಗಿರುವ ವಿಷಯಗಳಿವೆ.

ಕನಕದಾಸರು, 16ನೆಯ ಶತಮಾನವು ಜಗತ್ತಿಗೆ ನೀಡಿದ ತ್ರಿಕಾಲಾತೀತವಾದ ಲೋಕಕವಿ. ಅವರು ಲೋಕದ ಎಲ್ಲ ಮೈಗಳನ್ನು ಅನುಭವಿಸಿದವರು. ತಮ್ಮ ಸುತ್ತಲಿನ ಸಮಷ್ಟಿಯ ಒಳಹೊರಗುಗಳನೆಲ್ಲ ಬಲ್ಲವರು. ಹೀಗಾಗಿ ಅವರ ಸಾಹಿತ್ಯದಲ್ಲಿ ಜಗತ್ತಿನ ಬದುಕಿನ ಮೂಲ ಘಟಕವಾದ ವ್ಯಷ್ಟಿಯ ಬಗ್ಗೆ ಬಹಳ ಕಾಳಜಿಯಿರುವುದನ್ನು ಕಾಣಲಾಗುತ್ತದೆ. ಅಲ್ಲಿ ಅವರು ಸಾರಿದ ಮಾನವ ನೀತಿಯಿಂದ ಮಾನವ ಸಂಪನ್ಮೂಲದ ಸುಂದರ ಕ್ರಿಯಾಶಕ್ತಿಯು ತ್ರಿಕಾಲಾ ಬಾಧಿತವಾಗಿದೆ. ನಿತ್ಯಸತ್ಯವನ್ನು ಮತ್ತೆ ಮತ್ತೆ ಪ್ರಕಾಶ ಮಾನಕ್ಕೆ ತಂದಂತಿದೆ. ಮನಸ್ಸನ್ನು ಸತ್ಯಾವಲಂಬನಗೊಳಿಸಿ ಸರ್ವಸಮ್ಮತವಾದ ಜೀವನ ಮೌಲ್ಯಗಳನ್ನೆಲ್ಲ ಅರಳಿಸಿಕೊಂಡು ನಡೆಯುವತ್ತ ಅವರ ಸಾಹಿತ್ಯದ ಧ್ವನಿಯು ಸೆಳೆತವಾಗಿದೆ.

ಈ ನಿಟ್ಟಿನಲ್ಲಿ ವ್ಯಷ್ಟಿಯ ನಡೆನುಡಿಗೆ ಪ್ರೇರಣೆಯಾಗುವ ಅವರ ಅಂತರಂಗದ ನುಡಿಗಳನ್ನು ಹೀಗೆ ಸಂಗ್ರಹಿಸೋಣ:

**'ಏನು ಮಾಡಲಯ್ಯ ಬಯಲಾಸೆ ಬಿಡದು**
**ಮಾನವ ಮೃಗೇಂದ್ರ ರಕ್ಷಿಪಯ್ಯ'**

**'ದುರ್ಜನರ ಸಂಗವನು ಎಂದಿಗೊಲ್ಲೆನು ಇಂಥ ।**
**ಸಜ್ಜನ ಸಂಗದೊಳಗಿರಿಸೆನ್ನ ರಂಗ'**

**'ಸತ್ಯವಂತರ ಸಂಗವಿರಲು ತೀರ್ಥವೇತಕೆ?**
**ನಿತ್ಯ ಅನ್ನದಾನವಿರಲು ಭಯವು ಏತಕೆ?'**

**'ಅಹುದಾದೊಡಹುದೆನ್ನಿ ಅಲ್ಲವಾದೊಡಲ್ಲವೆನ್ನಿ**
**ಸಹಜವಿದು ಸಜ್ಜನರ ಮನಕೆ ಸಮ್ಮತವು'**

**'ಏನಿದೆತ್ತಣ ಬಯಕೆ ವಿಲೋಮಂಪಜೀವ**
**ನೀನು ಅರಿತರೆ ಪೇಳು ನಿಜವೆನಗೆ'**

**'ಏನು ಬರುವುದೋ ಸಂಗಡೇನು ಬರುವುದೋ**
**ದಾನಧರ್ಮ ಮಾಡಿ ಬಹುನಿಧಾನಿಯೆನಿಸಿಕೊಳ್ಳೊ ಮನುಜ'**

**'ಎಲ್ಲರೂ ಮಾಡುವುದು ಹೊಟ್ಟೆಗಾಗಿ! ಗೇಣು ಬಟ್ಟೆಗಾಗಿ'**

'ನಾನು ನೀನು ಎನ್ನದಿರೋ ಹೀನ ಮಾನವ
ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡೆಲೋ–ಪ್ರಾಣಿ'

'ಬೇಕೆಂದರೆ ಬಾರದು ಒಲ್ಲೆನೆಂದರೆ ಹೋಗದು
ಏಕಂಜುವಿ ಎಲೋ ಶ್ರೀಹರಿ ಕರುಣಿಸದಲೆ ಒಂದಾಗದು'

'ಮರೆಯದಿರು ಮರೆಯದಿರು ಎಲೆ ಮಾನವಾ ನಿನ್ನ
ಸಿರಿಯ ಹವಣೇನು ಹೇಳಲೊ ಮಾನವಾ ॥ಪ॥

'ಗೆಲ್ಲು ಸೋಲಿನ ಮಾತು ಸಲ್ಲವೆಲವೋ ನಿನಗಿ
ದೆಲ್ಲವನು ಬಿಡು ಗರ್ವ ನಿನಗೇತಕೊ'

ಕನಕದಾಸರ ಇಂತಹ ಆತ್ಮವಿವೇಚನೆಯಲ್ಲಿ ವ್ಯಷ್ಟಿ ಸದೃಢ ಚೇತನನಾಗುತ್ತಾನೆ. ಮಾನವ ಹಕ್ಕುಗಳನ್ನು ಸಮಷ್ಟಿಯ ಹಿತಕ್ಕಾಗಿ ಬೆಳೆಸಿಕೊಳ್ಳತೊಡಗುತ್ತಾನೆ. ಸರ್ವರೂ ದತ್ತಸ್ವಾತಂತ್ರ್ಯರು ಎಂಬುದನ್ನು ಮನದಟ್ಟು ಮಾಡಿಕೊಳ್ಳುತ್ತಾನೆ. ವರ್ಣಭೇದ, ಭಾಷಾ ಭೇದಗಳಿಂದ ಮುಕ್ತನಾಗಿರಲು ಹವಣಿಸುತ್ತಾನೆ. ಜಗದೇಳಿಗೆಗೆ ತಾನೂ ಒಂದು ಅಗಾಧವಾದ ಸಂಪನ್ಮೂಲವೆಂಬುದನ್ನು ಬಗೆಯುತ್ತಾನೆ. ಅದನ್ನೆ ಎಲ್ಲರೂ ದೃಢಪಡಿಸಿಕೊಂಡು ಬಾಳಲು ಪ್ರೇರಣೆಯಾಗುತ್ತಾನೆ. ತನ್ನ ಬದುಕಿನ ಮೂಲಕ ಹಾಗೂ ಸಾಹಿತ್ಯದ ಮೂಲಕ ಈ ರೀತಿ ಬೆಳೆದ ಸಂಪನ್ಮೂಲದಲ್ಲಿ, ತನ್ನನ್ನು ತಾನು ಗೌರವಿಸಿಕೊಂಡು ತನ್ನಂತೆ ಪರರ ಬಗೆಯೆಂದು ಅವರನ್ನು ಗೌರವಿಸುವ ಕಣ್ಣು ಅವನಲ್ಲಿ ಬರುತ್ತದೆ. ದೃಷ್ಟಿ ಪ್ರಜ್ವಲಿಸುತ್ತದೆ. ಆ ಮೂಲಕ ಜಗತ್ತಿನಲ್ಲಿ ವ್ಯಕ್ತಿ ಸ್ವಾತಂತ್ರ್ಯವು ನ್ಯಾಯ ಶಾಂತಿಗಳ ರಕ್ಷಣೆಗೆ ಶಕ್ತಿಯಾಗುತ್ತದೆ. ಇತರರಿಗೆ ಭಾರವಾಗದಂತೆ ಸುಂದರವಾಗಿ ಬದುಕುವ, ಮಾತಾಡುವ, ಅಭಿಪ್ರಾಯ ವ್ಯಕ್ತ ಮಾಡುವ ಸ್ವಾತಂತ್ರ್ಯವನ್ನು ಪಡೆಯುತ್ತಾನೆ. ತಾನು ಬೆಳೆದು, ತನ್ನೂರು ಬೆಳೆಸಿ, ರಾಜ್ಯ ದೇಶಾದಿಯಾಗಿ ವಿಶ್ವಪ್ರೀತಿಯ ಪ್ರಕೃತಿಯನ್ನು ಪಡೆಯುತ್ತಾನೆ. ಇಂತಹ ಮನಸ್ಸನ್ನು ಬೆಳೆಸಲು, ಪರಂಪರೆಯಾಗಿ ಧಾವಂತಗಳು ನಡೆದಿವೆ. ದರ್ಶನಗಳು ಮೂಡಿ ಬಂದಿವೆ. ಈ ಪರಂಪರೆಯಲ್ಲಿ ದಾಸಶ್ರೇಷ್ಠರಾದ ಕನಕದಾಸರು ತಮ್ಮ ಕೀರ್ತನೆಗಳ ಮೂಲಕ ಕಾವ್ಯಗಳ ಮೂಲಕ ಪ್ರೇರಣೆಯಾಗಿ ನಿಂತವರು. ಏಕೆಂದರೆ ಅವರ ಕಾವ್ಯ ವಾಣಿ ಮನುಷ್ಯನ ಮನಸ್ಸನ್ನು ತತ್‌ಕ್ಷಣವೇ ಸಂಸ್ಕಾರಗೊಳಿಸಿ ಸಮಾಧಾನಿಯನ್ನಾಗಿಸುತ್ತದೆ. ಸಮಭಾವದಿಂದ ಸಮಸಮಯ ಸಮ ಅವಕಾಶವನ್ನು ಬಳಸಿಕೊಳ್ಳಲು ಆ ಮನಸ್ಸಿಗೆ ನೀಡುತ್ತದೆ. ಅಂತಹ ಮಾತುಗಳನ್ನು ಕಂಡಾಗ ಆ ಮಾತುಗಳ ಸತ್ವಾಂಶವೆಲ್ಲ ಇಂದಿನ ವಿಶ್ವಸಂಸ್ಥೆಯ ಸನ್ನದಿನಲ್ಲಿ ಕಣ್ಣರಿಯದ ಕರುಳಿನ ನೆಲೆಯಲ್ಲಿ ಮಿಡಿದಿವೆ. ಏಕೆಂದರೆ ವಿಶ್ವಸಂಸ್ಥೆಯು ಜಗತ್ತಿನ ಒಟ್ಟು ಹಿತಕ್ಕಾಗಿ ಇಂದಿನ ಶತಮಾನದಲ್ಲಿಯೂ ವ್ಯಷ್ಟಿಯನ್ನು ವಿಶ್ವಮಾನವನನ್ನಾಗಿ ಮಾಡುವ ನಿಟ್ಟಿನ ಸಂಸ್ಥೆಯೆಂದು ಪರಿಗಣಿಸಲಾಗಿದೆ. ಹಿಂದೆ ಇಂತಹದ್ದೆ ಒಂದು ಪ್ರಯೋಗ ಹೋದ ಶತಮಾನದಲ್ಲಿ ಮೊದಲನೆಯ ಜಾಗತಿಕ ಯುದ್ಧವಾದ ಮೇಲೆ ಲೀಗ ಆಫ್ ನೇಷನ್ಸ್ (ಸಂಯುಕ್ತ ರಾಷ್ಟ್ರ ಸಂಘ) ಎಂಬ ಹೆಸರಿನಿಂದ ಸಂಪನ್ನಗೊಂಡಿತ್ತು. ಆದರೆ ಆ ಸೊತ್ತು ಸಹೃದಯರ ಕೈಗೆ ಸಿಕ್ಕಲಿಲ್ಲ. ಹೀಗಾಗಿ ಫಲ ದೊರೆಯಲಿಲ್ಲ. ಆ ಅನುಭವದ ತಳಹದಿಯಲ್ಲಿ ಸಂಯುಕ್ತ ರಾಷ್ಟ್ರ ಸಂಸ್ಥೆ (ವಿಶ್ವಸಂಸ್ಥೆ) ಎಂಬ ಹೆಸರಿನಿಂದ ಒಳ್ಳೆಯ ನೆಲೆಗಟ್ಟಿನ ಮೇಲೆ ಕಾರ್ಯ ನಿರ್ವಹಿಸುತ್ತಿದೆ. ಹೀಗಾಗಿ ಇತ್ತೀಚೆಗೆ ಸರ್ವಶಕ್ತ ರಾಷ್ಟ್ರಗಳು ಜಾಗತಿಕ ಯುದ್ಧಗಳ ಮಟ್ಟಕ್ಕೆ ಸಾಗದಂತೆ, ವಿಶ್ವವನ್ನು ಸತ್ಯನಾಶ ಮಾಡುವ ದಿಸೆಗೆ ಅವರ ಮನಸ್ಸನ್ನು ದಟ್ಟಗೊಳಿಸಿದಂತೆ, ಈ ವಿಶ್ವಸಂಸ್ಥೆ ಮಧ್ಯಸ್ಥಿಕೆ ವಹಿಸಿ ಕಾಪಾಡಿ ಕೊಂಡಿರುವದಂತೂ ಸತ್ಯ. ಈ ನೆಲೆ ಇನ್ನಷ್ಟು ಭದ್ರಗೊಳ್ಳಬೇಕಾದರೆ ಕನಕದಾಸರ ಸಂತವಾಣಿಯಲ್ಲಿಯ ಸೂರ್ಯಪ್ರಕಾಶದ ನುಡಿಗಳನ್ನು, ವಿಶ್ವಸಂಸ್ಥೆಯ ಚಾರ್ಟರಿಗೆ ಸಂವಿಧಾನದಲ್ಲಿಯ ನಿಯಮಗಳಿಗೆ, ಇನ್ನಷ್ಟು ಪ್ರಖರವಾಗಿ ಪ್ರಕಾಶ ಬೀಳುವ ರೀತಿಯಲ್ಲಿ ಇಂಗ್ಲಿಷಿಗೆ, ಫ್ರೆಂಚಿಗೆ ಮತ್ತು ರಷಿಯನ್ ಮೊದಲಾದ ಭಾಷೆಗಳಿಗೆ ಅಷ್ಟೇ ಅಲ್ಲ–ವಿಶ್ವಸಂಸ್ಥೆಯ ಪರಿಧಿಯಲ್ಲಿ ಬರುವ ಬಹುಭಾಷಾ ಭಾರತಿಯನ್ನೊಳಗೊಂಡು ವಿಶ್ವದ ಸರ್ವ ಭಾಷೆಗಳಿಗೂ ಅನುವಾದಗೊಳಿಸಿ ಆದಷ್ಟು ಕನಕದಾಸರ ಸಾಹಿತ್ಯವನ್ನೆಲ್ಲ ವಿಶ್ವದ ಸೊತ್ತನ್ನಾಗಿಸ ಬೇಕಾಗಿದೆ. ಆ ಸೊತ್ತಿನಲ್ಲಿ ಕನಕದಾಸರು ಜಾತಿ, ಮತ, ಕುಲ ವಿವೇಚನೆಗೆ ಅಂದು ಕಂಡುಕೊಂಡ ವಿಚಾರದ ಬೆಳಕನ್ನು ಇಂದಿನ ವಿಶ್ವಸಂಸ್ಥೆಯು ಜಗದ ರಾಷ್ಟ್ರಗಳಿಗೆ ನೀಡುವ ವ್ಯಕ್ತಿ ಸ್ವಾತಂತ್ರ್ಯದ ನಿಲುವಿನಲ್ಲಿ ಜನಾಂಗ, ಬಣ್ಣ, ಭಾಷೆ, ಲಿಂಗ ಮತಗಳನ್ನು ಹೊರಚಾಚಿ ವಿಶ್ವ ಭ್ರಾತೃತ್ವದ ಸಂದೇಶದ ವಿಧಿಯನ್ನು ನೀಡಿರುವ ದಿಸೆಯಲ್ಲಿ ಕಾಣುತ್ತೇವೆ.

ಆ ಸಂದೇಶದ ವಿಧಿಗೆ, ವಿಶೇಷತಃ ಅವರ ಈ ಕೆಳಗಿನ ಕೀರ್ತನೆಗಳು/ಗೀತೆಗಳು ಅತ್ಯಂತ ಪೂರಕವಾದ ಸಮಭಾವದ ಸತ್ತ್ವವನ್ನು ನೀಡುತ್ತವೆ. ಜಾಗತಿಕ ಸತ್ಯವನ್ನು ಬಿಚ್ಚಿಡುತ್ತವೆ:

ಎತ್ತರವನೆಂದು ಪೇಳಲಿ ಜಗ
ನ್ನಾಥ ಮಾಡಿದ ನನ್ನ ನರ ರೂಪಕಾಯವ ॥ಪ॥

ಮುಟ್ಟುಹುಟ್ಟಿನೊಳು ನೆಟ್ಟನೆ ನಾ ಬಂದೆ।
ತೊಟ್ಟಿದ್ದೆನಾಗ ತೊಗಲ ಬೊಕ್ಕಣ ॥
ಇಷ್ಟರೊಳಗೆ ಒಂದು ವಿವರವನರಿಯದ ।
ಭ್ರಷ್ಟಗೆ ನನಗೆ ಇನ್ನೇತರ ಕುಲವೊ?॥

ಇಂದ್ರಿಯ ಸೂತಕ ದುರ್ಗಂಧದ ಮಲಮೂತ್ರ।
ನಿಂದ ಠಾವಿಲಿ ತನ್ನ ನಿಜವರಿಯದೆ ॥

**ಬಂದದ್ದು ಬಚ್ಚಲ ಕುಣಿ ತಿಂದದ್ದು ಮೊಲೆ ಮಾಂಸ–ಇಂಥ**
**ನಿಂದಕಗೆ ನನಗೆ ಏತರ ಕುಲವೊ? ॥2॥**

**ಒಂಬತ್ತು ಹೆಜ್ಜದ ತನುವಿನ ಹೊಲಸಿನೊಳ್ ।**
**ತುಂಬಿ ತುಂಬಿ ದೇಹ ತುಳುಕುತಿದೆ ।**
**ಇಂಬಿಲ್ಲವಿದರೊಳು ಇಂದು ಪುಳುವಿನಕೊಂಡ – ಇಂಥ**
**ಡಂಭಕ ನನಗೆ ಇನ್ನೇತರ ಕುಲವೊ ? ॥3॥**

**ಎಲುವು ಖಂಡರೋಹಿತ ನರ ಪಂಜರ**
**ಪಳುವಿನೊಳಗೆ ನಮ್ಮ ಕುಲವ ಕೇಳುವರೆ?**
**ಬಲಿದ ಚರ್ಮ ರಕ್ತ ಹೊತ್ತು ತಿರುಗುವ ಶುದ್ಧ**
**ಹೊಲೆಯಗೆ ನನಗೆ ಇನ್ನೇತರ ಕುಲವೊ ॥4॥**
**ಹಚ್ಚಡದ ಮೇಲೊಂದು ಲಚ್ಚಿಗೆಯಿಟ್ಟಂತೆ**
**ಹೆಚ್ಚು ಕುಂದಿಗೆ ಲೋಕ ಹೆಣಗಾಡುತ**
**ನಿಶ್ಚಿತ ಕಾಗಿ ನೆಲೆಯಾದಿ ಕೇಶವನ**
**ಹುಚ್ಚಗೆ ನನಗೆ ಇನ್ನೇತರ ಕುಲವೊ ॥5॥**

ಈ ಸತ್ಯವನ್ನು ಅರಿತ ಮೇಲಿನ ಮುಂದಿನ ದರ್ಶನ;

**ಕುಲಕುಲ ಕುಲವೆನ್ನುತಿಹರೊ**
**ಕುಲವಾವುದು ಸತ್ಯ ಸುಜನರಿಗೆ ॥ಪ॥**

**ಕೆಸರೊಳು ತಾವರೆ ಪುಟ್ಟಲು ಅದ ತಂದು**
**ಕುಸುಮನಾಭನಿಗೆ ಅರ್ಪಿಸರೇನಯ್ಯ**
**ಪಶುವಿನ ಮಾಂಸದೊಳುತ್ಪತ್ತಿ ಕ್ಷೀರವ**
**ವಸುಧೆಯೊಳಗೆ ಭೂಸುರರುಣ್ಣರೇನಯ್ಯ ॥1॥**

**ಆ ಶೌಂಡಿಲ್ಯ ಪರಾಶರ ಎನಿಪನು**
**ವೇಶ್ಯೆಯ ಪುತ್ರ ವಶಿಷ್ಠ ಮುನಿ**
**ದಾಸಿಯ ನಂದನ ನಾರದ ಎನಿಪನು**
**ಕೌಶ್ಯಪ ಪೌತ್ರನ ಕುಲ ಹೇಳಿರಯ್ಯ ॥2॥**

**ಆತ್ಮನಾವಕುಲ ಜೀವನಾವಕುಲ**
**ತತ್ವೇಂದ್ರಿಯಗಳ ಕುಲ ಪೇಳಿರಯ್ಯ**
**ಆತ್ಮನು ಕಾಗಿನೆಲೆಯಾದ ಕೇಶವನೊಲಿವ**
**ಭಕ್ತರಿಗೆ ಕುಲವಾವುದು ಹೇಳಿರಯ್ಯ ॥3॥**

ಆ ದರ್ಶನವನ್ನು ಇನ್ನಷ್ಟು ತಿಳಿಗೊಳಿಸುವ, ಬೆಳ್ಗೊಳಗೊಳಿಸುವ ಜಗಮೆಚ್ಚುವ ರೀತಿ:

**ಕುಲಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ ।**
**ಕುಲದ ನೆಲೆಯನೇನಾದರೂ ಬಲ್ಲಿರಾ? ॥ಪ॥**

**ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ**
**ಅಟ್ಟು ಉಣ್ಣದ ವಸ್ತುಗಳಿಲ್ಲವೊ ॥**
**ಗುಟ್ಟು ಕಾಣಿಸಿ ಬಂತು ಹಿರಿದೇನು ಕಿರಿದೇನು**
**ನೆಟ್ಟನೆ ಸರ್ವಜ್ಞನ ನೆನಕಾಣೊ ಮನುಜ ॥1॥**

**ಆಲವೆ ಸಕಲ ಕುಲಕೆ ತಾಯಿಯಲ್ಲವೆ ಆ ।**
**ಆಲದ ಕುಲವನೇನಾದರೂ ಬಲ್ಲಿರಾ? ॥**

**ಆಲದ ಬೊಬ್ಬುಳಿಯಂತೆ ಸ್ಥಿರವಲ್ಲ ಈ ದೇಹ**
**ನೆಲೆಯನರಿತು ನೀ ಹರಿಯ ನೆನೆ ಮನುಜ ॥2॥**

**ಹರಿಯೇ ಸರ್ವೋತ್ತಮ ಹರಿಯೆ–ಸರ್ವೇಶ್ವರ**
**ಹರಿಮಯವೆಲ್ಲವೆನುತ ತಿಳಿದು ॥**
**ಸಿರಿ ಕಾಗಿನೆಲೆಯಾದಿ ಕೇಶವರಾಯನ**
**ಚರಣ ಕಮಲವನು ಕೀರ್ತಿಸುವನೆ ಕುಲಜ ॥3॥**

ಹೀಗೆ ಸಮಷ್ಟಿಯೇ ದೇವನಾಗಿರುವ ಈಗಿನ ಪ್ರಜಾಪ್ರಭುತ್ವಗಳ ಸಂಯುಕ್ತ ದರ್ಶನದಲ್ಲಿ, ವ್ಯಷ್ಟಿಯ ದತ್ತ ಸ್ವಾತಂತ್ರ್ಯವೇ ಜಗತ್ತಿನ ಮುಂದುವರಿಯುವಿಕೆಯ ಮೂಲ ಕಾರಣವಾಗಿ ನಿಂತಾಗ, ಆ ವ್ಯಷ್ಟಿಯೆಂಬುವನೇ ಜಗತ್ತಿನ ಸಾಗುವಿಕೆಗೆ ಮೂಲಘಟಕ ನಾಗುತ್ತಾನೆ. ತಳಹದಿಯೂ ಆಗುತ್ತಾನೆ. ಜೀವನದಿಯೂ ಆಗುತ್ತಾನೆ. ಹೀಗೆ ಲೋಕಸತ್ಯದ ಬಡಬಾನಲವನ್ನು ಹೆಕ್ಕಿ ನೋಡಿದಾಗ ರಾವುಗನ್ನಡಿಗೆ ಆತನ ಮನಸ್ಸೆ ರಣಮಂಡಲ; ಅಲ್ಲಿ ದ್ವಂದ್ವತೆಯಲ್ಲಿ ತುಮುಲ ಯುದ್ಧ, ವಿವೇಕ ಅವಿವೇಕಗಳ ಸಂಘರ್ಷ. ಅಲ್ಲಿ ಸಮಚಿತ್ತವನ್ನು ಆಹ್ವಾನಿಸಿ ವಿವೇಕವು ಬಳಕೆಯಾಗುವಂತೆ ಮಾಡಲು ಅಧ್ಯಾತ್ಮದ ನೆಲೆಗಟ್ಟಿನ ಮೇಲೆ ಸಂಪನ್ನಗೊಂಡಿರುವ ಸತ್ಯ ನಿಷ್ಠುರತೆಯಲ್ಲಿ ಅಭಿವ್ಯಕ್ತವಾಗಿರುವ ಕನಕನ ಸಾಹಿತ್ಯದ ಮಾತುಗಳು ಇಂದಿನ ವಿಶ್ವಸಂಸ್ಥೆಯ ಚಾರ್ಟರಿನ ತತ್ತ್ವಗಳನ್ನು ಬಲಿಷ್ಠಗೊಳಿಸಲು ಪೋಷಕವಾಗಿರುತ್ತವೆ.

ಇದಕ್ಕೆ ಕಾರಣ ಕನಕದಾಸರೊಬ್ಬರು ಜಗತ್ತು ಕಂಡ ಶ್ರೇಷ್ಠ ದಾರ್ಶನಿಕರು. ಮನಸ್ಸುಗಳೊಳಗೆ ಒಬ್ಬ ದಾರ್ಶನಿಕ ಇದ್ದೇ ಇರುತ್ತಾನೆ. ಮನಸ್ಸು ಸಮತೋಲಾವಸ್ಥೆ ಯಲ್ಲಿದ್ದಾಗ ಆತನ ವಿರಾಟತೆಯ ದರ್ಶನ. ಆ ದರ್ಶನದ ಲಾಭವನ್ನು ಪಡೆದುಕೊಳ್ಳಲು ಕನಕ ಸಾಹಿತ್ಯವು ಪ್ರೇರಣಾ ಸ್ವರೂಪಿ. ಆನಂದ ಪ್ರಾಪ್ತಿಗೆ ಚೈತನ್ಯದಾಯಿ. ವಿಶ್ವಸಂಸ್ಥೆಯ ಸಂವಿಧಾನಕ್ಕೆ ಸುಂದರ ವ್ಯಾಖ್ಯಾನ ಇಲ್ಲಿದೆ–

ಅದಕ್ಕಾಗಿ,
**'ತಲ್ಲಣಿಸದಿರು ಕಂಡ್ಯಾ ತಾಳು ಮನವೆ**
**ಸ್ವಾಮಿ ನಿಲ್ಲದಲೆ ರಕ್ಷಿಸುವ ಸಂದೇಹ ಬೇಡ**
**'ಮಂಗನಂತೆ ಭವಭಂಗ ಪಡುವ ನಾವು**
**–ದಾಸರಾಗಬೇಕು; ಕನಕ ನೀ ದಾಸನಾದ**
**ರೀತಿಯಲ್ಲಿ ನಮ್ಮನ್ನೆಲ್ಲ ನಡೆಸೋ**
**'ಅಹುದಾದರಹುದೆನ್ನಿ ಅಲ್ಲವಾದರೆ ಅಲ್ಲವೆನ್ನಿ**
**ಬಹುಜನರು ನೆರೆತಿಳಿದು ಪೇಳಿ ಮತ್ತಿದನು**
**'ಆರಿಗೆ ಆರಿಲ್ಲವಯ್ಯ ಆಪತ್ತು ಕಾಲಕ್ಕೆ**
**ಆರು ಸಂಗಡ ಬಾಹೋರಿಲ್ಲ**
**ಆರು ಹಿತವರು ಎಂದು ನಂಬಬೇಡ**
**ಏನು ಬರುವುದೋ ಏನು ಸಂಗಡ ಬರುವುದೋ**
**(ತೊರೆದು ಜೀವಿಸಬಹುದೆ ಹರಿ ನಿನ್ನ ಚರಣಗಳ)**

**'ನಾನು ನೀನು ಎನ್ನದಿರೋ ಹೀನ ಮಾನವ**
**ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ'**

**'ತಾನಾರು ತನ್ನ ದೇಹ ಯಾರು'**

ಇತ್ಯಾದಿ ಕನಕದಾಸರ ಉಕ್ತಿಗಳನ್ನು ವ್ಯಷ್ಟಿ ವ್ಯಷ್ಟಿಯು ಮನನ ಮಾಡಿಕೊಂಡು ಆತ್ಮ ವಿಮರ್ಶೆಗೆ ತೊಡಗಿ ಅವನು ವಿಶ್ವ ಮಾನವನಾಗುವ ಅರ್ಹತೆಯನ್ನು ಪಡೆದು ವಿಶ್ವಸಂಸ್ಥೆಯ ಸಂವಿಧಾನದ ಎಲ್ಲ ಪರಿಚ್ಛೇದದ ಉಕ್ತಿಗಳಿಗೆ ದರ್ಶನನಾಗಿ ನಿಂತು–ವಿಶ್ವದ ಸರ್ವತೋಮುಖ ವಿಕಾಸದಲ್ಲಿ ಕಾರಣೀಭೂತನಾಗುತ್ತಾನೆ. ಇಂತಹ ಸಂಸ್ಕಾರವು ವ್ಯಷ್ಟಿ ವ್ಯಷ್ಟಿಗಳಲ್ಲಿ ವಿಸ್ತಾರವಾದಂತೆ ವಿಶ್ವವೆಲ್ಲ ನೆಮ್ಮದಿಯ ಶಾಂತಿವನವಾಗುತ್ತದೆ.

ವಿಶೇಷತಃ ಭಾರತೀಯರಾದ ನಾವು ಇದೇ ಬೆಳಕಿನಲ್ಲಿ ನಮ್ಮ ಭಾರತದ ಸಂವಿಧಾನದ ಪ್ರಿಯಾಂಬಲ್ (ಪ್ರಸ್ತಾವನೆ) ಅನ್ನು ನೆನೆಸಿಕೊಂಡು ಅಲ್ಲಿಯೂ ಕನಕದಾಸರ ಸಾಹಿತ್ಯವು ತುಂಬಿಕೊಂಡ ವಿಶ್ವ ಭ್ರಾತೃತ್ವದ ನೆಲೆಗಳನ್ನು ಅವರ ಅನುಭಾವದಲ್ಲಿ ನಮ್ಮ ನಡೆನುಡಿಗಳಿಗೆ ಪ್ರೇರಣೆಯನ್ನು ಪಡೆದು ಪೂರ್ಣ ಮಾನವರಾಗಬೇಕಾದುದು ಮುಖ್ಯವಾಗುತ್ತದೆ.

ನಮ್ಮ ಭಾರತದ ಸಂವಿಧಾನದ ಪ್ರಿಯಾಂಬಲ್ ಮಂತ್ರವನ್ನು ಒಂದಿಷ್ಟು ಸ್ಮರಣೆಗೆ ಈಗಲೂ ತಂದುಕೊಳ್ಳೋಣ

## ಕನಕದಾಸರ ಕಾರ್ಪಣ್ಯ

**ಡಾ. ವಾಸುದೇವ ಅಗ್ನಿಹೋತ್ರಿ**

ರಾಷ್ಟ್ರೀಯ ಸಂತಕವಿ ಕನಕದಾಸರ ಸಾಮಾಜಿಕ ಸಂವೇದನೆಯ ನೆಲೆಗಳು ಎಂಬ ವಿಚಾರ ಸಂಕಿರಣದಲ್ಲಿ ನಾನು ಮಾತಾಡಬೇಕಾದ ವಿಷಯ ಕನಕದಾಸರ ಕಾರ್ಪಣ್ಯ. ನಾವು ಸಹಜವಾಗಿ ಮಾತನಾಡುತ್ತಿರುವಾಗ ಕಷ್ಟ–ಕಾರ್ಪಣ್ಯ. ದುಃಖ–ದುಮ್ಮಾನ, ನೋವು–ನಿರಾಸೆ, ಇಂತಹ ಜೋಡಿ ಶಬ್ದಗಳನ್ನು ಕೇಳುತ್ತಾ–ಬಳಸುತ್ತಾ ಬಂದಿದ್ದೇವೆ. ಈ ಶಬ್ದಗಳು ನಮ್ಮಂತಹ ಸಾಮಾನ್ಯರಿಗೆ ಸಹಜ. ಆದರೆ ಕನಕದಾಸರಂತಹ ಭಕ್ತರಿಗೆ ಸಂತರಿಗೆ ವಿಶೇಷವಾದವುಗಳು. ಕಷ್ಟ–ಕಾರ್ಪಣ್ಯ ದ್ವಿರುಕ್ತಿ ಪದಗಳಲ್ಲ. ಜೋಡಿ ಪದಗಳು ನಿಜ. ಕಷ್ಟಸ್ಯ ಭಾವ: ಕಾರ್ಪಣ್ಯ; ಕಷ್ಟವೆಂದರೆ ಕಾಣುವ ಸಹಿಸಬಹುದಾದ ತೊಂದರೆ ಅಥವಾ ನೋವು ಕಾರ್ಪಣ್ಯವೆಂದರೆ ಕಾಣಲಾಗದ, ಸಹಿಸಲಾಗದ, ಆದರೆ ಅದರಿಂದ ವ್ಯಕ್ತಿತ್ವ ಪಕ್ವವಾಗುವ ಒಂದು ವಿಶಿಷ್ಟ ಆಧ್ಯಾತ್ಮ ಸಂವೇದನೆ ಅದು ಕಾವ್ಯ ರೂಪದಲ್ಲೊ, ಶ್ಲೋಕ ರೂಪದಲ್ಲೋ, ಸಾತ್ವಿಕರಿಂದ ಹೊರಹೊಮ್ಮುತ್ತದೆ. ಸಂತರಾದವರು ಶಾಪ ಕೊಡುವುದಿಲ್ಲ. ಅವರು ಪರೋಪಕಾರದ ಹಂತವನ್ನು ದಾಟಿ ಪ್ರಪಂಚದ ಎಲ್ಲ ಕಷ್ಟ ನಷ್ಟಗಳನ್ನು ಸಹಿಸಿ ಅದಕ್ಕೆ ಪ್ರತಿರೋಧಿಸದೆ, ಪರ್ಯಾಯ ಹುಡುಕದೇ ಅವೆಲ್ಲವೂ ಪರಮಾತ್ಮನು ಮಾಡಿದ ಪರೀಕ್ಷೆಗಳೆಂದು ತಿಳಿದು ಅವುಗಳಿಂದಲೇ ಪ್ರೇರಣೆ ಹೊಂದಿ ಅವೆಲ್ಲವನ್ನು ಮೀರಿ ನಿಂತ ಮಹಾನುಭಾವರು.

ಇಂತಹ ಹಲವಾರು ಸತ್ಪುರುಷರನ್ನು ಈ ದೇಶ ಕಂಡಿದೆ. ಮುಂದೆಯೂ ಕಾಣಬಹುದು. ಆದರೆ ಅವರನ್ನು ಗುರುತಿಸುವ, ಗೌರವಿಸುವ, ದಾಖಲಿಸುವ ಪ್ರಯತ್ನ ಇಂತಹ ಅಧ್ಯಯನ ಮತ್ತು ಸಂಶೋಧನಾ ಕೇಂದ್ರಗಳು ಮಾಡುತ್ತಿರುವುದು ಶ್ಲಾಘನೀಯ. ಇಲ್ಲಿರುವ ನಾವೆಲ್ಲರೂ ಸಂವಾದಕರನ್ನೊಳಗೊಂಡಂತೆ ಕನ್ನಡ ಸಾಹಿತ್ಯ ಕರ್ನಾಟಕದ ಇತಿಹಾಸ, ಕನ್ನಡ ನಾಡಿನಲ್ಲಿ ಉದಿಸಿದ ಧರ್ಮಗಳು ಸಂಸ್ಕೃತಿ ಮತ್ತು ಅನುಭಾವ ಚಳುವಳಿಗಳನ್ನು ಓದಿ, ಓದಿಸಿ ಬಲ್ಲವರಾಗಿದ್ದೇವೆ. ಈಗಾಗಲೇ ಕೆಲವು ಸ್ಥಾಪಿತ ಮೌಲ್ಯಗಳನ್ನು ದಾಖಲೆಗಳನ್ನು ಅಥವಾ ವಿದ್ವಾಂಸರ ಅಭಿಪ್ರಾಯಗಳನ್ನು ಈಗ ಇಲ್ಲಿ ಇನ್ನಷ್ಟು ಗಂಭೀರವಾಗಿ ಚರ್ಚಿಸಿ ಕನಕದಾಸರ ಜೀವನದ ಅದಕ್ಕಿಂತ ಮುಖ್ಯವಾಗಿ ಅವರು ರಾಷ್ಟ್ರೀಯ ಸಂತರಾಗುವಲ್ಲಿ ಕಾರ್ಪಣ್ಯಗಳನ್ನು ಪ್ರೇರಣೆಯನ್ನಾಗಿ ಮಾಡಿಕೊಂಡ ಸಕಾರಾತ್ಮಕ ಭಕ್ತರೇ ಕನಕದಾಸರೆಂದು ತಿಳಿಸುವುದು ನನ್ನ ಉಪನ್ಯಾಸದ/ಪ್ರಬಂಧದ ಉದ್ದೇಶ.

ಯಾವುದೇ ಸಂತರ ಜೀವನ ಮತ್ತು ಸಮಾಜೋ ಆಧ್ಯಾತ್ಮಿಕ ಪರಿಸರ ತಿಳಿಯಲು ದಾಖಲೆಗಳು ಬೇಕೆಂಬುದು ಸತ್ಯ. ಆದರೆ ವಿಶ್ವವೇ ಒಂದು ಪರಿವಾರದ ರೂಪದಲ್ಲಿ ಕಂಡ ದೃಷ್ಟಾರರಿಗೆ ದಾಖಲೆಗಳನ್ನು ಹುಡುಕುವುದು ಕಷ್ಟವಾಗುತ್ತದೆ. ಒಂದು ವೇಳೆ ಸಿಕ್ಕರೂ ಹುಡುಕಿದವರು ಅಥವಾ ಅದನ್ನು ಉಪಯೋಗಿಸುವವರು ತಮ್ಮ ಸ್ವಾರ್ಥ ಹಾಗೂ ರಾಗದ್ವೇಷಗಳಿಗೆ ಅನ್ವಯಿಸಿಕೊಂಡಿರುವುದು ಮನುಕುಲದ ಕಥೆ. ಆದರೆ ಕನಕದಾಸರ ಕಥೆಯೇ ಬೇರೆ ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯರು ಹೇಳುವಂತೆ ಕನಕದಾಸರ ಕಾರ್ಪಣ್ಯದ ಜೀವನವು ಭಕ್ತನ ಬೆನ್ನು ಹತ್ತಿದ ಭಗವಂತನ ಕಥೆ. ಇದು ಮಾರ್ಜಾಲ ಕಿಶೋರ ನ್ಯಾಯದಂತೆ. ಈ ಒಂದು ಸಂಕಿರಣದ ಸಮನ್ವಯಾಧಿಕಾರಿಗಳು ಈಗಾಗಲೇ ದೂರವಾಣಿಯಲ್ಲಿ ನನಗೆ ಚರ್ಚೆಗೆ ಹೆಚ್ಚು ಅವಕಾಶ ಕೊಡಿ ಎಂದು ಹೇಳಿದ್ದಾರೆ. ಆದರೆ ನಾನೇನಾದರೂ ಹೇಳಬೇಕಲ್ಲ, ನನಗೆ ಕೊಟ್ಟ ಇಪ್ಪತ್ತು ನಿಮಿಷಗಳು ಸೂತ್ರ ರೂಪದಲ್ಲಿ ಕೆಲವು ವಿಷಯಗಳನ್ನು ಮಂಡಿಸುತ್ತೇನೆ ಹಾಗೂ ಇನ್ನೂ ಖಚಿತವಾಗಲೆಂದು ನಮ್ಮ ಹಿರಿಯ ಸ್ನೇಹಿತರಾದ ಡಾ: ಎಂ.ಜಿ.ದೇಶಪಾಂಡೆ, ಅವರ ಸಹಯೋಗದೊಂದಿಗೆ ರೇಖಾಚಿತ್ರ ಹಾಗೂ Color Shadesನಲ್ಲಿಯೂ ಮಾಡಿ ತಂದಿದ್ದೇನೆ. ದಯವಿಟ್ಟು ಗಮನಿಸಿರಿ ನನ್ನ ವಿಚಾರ–ಹೇಳುವುದು ಚಿತ್ರ ತೋರಿಸುವುದು ಮುಗಿದ ಮೇಲೆ ಚರ್ಚಿಸೋಣ. ಕನಕದಾಸರ ಇಡೀ ಜೀವನವನ್ನು ಹಾಗೂ ಅವರ ಸಂತರಾಗುವ ಉಜ್ಜೀವನವನ್ನು ಈ ಮುಂದೆ ವಿವರಿಸಲಾಗಿದೆ. ಸಾಮಾನ್ಯರಂತೆ ಜೀವನದಲ್ಲಿ ಬಂದೊದಗಿದ ಕೆಲವು ಕಷ್ಟಗಳನ್ನು ನೋಡೋಣ.

- ಬಾಲ್ಯದಲ್ಲಿಯೇ ತಂದೆಯ ಸಾವು
- 4–5 ವರ್ಷದವರಿದ್ದಾಗ ಪಾಲಕ ಹನುಮಪ್ಪನ ಆಶ್ರಯದಿಂದ ತಪ್ಪಿಸಿ ಕೊಳ್ಳುವುದು.
- ಊರಿಗೆ ಬಂದಾಗ ನೆಲೆ ಇಲ್ಲದಾಗುವುದು
- ಹೆಂಡತಿ ಮತ್ತು ಮಗನ ಸಾವು
- ಯುದ್ಧದಲ್ಲಿ ಗಾಯ

ಆದರೆ ಅವರ ಭಾಗ್ಯ ಇದಕ್ಕಿಂತ ದೊಡ್ಡದು. ಅದೇನೆಂದರೆ ಕೊಪ್ಪರಿಗೆ ಹೊನ್ನು ಕೊಟ್ಟು ಪುನಃ ಪುನಃ ಕನಸಿನಲ್ಲಿ ಬಂದು ದಾಸನಾಗಲು ಕರೆಯುತ್ತಿರುವ ಹಾಗೂ ಬರುವವರೆಗೆ ಕಾಯುತ್ತಿರುವ ಭಗವಂತ.

ಕನಕದಾಸರು ಬದುಕಿ ಬಾಳಿದ ಮೊದಲಿನ 6 ದಶಕಗಳು ಧರ್ಮ ಸಾಮ್ರಾಜ್ಯ, ಆಡಳಿತದಲ್ಲಿರುವ ಕಾಲ. ಅದರಲ್ಲೂ ದಾಸ ಸಾಹಿತ್ಯದ ಸುವರ್ಣ ಯುಗ. ಸಮಗ್ರ ಚಿತ್ರಣವನ್ನು ಅವಲೋಕಿಸಿದ್ದೇ ಆದರೆ ನಮಗೆ ತಿಳಿದುಬಂದಿರುವ ಹಾಗೆ ಸಾಂಪ್ರದಾಯಿಕ ಮನೋವೃತ್ತಿಯಿಂದ ತುಸು ಭಿನ್ನವಾಗಿ ಹಾಡತೊಡಗಿದ ಕನಕದಾಸರ ವಾಣಿ ಆ ಯುಗದ ಹೆಮ್ಮೆ ಎಂದು ಡಾ. ಜಿ.ವರದರಾಜರಾವ್ ಹೇಳಿದ ಮಾತು ಸರಿ ಎನಿಸುತ್ತದೆ. ಎಲ್ಲ ಗೊಂದಲಗಳನ್ನು ದೂರ ಸರಿಸಿ ಕನಕದಾಸರು ಕುರುಬರು ಎಂದು ದೃಢವಾಗಿ ಹೇಳಿದವರು ಶ್ರೀಮತಿ ಜ್ಯೋತಿ ಹೊಸೂರ. ಹೀಗಾಗಿ ಕನಕದಾಸರ ಬಗ್ಗೆ ಅಧ್ಯಯನ ಮಾಡುವುದರಿಂದ ದಾಸ ಸಾಹಿತ್ಯದ ಸಾಮಾಜಿಕ ಒಳ ಹರಿವು ತಿಳಿಯುತ್ತದೆ.

ಕನಕದಾಸರು ಮೂಢ ಸಂಪ್ರದಾಯ ವಿರೋಧಿಗಳಾಗಿದ್ದರು. ಆದರೆ ಸಂಪ್ರದಾಯ ವಿರೋಧಿಗಳಲ್ಲ. ಕಂದಾಚಾರಗಳನ್ನು ವಿರೋಧಿಸುತ್ತಾರೆ. ಆದರೆ ಸದಾಚಾರ ವಿರೋಧಿಗಳಲ್ಲ. ಹಾಗಾದರೆ ಕನಕದಾಸರ ಸಂಪ್ರದಾಯ ಯಾವುದು? ಆಧ್ಯಾತ್ಮಿಕ

ಸಾಧನೆಯಲ್ಲಿ ಅವರು ನಡೆದ ದಾರಿ ಯಾವುದು? ಅದನ್ನು ನಡೆಯುವಾಗ ಅವರಿಗೆ ಬಂದೊದಗಿದ ಒಳಪ್ರಶ್ನೆಗಳೇ ಕಾರ್ಪಣ್ಯಗಳು. ಅವರದು ವಿಶಾಲ ಹೃದಯ, ದೂರದೃಷ್ಟಿಕೋನ.

ಪ್ರಾರಂಭದಲ್ಲಿ ಕನಕದಾಸರು ವೀರಶೈವರಿಗೆ ವೀರಶೈವರಾಗಿ ಕಾಣುತ್ತಾರೆ. ಮುಂದೆ ಭಾಗವತರಿಗೆ ಭಾಗವತರಂತೆ ಕಾಣುತ್ತಾರೆ. ನಂತರ ರಾಮಾನುಜ ಪಂಥದವರಿಗೆ ರಾಮಾನುಜ ಪಂಥದವರಾಗಿ ಕಾಣುತ್ತಾರೆ ಕೊನೆಯಲ್ಲಿ ಮಾಧ್ವರಿಗೆ ಮಾಧ್ವರಾಗಿ ಕಾಣುತ್ತಾರೆ.

ಕನಕದಾಸರು ತಮ್ಮ ಆತ್ಮ ಚಕ್ಷುವಿನ ವಿವೇಕದಿಂದ ಮುಂದುವರಿಯುತ್ತಾರೆ. ವಾಸ್ತವವಾಗಿ ಕನಕದಾಸರು ಏನು? ಅವರ ಇಷ್ಟವೇನು? ಎಂದು ಯಾರೂ ಯೋಚಿಸುವುದಿಲ್ಲ. ನಮ್ಮ ಇಷ್ಟವೇ ಅವರ ಇಷ್ಟವೆಂದು ಭ್ರಮಿಸಿಬಿಡುತ್ತೇವೆ. ಎಲ್ಲರ ವಾದವು ಸತ್ಯ ಹೌದು. ಸುಳ್ಳೂ ಹೌದು. ಸತ್ಯಕ್ಕೆ ಸುಳ್ಳಿನ ಬೇಲಿ, ಸುಳ್ಳಿಗೆ ಸತ್ಯದ ಮುಖವಾಡ. ಹೀಗಾಗಿ ಎಲ್ಲವೂ ನಿಜ ಆದರೆ ಯಾವುದೂ ಪೂರ್ತಿ ಸತ್ಯ ಅಲ್ಲವೆಂಬ ಬನ್ನಂಜೆಯವರ ಈ ಮಾತು ನಮಗೆ ಮುಂದೆ ಯೋಚಿಸಲು ದಾರಿ ದೀಪವಾಗುತ್ತದೆ.

ಕಾರ್ಪಣ್ಯದ ಮೂಲ ನೆಲೆಯೆಂದರೆ ಕನಕದಾಸರು ವ್ಯವಸ್ಥೆಯ ಒಳಗಡೆಯೇ ಇದ್ದು, ತಮಗಾದ ಅವಮಾನವನ್ನು ನೋವು ಮತ್ತು ಕಷ್ಟಗಳನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಆಗಾಗ ಸಾತ್ವಿಕ ಪ್ರತಿಕ್ರಿಯೆ ನೀಡುತ್ತಾ ತಮ್ಮ ಸಹಜವಾದ ಸ್ವರೂಪ ಖಚಿತವಾದ ಪ್ರವೃತ್ತಿ ಮತ್ತು ಅದ್ವಿತೀಯವಾದ ಯೋಗ್ಯತೆಗಳಿಂದ ಪ್ರಭಾವ ಬೀರಿದರು. ತಮ್ಮ ಅಂತರಾತ್ಮದ ಕರೆಯನ್ನು ಯಾವಾಗಲೂ ಆಲಿಸುತ್ತಲೇ ಅಸೂಯಾಭಾವದ ಎದುರಾಳಿಗಳನ್ನು ಸಾತ್ವಿಕ ರೂಪದ ಸಾಹಿತ್ಯ ಮಾರ್ಗದಲ್ಲಿ ಉತ್ತರಿಸಿದರು. ಪರ್ಯಾಯ ಮಾರ್ಗ ಹಿಡಿಯಲಿಲ್ಲ. ಅವರು ವ್ಯಾಸರಾಯರ ಶಿಷ್ಯತ್ವ, ಪುರಂದರದಾಸರ ಸ್ನೇಹ, ದಾಸ ಸಾಹಿತ್ಯದ ಸೃಜನಶೀಲತೆ ಬಿಡಲಿಲ್ಲ.

ಕೊರಟಿ ಶ್ರೀನಿವಾಸರಾವ್ ಒಬ್ಬ ಇತಿಹಾಸ ತಜ್ಞರು ಹಾಗೂ ಕಾದಂಬರಿಕಾರರು ವಿಜಯನಗರದ ಇತಿಹಾಸವನ್ನು ಬರೆದವರು. ಇಮ್ಮಡಿ ಪುಲಕೇಶಿ ಎಂಬ ಕೃತಿಯನ್ನು ಬರೆದಿದ್ದಾರೆ. ಅವರ ಹಲವಾರು ಕೃತಿಗಳು ಚಲನಚಿತ್ರ ರೂಪ ಕಂಡಿವೆ. ಅವರು ಶ್ರೀ ಕನಕದಾಸರು ಎಂಬ ಸುದೀರ್ಘವಾದ 560 ಪುಟಗಳ ಜೀವನ ಚರಿತ್ರೆಯನ್ನು ಬರೆದು 1992ರಲ್ಲಿ ಕಾಗಿನೆಲೆಯ ಶ್ರೀ ಕನಕಗುರು ಪೀಠದ ಪ್ರಥಮ ಪೀಠಾಧಿಪತಿಗಳಾದ ಶ್ರೀ ಶ್ರೀ ಶ್ರೀ ಬೀರೇಂದ್ರ ಕೇಶವ ತಾರಕಾನಂದಪುರಿ ಮಹಾಸ್ವಾಮಿಗಳ ಸನ್ನಿಧಿಗೆ ಅರ್ಪಿಸುತ್ತಾರೆ ಹಾಗೂ ಸ್ವಾಮೀಜಿಗಳು ಮುನ್ನುಡಿಯನ್ನ ಬರೆದಿದ್ದಾರೆ. ಅವರ ವಿದ್ವತ್‌ಪೂರ್ಣ ಹೇಳಿಕೆಯ ಪ್ರಕಾರ ಕನಕದಾಸರು 4–5 ವರ್ಷದವರಿದ್ದಾಗ ತಪ್ಪಿಸಿಕೊಂಡು ದಾರಿಹೋಕರಾದ ಗೊರವರ ಜೊತೆ ಹೋಗಿ ಶ್ರೀಶೈಲದ ವೀರಶೈವ ಮಠವೊಂದರಲ್ಲಿ ಶೈವಾಗಮಗಳನ್ನು ಹಾಗೂ ಇತರೆ ಶಾಸ್ತ್ರಗಳನ್ನು ಕಲಿಯುತ್ತಾರೆ. ಅಲ್ಲಿ ವಿದ್ವತ್ ಗೋಷ್ಠಿಯೊಂದರಲ್ಲಿ ಸೋಲುವ ಸಂದರ್ಭದಲ್ಲಿ ಪರಮಾತ್ಮನು ಕನಸಲ್ಲಿ ಬಂದು ನಿನಗೇನು ಬೇಕು ಎಂದು ಕೇಳಿದಾಗ ನನಗೆ ಪಾಣಿನಿಯ ಅಷ್ಟಾಧ್ಯಾಯ ಕಲಿಸು ಎಂದು ಕೇಳುತ್ತಾರೆ. ಇದು ಕನಕದಾಸರಿಗೆ ಬಂದೊದಗಿದ ಪ್ರಥಮ ಕಾರ್ಪಣ್ಯ ಪರಮಾತ್ಮನು ಕರುಣಿಸಿ ದಾಸನಾಗಲು ಕೇಳುತ್ತಾನೆ. ಆದರೆ ಕನಕದಾಸರು ಒಪ್ಪುವುದಿಲ್ಲ. ಕೆಲ ವರ್ಷಗಳ ನಂತರ ಕನಕದಾಸರು ತಾತಾಚಾರ್ಯರ ಸಂಪರ್ಕದಲ್ಲಿ ಬಂದು ರಾಮಾನುಜ ತತ್ವದ ಬೆಳಕಿನಲ್ಲಿ ಸಾಹಿತ್ಯ ಸಂಸ್ಕೃತಿ, ವೈದಿಕ ಧರ್ಮ, ಷಡ್‌ದರ್ಶನಗಳು ಜೊತೆಗೆ ಪ್ರಸ್ಥಾನತ್ರಯಗಳನ್ನು ಓದುತ್ತಾರೆ. ತಾತಾಚಾರ್ಯರು ಅವರಿಗೆ ಸಾಕಷ್ಟು ಮಾರ್ಗದರ್ಶನ ಮಾಡುತ್ತಾರೆ. ಭಗವಂತ ಕನಸಿನಲ್ಲಿ ಬಂದಾಗ ಕನಕದಾಸರು ತಾತಾಚಾರ್ಯರಲ್ಲಿ ಶಿಷ್ಯರಾಗುವ ಕೋರಿಕೆ ಕೇಳಿದಾಗ ಅದನ್ನೂ ಈಡೇರಿಸಿ ದಾಸನಾಗಲು ಪುನಃ ಪ್ರಸ್ತಾಪಿಸುತ್ತಾನೆ. ಆಗಲೂ ಕನಕದಾಸರು ಒಪ್ಪುವುದಿಲ್ಲ.

ಯುದ್ಧವೊಂದರಲ್ಲಿ ಸೋತು ಗಾಯದಿಂದ ನರಳುತ್ತಿರುವಾಗ ಭಗವಂತನು ಬಂದು ದಾಸನಾಗುವೆಯಾ ಎಂದು ಕೇಳಿದಾಗ ನನ್ನ ಗಾಯದ ನೋವು ಕಡಿಮೆ ಮಾಡಿಸುವೆಯಾ ಎಂದು ಕೇಳುತ್ತಾನೆ. ಭಗವಂತನು ಸ್ವತಃ ಔಷಧೋಪಚಾರ ಮಾಡಿ ಚೇತರಿಸುವ ಹಾಗೆ ಮಾಡುತ್ತಿರುವಾಗ ಕನಕದಾಸರು ಅರೆ ಪ್ರಜ್ಞೆಯಲ್ಲಿ ಯಾರು ಉಪಚರಿಸುವುದು ವಧೂಟಿಯೇ (ಹೆಂಡತಿ?) ಎಂದಾಗ ಪರಮಾತ್ಮನಿಗೆ ತುಂಬಾ ನಿರಾಶೆಯಾಗಿ ತನ್ನ ನಿಜರೂಪ ಹಾಗೂ ದಾಸರ ನೈಜ ಸ್ವರೂಪ ಜ್ಞಾನವನ್ನು ನೀಡಿ ದಾಸನಾಗಲು ಒಪ್ಪುವಂತೆ ಮಾಡುತ್ತಾನೆ. ಇದು ಅವರ ಮೂರನೇ ಕಾರ್ಪಣ್ಯ.

ನಂತರದ ಅವರ ಪ್ರಯಾಣ ಹಂಪಿಯ ಕಡೆಗೆ ಬರುತ್ತದೆ. ಆನಂತರ ವ್ಯಾಸರಾಯ ಸಂಪರ್ಕಕ್ಕೆ ಬಂದು ದ್ವೈತ ದರ್ಶನದ ಹಿನ್ನೆಲೆಯಲ್ಲಿ ಕೀರ್ತನೆಗಳನ್ನು ಬರೆಯುತ್ತ ವ್ಯಾಸರಾಯರ ಶಿಷ್ಯರಾಗುತ್ತಾರೆ. ಕೊರಟಿ ಶ್ರೀನಿವಾಸರಾವ್ ಅವರ ಈ ಎಲ್ಲ ವಿಚಾರಗಳನ್ನು ಮುಂಬೈ ವಿಶ್ವವಿದ್ಯಾಲಯದ ಶ್ರೀಮತಿ ಮೇಧಾ ಕುಲಕರ್ಣಿ ಅವರು ಒಪ್ಪಿ ಸಮರ್ಥಿಸಿ, ಎಂ.ಫಿಲ್. ಪದವಿ ಪಡೆದು ಪ್ರಬಂಧವನ್ನು 2007ರಲ್ಲಿ ಪ್ರಕಟಿಸಿದ್ದಾರೆ.

ಈವರೆಗೆ ಬಂದ ಬೇರೆ ವಿದ್ವಾಂಸರಾದ ದೇ.ಜ.ಗೌ., ಕುಷ್ಟಗಿ, ವರದರಾಜರಾವ್, ಕೆ.ಎಂ.ಕೃಷ್ಣರಾವ್, ಮೊದಲಾದ ಎಲ್ಲ ವಿದ್ವಾಂಸರು ಕನಕದಾಸರ ಆತ್ಮ ನಿವೇದನೆ ಮತ್ತು ಸಾಹಿತ್ಯ ಸಾಧನೆ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ.

ಕಾರ್ಪಣ್ಯದ ಮೂಲ ಪ್ರಾರಂಭವಾದದ್ದು ಕನಕದಾಸರ ರಾಜಸ ಸ್ವಭಾವ; ಸಾತ್ವಿಕ ಗುಣ ಮತ್ತು ತಾಮಸ ಸಾಮಾಜಿಕ ಪರಿಸ್ಥಿತಿಯಲ್ಲಿ. ಹೀಗಾಗಿ ಪಾರಿವಾರಿಕ ಕಷ್ಟಗಳ ಜೊತೆ ಬಂದ ವೈಯಕ್ತಿಕ ಕಾರ್ಪಣ್ಯಗಳನ್ನು ಸಹಿಸಿ, ಶೋಧಿಸಿ, ಹೊಂದಿಸಿ, ಅವರು ಅಪ್ಪಟ ಅಪರಂಜಿಯಾದರು. ಇದಕ್ಕೆ ನಿದರ್ಶನವೆಂದರೆ ಯತಿವರೇಣ್ಯರಾದ ವಾದಿರಾಜರು ತುಂಬಾ ಅಭಿಮಾನದಿಂದ ಇವರನ್ನು ಅಭಿನಂದಿಸಿ ಕೃಷ್ಣ ಭಕ್ತಿಗಾಗಿ ತಬ್ಬಿಕೊಂಡದ್ದು. ಹಾಗೂ ಭಕ್ತ ಕನಕದಾಸರು ಎಂದು ಮಠದಲ್ಲಿ ಘೋಷಣೆ ಮಾಡಿದ್ದು. ಗುರುಗಳಾದ ವ್ಯಾಸರಾಯರು 'ಇವಗೆ ನಾಡೆಲ್ಲ ಹುಡುಕಿದರು ಈಡಾರ ನಾಕಾಣೆ ಎಂದು ಶ್ಲಾಘಿಸಿದ್ದಾರೆ. ಸ್ನೇಹಿತರಾದ ಪುರಂದರದಾಸರು' ಕನಕದಾಸರ ಮೇಲೆ ದಯಮಾಡಲು ವ್ಯಾಸಮುನಿ ಮಠದವರೆಲ್ಲ ದೂರಿಕೊಂಬುವರು ಎಂದಿರುವುದು ಗಮನಿಸಬೇಕು.

ಹಿಂದೆ, ಇಂದು ಮತ್ತು ಮುಂದೆಯೂ ಕೂಡಾ ಯಾವುದೇ ಒಬ್ಬ ಸಾಧಕನ ಸಾಧನೆಯ ಬಗ್ಗೆ ಅಸೂಯೆ ಪಡುವವರು– ಅಡ್ಡಿಯಾಗುವರು ಇದ್ದೇ ಇರುತ್ತಾರೆ ಎಂಬುದು ಸತ್ಯ. ಆದರೆ ಅದೇ ಕಾಲದಲ್ಲಿ ಸಹಾಯ ಮಾಡುವವರು, ಅಭಿನಂದಿಸುವವರು, ಪ್ರೋತ್ಸಾಹಿಸುವವರೂ ಕೂಡಾ ಇರುತ್ತಾರೆ. ಅಸೂಯೆ ಪಡುವವರ ಕೈಯಲ್ಲಿ ಅಧಿಕಾರ ಇದ್ದರೆ ಅದು ಕಷ್ಟ ಕಾಲ. ಅಭಿನಂದಿಸುವವರ ಸಂಖ್ಯೆ ಕಡಿಮೆ ಇದ್ದರೆ ಅದು ಕಾರ್ಪಣ್ಯಕ್ಕೆ ಕಾರಣ. ಹೀಗೆ ಕನಕದಾಸರ ಸುಮಾರು 6 ದಶಕಗಳ ಆಯುಷ್ಯದಲ್ಲಿ ಕಾರ್ಪಣ್ಯಗಳು ಬಹಳ ಬಂದು ಹೋಗುತ್ತವೆ. ಕೃಷ್ಣನು ಭಗವದ್ಗೀತೆಯಲ್ಲಿ ಅರ್ಜುನನಿಗೆ

**ಕಾರ್ಪಣ್ಯದೋಷೋಪಹತಸ್ವಾಭಾವಃ**
**ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾ ॥1॥**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ**
**ಶಿಷ್ಯಸ್ತೇಹಂ ಶಾಧಿ ಮಾಂ ತ್ವಂ ಪ್ರಪನ್ನಮ್ ॥2॥**

ಕಷ್ಟವೆಂದರೆ ಗೀತೆಯಲ್ಲಿ ಅರ್ಜುನನಿಗೆ ಕೃಷ್ಣನು ಪಕ್ಕದಲ್ಲಿ ನಿಂತು ವೈರಿಗಳನ್ನು ಹೊಡೆ ನಾನಿದ್ದೇನೆ ನಿನ್ನ ಹಿಂದೆ ಎನ್ನುತ್ತಾನೆ. ಆದರೆ ಕನಕದಾಸರ ವಿಷಯದಲ್ಲಿ ತಿರುಪತಿ ಮೊದಲಾದ ಕಡೆಗಳಲ್ಲಿ ನೀನು ಹೊಡೆಸಿಕೊಳ್ಳುವ ದಾಸನಾದರೆ ನಾನು ಬರುತ್ತೇನೆ. ಎನ್ನುತ್ತಾನೆ. ಆದರೆ ಪ್ರತ್ಯಕ್ಷವಾಗಿ ಪರಮಾತ್ಮನನ್ನು ಕಾಣದೇ ಕಾರ್ಪಣ್ಯಕ್ಕೊಳಗಾಗಿ ಪರಮಾತ್ಮನಿಗೆ ನಿರೀಕ್ಷಿಸಲು ಹಚ್ಚಿದವರು ಕನಕದಾಸರು. ಕನಕದಾಸರ ಸ್ವಭಾವದಲ್ಲಿ ಇರುವ ಸಾಹಸಮಯ ವ್ಯಕ್ತಿತ್ವ, ತ್ಯಾಗಮಯ ಜೀವನ, ಪ್ರತಿಭಾ ಸಾಮರ್ಥ್ಯಗಳು ಹೋಗಿ ಅದರ ಬದಲು ಕಾರ್ಪಣ್ಯ ಎಂದರೆ ಹತ ಸ್ವಭಾವ ಬಂದ ಸಂದರ್ಭದಲ್ಲಿ ಅವರು ಪುನಃ ಧೈರ್ಯದಿಂದ ಚೇತರಿಸಿಕೊಂಡು ಪರಮಾತ್ಮನ ಅನುಗ್ರಹದಿಂದ ಅವೆಲ್ಲವನ್ನು ಎದುರಿಸಿ ತಮ್ಮನ್ನು ತಾವು ಸಮರ್ಥಿಸಿಕೊಳ್ಳುತ್ತಾರೆ. ಅಂತಹ ಉದಾಹರಣೆಗಳೆಂದರೆ

- ಬಾಳೆ ಹಣ್ಣಿನ ಪರೀಕ್ಷೆ
- ಮೋಕ್ಷಕ್ಕೆ ನಾನು ಹೋದರೆ ಹೋದೇನು
- ಪೂಜಾ ಕಾಲದಲ್ಲಿ ನಾಯಿಯು ಬಂದದ್ದು
- ಆರತಿ ಮಾಡುವಾಗ ಹಾವು ಬಂದದ್ದು
- ಹಿಂದಿನವರಿಗೆ ಮುಂದೆ, ಮುಂದಿನವರಿಗೆ ಹಿಂದೆ ಎಂದದ್ದು ಇತ್ಯಾದಿ...

ಕನಕದಾಸರು ಜೀವನದಲ್ಲಿ ಎಂದೂ ಸಾತ್ವಿಕ ರೋಷ ಬಿಟ್ಟಿಲ್ಲ ತಾಮಸ ಶಾಪ ಕೊಟ್ಟಿಲ್ಲ.

ತಾವು ಕುರುಬರೆಂಬ ಕೀಳರಿಮೆ ಅವರಿಗೆ ಇರಲಿಲ್ಲ ಅಥವಾ ತಾವು ಗುರುಗಳ ಆತ್ಮೀಯ ಭಕ್ತರೆಂಬ ಗರ್ವವೂ ಇರಲಿಲ್ಲ. ಭಕ್ತಿಯಲ್ಲಿ ಆತ್ಮ ನಿವೇದನೆ, ಸಾಹಿತ್ಯ ಶಕ್ತಿಯಲ್ಲಿ ವಿಡಂಬನೆ, ಅವರ ಮೂಲ ಗುಣ. ಈ ಕೆಳಗಿನ ಕೀರ್ತನೆಯಲ್ಲಿ ಪರಮಾತ್ಮನ ಪ್ರಾರ್ಥನೆ ಮಾಡುತ್ತ ತಮ್ಮ ಅಸಹಾಯಕತೆಯನ್ನು ನಿವೇದಿಸಿ ರಕ್ಷಿಸಲು ಕೋರುತ್ತಾರೆ.

**ದೀನನಾನು ಸಮಸ್ತ ಲೋಕಕೆ**
**ದಾನಿ ನೀನು, ವಿಚಾರಿಸಲು ಮತಿ,**
**ಹೀನ ನಾನು ಮಹಾಮಹಿಮ ಕೈವಲ್ಯ ಪತಿನೀನು**
**ಏನಬಲ್ಲೆನು ನಾನು? ನೆರೆಸು**
**ಜ್ಞಾನ ಮೂರುತಿ ನೀನು ನಿನ್ನ ಸ**
**ಮಾನರುಂಟೆ ದೇವ ರಕ್ಷಿಸು ನಮ್ಮನನವರತ**

ಕನಕದಾಸರು ಇಂತಹ 55 ಪದ್ಯಗಳನ್ನು ರಚಿಸಿರುವರೆಂದು ದೇ.ಜ.ಗೌ. ಅಭಿಪ್ರಾಯಪಡುತ್ತಾರೆ.

ಪ್ರಪಂಚವೆಲ್ಲವೂ ಪರಮಾತ್ಮಮಯ ಎಂದು ಹೇಳಲು 'ಬಯಲು ಆಲಯದೊಳಗೊ ಆಲಯದೊಳಗೆ ಬಯಲೊ ಎಂದು ಹೇಳುತ್ತ ಎಲ್ಲವೂ ನಿನ್ನೊಳಗೆ ಹರಿಯೇ ಎಂದು ನಿವೇದಿಸುತ್ತಾರೆ.

ಶ್ರೀಯುತ ಬಿ.ಎಸ್.ಸಣ್ಣಯ್ಯ, ಮೋಹನ ತರಂಗಿಣಿಯ ಸಂಪಾದಕರು ಹೇಳುವಂತೆ, ಕನಕದಾಸರು ಪ್ರಸಿದ್ಧರಾದರೂ, ಅವರ ಕಾಲ ಪ್ರಸಿದ್ಧವಾಗಲಿಲ್ಲ (1565). ಆದರೆ ಅವರ ಅಧ್ಯಯನ, ಅವಲೋಕನ, ಮೆಚ್ಚುವಂತಹವು. ಕನಕದಾಸರ ಮೋಹನ ತರಂಗಿಣಿ ಕಾವ್ಯವು, ಸ್ಕಂಧ ಪುರಾಣ, ವಿಷ್ಣು ಪುರಾಣ, ಮಹಾಭಾರತ, ಹರಿವಂಶ, ಮೊದಲಾದ ಮಹಾಕೃತಿಗಳ ಕಾವ್ಯರೂಪ. ಇದು ಕನಕದಾಸರ ಪಾಂಡಿತ್ಯ, ಪ್ರತಿಭೆ ಮತ್ತು ಅವರ ಕಾರ್ಪಣ್ಯದ ಅನುಭವಗಳನ್ನು ಹೊಂದಿದೆ. ಕನಕದಾಸರು ಶೈವಾಗಮ, ಪಾಣಿನಿ, ಮೊದಲಾದವುಗಳೆಲ್ಲ ಓದಿದ್ದರ ಪ್ರಭಾವ ಕೃತಿಗಳಲ್ಲಿ ವ್ಯಕ್ತವಾಗಿದೆ. ಭಾರತೀಯ ಆಧ್ಯಾತ್ಮದಲ್ಲಿನ ಮುಖ್ಯ ದರ್ಶನಗಳ ಬಗ್ಗೆ ತಿಳಿದುಕೊಳ್ಳಬೇಕಾದರೆ ಕನಕದಾಸರ ಚರಿತ್ರೆ ತಿಳಿದುಕೊಂಡರೆ ಸಾಕು. ಅವರ ತಾತ್ವಿಕ ನೆಲೆಗಟ್ಟು, ವೀರಶೈವ–ಭಾಗವತ, ವಿಶಿಷ್ಟಾದ್ವೈತ, ಕೊನೆಯಲ್ಲಿ ದ್ವೈತ ದರ್ಶನಗಳನ್ನು ಅಭ್ಯಸಿಸಿ, ಆಚರಿಸಿ, ಬೋಧಿಸುವಷ್ಟು ಪಾರಂಗತರಾಗಿದ್ದರು.

ಸುಮಾರು ಸಹಸ್ರ ಚದರ ಕಿಲೋಮೀಟರ್ ವ್ಯಾಪ್ತಿಯನ್ನು ತಮ್ಮ ಶತಮಾನದ ಬದುಕಿನಲ್ಲಿ ಓಡಾಡಿದವರು. ಬಾಡ, ಬಂಕಾಪುರ, ಕಾಗಿನೆಲೆ, ಹಿರೇಕೆರೂರ, ಕದರಮಂಡಲಗಿ, ಕಮ್ಮೂರು, ಸಂತೇಕಲ್ಲಹಳ್ಳಿ, ಹಂಪಿ, ಬೇಲೂರು, ರಾಯಚೂರು, ಉಡುಪಿ, ತಿರುಪತಿ ಹೀಗೆ ಓಡಾಡಿದವರು. ದೇಶವೂ ಸುತ್ತಿ ಕೋಶವೂ ಓದಿ ಗುರುಮುಖೇನ ಜ್ಞಾನ ಗಳಿಸಿ ಅಸೂಯಾಮಯ ಸಹಪಾಠಿಗಳ ಮಧ್ಯದಲ್ಲಿ ಸಂಯಮ ದಿಂದಿದ್ದು ಶಿಷ್ಯೋತ್ತಮರೆನಿಸಿಕೊಂಡವರು. ಅದಕ್ಕಿಂತ ಮಿಗಿಲಾಗಿ ಸಮಕಾಲೀನ ಛಂದಸ್ಸುಗಳಾದ ಸಾಂಗತ್ಯ ಮತ್ತು ಷಟ್ಪದಿಯಲ್ಲಿ ಮೋಹನ ತರಂಗಿಣಿ, ಹರಿಭಕ್ತಿಸಾರ, ರಾಮಧಾನ್ಯ ಚರಿತ್ರೆ, ನಳಚರಿತ್ರೆ, ಮೊದಲಾದ ಕಾವ್ಯಗಳನ್ನು ಬರೆದವರು. ಅವರ ಓಡಾಟವೇ ಅವರ ಅನುಭವ. ಅವರ ಕಾರ್ಪಣ್ಯದ ಪರಿಸರವೇ ಅವರ ಪ್ರತಿಭೆ.

ಪರಮಾತ್ಮನ ಒಲುಮೆಯೇ ಎಂದರೆ ಬೆನ್ನು ಬಿಡದ ಬೇತಾಳದಂತೆ 3 ಸಲ ಕನಸಿನಲ್ಲಿ ಬಂದ ಶ್ರೀ ಹರಿಯೇ ಅವರ ರಕ್ಷಾ ಕವಚ. ಈ ಕೆಳಗಿನ ಕೃತಿಯಲ್ಲಿ ಅದನ್ನು ತಿಳಿಸುತ್ತಾರೆ.

**ಊರು ತನಗೊಂದಿಲ್ಲ ಹೊತ್ತ ಶ**
**ರೀರಗಳ ಮಿತಿಯಲ್ಲ ತಾ ಸಂ**
**ಚರಿಸದ ಸ್ಥಳವಿಲ್ಲ ನುಡಿಯದ ಭಾಷೆ ಮತ್ತಿಲ್ಲ**
**ಬೇರೆ ಹೊಸತೊಂದಿಲ್ಲ, ಉಣ್ಣದ**
**ಸಾರ ವಸ್ತುಗಳಿಲ್ಲ, ತನುಸಂ**
**ಚಾರವೀ ಬಗೆಯಾಯ್ತು ರಕ್ಷಿಸು ನಮ್ಮನನವರತ....** *(ಹರಿಭಕ್ತಿಸಾರ–81)*

ಅವರ ನಳಚರಿತ್ರೆಯು ತ್ಯಾಗಮೂಲವಾದ ಶೃಂಗಾರ ಕಥೆಯಾದರೆ, ಮೋಹನ ತರಂಗಿಣಿಯು ಭೋಗಮೂಲವಾದ ಶೃಂಗಾರ ಕಥೆ. ರಾಮಧಾನ್ಯ ಚರಿತೆಯು ವಿರೋಧ ಮೂಲವಾದ ಸಾಮಾಜಿಕ ಕಥೆ. ಕೊನೆಯಲ್ಲಿ ಬರೆದ ಹರಿಭಕ್ತಿಸಾರವು ಮನೋವೈಜ್ಞಾನಿಕ ವಿಶ್ಲೇಷಣೆ ಮತ್ತು ಸರ್ವ ಸಮರ್ಪಣಾ ಭಾವದ ಆಧ್ಯಾತ್ಮಿಕ ನಿವೇದನೆಯ ಕಥೆ. ಸಂಯಮ ಮೀರಿದಾಗ ಅವರು ಕೆಲವು ಕೀರ್ತನೆಗಳನ್ನು ಹಾಡಿ ಸಮಾಜದ ಜನರಿಗೆ ತಿಳಿಯ ಹೇಳಿದ್ದಾರೆ.

- ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ.
- ತಲ್ಲಣಿಸದಿರು ಕಂಡ್ಯಾ ತಾಳು ಮನವೆ
- ದಾಸಾರ್ಯರ ದಾಸರ ದಾಸ ನಾನು
- ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ
- ಆತನೊಲಿದ ಮೇಲೆ ಯಾತರ ಕುಲವಯ್ಯಾ
- ಅಜ್ಞಾನಿಗಳ ಕೂಡ ಅಧಿಕ ಸ್ನೇಹಕ್ಕಿಂತ
- ಸತ್ಯವಂತರ ಸಂಗವಿವರಲು ತೀರ್ಥವ್ಯಾತಕೆ
- ನೀಮಾಯೆಯೊಳಗೋ ನಿನ್ನೊಳು ಮಾಯೆಯೋ
- ಆವಬಲವಿದ್ದರೇನು ದೈವಬಲವಿಲ್ಲದವಂಗ
- ಕಣಿಯ ಹೇಳ ಬಂದೆ
- ತನು ನಿನ್ನದು ಜೀವನ ನಿನ್ನದು
- ಹರಿ ನಿನ್ನ ಪದ ಕಮಲ ಕರುಣದಿಂದಲೆ ಎನಗೆ ದೊರಕಿತು
- ಕಲಿಯುಗ ಮಹಿಮೆಯನು ಕಂಡಷ್ಟು ಪೇಳುವೆನು
- ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ
- ಈಶ ನಿನ್ನ ಚರಣ ಭಜನೆ....ಇದರಲ್ಲಿ 24 ಕೇಶವ ನಾಮಗಳನ್ನು ಹಾಡಿ ಭಕ್ತರಾಗುತ್ತಾರೆ, ಸಂತರಾಗುತ್ತಾರೆ, ದಾರ್ಶನಿಕರಾಗುತ್ತಾರೆ.

ಅವರು ಕನ್ನಡ ಸಾಹಿತ್ಯ ಲೋಕಕ್ಕೆ ಕೊಟ್ಟ ವಿಶಿಷ್ಟ ಕೊಡುಗೆ ಎಂದರೆ ಮುಂಡಿಗೆಗಳು. ಈ ಮುಂಡಿಗೆಗಳು ಸರಿಯಾಗಿ ಅರ್ಥೈಸಿ ವಿವರಿಸಲು ಎಂಟೆದೆ ಭಂಟರೇ ಬೇಕು. ಆದ್ದರಿಂದಲೇ ಕನಕನನ್ನು ಕೆಣಕಬೇಡ, ಕೆಣಕಿ ತಿಣುಕಬೇಡ–ಎಂಬ ಗಾದೆ ಮಾತೇ ಸಿದ್ಧವಾಯಿತು.

ಒಂದೆರಡು ಪ್ರಮುಖ ಮುಂಡಿಗೆಗಳು ಹೀಗೆ ಪ್ರಾರಂಭವಾಗುತ್ತವೆ.

- **ಪುಟ್ಟ ದಾಸನು ನಾನಲ್ಲ**

  ..............................
- **ಪರಮ ಪುರುಷ ನೀ ನೆಲ್ಲಿಕಾಯಿ**

  ..............................

## ಅನುಬಂಧಗಳು

## 1

## ಕನಕದಾಸರನ್ನು ಕುರಿತ ಕೀರ್ತನೆಗಳು

**ಕನಕದಾಸನ ಮೇಲೆ ದಯಮಾಡಲು ವ್ಯಾಸ**
**ಮುನಿಮಠದ ಜನರೆಲ್ಲ ದೂರಿಕೊಂಬುವರು** ||ಪ||

**ತೀರ್ಥವನು ಕೊಡುವಾಗ ಕನಕನ್ನ ಕರೆಯೆನಲು**
**ಧೂರ್ತರಾಗಿದ್ದ ವಿದ್ವಾಂಸರೆಲ್ಲ**
**ಸಾರ್ಥಕಾಯಿತು ಇವರ ಸನ್ಯಾಸಿತನವೆಲ್ಲ**

ಪೂರ್ತಿಯಾಯಿತು ಎನಲು ಯತಿಯು ನಗುತಿದ್ದನು ॥1॥

ಹರಿದಿವಸದಲ್ಲವರ ಪರೀಕ್ಷಿಸಲಿ ಬೇಕೆಂದು
ಕರೆದು ವಿದ್ವಾಂಸರನ ಕನಕನ್ನ ಬಿಡದೆ
ಕರದಲ್ಲಿ ಕದಳಿಯ ಫಲಗಳನೆ ಇತ್ತು ನಿಂ
ದಿರದೆ ಏಕಾಂತದಲಿ ಮೆಲುವುದೆಂದೆನಲು ॥2॥

ಊರುಬಿಟ್ಟು ಬಲು ದೂರದಲಿ ತಾವೋಗಿ
ಬೇರೆ ಬೇರೆ ಕುಳಿತು ವಿದ್ವಾಂಸರು
ಆರು ಇಲ್ಲದ ಬಳಿಯೆ ಮೆದ್ದೆವೆಂದರೆ ಕನಕ
ತೋರದೆನಗೇಕಾಂತವೆನುತ ಪೇಳಿದನು ॥3॥

ಪೃಥ್ವ್ಯಾದಿ ಶಬ್ದಾದಿ ಶ್ರೋತ್ರಾದಿ ದಾಗಾದಿ
ತತ್ವಗಳ ಒಳಹೊರಗೆ ತತ್ವೇಶರು
ಎತ್ತನೋಡಿದರತ್ತ ಪ್ರಾಪ್ತರಾಗಿರಲು ಹರಿ
ಮತ್ತೆಲ್ಲಿ ಮೆಲುದೆಂದೆನುತ ಕೇಳಿದನು ॥4॥

ಮಾಣಿಕವು ಕೋಡಗನ ಕೈಯಲ್ಲಿ ಇದ್ದಂತೆ
ಕೋಣನೆದುರಿಗೆ ಕಿನ್ನರೀ ಮೀಟಿದಂತೆ
ವೇಣುಧ್ವನಿ ಬಧಿರನ ಬಳಿ ಮಾಡಿದಂತೆ
ಕಣ್ಣು ಕಾಣದವನಿಗೆ ಕನ್ನಡಿಯ ತೋರಿದಂತೆ ॥5॥
ನೋಡಿದಿರೇ ಈ ಕನಕನಾಡುವ ಮಾತುಗಳ
ಮೂಢಜನರರಿಯಬಲ್ಲರೇ ಮಹಿಮೆಯ
ಮಾಡಾಡಿಯೆಂತೆಯೇ ಮಾಡಿಬಿಟ್ಟರು ಇವಗೆ
ನಾಡೆಲ್ಲ ಹುಡುಕಿದರು ಈಗಾರ ಕಾಣೆ ॥6॥

ತಮ್ಮ ಕೈಮುಷ್ಟಿಯನು ಪಿಡಿದು ಕೇಳಲು ಯತಿಯು
ತಮ್ಮ ತಮಗೆ ತೋರಿದ್ದು ಪೇಳೆ ಬ್ರಾಹ್ಮಣರು
ಗಮ್ಮನೆ ಕನಕ ಸಿರಿ ವಾಸುದೇವನೆ ಪರ
ಬೊಮ್ಮ ಪುರಂದರವಿಠ್ಠಲನೆನ್ನುತ ಸಾರಿದನು ॥7॥

## 2

ಕನಕದಾಸರ ಪಾದ–ವನಜ ಸ್ಮರಿಸುವ
ಮನುಜರೆ ಪರಮ ಧನ್ಯರು ॥ಪ॥

ಹನುಮಾಂತರ್ಗತ ಜನಕಜೆರಮಣನ
ಘನ ಜ್ಞಾನ ಭಕುತಿ ಕೊಡುವ–ಭಾವ ಕಡಿವ ॥ಅ.ಪ॥

ಆಶಿಸಿದಾಗೀವೆ ಸೂಸಿಲಿ ದರ್ಶನ
ದಾಸ ನೀನಾಗೇಳೆಂದು
ಶ್ರೀಶನೆ ಬೆಂಬತ್ತಿ ದಾಸದೀಕ್ಷೆಯ ಕೊಡಿಸಿ
ದಾಸೇವೆ ಕೊಂಡವನ–ನಿಜ ಜವನ ॥1॥

ವ್ಯಾಸರಾಯರು ಪೇಳೆ ಶ್ರೀಶನ್ನ ಕರೆಯಲು
ತಾ ಶ್ವಾನನಾಗಿ ಬಂದ
ಭೂಸುರರು ಹೊಡೆದಟ್ಟೆ ಶೇಷರೂಪದಿ ಕರೆಯೆ
ಆ ಸರ್ಪ ಕಂಡೋಡಿದರು–ನಿಜ ಮೂಢರು ॥2॥

ಏಕಾಂತದಿ ತಿನಲು ಆ ಕದಳಿಫಲ ಕೊಡೆ
ತಾ ಕೈಲಿ ಹಿಡಿದು ಕುಳಿತ
ಏಕೆನಲು ಸರ್ವತ್ರ ಶ್ರೀಕಾಂತ ತಾ ವ್ಯಾಪ್ತ
ನಾ ಕಾಣೇನೇಕಾಂತ-ಜ್ಞಾನಿಸಂತ ॥3॥

ಭಕ್ತಿ ಸಾರುವ ಕಥೆ ಪದ್ಯೋಕ್ತಿಗಳ ನುಡಿದು
ಕಿತ್ತೆಸೆದ ಮೂಢ ರೂಢಿ
ಯುಕ್ತವಾದಾನಂದ ರುಕ್ತಿಗಳಿಗನುಸರಿಸಿ
ಭಕ್ತಿಲಿ ಗೋವಿಂದನ-ಭಜಿಸಿರೆಂದನ ॥4॥

ಹೀನಜನೆಂದು ದೇವಸ್ಥಾನದಿಂದಟ್ಟಲು
ಮಾನವಂತರನೆ ತೊಲೆ
ಮಾನಿ ವರಗಡದಿನ್ನೀಶೇಷವಿಠ್ಠಲ ಭಕ್ತಗೆ
ತಾನೊಲಿದು ದರ್ಶನವಿತ್ತ-ಹಿಂದಿರುಗುತ್ತ ॥5॥

3

ಲೇಸಿನಲಿ ದಾಸರಾದವರಲ್ಲವೋ
ಶ್ರೀ ಶ್ರೀ ಶ್ರೀ ನೆಲೆಯಾದಿಕೇಶವಾಂಕಿತರು
ಶೇಷತರಿವಾಸನ ದಯದಿಂದ ಜನಿಸಿದರು.

ದಾಸಕುಲದಲ್ಲಿವರು ಸುಪ್ರಮುಖರು
ವಾಸುದೇವನೆ ತನ್ನ ದಾಸನಾಗೆಂದಿವರ
ಭಾಷೆ ಪಡೆದಾ ಮೇಲೆ ದಾಸರಾದವರಿವರು ॥ಲೇಸಿನಲಿ॥ ॥1॥

ಜಾಣಮಂತ್ರವು ಎಂದು ವ್ಯಾಸ ಗುರು ನೀಡಿದ
ಕೋಣ ಮಂತ್ರವ ಜಪಿಸಿ ಸಿದ್ಧಿ ಪಡೆದವರು
ಪ್ರಾಣಕುಲವೆಲ್ಲಕೂ ತ್ರಾಣವೆನೆಸಿದ ಮುಖ್ಯ
ಪ್ರಾಣದೇವರ ಪಂಥ ಸಾರಿದವರು ॥ಲೇಸಿನಲಿ॥ ॥2॥

ಚಿಣ್ಣ ಜಯಕೃಷ್ಣನ ಸ್ತುತಿಸಿ ಕಿಂಡಿಯ ತೆರೆಸಿ
ಕಣ್ಣು ಮನ ತಣಿವಂತೆ ಕಂಡವರು ಅವರ
ಬಣ್ಣದಾ ಈ ಬದುಕು ಎಂದಿಗೂ ನಿಲದೆಂದು
ಬೆಣ್ಣೆ ಮಾತುಗಳಲಿ ಬೋಧಿಸಿದರು ॥ಲೇಸಿನಲಿ॥ ॥3॥

## ಅನುಬಂಧ-2

**ಕನಕದಾಸರ ಪ್ರಮುಖ ಮುಂಡಿಗೆಗಳು**

ಪುಟ್ಟ ದಾಸನು ನಾನಲ್ಲ = ಧ್ರುವರಾಯನು ನಾನಲ್ಲ
ದಿಟ್ಟ ದಾಸನು ನಾನಲ್ಲ = ಪ್ರಹ್ಲಾದರಾಜನು ನಾನಲ್ಲ
ಸಿಟ್ಟು ದಾಸನು ನಾನಲ್ಲ = ದುರ್ವಾಸ, ವಿಶ್ವಾಮಿತ್ರ, ಭೃಗುಗಳು ನಾನಲ್ಲ
ಸುಟ್ಟ ದಾಸನು ನಾನಲ್ಲ = ಹನುಮಂತ ನಾನಲ್ಲ
ಸುಡಗಾಡು ದಾಸ ನಾನಲ್ಲ = ರುದ್ರನಾಗಲೀ, ಹರಿಶ್ಚಂದ್ರನಾಗಲೀ ಅಲ್ಲ ॥1॥

ಕಷ್ಟ ದಾಸ ನಾನಲ್ಲ = ಕುಚೇಲ ನಾನಲ್ಲ
ಕೊಟ್ಟ ದಾಸ ನಾನಲ್ಲ = ಬಲಿಚಕ್ರವರ್ತಿ ನಾನಲ್ಲ
ಹೊಟ್ಟೆದಾಸ ನಾನಲ್ಲ = ವೃಕೋದರ ನಾನಲ್ಲ

ಇಟ್ಟಿಗೆ ದಾಸ ನಾನಲ್ಲ = ಪುಂಡರೀಕ ನಾನಲ್ಲ
ಶಿಷ್ಟ ದಾಸ ನಾನಲ್ಲ = ವಿಭೀಷಣ ನಾನಲ್ಲ
ನಿಷ್ಠದಾಸ ನಾನಲ್ಲ = ರುಗ್ಮಾಂಗದ, ಭೀಷ್ಮ, ಅಂಬರೀಷ ನಾನಲ್ಲ
ಭ್ರಷ್ಟ ದಾಸ ನಾನಲ್ಲ = ಅಜಾಮಿಳ ಮಾಧವ ನಾನಲ್ಲ
ಶ್ರೇಷ್ಠ ದಾಸ ನಾನಲ್ಲ = ಶ್ರೀಮದ್ವಾಚಾರ್ಯರು ನಾನಲ್ಲ
ವಿತ್ತದಾಸ ನಾನಲ್ಲ = ಪುರಂದರದಾಸ ನಾನಲ್ಲ
ಹುತ್ತದಾಸ ನಾನಲ್ಲ = ವಾಲ್ಮೀಕಿ ನಾನಲ್ಲ
ಆನು ಈ ಷೋಡಶ ದಾಸರುಗಳ
ದಾಸಾನುದಾಸರ ದಾಸಿಯರ ಮನೆಯ
ಮಂಕುದಾಸರ ಮನೆಯ ಶಂಕುದಾಸ
ಬಾಡದಾದಿ ಕೇಶ.
ಪರಮ ಪುರುಷ ನೀ ನೆಲ್ಲಿಕಾಯಿ (ಎಲ್ಲಿ+ಕಾಯಿ)
ಪರಮ ಪರುಷ ನೀ ನೆಲ್ಲಿಕಾಯಿ
ಸರಸಿಯೊಳಗೆ ಕರಿ ಕೂಗಿರೆಕಾಯಿ (ಕೂಗಿ+ಹೀರೆ)
ಹಿರಿದು ಮಾಡಿದ ಪಾಪ ನುಗ್ಗೇಕಾಯಿ
ಹರಿ ನಿನ್ನ ಜ್ಞಾನ ಬಾಳೆಕಾಯಿ ॥1॥

ಕರಿರಾಜಗೊಲಿದಂತ ಬದನೆಕಾಯಿ
ಅರಿಷಡ್ವರ್ಗದಿ ಒದಗಲಿ ಕಾಯಿ
ಕ್ರೂರವ್ಯಾಧಿಗಳೆಲ್ಲಾ ಹೀರೆಕಾಯಿ
ಘೋರ ದುಷ್ಕೃತ್ಯಗಳ ತೋರೇಕಾಯಿ ॥2॥
ಭಾರತದ ಕಥೆ ಕರ್ಣ ತುಂಬಿದೆ ಕಾಯಿ
ವಾರಿಜಾಕ್ಷನೆ ಗತಿ ಎಂದಿಪ್ಪೆಕಾಯಿ
ಮುರಹರ ನಿನ್ನನರಿದವರೇ ಕಾಯಿ
ಗುರು ಕರುಣಾಮೃತ ಉಣಿಸೇ ಕಾಯಿ ॥3॥

ಉರುಗಾಧಿಪತಿ ಎಂಬ ಹೆಸರಿನ ಕಾಯಿ
ಬಾಡದಾದಿಕೇಶವ ನಿನ್ನ ಮೆತ್ತಿದ ಕಾಯಿ ॥4॥

**ಉಪ ಸಂಹಾರ**

ಕನಕದಾಸರ ಜೀವನ, ಉಪದೇಶ ಈ ಎರಡೂ ಬಹು ಸರಳ. ಎರಡೂ ನೂರಾರು ವರ್ಷ ಕಳೆದರು ಜನ ಜೀವನದ ಮೇಲೆ ಅಚ್ಚೊತ್ತಿವೆ. ಮಹಾರಾಷ್ಟ್ರದ ಏಕನಾಥ, ಕನ್ನಡದ ಕನಕದಾಸ, ಹೀಗೆ ಈ ದೇಶದಲ್ಲಿ ಸಹಸ್ರಾರು ಸಂತರು ಆಗಿ ಹೋಗಿದ್ದಾರೆ. ಅವರೆಲ್ಲರಂತೆ ಕನಕದಾಸರ ಜೀವನ ಮತ್ತು ಸಾಧನೆಗಳನ್ನು ಅವರ ಕಾರ್ಪಣ್ಯದ ಮೂಲಗಳಿಂದ ನೋಡಿ ಅವರ ಸ್ಥಿತ ಪ್ರಜ್ಞತೆ ಮತ್ತು ಸರ್ವ ಮಾನ್ಯತೆಗಳನ್ನು ತಿಳಿಸುವುದರಿಂದ ದೇಶಕ್ಕೆ, ಧರ್ಮಕ್ಕೆ ಒಳಿತಾಗುತ್ತದೆ. ಇಂದು ದೇಶ ಎದುರಿಸುತ್ತಿರುವ ಎರಡು ಪ್ರಮುಖ ಸಮಸ್ಯೆಗಳೆಂದರೆ ಭ್ರಷ್ಟಾಚಾರ ಮತ್ತು ಭಯೋತ್ಪಾದನೆ. ಈ ಎರಡೂ ಸಮಸ್ಯೆಗಳಿಗೆ ದಾಸರ ಜೀವನ ಮತ್ತು ಕೃತಿಗಳಲ್ಲಿ ಉತ್ತರ ಸಿಗುತ್ತದೆ. ಹೀಗಾಗಿ ಅವರು ರಾಷ್ಟ್ರೀಯ ಸಂತರು ಎಂದು ನಾನು ಈ ಪ್ರಬಂಧದ ಮೂಲಕ ತಿಳಿಸಬಯಸುತ್ತೇನೆ. ಇವರು ಸಾಮಾಜಿಕ ನೆಲೆಯಿಂದ ಬಂದ ಸಂವೇದನಾಶೀಲ ರಾಷ್ಟ್ರೀಯ ಸಂತರೆಂಬುದರಲ್ಲಿ ಸಂದೇಹವಿಲ್ಲ. ಕನಕದಾಸರು ಮೊದಲಿನ ಮೂವತ್ತು ವರ್ಷ ಅಷ್ಟೇನೂ ಕ್ರಿಯಾಶೀಲರಾಗಿರಲಿಲ್ಲ. ಮಧ್ಯದ ಮೂವತ್ತು ವರ್ಷ ಕ್ರಿಯಾಶೀಲರೂ ಮತ್ತು ಸನಾತನ ಧರ್ಮ ಅನುಯಾಯಿಗಳೂ ಆಗಿದ್ದರು. ಕೊನೆಯ ಮೂವತ್ತು ವರ್ಷ ಪ್ರತಿಕ್ರಿಯಿಸುತ್ತಾ, ಸಮಾಜವನ್ನು ತಿದ್ದುತ್ತ, ತುಂಬು ಬಾಳು ನಡೆಸಿದ ಮಹಾನ್ ಸಂತರು. ಅವರ ಪ್ರಮುಖ ಸಾಧನೆ ಎಂದರೆ, 'ಈಶ ನಿನ್ನ ಚರಣ ಭಜನೆ ಆಸೆಯಿಂದ ಮಾಡುವೆನು, ದೋಷ ರಾಶಿ ನಾಶ ಮಾಡು ಶ್ರೀಶ ಕೇಶವ' ಎಂಬ 24 ದೇವರ ನಾಮದ ಸಂಧ್ಯಾವಂದನದ ಪರ್ಯಾಯ ವ್ಯವಸ್ಥೆಯನ್ನು ಕೊಟ್ಟವರು. ಹೀಗಾಗಿ ಅವರ ಪ್ರಮುಖ ಸಂದೇಶವೆಂದರೆ, ಆತನೊಲಿದ ಮೇಲೆ ಯಾತರ ಕುಲವಯ್ಯ.

## ಅನುಬಂಧ–3

**ಪ್ರಮುಖ ಆಕರ ಗ್ರಂಥಗಳು**


। ಬನ್ನಂಜೆ ಗೋವಿಂದಾಚಾರ್ಯ – ಕನಕೋಪನಿಷತ್, ಕನಕದಾಸ ಅಧ್ಯಯನ ಸಂಶೋಧನಾ ಪೀಠ, ಉಡುಪಿ, 2008.

- ಶ್ರೀ ಕನಕದಾಸರು (ಜೀವನ ಚರಿತ್ರೆ)–ಕೊರಟ ಶ್ರೀನಿವಾಸರಾವ್, ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರು, 1992.
- ಕನಕ ಸಾಹಿತ್ಯ ದರ್ಶನ–ಸಂಪುಟ 1 ಮತ್ತು 2, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, 1990.
- ಜನಪ್ರಿಯ ಕನಕ ಸಂಪುಟ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, 1989.
- ಕನಕದಾಸ ಮತ್ತು ಏಕನಾಥ–ಒಂದು ತೌಲನಿಕ ಅಧ್ಯಯನ, ಶ್ರೀಮತಿ ಮೇಧಾ ಕುಲಕರ್ಣಿ, ಮುಂಬೈ, 2007.
- ಹಂಪಿ ದಾಸ ಸಂಪತ್ತು, ಸಂ:ಬಿ.ಎಸ್.ಅನಿಲಕುಮಾರ್, 2004.
- ದಾಸರ ಮುಂಡಿಗೆಗಳು, ಸಂ:ಚತುರ್ವೇದಿ ವೇದವ್ಯಾಸ ಆಚಾರ್ಯ ಟಿ.ಟಿ.ಡಿ., 2008.
- ಮೋಹನ ತರಂಗಿಣಿ ಸಂಗ್ರಹ–ಸಂ:ಬಿ.ಎಸ್.ಸಣ್ಣಯ್ಯ, ಗೀತಾ ಬುಕ್ ಹೌಸ್, ಬೆಂಗಳೂರು, 1963.
- ಸಮಗ್ರ ದಾಸ ಸಾಹಿತ್ಯ ಸಂಪುಟ ಪ್ರೊ. ಸುಧಾಕರ.
- ದಾಸಸಾಹಿತ್ಯ ತವನಿಧಿ–ಪ್ರೊ. ವಸಂತ ಕುಷ್ಟಗಿ, 2012.
- ಕೀರ್ತನೆ–ತತ್ವಪದಗಳ ಸಂಗ್ರಹ–ಸಂ. ಡಾ.ವಾಸುದೇವ ಅಗ್ನಿಹೋತ್ರಿ, 2008.


## 'ಈತನೀಗ ವಾಸುದೇವನು' – ಕನಕದಾಸರ ಒಂದು ಕೀರ್ತನೆ

**ಕೇಶವ ಶರ್ಮ ಕೆ.**

ದಾಸ ಚಳುವಳಿಯು ಅಧಿಕಾರವನ್ನು ಒಡೆಯಲು ಯತ್ನಿಸಿತು. ನಡುಗನ್ನಡದಲ್ಲಿ ಭಕ್ತಿ ಚಳುವಳಿಯು ಬಹುಮುಖ್ಯ ಚಳುವಳಿಯಾಗಿದೆ. ಅಂದರೆ ಅಧಿಕಾರದ ಪರಮೋಚ್ಚ ಅಧಿಕಾರವನ್ನು ಈ ಚಳುವಳಿಗಳು ಮುರಿಯಲು ಯತ್ನಿಸಿದ್ದರಿಂದ ಅವು ತಮಗೆ ಬೇಕಾದ ಪರಿಕಲ್ಪನೆಗಳನ್ನು ಹುಟ್ಟುಹಾಕಿದವು. ಉದಾ: ಎಲ್ಲಾ ವಚನಕಾರರು ಮತ್ತು ದಾಸರು ಹುಟ್ಟುಹಾಕಿರುವ 'ಕೂಡಲ ಸಂಗಮ', 'ಚನ್ನಮಲ್ಲಿಕಾರ್ಜುನ', 'ಆದಿಕೇಶವ', 'ಪುರಂದರ ವಿಠಲ' ಇವರು ಯಾರೂ ಲೌಕಿಕದ ಅಧಿಕಾರ ಉಳ್ಳವರಲ್ಲ. ಭೌತಿಕ ಅಧಿಕಾರವನ್ನು ಮೀರಿದ ಪ್ರಭುಗಳು ಇವರು. ಇದಕ್ಕೆ ಸಂವಾದಿಯಾಗಿ ಹದಿನೇಳನೆಯ ಶತಮಾನದ ರಾಜಕೀಯ ತತ್ವಜ್ಞಾನಿ ಜೇಮ್ಸ್ ಹ್ಯಾರಿಂಗ್‌ಟನ್ ಹೇಳಿದ ಪ್ರಮುಖ ಅಂಶಗಳನ್ನು ಇಲ್ಲಿ ಗಮನಿಸಬಹುದು. ಉದಾರವಾದಿ ಮಾನವತಾವಾದವು ಅಧಿಕಾರದ ಎರಡು ಸ್ವರೂಪವನ್ನು ವಿವರಿಸುತ್ತದೆ ಅಥವಾ ವ್ಯತ್ಯಾಸಗೊಳಿಸುತ್ತದೆ.

- ನಾಗರಿಕ ಮಾನವತಾವಾದವು (Civic humanism) ವಾಸ್ತವದ ಅಧಿಕಾರ (de facto power)ವನ್ನು ಒಂದು ರೀತಿಯಲ್ಲಿ ವಿವರಿಸುತ್ತದೆ. ಕನಕದಾಸರ ಕೀರ್ತನೆಗಳು ಮಾನವತಾವಾದಿ ಪರಂಪರೆಯದು. ವಾಸುದೇವನು ದೂತನಿಗೆ ಒಲಿದವನು ಎಂದು ಕನಕದಾಸರು ಹೇಳುತ್ತಾರೆ.
- ಆದರೆ ಕಾನೂನು ಆಧಾರಿತ (dejure) ಪ್ರಭುತ್ವದ ಸ್ವರೂಪ ಬೇರೆ. ಇಲ್ಲಿ ಅಧಿಕಾರದ ಸ್ವರೂಪ ಬೇರೆಯಾಗುತ್ತದೆ. ಅಧಿಕಾರದ ಹೊಣೆ (Authority) ಭಿನ್ನವಾದ ನಿಲುವನ್ನು ತಳೆಯುತ್ತದೆ. ಅಧಿಕಾರದ ಹೊಣೆಗಾರಿಕೆಯು ಸಾಕ್ಷ್ಯ, ವಸ್ತುನಿಷ್ಠತೆ ಮುಂತಾದ ಅಂಶಗಳನ್ನು ಒಳಗೊಂಡಿದೆ. ಕನಕದಾಸರು 'ಈ ಸಮಸ್ತ ಭುವನದೊಡೆಯನು' ಎಂದು ಹೇಳುತ್ತಾರೆ.
- ಕಾನೂನು ಆಧಾರಿತ (Dejure) ಅಧಿಕಾರದಲ್ಲಿ ಪ್ರಭುತ್ವವು ಹಕ್ಕುದಾರಿಕೆಯನ್ನು ಹೊಂದಿದೆ ಮತ್ತು ಅದು ತನ್ನ ಅಧಿಕಾರವನ್ನು ಅದರದೇ ಅನ್ನಬಹುದಾದ ನ್ಯಾಯವನ್ನು ರೂಪಿಸಿಕೊಳ್ಳುತ್ತದೆ. ಚೆನ್ನಕೇಶವನಿಗೆ ಇರುವ ಪ್ರಭುತ್ವವು ದೊಡ್ಡದು. ಆದರೆ ಈ ಎರಡೂ ಪ್ರಭು ಸಂಹಿತೆಯಲ್ಲಿ ಅಧಿಕಾರದ ಹೊಣೆಗಾರಿಕೆಯನ್ನು ಬೇರೆ ಬೇರೆ ರೀತಿಯಲ್ಲಿ ವಿವರಿಸುತ್ತದೆ.

ವಾಸ್ತವ ಅಧಿಕಾರ (de facto) ನಿಲುವಿನ ಪ್ರಕಾರ ತನ್ನ ಅಧಿಕಾರ ಏಕಕೇಂದ್ರಿತವಾದುದು. ಎಲ್ಲದಕ್ಕೂ ಅಧಿಕಾರವು ಉತ್ತರ ಹೇಳಬೇಕಾಗಿಲ್ಲ ಎಂದು ಪ್ರತಿಪಾದಿಸುತ್ತದೆ. ವಿಜಯನಗರದ ಅರಸರು ಲೌಕಿಕದ ಅಧಿಕಾರಿಗಳು ಕನಕದಾಸರಿಗೆ ಈ ವಿಷಯದಲ್ಲಿ ಯಾವ ಆಸಕ್ತಿಯೂ ಇಲ್ಲ.

ಆದರೆ ಅಧಿಕಾರದ ಹೊಣೆಗಾರಿಕೆಯನ್ನು ಇವು ತಪ್ಪಿಸಿಕೊಳ್ಳುವಂತಿಲ್ಲ. ಅಧಿಕಾರದ ಹೊಣೆಗಾರಿಕೆಯೇ ಇಲ್ಲಿ ಪ್ರಮುಖ ಅಂಶವಾಗಿದೆ. ಹೀಗಿದ್ದೂ ಯಾವುದೇ ಸಮಾಜದ ರಾಜಕೀಯ, ಸಾಂಸ್ಕೃತಿಕ ವಿವರಗಳು ಅಧಿಕಾರಕ್ಕೆ ಬರುವಾಗ ತನ್ನದೇ ನಿರ್ವಚನಗಳನ್ನು ಹೊಂದಿರುತ್ತವೆ. ದಾಸರ ಕೀರ್ತನೆಯಲ್ಲಿ ಈ ಅಂಶಗಳು ಬೇರೆ ಬೇರೆ ಪರಿಕಲ್ಪನೆಗಳ ಮೂಲಕ ಹೊಂದಾಣಿಕೆ ಮಾಡಿಕೊಳ್ಳುತ್ತವೆ.

ಈ ಅಂಶಗಳು ಕನಕದಾಸರ ಕೀರ್ತನೆಯಲ್ಲಿ ವ್ಯಕ್ತವಾದ ಕ್ರಮವನ್ನು ಹೀಗೆ ಗುರುತಿಸಬಹುದು.

- ಆಧುನಿಕ ಅರ್ಥದ ಅಧಿಕಾರವು ಇಲ್ಲಿ ಮುಖ್ಯವಲ್ಲ, 'ಈತನೀಗ ವಾಸುದೇವನು'
- ದೇವರನ್ನು ಒಲಿಸಲು ಬೇರೆ ಬೇರೆ ಹಾದಿಗಳಿವೆ (ಉದಾ 'ಶ್ರೀ ರಮಣಿಯನೊತ್ತಿ ಅಡಿಗೆ ಬೀಗನ ಶಿರವನ್ನು ಕಾಯ್ದ ಶ್ರೀರಮಣ ಆದಿಕೇಶವನನ್ನು–ನೋಡಿರೋ')
- ದಾಸನಾಗುವುದರ ಬಗ್ಗೆ ಯಾವ ಮುಜುಗರವಿಲ್ಲ. ದೇವರ ದಾಸನಾಗಬೇಕು ಎಂಬುದಷ್ಟೆ ಇಲ್ಲಿ ಮುಖ್ಯ.
- ದಾಸತ್ವ ಎನ್ನುವುದಕ್ಕೆ ವಿಶೇಷ ಅರ್ಥಗಳಿವೆ.
- ದಾಸರದು ಆಚರಣಾಬದ್ಧವಾದ (Ritualistic) ಕ್ರಮವಲ್ಲ
- ದಾಸ ಸಾಹಿತ್ಯಕ್ಕೆ ರಾಗ–ತಾಳ ಎರಡೂ ಇವೆ. ಇದರ ಹಾಡುಗಾರಿಕೆಗೆ ಜನರನ್ನು ಸೆಳೆಯುವ ಗುಣವಿದೆ.

ದಾಸ ಸಾಹಿತ್ಯದಲ್ಲಿ ಚೆನ್ನಕೇಶವನೇ ಮೂಲ ಪುರುಷ. ಅಧಿಕೃತ ಪ್ರಭು. ಇಲ್ಲಿ ಪ್ರಭುತ್ವಕ್ಕೆ ಸಾಮಾಜಿಕ, ರಾಜಕೀಯ, ಧಾರ್ಮಿಕ, ಅರ್ಥವಂತಿಕೆಗಳಿವೆ. ಯಾರೇ ಆಗಲಿ, ವಿನಾಕಾರಣ ದಾಸನಾಗುವುದಿಲ್ಲ. ಹಾಗೆಯೇ ಪ್ರಭುವೂ ಕೂಡಾ. ಅಧಿಕೃತ ಅಧಿಕಾರ ವುಳ್ಳವರು ಆಳುವ ಶಕ್ತಿಯನ್ನು ಹೊಂದಿರುತ್ತಾರೆ. ಅವರ ಋಣದಲ್ಲಿ ದಾಸರು ಇರುತ್ತಾರೆ. ಇಲ್ಲಿ ದ್ವೈತ (ಎರಡು) ಎನ್ನುವುದು ಮುಖ್ಯ.

ಆದುದರಿಂದ ದೇವರು ಬೇರೆ, ದಾಸರು ಬೇರೆ, ದಾಸರು ದೇವರನ್ನು ಆಶ್ರಯಿಸಿಕೊಂಡವರು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ದ್ವೈತದ ಪರಿಕಲ್ಪನೆ. ಇಲ್ಲಿ ಅಧಿಕಾರವೆಂದರೆ (ಪ್ರಭುತ್ವ) ಅಗೋಚರವಾದುದು. ಅದಕ್ಕೆ ನಿರ್ದಿಷ್ಟ ಆಕಾರವಿಲ್ಲ. ದಾಸರಿಗೆ ಸಾಮಾಜಿಕ, ಧಾರ್ಮಿಕ ಅಸ್ತಿತ್ವಗಳಿವೆ. ಅಧಿಕಾರವು ರೂಪುಗೊಳ್ಳುವುದಕ್ಕೆ ಸಾಮಾಜಿಕ, ಚಾರಿತ್ರಿಕ ಕಾರಣಗಳಿವೆ. ಇವು ವಿಷಯ ನಿಷ್ಠವಾದವುಗಳು. ಎರಡನೆಯದಾಗಿ ಪ್ರಭುತ್ವವು ತನಗೆ ಬೇಕಾದ ಜ್ಞಾನರೂಪಗಳನ್ನು ಹುಟ್ಟುಹಾಕುತ್ತವೆ. ಹೀಗಾಗಿ ಪ್ರಭುತ್ವವು ಅಧಿಕಾರವನ್ನು ತನಗೆ ಬೇಕಾದ ವೈಚಾರಿಕ ಆಕೃತಿಯನ್ನು ಪಡೆದುಕೊಳ್ಳುತ್ತವೆ. ಭಾರತದಲ್ಲಿ 'ಭಕ್ತಿ' ಚಳುವಳಿಗಳು ಹುಟ್ಟಿಕೊಂಡಿದ್ದೇ ಭೌತಿಕ ಅಧಿಕಾರವನ್ನು ವಿರೋಧಿಸುವುದಕ್ಕಾಗಿ. ದಾಸರ ಕೀರ್ತನೆಗಳ ಹಿನ್ನೆಲೆಯಿಂದ ವಿವರಿಸಬೇಕೆಂದರೆ– ಲೌಕಿಕದ ಪ್ರಭುತ್ವವನ್ನು ಮೀರಿ ಪಾರಲೌಕಿಕದ ಅಧಿಕಾರವನ್ನು ರೂಪಿಸುವುದು ದಾಸರಿಗೆ ಮುಖ್ಯವಾಯಿತು.

ದಾಸ ಸಾಹಿತ್ಯ ಪರೋಕ್ಷವಾಗಿ ಹೇಳಿದ್ದೇನೆಂದರೆ ನಮಗೆ ಲೌಕಿಕದ ಪ್ರಭುಗಳಿಲ್ಲ. ನಾವು ದೇವರ (ಶ್ರೀಕೃಷ್ಣ) ದಾಸರೇ ಹೊರತು ಲೌಕಿಕದ ದೊರೆಗಳ ದಾಸರಲ್ಲ. ಹೀಗಾಗಿ ದಾಸರು ತಮಗೂ, ದೇವರಿಗೂ ಇರುವ ಸಂಬಂಧ ಬೇರೆ ಬಗೆಯದ್ದು ಎಂದು ನಿರೂಪಿಸಿದರು. ಕೃಷ್ಣನ ಪರಮೋಚ್ಛ ಅಧಿಕಾರವನ್ನು ಸಾರುವುದು ದಾಸರಿಗೆ ಅಗತ್ಯವಾಗಿತ್ತು. ಅಂದರೆ ಇಲ್ಲಿ ಅಧಿಕಾರವನ್ನು ಸಾಮಾಜಿಕ, ರಾಜಕೀಯ, ಆರ್ಥಿಕ ವಿಷಯಗಳ ಮೂಲಕ ವಿವರಿಸಲಾಯಿತು. ಫುಕೋ ಹೇಳುವ ಮೂರು ಅಂಶಗಳನ್ನು ಇಲ್ಲಿ ಗಮನಿಸಬೇಕು:

ಅಧಿಕಾರ (ಪ್ರಭುತ್ವ)ವು ರೂಪುಗೊಳ್ಳುವುದು ಸಾಮಾಜಿಕ ರೂಪಕ್ಕೆ ಅನುಸಾರವಾಗಿ, ಇಲ್ಲಿ 'ವಿಷಯ ನಿಷ್ಠತೆ' ಎನ್ನುವುದು ಮುಖ್ಯ. ಸಮಸ್ತ ಭೂಮಿಗೆ ಒಡೆಯನಾದ ಕೇಶವನು ಇಲ್ಲಿ ಗಮನವನ್ನು ಸೆಳೆಯುತ್ತಾನೆ.

**'ದನುಜೆಯಾಳ್ದನಣ್ಣ ನಣ್ಣನ ಪಿತನ ಮುತ್ತಿ ಕೌರವೇಶನ**
**ಅನುಜೆಯನಾಳಿದವ ಶಿರವನ್ನು ಛೇದಿಸಿ–ತನ್ನ**
**ಅನುಜೆಯಾಳಿದವನ ಮೂರ್ತಿಯನ್ನು**
**ನೋಡಿರೋ'**

ಜ್ಞಾನರೂಪಗಳು ತನ್ನಿಂದ ತಾನೇ ಅಧಿಕಾರದ ರೂಪದೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತವೆ. ಈ ಅರ್ಥದಲ್ಲಿ ನಯ ವಿನಯವು ಮುಖ್ಯ. ಕೃಷ್ಣನನ್ನು ನೋಡುವ ಕ್ರಮವು ಇಲ್ಲಿ ಭಿನ್ನ.

ಈ ಕೀರ್ತನೆಯಲ್ಲಿ 'ವ್ಯೋಮ ಕೇಶ', 'ವಾಸುದೇವ', 'ಆದಿಕೇಶವ', 'ರುಕ್ಮಿಣಿಯ ಗಂಡ', 'ದೇವ' ಈ ರೀತಿಯ ಮಾತುಗಳು ಇಲ್ಲಿ ಉಲ್ಲೇಖನೀಯ.

ಪ್ರಭುತ್ವದ ಅಧಿಕಾರವು ವಿಶ್ವಾಸಾತ್ಮಕವಾದುದು. ಅದು ಆ ರೂಪವನ್ನು ಪಡೆಯುವುದಕ್ಕೆ ಸಾಮಾಜಿಕ ಸಂಬಂಧಗಳ ವ್ಯತ್ಯಯವೇ ಮುಖ್ಯ ಕಾರಣ. ಯಾವಾಗ ಸಾಮಾಜಿಕ ಸಂಬಂಧಗಳಲ್ಲಿ ವಿವಿಧತೆಯು ಹುಟ್ಟಿಕೊಳ್ಳುತ್ತದೆಯೋ ಆಗ ಜ್ಞಾನ ಮತ್ತು ಅಧಿಕಾರಗಳು ಬೇರೆ ಬೇರೆ ರೂಪವನ್ನು ಧರಿಸಬೇಕಾಗುತ್ತದೆ. ಈ ಅರ್ಥದಲ್ಲಿ ಜ್ಞಾನಕ್ಕೂ ಅಧಿಕಾರಕ್ಕೂ ಸಂಬಂಧವಿದೆ. ಪ್ರಭುತ್ವವು ಈ ಕಾರಣಕ್ಕಾಗಿಯೇ ಆಧ್ಯಾತ್ಮಿಕತೆಯ ಕಡೆಗೆ ತಿರುಗುತ್ತದೆ. ಪ್ರಭುತ್ವಕ್ಕೆ ಈ ಪರಿಕಲ್ಪನೆಯು ಮುಖ್ಯವಾಯಿತು. ಇದೇ ಕಾರಣದಿಂದ ಕನಕ ದಾಸ ಸಾಹಿತ್ಯವು ಹೊಸ ರೀತಿಯ ನಿರೂಪಣೆಯನ್ನು ಹೊಂದಬೇಕಾಯಿತು. ಅದು ಪ್ರಕಟಿಸುವ ನಿರೂಪಣೆಯ ಕ್ರಮ ಉಳಿದ ನಿರೂಪಣೆಗಿಂತ ಬೇರೆಯಾಯಿತು. ಉದಾ; ಕನಕದಾಸರಲ್ಲಿ ದಾಸತ್ವವು ಇಲ್ಲಿ ನಾಚಿಕೆಯ ವಿಷಯವಲ್ಲ. ದೇವರ ದಾಸನಾಗುವುದು ದೊಡ್ಡಸ್ತಿಕೆ ಕೂಡಾ ಹೌದು. ಭಾರತೀಯ ತತ್ವಜ್ಞಾನದಲ್ಲಿ ಒಂದು ವಿಷಯ ಮತ್ತೆ ಮತ್ತೆ ಮರುಕಳಿಸಿದೆ. ಇದು ಮೊದಲು ಪ್ರಾರಂಭವಾದುದು, ಉಪನಿಷತ್ತುಗಳಲ್ಲಿ. ಆನಂತರ ಈ ತತ್ವಜ್ಞಾನವು ಬೇರೆ ಬೇರೆ ರೀತಿಯಲ್ಲಿ ವರ್ಣಿತಗೊಂಡಿತು.

**ಭಗವಂತನನ್ನು ಸೇರಲು ಮನುಷ್ಯನಿಗೆ ಇರುವ ಮಾರ್ಗಗಳು ನಾಲ್ಕು:**

- ಕರ್ಮ–ನಿಷ್ಕಾಮ ಕರ್ಮದಿಂದ–ಕರ್ಮಯೋಗ ಇದನ್ನು ನಾವು ಈ ಕೀರ್ತನೆಯಲ್ಲಿ ಕಾಣಲು ಸಾಧ್ಯ.
- ಭಕ್ತಿ–ಆಚರಣೆಯ ಮೂಲಕ–ಭಕ್ತಿಯೋಗ
- ಜ್ಞಾನ–ತಿಳುವಳಿಕೆಯ ರೀತಿಯಿಂದ ಜ್ಞಾನ ಯೋಗ
- ಧ್ಯಾನ–ಸ್ವಂತ ಏಕಾಂತ ಧ್ಯಾನದಿಂದ.

'ಅನ್ಯಥಾ ಶರಣಂ ನಾಸ್ತಿ, ಮಾಮೇಕ ಶರಣಂ ವ್ರಜ'– ಇದು ಗೀತೆಯ ಮಾತು. ನನಗೆ ಯಾರು ಶರಣಾಗುವವರೋ ಅವರನ್ನು ನಾನು ರಕ್ಷಿಸುತ್ತೇನೆ. ಗೀತೆಯಲ್ಲಿ ಕೃಷ್ಣ ಅರ್ಜುನನಿಗೆ ಹೇಳುತ್ತಾನೆ. ದಾಸರ ದಾರಿಯೂ ಇದುವೇ; ಭಗವಂತನಿಗೆ ಶರಣನಾಗುವುದು. ದೂತನಿಗೆ ಒಲಿದವನು ಇಲ್ಲಿಯ ಕೃಷ್ಣ. ಕೃಷ್ಣನಿಗೆ ಶರಣಾದರು. ಇಲ್ಲಿ ಶರಣಾಗುವುದು ಲೋಕ ಜೀವನಕ್ಕೆ ಸಂಬಂಧಿಸಿದ್ದಲ್ಲ ಎಂಬುದನ್ನು ನಾವು ಗಮನಿಸಬೇಕು. ಮನುಷ್ಯ ಯಾವ ಯಾವ ಸಂದರ್ಭದಲ್ಲಿ ಶರಣಾಗುತ್ತಾನೆ ಎಂದು ತಿಳಿಯುವುದು ಕೂಡಾ ಅಷ್ಟೇ ಮುಖ್ಯ.

- ಎದುರಾಳಿಯೊಂದಿಗೆ ಹೋರಾಟ ಮಾಡಿ ಸೋತಾಗ–ಇಲ್ಲಿ ಸೋತವನು ನಿಶಸ್ತ್ರಧಾರಿಯಾಗಿರಬೇಕು. ಮತ್ತು ಇಲ್ಲಿ ಸಂಘರ್ಷವೇ ಮುಖ್ಯ. ಸಂಘರ್ಷ ನಡೆಯದೆ ಶರಣಾಗುವುದು ಸಾಧ್ಯವಿಲ್ಲ. ಇಲ್ಲಿ ಕೃಷ್ಣನು ಎದುರಾಳಿಯಲ್ಲ.

- ಊಳಿಗದವನು ಯಜಮಾನಿಗೆ ಶರಣಾಗುವುದು ಇದರ ಇನ್ನೊಂದು ರೂಪವೆಂದರೆ–ಊಳಿಗದವನ ಆರ್ಥಿಕ ಪರಿಸ್ಥಿತಿ ಮತ್ತು ಕೀಳರಿಮೆಯೇ ಶರಣಾಗತಿಗೆ ಕಾರಣವಾಗಿದೆ.
- ಭಕ್ತನು ದೇವರಿಗೆ ಶರಣಾಗುವುದು. ಇಲ್ಲಿ ಭಕ್ತಿಯ ಭಾವವೇ ಮುಖ್ಯವಾಗಿದೆ. ಇಲ್ಲಿ ಭಕ್ತನಿಗೆ ದೇವರು ಶರಣಾಗುತ್ತಾನೆ.
- ಮಕ್ಕಳು ಗುರುಹಿರಿಯರಿಗೆ ಶರಣಾಗುವುದು. ಇಲ್ಲಿ ಹಿರಿತನ ಮತ್ತು ಕಿರಿತನ ಎನ್ನುವುದ ಮುಖ್ಯ. ಭಕ್ತನಿಗಿಂತ ಇಲ್ಲಿಯ ದೇವರು ಮುಖ್ಯ.

ಅಂದರೆ ಈ 'ಶರಣಾಗುವುದು' ಎನ್ನುವ ಕರ್ಮವು ಸಂದರ್ಭಕ್ಕೆ ಅನುಸಾರವಾಗಿ ಬೇರೆ ಬೇರೆ ರೀತಿಯ ಅರ್ಥವನ್ನು ಪಡೆದುಕೊಳ್ಳುತ್ತದೆ. ಒಬ್ಬನ ಬದಲಿಗೆ ಮತ್ತೊಬ್ಬ ಕಾರ್ಯನಿರ್ವಹಿಸುವಾಗ 'ಅಧಿಕಾರ' (de facto) ಅನ್ನುವುದು ಬೇರೆ ಅರ್ಥ ಕೊಡುತ್ತದೆ. ಕಾಯಿದೆ ಪ್ರಕಾರ ಒಬ್ಬ ಅಧಿಕಾರಕ್ಕೆ ಬರುವುದೆಂದರೆ ಅದರ ಸ್ವರೂಪವು ಬೇರೆಯಾಗುತ್ತದೆ. ಅಧಿಕಾರವನ್ನು ವಿವರಿಸಬೇಕಾದ ಸಂದರ್ಭದಲ್ಲಿ ಫುಕೋ ಅಧಿಕಾರದ ಕುರಿತು ಪುನರ್ ವ್ಯಾಖ್ಯೆ ಮಾಡಿದ್ದಾನೆ. ಅವನ ಪ್ರಕಾರ ಯಜಮಾನಿಕೆ (ಪ್ರಭುತ್ವ) ಎನ್ನುವುದು ಸಾಮಾಜಿಕ ರೂಪಗಳಲ್ಲಿ ಒಂದು. ಅದು ವಸ್ತುನಿಷ್ಠವಲ್ಲ; ವಿಷಯನಿಷ್ಠ. ಒಂದು ಹಂತದಲ್ಲಿ ಪ್ರಭುತ್ವವು ಜ್ಞಾನದ ರೂಪವನ್ನು ಪಡೆದುಕೊಂಡು ಅದರ ಮೂಲಕ ಅಧಿಕಾರವನ್ನು ಚಲಾಯಿಸುತ್ತವೆ. ಹೀಗಾಗಿ ಅಧಿಕಾರವು ಸಾಮಾಜಿಕ ಸಂದರ್ಭದಲ್ಲಿ ವಿಶ್ವಾತ್ಮಕವಾದ ಅರ್ಥವನ್ನು ಪಡೆಯುತ್ತದೆ. ಇದನ್ನು ಅನ್ವಯಿಸಿಕೊಂಡು ಹೇಳುವುದಾದರೆ ದಾಸರು ಭಕ್ತಿಯನ್ನು ಹೊಸ ರೀತಿಯ ವ್ಯಾಖ್ಯೆಗೆ ಗುರಿಪಡಿಸುತ್ತಾರೆ.

- ದೇವರ ಸ್ತೋತ್ರ–(ಉದಾಹರಣೆ ಕೊಡಬೇಕು) ಇಡಿಯ ಸೋಮಕುಲವನ್ನು ಉದ್ಧರಿಸಿದವನು ಇಲ್ಲಿಯ ದೇವ.
- ಇದೇ ಕೀರ್ತನೆಯಲ್ಲಿ ಮತ್ತೆ ಮೂರ್ತಿಯೆನ್ನುವ ಕಲ್ಪನೆಯೇ ಮುಖ್ಯ. ಇಲ್ಲಿಯ ಕೇಶವನ ಪ್ರೇಮವೇ ಗಮನಾರ್ಹವಾಗಿದೆ.
- ದೈವದ ಮೊರೆ ಹೋಗುವುದು (ಆರಾಧನೆ) ಈ ಕೀರ್ತನೆಯಲ್ಲಿ ಭೂರಮಣಿಯನ್ನು ಆಳಿದವನ ಕೀರ್ತನೆಯೇ ಮುಖ್ಯ.
- ದೈವತ್ವದ ಸಾಮಾಜೀಕರಣ–ಇಲ್ಲಿ ಎಲ್ಲರೂ ದೇವರನ್ನು ನೋಡಿರೋ ಎನ್ನುವ ಪರಿಕಲ್ಪನೆಯೇ ಮುಖ್ಯ.
- ದೈವವನ್ನು ಸ್ತುತಿಸುವಾಗ ಶಬ್ದ–ಅರ್ಥ ಮತ್ತು ಗೇಯತೆಯ ಪ್ರದರ್ಶನ (ರಾಗ– ತಾಳ ಸಮೇತ) ಸಂಗೀತದ ಮಾದರಿಯಲ್ಲಿ ರಾಗ–ತಾಳಗಳು ಜನ ಸಾಮಾನ್ಯರನ್ನು ತಲುಪಲು ಸುಲಭವಾದ ವಿಧಾನವಾಗಿದೆ).
- ದೈವದ ಜ್ಞಾನ ಸಾಮಾನ್ಯ ಜನರಿಗೂ ತಲುಪಬೇಕು. ಆದುದರಿಂದ ಭಕ್ತರೂ ಅಷ್ಟೇ ಮುಖ್ಯ.
- ಭಕ್ತಿಯ ಎರಡು ವಿಧಾನವೇ ಮುಖ್ಯ.

ನಂಬಿಕೆಗೆ ಅನುಸಾರವಾಗಿ; ಭಕ್ತಿಯ ರೂಪಕ್ಕೆ ಅನುಗುಣ ಕೃಷ್ಣನ ಬಿಂಬವು ವ್ಯಕ್ತವಾಗುತ್ತದೆ.

**'ಕ್ರೂರವಾದ ಫಣಿಬಾಣ ಭೋರ್ಗುಡಿಸುತ್ತಿರಲು ಜಗಕೆ**
**ವೀರನನ್ನು ಮುಸುಕಿ ಬಪ್ಪುದನ್ನು ಕಾಣುತ**
**ಭೂರಮಣಿಯನ್ನೊತ್ತಿ ಅಡಿಗೆ ಬೀಗನ ಶಿರವನ್ನು ಕಾಯ್ದ**
**ಶ್ರೀರಮಣ ಆದಿಕೇಶವನನ್ನು–ನೋಡಿರೋ'**

ಲೌಕಿಕದ ವಿವರಣೆಯೊಂದಿಗೆ ಈ ಕೀರ್ತನೆಯು ಪ್ರಾರಂಭವಾಗಿದೆ. ಕೊನೆಯ ಪ್ಯಾರಾಕ್ಕೆ ಬರುತ್ತಿರುವಂತೆ ಕನಕ ದಾಸರು ಭಕ್ತರಿಗೆ ಕೃಷ್ಣನನ್ನು ನೋಡುವಂತೆ ಹೇಳುತ್ತಾರೆ.

ಹದಿಮೂರನೆಯ ಶತಮಾನದ ಅನಂತರ ಜೈನ, ವೀರಶೈವ, ಕಾಪಾಲಿಕ, ಪಂಥಗಳು ಒಂದು ರೀತಿಯಲ್ಲಿ ಸಾಂಸ್ಥೀಕರಣಕ್ಕೆ ಗುರಿಯಾದವು. ಈ ಕಾಲಘಟ್ಟದ ಧಾರ್ಮಿಕತೆಯು ಕೇವಲ ಆಚಾರ–ವಿಚಾರಗಳ ಜಡತೆಯನ್ನು ಒಳಗೊಂಡಿತು. ಭಾರತದಲ್ಲಿ ಹುಟ್ಟಿಕೊಂಡ ಅನೇಕ ಧರ್ಮಗಳ ಮುಖ್ಯ ಲಕ್ಷಣವೆಂದರೆ ಮನುಷ್ಯರನ್ನು ಮೇಲಕ್ಕೆತ್ತುವುದು. ದೈನಂದಿನ ವ್ಯಸನಗಳಿಂದ ಮನುಷ್ಯರನ್ನು ಮುಕ್ತಗೊಳಿಸುವುದು, ಎಲ್ಲಾ ಧರ್ಮಗಳ ಎಲ್ಲಾ ಆಚರಣೆಗಳು ಮನುಷ್ಯರ ಚಂಚಲತೆಯನ್ನು ನಿರಾಕರಿಸಿ, ಮನಸ್ಸನ್ನು ತಲ್ಲೀನಗೊಳಿಸಲು ಮುಖ್ಯ ಮಾರ್ಗಗಳನ್ನು ಕಂಡುಕೊಂಡವು. ಧ್ಯಾನವು ಮನಸ್ಸನ್ನು ಕೇಂದ್ರೀಕೃತಗೊಳಿಸಲು ಸಹಾಯಕಾರಿಯಾಯಿತು. ಅಹಿಂಸೆ, ಸತ್ಯ, ವ್ರತಾಚರಣೆಗಳನ್ನು ನಂಬಿದ್ದ ಜೈನರು, ಕರಸ್ಥಲ ಲಿಂಗವನ್ನೇ ನಂಬಿದ ವಚನಕಾರರು ತಮ್ಮ ಮತ, ಧರ್ಮಕ್ಕೆ ಅನುಸಾರವಾಗಿ ನಡೆದುಕೊಂಡರೆ ಅದ್ವೈತ ಧರ್ಮ ತನ್ನ ಏಕಾಂತವಾದಿ ಸಿದ್ಧಾಂತ ನಂಬಿಕೊಂಡಿತ್ತು. ಈ ಮಾದರಿಯ ಬಿಗಿಯಾದ ಧಾರ್ಮಿಕ ಧೋರಣೆಗಳು ಚಿರಸ್ಥಿತಿಯನ್ನು ನಂಬಿಕೊಂಡಿತ್ತು. ಆಗ ಜನಸಾಮಾನ್ಯರು ಮತ್ತು ಧಾರ್ಮಿಕ ಪುರೋಹಿತರ ನಡುವೆ ಉಂಟಾದ್ದು ಖಾಲಿಯಾದ ಜಾಗ (Space) ಮಾತ್ರ. ಮತ ಧರ್ಮಗಳು ರಾಚನಿಕವಾಗಿ ಒಂದು ಸ್ಥಿರ ಸ್ಥಿತಿಯನ್ನು ತಲುಪಿದಾಗ ಚಾರಿತ್ರಿಕವಾಗಿ ಹೊಸ ನಡಾವಳಿಗಳು ಅಗತ್ಯವಿರುತ್ತವೆ. ಸಾರ್ವಜನಿಕರಿಗಾಗಿ ಮತ್ತು ಜನಸಾಮಾನ್ಯರಿಗಾಗಿ ಖಾಲಿಯಾದ ಜಾಗವನ್ನು ತುಂಬಿಕೊಳ್ಳಲು ಮತ್ತು ದೇವರನ್ನು ದೇವಸ್ಥಾನದ ಒಳಗಿಂದ ಹೊರತಂದು ಸ್ಥಾಪಿಸುವುದರ ಮೂಲಕ ಹೊಸ ತತ್ವ ಪ್ರಚಾರ ಅಗತ್ಯವಾಯಿತು.

ದಾಸರು ಹುಟ್ಟಿಕೊಂಡಿದ್ದೇ ಈ ರೀತಿಯ ಚಾರಿತ್ರಿಕ ಸಂದರ್ಭದಿಂದ. ಕನಕದಾಸ ಸಾಹಿತ್ಯದ ಮುಖ್ಯ ಆಶಯವೇನೆಂದರೆ ಶ್ರೀಹರಿಯನ್ನು ಹೆಚ್ಚು ಪ್ರಚುರಪಡಿಸುವುದು ಮತ್ತು ಆಗ ಇದ್ದ ಧಾರ್ಮಿಕ ನೀತಿಯನ್ನು ಬದಲಾಯಿಸಿ ಹೊಸ ಭಕ್ತಿ ಸಮೂಹವನ್ನು ಕಟ್ಟುವುದು (ಭಕ್ತಿ ಎನ್ನುವುದು 'ಭಜ್' ಎಂಬ ಧಾತುವಿನಿಂದ ಬಂದಿದೆ. ಭಜ್ ಎಂದರೆ ಸಂಕೀರ್ತಿಸು ಎಂದು ಅರ್ಥ). ಆ ಚಾರಿತ್ರಿಕ ಸಂದರ್ಭವನ್ನು ಗಮನಿಸಿದರೆ ವಿಭಜನೆಯು ಕೂಡಾ ಹೊಸ ತತ್ವಶಾಸ್ತ್ರವೇ ಆಗಿತ್ತು. ಅದಕ್ಕಾಗಿ ದಾಸ ಸಾಹಿತ್ಯ ಪರಂಪರೆಯನ್ನು ನಾವು ಭಕ್ತಿ ಚಳುವಳಿ ಎಂದು ಕರೆಯುತ್ತೇವೆ. ಯಾವುದೇ ಚಳುವಳಿಯು ಒಬ್ಬ ವ್ಯಕ್ತಿಯಿಂದ ಆಗುವುದಿಲ್ಲ. ಅದಕ್ಕೆ ಜನಸಮೂಹ ಬೇಕು. ಹೀಗಾಗಿ ಪುರಂದರದಾಸರ ಕೀರ್ತನೆಯು ಪಂಡಿತ ಪರಂಪರೆಗೆ ಸೇರುವುದು ಸಾಧ್ಯವಿರಲಿಲ್ಲ. ಪುರಂದರದಾಸರ ಕೀರ್ತನೆಯು ಭಕ್ತ ಸಮೂಹವನ್ನು ಹೊಸ ರೀತಿಯಲ್ಲಿ ನಿರ್ವಚಿಸುತ್ತದೆ.

ಕನಕದಾಸರೂ, ಪುರಂದರದಾಸರೂ ಇಬ್ಬರೂ ತಮ್ಮ ಹರಿ ಸಂಕೀರ್ತನೆಯನ್ನು ಮಾಡುತ್ತಾ ಕುಲ ತಾರತಮ್ಯಗಳನ್ನು ಕಟುವಾಗಿ ಟೀಕಿಸಿದರು ಎಂದು ಹೇಳುತ್ತಾರೆ. ಅಷ್ಟೇ ಅಲ್ಲ ಆಗ ಇದ್ದ ಸಾಂಸ್ಕೃತಿಕ ರೂಪಗಳನ್ನು ದಾಸರು ನಿರಾಕರಿಸುತ್ತಾರೆ.

ದಾಸರ ಪಂಥ ಅದ್ವೈತದಂತೆ ಏಕತಾವಾದಿ ಚಿಂತನೆಯ ಕ್ರಮವನ್ನು ಹೊಂದಿಲ್ಲ ಮತ್ತು ಉಪನಿಷತ್ತು ಮುಂತಾದವುಗಳಿಂದ ಪ್ರೇರಣೆ ಪಡೆದುಕೊಂಡ ಹಾಗೆ ಕಾಣಿಸುವುದಿಲ್ಲ. ಇದರಲ್ಲಿ ಬರುವ ಕೃಷ್ಣನಿಗೆ ಬೇರೆ ಚಹರೆಯಿದೆ. ಏಕತೆಯ ಬದಲು ಬಹುತ್ವವೆಂದು ಇದು ಪ್ರತಿಪಾದಿಸುತ್ತದೆ. ದೇವರಿಗೂ ಭಕ್ತರಿಗೂ ಭಿನ್ನತೆಯಿದೆ. ಅಂತರವಿದೆ. ಭಕ್ತ ದೇವರನ್ನು ಒಲಿಸಬೇಕು. ಒಲಿಸಬೇಕೆಂದರೆ ಅಲ್ಲಿ ಸ್ತುತಿಸಬೇಕು ಎನ್ನುವುದೇ ಇಲ್ಲಿಯ ಆಶಯ.

ದಾಸ ಪಂಥ, ಶೈವ ಪಂಥ, ಶಾಕ್ತ ಪಂಥ ತಾತ್ವಿಕವಾಗಿ ಭಿನ್ನವಾಗಿವೆ. ಅವುಗಳ ಆರಾಧನೆಯ ಕ್ರಮದಲ್ಲಿಯೂ ಭಿನ್ನತೆ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ದಾಸ ಪಂಥ ಶೂನ್ಯವನ್ನು ಆರಾಧಿಸುವುದಿಲ್ಲ. ಕೃಷ್ಣನ ಪರಿಕಲ್ಪನೆಯೇ ಕನಕ ದಾಸ ಪಂಥದಲ್ಲಿ ಸೃಜನಾತ್ಮಕವಾಗಿದೆ.

## ನಳಚರಿತ್ರೆಯ ವಸ್ತು – ಶೈಲಿಯ ವಿಶಿಷ್ಟತೆ

**ಕೇಶವ ಶರ್ಮ**

ಕರ್ನಾಟಕದ ಹರಿದಾಸ ಸಾಹಿತ್ಯದ ಅಶ್ವಿನಿ ದೇವತೆಗಳಲ್ಲಿ ಒಬ್ಬರಾದ ಕನಕದಾಸರು ದಾಸ ಸಾಹಿತ್ಯದಲ್ಲಿ ಶ್ರೇಷ್ಠರಾದವರು. ದಾಸ ಸಾಹಿತ್ಯದ ಯುಗಪ್ರವರ್ತಕರಾದ ಕನಕದಾಸರು ಪುರಂದರದಾಸರ ಸಮಕಾಲೀನರು ದಾಸ ಸಾಹಿತ್ಯದ ನೋಟದಲ್ಲಿ ನಮಗೆ ಮೊದಲು ಪರಿಗಣನೆಗೆ ಬರುವುದು ಪುರಂದರದಾಸರು ಮತ್ತು ಕನಕದಾಸರು. ಸ್ವತಂತ್ರವಾಗಿ ಜೀವಿಸಿದ ಇವರು ಯಾವ ಮತ ತತ್ವಪ್ರಚಾರಕ್ಕೂ ಅಂಟಿಕೊಳ್ಳದೆ ಬದುಕಿದವರು 'ಕನಕದಾಸರ ಜೀವನ ಚರಿತ್ರೆಯು ಮೊದಲ ಮತ್ತು ಕಡೆಯ ಸಂಪುಟಗಳನ್ನು ಕಳೆದುಕೊಂಡ ಸಂಪುಟ' (ಸಾ.ಶಿ.ಮರುಳಯ್ಯ ಕನಕ ಸಾಹಿತ್ಯ ದರ್ಶನ, ಸಂ. ದೇ.ಜ.ಗೌ, ಪುಟ.2) ಇದು ಕನಕದಾಸ ಸ್ವಪರಿಚಯ ಕಟ್ಟಿಕೊಡುವಲ್ಲಿ ಉಂಟಾಗಿರುವ ತೊಡಕು, ಇಂದು ಬಹುತೇಕ ವಿದ್ವಾಂಸರಿಗೆ ಕನಕದಾಸರ ಜೀವನ ಚರಿತ್ರೆಯನ್ನು ಬರೆಯ ಹೊರಟವರಿಗೆ ಎದುರಾಗುವ ಪ್ರಶ್ನೆ. ಕನಕದಾಸರ ಬಗ್ಗೆ ಪರಿಪೂರ್ಣ ಮಾಹಿತಿ ದೊರೆಯದೆ ಅಲ್ಪ ಪ್ರಮಾಣದ ಮಾಹಿತಿ ಲಭ್ಯವಾಗಿರುವುದು ಅವರ ಸಾಧನೆಗಳಾದ ಕೀರ್ತನೆಗಳು, ಕೃತಿಗಳು ಮತ್ತು ಅವರು ಮಾಡಿದ ಅನೇಕ ಪವಾಡಗಳು ಮೊದಲಾದವು ಅವರ ವ್ಯಕ್ತಿತ್ವವನ್ನು ಪರಿಚಯಿಸುವುರಲ್ಲಿ ಇಂದು ಸಹಾಯಕವಾಗಿವೆ.

15–16ನೇ ಶತಮಾನದಲ್ಲಿ ಸಮೂಹ ಮುಖಿಯಾಗಿ ಪ್ರಗತಿಯ ಹೆಜ್ಜೆಯಿಟ್ಟ ಇವರು ಕುಲದ ನೆಲೆಯನ್ನು ಪ್ರಶ್ನಿಸುವ ಮೂಲಕ, ಮಾನವ ಕುಲದ ಸಮಾನತೆ ಮತ್ತು ಪ್ರಗತಿಗೆ ಶ್ರಮಿಸಿದವರು. ಕನಕದಾಸರ ವಿಚಾರಧಾರೆಗಳು ಎಲ್ಲ ಕಾಲಕ್ಕೂ ಅನ್ವಯವಾಗುವಂತಹ ಪ್ರಗತಿಪರ ಧೋರಣೆಗಳು ಹಾಗಾಗಿ ಕನಕದಾಸರು ಜಾಗತೀಕರಣದ ಇಂದಿನ ಯುಗದಲ್ಲಿಯೂ ಪ್ರಸ್ತುತತೆಯನ್ನು ಪಡೆದಿದ್ದಾರೆ. ಸಮಾಜದ ಶುದ್ಧೀಕರಣಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿದ ಕನಕದಾಸರು ಮಾನವನ ಅಂತರಂಗ ಬಹಿರಂಗದ ಶುದ್ಧಿಯ ಬಗ್ಗೆ ಸಂಪ್ರದಾಯ, ಪರಂಪರೆಯ ಹಿನ್ನೆಲೆಯಲ್ಲಿ ಮನೆ ಮಾಡಿದ ಅರ್ಥರಹಿತ ಆಚರಣೆ, ನಂಬಿಕೆಯ ಬಗ್ಗೆ ಪ್ರಶ್ನೆ ಮಾಡುತ್ತಾ ಜನಸಾಮಾನ್ಯರ ಬದುಕನ್ನು ಹಸನುಗೊಳಿಸಲು ಪ್ರಯತ್ನಿಸಿದರು.

ಕನಕದಾಸರು ಕವಿ, ಕಲಿಯಾಗಿ, ಕೀರ್ತನಾಕಾರರಾಗಿ ವಿಶಿಷ್ಟ ವ್ಯಕ್ತಿತ್ವ ಹೊಂದಿದವರು. ಇವರ ಸಾಹಿತ್ಯದಲ್ಲಿ ಧಾರ್ಮಿಕ, ಸಾಮಾಜಿಕ ರಾಜಕೀಯ ಹಾಗೂ ಚಾರಿತ್ರಿಕ ವಿಷಯಗಳನ್ನು ಒಳಗೊಂಡ ಅನೇಕ ಸಂಗತಿಗಳು ಕಂಡುಬರುತ್ತವೆ. ಇನ್ನೂರಕ್ಕೂ ಹೆಚ್ಚು ಕೀರ್ತನೆಗಳನ್ನು ರಚಿಸಿರುವ ಇವರು ಕೀರ್ತನೆಗಳನ್ನು ಬರೆದ ದೃಷ್ಟಿಯಲ್ಲಿಯೇ ಉತ್ಕೃಷ್ಟವಾದ ಕೃತಿಗಳನ್ನೂ ರಚನೆ ಮಾಡಿದ್ದಾರೆ. ಇವರ ಕೃತಿಗಳು ಇವರ ಮೊದಲ ಕೃತಿ 'ಮೋಹನ ತರಂಗಿಣಿ' ಇದೊಂದು ಶೃಂಗಾರಕಾವ್ಯ. 'ರಾಮಧಾನ್ಯ ಚರಿತೆ' ಇದು ಕಥನ ಕಾವ್ಯ, 'ಹರಿಭಕ್ತಸಾರ' ಭಕ್ತಿಕಾವ್ಯ, 'ನೃಸಿಂಹಸ್ತವ' ಇದು ಭಕ್ತಿಕಾವ್ಯವೆಂದು ಗುರುತಿಸಲಾಗಿದೆ. ಆದರೆ ಇದು ಉಪಲಬ್ಧವಾಗಿಲ್ಲ. 'ನಳಚರಿತ್ರೆ' ಇದೊಂದು ಪ್ರೇಮಕಾವ್ಯವಾಗಿದೆ. ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿರುವ ಈ ಕೃತಿ ಕನಕದಾಸರು ಬೇಲೂರಿನ ಚೆನ್ನಕೇಶವ ಸ್ವಾಮಿಗೆ ಅರ್ಪಿಸಿದ ಕೃತಿಯೆಂಬ ಅಭಿಪ್ರಾಯವಾಗಿದೆ.

ಕನಕದಾಸರ ಬರಹಗಳಲ್ಲಿ ಚಿಕಿತ್ಸಕ ಮನೋಭಾವವಿದೆ. ಧಾರ್ಮಿಕ ಔನ್ನತ್ಯ ಹಾಗೂ ಸಾಮಾಜಿಕ ಸಾಮರಸ್ಯದ ಒತ್ತಾಸೆಯಿದೆ ಇವರ ಬರಹಗಳು ಕೇವಲ ಕೃತಿಗಳಾಗಿರದೆ ಅನುಭವದ ದಾಖಲೆಗಳಾಗಿಯೂ ಕಂಡುಬರುತ್ತವೆ. ಪಾಳೆಗಾರರ ಪ್ರಭುವಾದ ಕನಕದಾಸರಿಗೆ ಅರಸೊತ್ತಿಗೆಯ ಅನುಭವವಿದೆ. ಇವರ ಕಾವ್ಯಗಳಲ್ಲಿ ಸಾಂಸ್ಕೃತಿಕ ಪುರುಷ ಪ್ರಭುತ್ವದ ಘಟನಾವಳಿಗಳು ಕಂಡುಬರುತ್ತವೆ. ಅರಸರ ಗತ್ತು, ಸೈನ್ಯ, ಸೇವಕ, ಅರಮನೆ, ರಾಜಕೀಯ, ಆಡಳಿತ ಮತ್ತು ಪ್ರಭುತ್ವದ ವೈಖರಿ ಕುರಿತ ವಿಡಂಬನೆ ಅವರ ಕೀರ್ತನೆಗಳಲ್ಲಿ ಕಂಡುಬರುತ್ತದೆ. ಇವು ಆಧುನಿಕ ಪ್ರಜಾಪ್ರಭುತ್ವದ ಇಂದಿನ ದಿನಗಳಲ್ಲಿ ಅತ್ಯಂತ ಮಹತ್ವಪೂರ್ಣವಾದುವುಗಳಾಗಿವೆ. ಈ ದೃಷ್ಟಿಯಿಂದಲೇ ಕನಕದಾಸರು ನಮ್ಮೊಳಗೆ ಆಳವಾಗಿ ಹುದುಗಿಕೊಂಡಿದ್ದಾರೆ. ಆಧುನಿಕತೆಯ ಪ್ರಭಾವಕ್ಕೆ ಸಿಲುಕಿದ ಜಗತ್ತು ಇಂದು ಸಂಬಂಧಗಳಲ್ಲಿ ಯಾಂತ್ರಿಕವಾದ ಬದುಕನ್ನು ನಡೆಸುತ್ತಿದೆ. ಮಾನವೀಯತೆ ಇಂದು ವ್ಯಾಪಾರೀಕರಣವಾಗಿದೆ. ಇಂತಹ ಬದುಕಿನ ಅಸ್ಥಿರತೆಗೆ ಕನಕದಾಸರು ಸಮುದಾಯ ಗಳನ್ನು ಬೆಸೆಯುವ ಹೊಸ ಸಮುದಾಯಗಳನ್ನು ಕಟ್ಟುವ ಪರಿವರ್ತನಾಕಾರರಾಗಿ, ಮಾರ್ಗದರ್ಶಕರಾಗಿ ಕಂಡುಬರುತ್ತಾರೆ. ಮಾನವ ಸಂಬಂಧಗಳನ್ನು

ಮನುಷ್ಯತ್ವದ ನೆಲೆಗಳಲ್ಲಿ ಬದುಕಿನ ಸಾಂಸ್ಕೃತಿಕ ತಳಹದಿಯನ್ನು ಗಟ್ಟಿಗೊಳಿಸುವಲ್ಲಿ ಇವರ ಸಾಹಿತ್ಯ ಅತ್ಯಮೂಲ್ಯವಾದ ಕೊಡುಗೆಯಾಗಿದೆ.

ನಳ ದಮಯಂತಿಯರ ಕಥೆ ಭಾರತೀಯ ಸಾಹಿತ್ಯದ ಇತಿಹಾಸದಲ್ಲಿಯೇ ಅತ್ಯಂತ ಪ್ರಾಚೀನ ಮತ್ತು ಪ್ರಸಿದ್ಧವಾದುದ್ದಾಗಿದೆ. ಇದು ಮೊದಲು ಮಹಾಭಾರತದಲ್ಲಿ ಕಾಣಿಸಿಕೊಂಡು ನಂತರ ಅನೇಕ ಮಹಾನ್ ಕವಿಗಳ ಬರಹಗಳಲ್ಲಿಯೂ ಬಹು ಜನಪ್ರಿಯವಾದ ನಳದಮಯಂತಿಯರ ಕಥೆ 'ಭರತ ಖಂಡದಲ್ಲಂತೂ ಅದು ಹಬ್ಬ ಹರಿದಿನಗಳಲ್ಲಿ, ಸಂತೆ ಜಾತ್ರೆಗಳಲ್ಲಿ ನಡೆಯುವ ಹರಿಕಥೆ ಪಾರಾಯಣ ನಾಟಕಗಳ ಸರ್ವಸಾಧಾರಣ ವಸ್ತುವಾಗಿದ್ದು ಇಂದಿಗೂ ಮನೆಮನೆಯ ಮನಮನದ ಜ್ಯೋತಿಯಾಗಿ ಬೆಳಗುತ್ತಿದೆ' (ದೇ.ಜೆ.ಗೌ. ಸಂ.) ನಳಚರಿತ್ರೆ ಮುನ್ನುಡಿ ಪುಟ.20. ನಳಚರಿತ್ರೆ ಒಂದು ಸುಂದರ ಪ್ರೇಮಕಥೆ. ಇಲ್ಲಿ ಆದರ್ಶ, ತ್ಯಾಗ ಹೀಗೆ ಬದುಕಿನ ಉತ್ಕೃಷ್ಟ ಮೌಲ್ಯಗಳು ತುಂಬಿವೆ. ಇಂತಹ ಸುಂದರ ಕಥೆ ಭಾರತೀಯ ಭಾಷೆಗಳಲ್ಲಿ ಅಲ್ಲದೆ, ಅನ್ಯದೇಶೀಯ ಭಾಷೆಗಳಾದ ಇಂಗ್ಲಿಷ್, ಫ್ರೆಂಚ್, ಜರ್ಮನ್, ಇಟಾಲಿಯನ್, ಹಂಗೆರಿ, ರಷಿಯನ್, ಗ್ರೀಕ್ ಮೊದಲಾದ ಭಾಷೆಗಳಲ್ಲೂ ಬಹು ಜನಪ್ರಿಯವಾಗಿದೆ.

ನಳಚರಿತ್ರೆಯ ಕಥೆ ವೇದದಷ್ಟೇ ಪ್ರಾಚೀನವಾದುದೆಂದೂ, ಶತಪಥ ಬ್ರಾಹ್ಮಣದಲ್ಲಿ ಹದಿಮೂರನೆಯ ಖಂಡದಲ್ಲಿ ನಳನ ಹೆಸರು ಉಲ್ಲೇಖಗೊಂಡಿದೆ. ಪ್ರಾಚೀನವಾದ ಜಾನಪದ ಕಥೆಯೆಂದೂ, ಇದು ಸೋಮದೇವನ ಕಥಾಸರಿತ್ಸಾಗರ, ಋಗ್ವೇದ, ಗುಣಾಢ್ಯನ ಬೃಹತ್ಕಥೆ, ಆರ್ಯೇತರ ಬುಡಕಟ್ಟಿನ ರಾಜ–ರಾಣಿಯರ ಪ್ರೇಮಕಥೆಯ ಒಂದು ಪ್ರಕಟಿತ ರೂಪವೆಂದು ನಳಚರಿತ್ರೆಯ ಸಂಪಾದಕರಾದ ದೇ.ಜ.ಗೌ. ಅವರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ನಳನ ಕಥೆಯನ್ನು ಆಧರಿಸಿದ ಮೊದಲ ಕೃತಿರಚನೆಯಾದದ್ದು ಚಾಮುಂಡರಸನಲ್ಲಿ (ಸು.1185–1240). ಆತನ ಕೃತಿ, 'ನಳಚಂಪು' ಇದು ಚಂಪುವಿನಲ್ಲಿ ರಚಿತವಾಗಿದ್ದು, ಪಂಡಿತರ ಓದುವಿಕೆಗೆ ಮಾತ್ರ ಸಾಧ್ಯವಾಗಿದ್ದರಿಂದ ಮತ್ತು ಕಥೆಯಲ್ಲಿ ಕನಕದಾಸರಷ್ಟು ನವಿರತೆ, ಆತ್ಮೀಯತೆ ಮತ್ತು ಆಕರ್ಷಕ ಗುಣವಿಲ್ಲದಿದ್ದರಿಂದ ಇದು ಜನಪ್ರಿಯವಾಗಲಿಲ್ಲ. ಇದರ ಹೆಚ್ಚು ಪ್ರಖರತೆ ಸಾಧ್ಯವಾಗಿದ್ದು ಕನಕದಾಸರ 'ನಳಚರಿತ್ರೆ'ಯಲ್ಲಿ, ಈ ಇಬ್ಬರು ಕವಿಗಳಿಗೆ ಮೂಲ ಆಕರ 'ಮಹಾಭಾರತದ ನಳೋಪಾಖ್ಯಾನ'ವಾಗಿದೆ. ಕನಕದಾಸರು ಭಾಮಿನಿ ಷಟ್ಪದಿಯಲ್ಲಿ ಕೃತಿರಚನೆ ಮಾಡಿದ್ದಾರೆ. ಈ ಇಬ್ಬರು ಕವಿಗಳ ಮೂಲ ಆಕರ ಒಂದೇ ಆಗಿದ್ದರು ವಸ್ತು ವಿಷಯದ ವರ್ಣನೆಯಲ್ಲಿ ಭಾಷೆಯ ಪ್ರಯೋಗದಲ್ಲಿ ಭಿನ್ನತೆ ಕಂಡು ಬರುತ್ತದೆ. ಕನಕದಾಸರು ಇಡೀ ಕಥೆಯನ್ನು ಸಂಗ್ರಹ ರೂಪದಲ್ಲಿ ಹೇಳುತ್ತಾ ಹೋಗುತ್ತಾರೆ. ಶುದ್ಧ ದೇಸಿಯತನದಲ್ಲಿ ರಚಿತವಾದ ಕನಕದಾಸರ 'ನಳಚರಿತ್ರೆ' ಶುದ್ಧಕಾವ್ಯ ಗುಣಗಳಿಂದ ಜನ ಸಾಮಾನ್ಯರನ್ನು ಆಕರ್ಷಿಸಿದ ಕೃತಿಯಾಗಿದೆ. 'ಕತೆಯ ಚೌಕಟ್ಟು ಕಣ್ಣಿಗೆ ಕಟ್ಟುವಂಥ ವರ್ಣನೆಯ ತೊಡಕಿಲ್ಲದ ಭಾರವಿಲ್ಲದ ವಸ್ತುರಚನೆ, ನೇರವಾಗಿ ಗುರಿಮುಟ್ಟುವ ಶೀಘ್ರಗತಿಯ ಕ್ರಿಯೆ, ಅಲಂಕಾರಗಳ ಭಾರವಿಲ್ಲದ ಸರಳ ಸುಂದರ, ಸರಸ, ದೇಶೀ ಶೈಲಿಗಳಿಗಿಂತ ಮಿಗಿಲಾಗಿ ನಳದಮಯಂತಿಯರ ತ್ಯಾಗಮಯ ದೈವೀ ಪ್ರೇಮ ಈ ಗುಣಗಳಿಂದ ಕೃತಿ ಕನ್ನಡಿಗರಿಗೆ ಅಚ್ಚುಮೆಚ್ಚಾಗಿದೆ' (ದೇ.ಜ.ಗೌ ಸಂ. ಜನಪ್ರಿಯ ಕನಕ ಸಂಪುಟ, ಮುನ್ನುಡಿ ಪುಟ.17).

ಕನಕದಾಸರ 'ನಳಚರಿತ್ರೆ'ಯು ಒಂಬತ್ತು ಸಂಧಿ, ನಾಲ್ಕುನೂರಾ ಎಂಬತ್ತೊಂದು ಭಾಮಿನಿ ಷಟ್ಪದಿಗಳನ್ನೊಳಗೊಂಡಿದೆ. ದೇಸಿಯತೆ ಮತ್ತು ಜನಪದೀಯ ನೆಲೆಯನ್ನು ತಮ್ಮ ಬರಹಗಳಲ್ಲಿ ರೂಢಿಸಿಕೊಂಡ ಕನಕದಾಸರು ತಮ್ಮ ಕೃತಿರಚನೆಗೆ ಜಟಿಲವಾದ ಕಥಾವಸ್ತುವನ್ನಾಗಲಿ, ಭಾಷೆಯನ್ನಾಗಲಿ ಆಯ್ಕೆ ಮಾಡಿಕೊಳ್ಳದೆ, ಸಹೃದಯರಿಗೆ ಸರಳವಾಗಿ ಅರ್ಥವಾಗುವ ಮತ್ತು ಓದುಗ ಕಥೆಯ ಒಳಗೆ ತನ್ನದೊಂದು ಪ್ರತಿಬಿಂಬ ಗುರುತಿಸಿಕೊಂಡು ತಲ್ಲೀನವಾಗುವ ಹಾಗೆ ಕೃತಿರಚನೆ ಮಾಡಿದ್ದಾರೆ. ಇಂತಹ ಜನಪ್ರಿಯ ಶೈಲಿಯ ಕೃತಿಯಲ್ಲಿ 'ನಳಚರಿತ್ರೆ' ಪ್ರಮುಖವಾದುದು. ಇದೊಂದು ಪೌರಾಣಿಕ ವಸ್ತುವುಳ್ಳ ದೇಸಿ ಖಂಡಕಾವ್ಯವಾಗಿದೆ. ಈ ಕಥೆಯಲ್ಲಿ ಬರುವ ಬದುಕಿನ ಅನೇಕ ತಿರುವುಗಳು ವಿಧಿಯ ಕೈವಾಡ, ಸುಖ, ದುಃಖಗಳು ಜನಸಾಮಾನ್ಯರ ಸಹಜ ಬದುಕಿನಲ್ಲಿ ನಡೆಯುವ ವಸ್ತು ವಿಷಯದಂತೆ ಇಲ್ಲಿ ಚಿತ್ರಿತವಾಗಿರುವುದರಿಂದ ಕೃತಿ ಹೆಚ್ಚು ಹೆಚ್ಚು ಜನಪ್ರಿಯತೆ ಪಡೆದುದ್ದರೊಂದಿಗೆ ಕನಕದಾಸರು ಬಹು ಜನಪ್ರಿಯರಾದರು.

ಕನಕದಾಸರ ಕೃತಿಗೆ ಮಹಾಭಾರತದ 'ನಳೋಪಖ್ಯಾನ' ಮೂಲವಾದರೂ, ಇಲ್ಲಿ ಕನಕದಾಸರು ಕಥಾವಸ್ತು ಮೂಲದ್ದೇ ಆದರೂ ಅದನ್ನು ಕಟ್ಟಿಕೊಡುವ ಶೈಲಿಯಲ್ಲಿ ಸ್ವಂತಿಕೆ ಮೆರೆದಿದ್ದಾರೆ. ಇದು ಕನಕದಾಸರ ವ್ಯಕ್ತಿತ್ವವಾಗಿ ಮೂಡಿಬಂದಿರುವ ಮೂಲಕ ಕೆಲವು ಅಂಶಗಳನ್ನು ಬಿಟ್ಟು ಕೆಲ ಹೊಸ ಅಂಶಗಳೂ ಇಲ್ಲಿ ಸೇರ್ಪಡೆಯಾಗಿವೆ. ಈ ಬದಲಾವಣೆ ಕಥಾ ನಿರೂಪಣೆಯಲ್ಲಿಯೂ ಕಂಡುಬರುತ್ತದೆ. ಮೂಲ ವ್ಯಾಸಭಾರತದಲ್ಲಿ ಇಂದ್ರಲೋಕಕ್ಕೆ ಹೋದ ಅರ್ಜುನನ್ನು ಕುರಿತು ಕೌಮ್ಯಕ ವನದಲ್ಲಿ ಚಿಂತಿಸುತ್ತಿರುವ ಧರ್ಮರಾಜನಿಗೆ, ಬೃಹದಶ್ವಮುನಿ ಈ ನಳಕಥೆಯನ್ನು ಹೇಳಿ ಸಾಂತ್ವನ ಪಡಿಸುವನು. ಕನಕದಾಸರ 'ನಳಚರಿತ್ರೆ'ಯಲ್ಲಿ ರೋಮಶಮುನಿ ಕೌಂತೇಯನಿಗೆ ತಿಳಿಸುವನು. ಗ್ರಂಥದ ಪ್ರಾರಂಭದಲ್ಲಿ ಚನ್ನಿಗರಾಯ, ಗಣೇಶ, ಸರಸ್ವತಿ ಈ ದೇವತೆಗಳ ಸ್ತುತಿಗಳಿವೆ. ಇದು ಪ್ರಧಾನವಾಗಿ ಲೌಕಿಕ ಕಾವ್ಯವಾದರೂ 'ಕಮಲನಾಭನ ಕರುಣಕವಚವು ಸವೆದರಾರಾಗುವರು', 'ದೈವವನೆನೆಪ ಭಕ್ತರಿಗುಂಟೆ ಭಯವೆಲೆ ನೃಪತಿ' ಎಂಬ ಉಕ್ತಿಗಳಿಂದ ಕೂಡಿತ್ತು. ಇದು ಕನಕದಾಸರಿಗೆ ಇದ್ದ ಭಕ್ತಿಯ ಅದಮ್ಯತೆಯನ್ನು ತೋರುತ್ತದೆ.

ಸಹೃದಯರ ಆಸಕ್ತಿಗೆ ಅನುಗುಣವಾಗಿ ಮತ್ತು ಕಥೆಯ ಹೊಸತನದಲ್ಲಿ ವಿಶಿಷ್ಟತೆ ತೋರಿರುವ ಕನಕದಾಸರು ಮೂಲದ ಕೆಲವು ಸಂಗತಿಗಳನ್ನು ತಮ್ಮ ಕಾವ್ಯದಲ್ಲಿ ಪ್ರಸ್ತಾಪಿಸಿಲ್ಲ. ದಮಯಂತಿಗೆ ಸಹೋದರರಿದ್ದ ವಿಷಯ, ಅವಳ ಸ್ವಯಂವರ ಕಾಲದಲ್ಲಿ ದಿಕ್ಪಾಲಕರು ನಳನಿಗೆ ಕೊಟ್ಟ ಮಗಳ ಪ್ರಸ್ತಾಪ ಇವುಗಳನ್ನು ಕೈಬಿಟ್ಟಿರುವುದು, ಅಲ್ಲದೇ ತಾವು ತಮ್ಮದೇ ಆದ ಕೆಲವು ಅದ್ಭುತ ಪ್ರಸಂಗಗಳನ್ನು ಸೇರ್ಪಡೆ ಮಾಡಿದ್ದಾರೆ. ನಳನು ಹಂಸ ದರ್ಶನಕ್ಕೆ ಹೋಗುವ ಮೊದಲು ಬೇಟೆಗೆ ಹೋಗುವುದು ಇಂದ್ರನ ಸಂದೇಶವನ್ನು ನಳನು ದಮಯಂತಿಗೆ ತೆಗೆದುಕೊಂಡು ಹೋಗುವುದಕ್ಕೆ ಮೊದಲು ದೇವತಾ ಸ್ತ್ರೀಯರು ದಮಯಂತಿಗೆ

ದೇವೇಂದ್ರನಲ್ಲಿ ಪ್ರೇಮ ಉಂಟು ಮಾಡಲು ಬರುವುದು, ನಳದಮಯಂತಿಯರು ಪುನರ್ ಸಮಾಗಮವಾದ ಮೇಲೆ ನಳನು ಪುಷ್ಕರನ ಜೊತೆ ಯುದ್ಧ ಮಾಡುವುದು ಇವು ಮೂಲದಲ್ಲಿಲ್ಲದ ಕೆಲವು ಹೊಸ ಸೇರ್ಪಡೆಗಳಾಗಿವೆ. ಇದರ ಜೊತೆಗೆ ಮೂಲದ ಕೆಲವು ಪ್ರಸಂಗಗಳನ್ನು ಅಲ್ಪ-ಸ್ವಲ್ಪ ಬದಲಾವಣೆಯೊಂದಿಗೆ ತಮ್ಮ ಕಾವ್ಯದಲ್ಲಿ ಹೊಸ ಸೇರ್ಪಡೆಯೋಪಾದಿಯಲ್ಲಿ ಪ್ರಯೋಗ ಮಾಡಿದ್ದಾರೆ. ದಮನ ಋಷಿಯ ಸಲಹೆಯಂತೆ ಭೀಮನಿಗೆ ಯಾಗದ ಫಲವಾಗಿ ಮಕ್ಕಳಾದದ್ದು ನಳನು ತನ್ನ ಪಟ್ಟಣದ ಬಳಿಯ ಉಪವನದಲ್ಲೇ ಸುವರ್ಣಮಯವಾದ ಹಂಸವನ್ನು ಕಂಡದ್ದು, ನಾರದನ ಮಾತು ಕೇಳಿ ಇಂದ್ರನು ದಮಯಂತಿಯ ಸ್ವಯಂವರಕ್ಕೆ ಹೊರಟ್ಟಿದ್ದ ನಳನನ್ನು ದಾರಿಯಲ್ಲಿಯೇ ಭೇಟಿಯಾದುದು, ಇಂದ್ರನ ವರದಿಂದ ನಳನು ದಮಯಂತಿಯ ಅಂತಃಪುರವನ್ನು ನಿಜರೂಪದಿಂದ ಪ್ರವೇಶ ಮಾಡಿದ್ದು, ನಳನನ್ನು ಕರುಣಿಸುವಂತೆ ದಮಯಂತಿ 'ಇಂದ್ರಾದಿಗಳನ್ನು ಬೇಡಿಕೊಂಡದ್ದು'. ಹಾವಿನ ಬಾಯಿಂದ ಬಿಡಿಸಿದ ಬೇಡನು ದಮಯಂತಿಯನ್ನು ಕಾಮಿಸಲು, ಆಕೆ ಅವನನ್ನು ಸುಟ್ಟು ಬಿಡುವುದು ಈ ಪ್ರಸಂಗಗಳು ಮೂಲದ ಕಾವ್ಯಕ್ಕಿಂತ ಕೊಂಡ ಬದಲಾವಣೆಯೊಂದಿಗೆ ಈ ಪ್ರಸಂಗಗಳು ಕನಕದಾಸರ ನಳಚರಿತ್ರೆಯಲ್ಲಿ ಸಂದರ್ಭೋಚಿತವಾಗಿ ಮೂಡಿಬಂದಿರುವುದರಿಂದ ಇವು ಕಾವ್ಯದ ಸೊಬಗನ್ನು ಹೆಚ್ಚಿಸಿವೆ.

ಕನಕದಾಸರ 'ನಳಚರಿತ್ರೆ'ಯಲ್ಲಿ ನಳದಮಯಂತಿಯರ ಪಾತ್ರ ಚಿತ್ರಣ ವಿಶಿಷ್ಟವಾಗಿ ಮೂಡಿ ಬಂದಿದೆ. ಇದು ಪ್ರೇಮ ಕಥೆಯನ್ನು ಪ್ರಧಾನ ವಸ್ತುವಾಗಿ ಉಳ್ಳ ಕಥೆ. ಇಲ್ಲಿಯ 'ನಳಚಕ್ರವರ್ತಿ ಮಹಾಸುರದ್ರೂಪಿ. ಸೌಂದರ್ಯಕ್ಕೆ ತಕ್ಕ ಶೌರ್ಯವೂ ಆತನಲ್ಲಿದೆ. ಯಾತ್ರಿಕನೊಬ್ಬನಿಂದ ದಮಯಂತಿಯ ಸೌಂದರ್ಯವನ್ನು ನಳನಿಗೆ ಪರಿಚಯಿಸುವ ಕವಿ, ನವಿರಾದ ಪ್ರೇಮ, ಕಲಾಸೌಂದರ್ಯ ಮೆರೆದಿದ್ದಾರೆ. ಬರಿಯ ವರ್ಣನೆಯಲ್ಲಿಯೇ ದಮಯಂತಿಯ ಸೌಂದರ್ಯಕ್ಕೆ 'ನಳ' ಚಕ್ರವರ್ತಿ ಮಾರು ಹೋಗುವಲ್ಲಿ ಕವಿಯ ಅದ್ಭುತ ಚಮತ್ಕಾರವಿದೆ. ಇಲ್ಲಿ ದಮಯಂತಿಯ ವರ್ಣನೆ ಎಂಥವರಲ್ಲಿಯೂ ಅವಳನ್ನು ಒಂದು ಕ್ಷಣ ನೋಡುವ ಹಂಬಲ ಹುಟ್ಟಿಸುತ್ತದೆ. ಇಲ್ಲಿ 'ನಳ'ನಿಗೆ ಉಂಟಾಗಿದ್ದು ಸ್ವಚ್ಛಂದವಾದ ಸಹಜ ಪ್ರೇಮ, ಇಲ್ಲಿ ಪ್ರೇಮಾಂಕುರಕ್ಕೆ ನಾಂದಿ ಎಂಬಂತೆ ಕವಿ ಈ ಪ್ರಸಂಗವನ್ನು ಸೃಷ್ಟಿಸಿದ್ದಾನೆ. ನಿಜ ಪ್ರೇಮದ ಬೆಸುಗೆಯಂತೆ ತಂದಿರುವ ರಾಜಹಂಸ ಪಕ್ಷಿಯ ಪ್ರಸ್ತಾಪ, ಕಾವ್ಯದ ಚಲನೆಗೆ ಮಾರ್ಗ ಸೂಚಕವೆಂಬಂತೆ ಮೂಡಿ ಬಂದಿದೆ. ಪರಸ್ಪರ ಪ್ರೀತಿಸುವವರ ಸೇರ್ಪಡೆಗೆ ಇರುವ ಅಡೆತಡೆಗಳು ಅವುಗಳ ಮಧ್ಯೆ ನಳಚಕ್ರವರ್ತಿಯ ಮುಗ್ಧತೆ, ಅಕುಟಿಲತೆ ನಿಸ್ವಾರ್ಥ ಮನೋಭಾವಗಳನ್ನು ಒರೆಗೆ ಹಚ್ಚುವ ಮೂಲಕ ನಳನ ವ್ಯಕ್ತಿತ್ವವನ್ನು ಬೆಳಗಿಸುವ ಪ್ರಯತ್ನ ಮಾಡಿದ್ದಾರೆ.

ಕನಕದಾಸ ರಚಿತ ದಮಯಂತಿ ಉದಾತ್ತ ವ್ಯಕ್ತಿತ್ವ ಹೊಂದಿದ ಯಾಗಪುತ್ರಿ. ಸುರದ್ರೂಪಿಯಾದ ಈಕೆಯನ್ನು ಸೌಂದರ್ಯವನ್ನು ಬಹುವಾಗಿ ವರ್ಣಿಸಿ ಎಂತವರಲ್ಲಿಯೂ ಒಮ್ಮೆ ನೋಡಬೇಕೆಂಬ ಕುತೂಹಲ ಮೂಡಿಸುತ್ತಾರೆ. ಪತಿಯೇ ಪರದೈವವೆಂದು ಭಾವಿಸಿ ಅದರಂತೆ ನಡೆಯುವ ದಮಯಂತಿ. ಸುಖ-ದುಃಖಗಳಲ್ಲಿ ಕಷ್ಟ-ಕಾರ್ಪಣ್ಯಗಳಲ್ಲಿ ಜೊತೆಯಾಗಿ ನಿಂತು ಬೆಂಬಲ ಸೂಚಿಸಿದವಳು. ಸಮರಸದ ಬದುಕನ್ನು ಕಂಡುಕೊಂಡವಳು ಸದಾ ನಳನಿಗಾಗಿ ಅವನ ಅತಿಶಯ ರೂಪ, ಸಹನೆ, ಸೌಂದರ್ಯದ ವರ್ಣನೆಯ ಜೊತೆಗೆ ನಳನಿದ್ದ ದ್ಯೂತದ ವ್ಯಸನವನ್ನು, ಅದರಿಂದ ಆದ ದುರಂತತೆಯನ್ನು ನಳ ದಮಯಂತಿಯರ ಅಗಲುವಿಕೆ ವನವಾಸ, ಪರಸ್ಪರ ಅಗಲಿಕೆಯ ವೇದನೆ, ಬದುಕಿನ ದುರಂತತೆ ಕೊನೆಯಲ್ಲಿ ಆಗುವ ಬದಲಾವಣೆಯ ಸುಖಾಂತತೆ, ಇವೆಲ್ಲವೂ ಓದುಗರ ಮನಕಲಕುವಂತೆ ವರ್ಣಿತವಾಗಿವೆ.

## ಕನಕದಾಸ-ಕನ್ನಡ ವಿವೇಕದ ಮತ್ತೊಂದು ಅಭಿವ್ಯಕ್ತಿ

**ಡಾ. ಬಂಜಗೆರೆ ಜಯಪ್ರಕಾಶ**

ಕನಕದಾಸರು ಕನ್ನಡದ ಸಂಸ್ಕೃತಿಯ ಸಂದರ್ಭದಲ್ಲಿ ಬಹಳ ಮುಖ್ಯವಾಗಿರುವ ಒಂದು ಕಾಲಘಟ್ಟದಲ್ಲಿ ಬದುಕಿದವರು ಮತ್ತು ಬರೆದವರು. ಅದನ್ನೀಗಾಗಲೇ ಹಲವು ಸಲ ಹಲವು ಸಂದರ್ಭಗಳಲ್ಲಿ ಬಹಳ ಜನ ಹೇಳಿ ಆಗಿದೆ. ಅದನ್ನು ಮತ್ತೊಂದು ಸಲ ಹೇಳುವ ಅಗತ್ಯವಿಲ್ಲ. ಆದರೆ ಅದರ ನಿಜವಾದ ನೆಲೆಗಟ್ಟು ಏನಾಗಿತ್ತು ಮತ್ತು ಆ ರೀತಿಯಾಗಿರುವ ಪ್ರತಿಪಾದನೆಗೆ ಕನ್ನಡ ಜಗತ್ತು ಯಾವ ರೀತಿ ಸ್ಪಂದಿಸಿತು ಅನ್ನುವಂತಹ ವಿಷಯಗಳನ್ನು ನಿಮ್ಮ ಮುಂದೆ ಇಡೋದಕ್ಕೆ ಪ್ರಯತ್ನಿಸ್ತೀನಿ.

ನಮ್ಮ ಕನ್ನಡದ ಸಾಂಸ್ಕೃತಿಕ ಜಗತ್ತು ಅಥವಾ ಅದರ ವಿವೇಕದ ಹಾದಿ ತನ್ನ ಪ್ರತಿಯೊಂದು ನಿರ್ಣಾಯಕ ಕಾಲಘಟ್ಟದಲ್ಲೂ ಒಬ್ಬೊಬ್ಬ ಯುಗ ನಿರ್ಮಾಪಕನನ್ನ ಅಥವಾ ಒಬ್ಬ ಪ್ರಾತಿನಿಧಿಕ ಸ್ವರೂಪಿ ವ್ಯಕ್ತಿತ್ವದವರನ್ನ ನಮ್ಮ ಮುಂದೆ ಇಟ್ಟು ಹೋಗಿದೆ. ಅದೇ ರೀತಿ ಮುಂದೂ ಕೂಡ ಇನ್ನೂ ಹಲವು ಜನ ಬರಬಹುದು. ಈಗಾಗಲೇ ನಾವು ಗಮನಿಸಿರೋ ಹಾಗೆ ಅದು ಕವಿರಾಜಮಾರ್ಗ ಆಗಿರಬಹುದು, ಆನಂತರ ಪಂಪ ಬರೆದ ವಿಕ್ರಮಾರ್ಜುನ ವಿಜಯ ಆಗಿರಬಹುದು ಅಥವಾ ಅವರು ಪ್ರತಿಪಾದಿಸಿದಂತಹ ನಿಲುವುಗಳಾಗಿರಬಹುದು. ನಂತರದಲ್ಲಿ ಕನ್ನಡದ ಚಿಂತನೆಯನ್ನು ಬಹಳ ಪ್ರಖರವಾಗಿ ಸಾಂಸ್ಕೃತಿಕ ಲೋಕಕ್ಕೆ ಉಣಬಡಿಸಿದಂತಹ ವಚನಕಾರರು, ಆ ನಂತರ ಬಂದಂತಹ ಕುಮಾರವ್ಯಾಸ, ಹರಿದಾಸರು, ಸರ್ವಜ್ಞ ಕಡೆಗೆ ನಮ್ಮ ಕಾಲಘಟ್ಟದಲ್ಲಿ ನಾವೆಲ್ಲರೂ ಕಣ್ಣಲ್ಲಿ ಕಂಡಂಥ ಕುವೆಂಪು ಹೀಗೆ ಪ್ರತಿಯೊಂದು ಕಾಲಘಟ್ಟದಲ್ಲೂ ಕೂಡ ತನ್ನನ್ನ ತಾನು ಅಭಿವ್ಯಕ್ತಿಪಡಿಸಿಕೊಳ್ಳುವುದಕ್ಕೆ, ತನ್ನ

ಚಲನಶೀಲತೆಯನ್ನ ತೋರ್ಪಡಿಸುವುದಕ್ಕೆ ಕನ್ನಡದ ವಿವೇಕ ಆಯ್ಕೆ ಮಾಡಿಕೊಂಡಿರುವಂತಹ ವ್ಯಕ್ತಿತ್ವಗಳಿವು. ಆದ್ದರಿಂದಲೇ ಬಹಳ ಸಲ ನಮ್ಮ ನಡುವೆ ಮತ್ತೆ ಮತ್ತೆ ಚರ್ಚೆಗೂ, ಅವಲೋಕನಕ್ಕೂ ಒಳಗಾಗುತ್ತಲೇ ಇದ್ದಾರೆ.

ಕನಕದಾಸರ ಬಗ್ಗೆ ಗಮನಿಸಬೇಕಾದ ಅಂಶವೇನೆಂದರೆ, ಧಾರ್ಮಿಕವಾದ ಮತ್ತು ಸಾಂಸ್ಕೃತಿಕವಾದ ಸೂಕ್ತ ಪ್ರಾತಿನಿಧ್ಯವಿಲ್ಲದಂತಹ ಸಾಮಾಜಿಕ ಪರಿಸರದಲ್ಲಿ ಹುಟ್ಟಿದ ಕನಕದಾಸರು ತಮ್ಮ ನಿಲುವನ್ನು ಸಮಾಜದ ಮುಂದಿಡುವುದಕ್ಕೋಸ್ಕರ ಸಾಹಿತ್ಯ ರಚನೆ ಗಿಳಿದರು. ಅವರ ಸಾಹಿತ್ಯಕ್ಕೆ ನಿರ್ದಿಷ್ಟವಾದ ಉದ್ದೇಶ ಇರಲಿಲ್ಲ ಅಥವಾ ಪ್ರತಿಪಾದನೆ ಮಾಡಬೇಕಾದ ವಿಷಯಗಳಿರಲಿಲ್ಲ, ಅಂತಾದರೆ ಅವರು ಅದನ್ನು ಊರೂರುಗಳಲ್ಲಿ ಹಾಡ್ತಾ ಓಡಾಡಬೇಕಾದಂತಹ ಪ್ರಮೇಯವೇ ಇರಲಿಲ್ಲ. ರಾಜನ ಆಸ್ಥಾನದಲ್ಲಿ ವಾಚಿಸುವುದಕ್ಕೊ, ಪಂಡಿತರ ಬಳಕೆಗೊ ಅಥವಾ ಗಣ್ಯ ಸಮಾಜದ ಮನರಂಜನೆಗಾಗಿಯೊ, ಕಾವ್ಯವನ್ನು ನಿರ್ಮಾಣ ಮಾಡಿ ಆ ಮುಖಾಂತರ ಪ್ರಸಿದ್ಧಿಯನ್ನು ಪಡೆದು ಮಹಾಕವಿ ಎನಿಸಿಕೊಳ್ಳುವ ಯಾವ ಇರಾದೆಗಳೂ ಕೂಡ ಕನಕದಾಸರಲ್ಲಿ ಕಂಡುಬರುವುದಿಲ್ಲ.

ಕನಕದಾಸರು ಸ್ವಯಂ ಇಷ್ಟಪಟ್ಟು ಎಷ್ಟರಮಟ್ಟಿಗೆ ಸಂತರಾದರೊ, ಅಷ್ಟೇ ಪ್ರಮಾಣದಲ್ಲಿ ಆ ಕಾಲಘಟ್ಟದಲ್ಲಿ ಬಂದಿರುವಂತಹ ಒತ್ತಾಸೆ ಕೂಡ ಅವರನ್ನು ಸಂತರನ್ನಾಗಿ ಬದಲಿಸುವುದಕ್ಕೆ ಕಾರಣವಾಗಿದೆ ಎಂದು ನನಗನ್ನಿಸುತ್ತಿದೆ. ಈ ಮಾತಿಗೆ ಬೆಂಬಲವಾಗಿ ಒಂಚೂರು ಹಿನ್ನೆಲೆಯನ್ನು ಹೇಳಿದರೆ ಅನುಕೂಲ ಆಗಬಹುದು. 12ನೆಯ ಶತಮಾನದಲ್ಲಿ ಕರ್ನಾಟಕದಲ್ಲಿದ್ದಂತಹ ತಳಸ್ತರದ ಕುಶಲಕರ್ಮಿ ಸಮುದಾಯ ತಮ್ಮ ಮುನ್ನಡೆಯ ಆಶಯಗಳನ್ನು ವಚನ ಚಳುವಳಿಯ ಮುಖಾಂತರ ಪ್ರತಿಪಾದನೆ ಮಾಡಿತು. ಆ ನಂತರ 2 ಶತಮಾನಗಳ ನಂತರದಲ್ಲಿ ಬಂದಂತಹ ವಿದ್ಯಮಾನ ಹರಿದಾಸರ ರೂಪದಲ್ಲಿ, ಭಕ್ತಿಪಂಥದ ರೂಪದಲ್ಲಿ ತಮ್ಮ ಪ್ರತಿಪಾದನೆಯನ್ನು ಮುಂದಿಡುವಂತಹ ಒಂದು ಅವಕಾಶವನ್ನ ಒದಗಿಸಿಕೊಟ್ಟಿದೆ.

ವಿಜಯನಗರ ಸಾಮ್ರಾಜ್ಯ ಅಸ್ತಿತ್ವಕ್ಕೆ ಬಂದ ಕಾಲಘಟ್ಟದಲ್ಲಿ ಕರ್ನಾಟಕದ ಸಾಮಾಜಿಕ ಮತ್ತು ರಾಜಕೀಯ ಸ್ಥಿತ್ಯಂತರ ಮತ್ತೊಂದು ತಿರುವಿಗೆ ಹೊರಳಿರುವುದನ್ನು ಗಮನಿಸಬಹುದು. ಮುಖ್ಯವಾಗಿ ಕೃಷಿ ವಾಣಿಜ್ಯ ಬೆಳೆಗಳನ್ನ ಆಧರಿಸಿರುವಂತಹ ಮತ್ತು ಆ ವಾಣಿಜ್ಯ ಸರಕುಗಳ ಮಾರಾಟವನ್ನ ಆಧರಿಸಿರುವಂತಹ ಒಂದು ವ್ಯಾಪಾರೀ ಪ್ರಭುತ್ವ ಆ ಕಾಲಘಟ್ಟದಲ್ಲಿ ಮುನ್ನೆಲೆಗೆ ಬಂತು. ಅದು ಕೃಷ್ಣದೇವರಾಯನ ಕಾಲದಲ್ಲಿ ಬಹಳ ದೊಡ್ಡ ಪ್ರಮಾಣದಲ್ಲಿ ಸಂತೆಗಳನ್ನು, ಪಟ್ಟಣಗಳನ್ನು ಏರ್ಪಡಿಸುವುದು ಮಾತ್ರವಲ್ಲದೆ ಕೃಷಿಯಲ್ಲಿ ನೀರಾವರಿಯನ್ನು ತರೋದು ಹಾಗೂ ಕೃಷಿ ಉತ್ಪನ್ನಗಳನ್ನು ವಾಣಿಜ್ಯಕ್ಕಾಗಿ ಬಳಸುವಂತಹ ಪ್ರವೃತ್ತಿಯೂ ಜಾರಿಗೆ ಬಂತು. ಅದರ ಜೊತೆಗೆ ಆ ಕಾಲಘಟ್ಟದಲ್ಲಿ ಬಂದ ಮತ್ತೊಂದು ಗಮನಾರ್ಹವಾಗಿರುವ ವಿಚಾರ ಏನೆಂದರೆ ಆ ಕಾಲಘಟ್ಟದಲ್ಲಿ ಕರ್ನಾಟಕದ ಹಿಂದುಳಿದ ಜಾತಿ, ಸಮುದಾಯಗಳ ಎರಡು ಮುಖ್ಯ ಪಂಗಡಗಳಾಗಿರುವ ಕುರುಬರು ಮತ್ತು ಬೇಡರು ಪ್ರಾಮುಖ್ಯತೆಯನ್ನು ಗಳಿಸಿಕೊಂಡರು.

ವಿಜಯನಗರ ಕಾಲಘಟ್ಟದ ರಾಜಕೀಯ ಬೆಳವಣಿಗೆಗಳನ್ನು ಗಮನಿಸಿದರೆ ನಮಗದು ಸ್ಪಷ್ಟವಾಗುತ್ತದೆ. ಆವರೆಗೆ ಆ ಪ್ರಮಾಣದಲ್ಲಿ ಒಂದು ಅಸ್ಮಿತೆಯನ್ನ ಹೊಂದಿರದಿದ್ದಂತಹ ಕುರುಬ ಮತ್ತು ಬೇಡ ಸಮುದಾಯಗಳು ತಮ್ಮ ಸಮರ ಕಲೆಯ ಮತ್ತು ಯೋಧ ಗುಣದ ಕಾರಣದಿಂದಾಗಿಯೇ ಆ ಕಾಲಘಟ್ಟದ ರಾಜಕೀಯದಲ್ಲಿ ಬಹಳ ಪ್ರಮುಖ ಶಕ್ತಿಗಳಾಗಿ ಹೊರಹೊಮ್ಮಿದರು. ಪಾಳೆಗಾರರನ್ನು ಆಧರಿಸಿದಂತಹ ಹಾಗೂ 'ಅಮರಂ'ಗಳನ್ನು ಆಧರಿಸಿದಂತಹ ರಾಜ್ಯ ವ್ಯವಸ್ಥೆಯಾಗಿತ್ತು. ಪ್ರತಿಯೊಂದು 'ಅಮರಂ' ಮತ್ತು ಪಾಳೆಗಾರ ಮಾಂಡಲೀಕ ವ್ಯವಸ್ಥೆಗೂ ಕದನದಲ್ಲಿ ಪಾಲ್ಗೊಳ್ಳುವಂತಹ ಕುಲಗಳ ಅಗತ್ಯ ಕಂಡುಬಂದಿತು.

ಒಂದು ರೀತಿಯಲ್ಲಿ ಆ ಬಗೆಯ ಸಮುದಾಯಗಳನ್ನು ಆಧರಿಸಿಯೇ ಬಹಳಷ್ಟು ಪಾಳೇಗಾರರಿಗೆ ತಮ್ಮ ಶೌರ್ಯವನ್ನು ಇತರರಿಗೆ ಮನಗಾಣಿಸಲು ಸಾಧ್ಯವಾಗುತ್ತಿತ್ತು. ಅದರಲ್ಲಿ ಮುಖ್ಯವಾಗಿರುವಂಥವುಗಳು ಬೇಡರ ಪಡೆ, ಕುರುಬರ ದಂಡು. ಎಂದಿನಂತೆ ಮಾದಿಗರು, ಮುಸ್ಲಿಮ್ ತುಕಡಿಗಳು, ಮರಾಠ ದಳಗಳು ಮತ್ತು ಇತರ ಕೆಲವು ಸಮುದಾಯಗಳ ದಂಡುಗಳು ಆ ಕಾಲಘಟ್ಟದಲ್ಲಿ ನಮಗೆ ಮುಖ್ಯವಾಗಿ ಕಂಡು ಬರುತ್ತವೆ. ಈ ಸನ್ನಿವೇಶದಲ್ಲಿ ಪಾಳೇಪಟ್ಟುಗಳು ಮತ್ತು ಅವುಗಳನ್ನಾಧರಿಸಿದ್ದ ವಿಜಯನಗರ ಸಾಮ್ರಾಜ್ಯದ ಅಸ್ಥಿವಾರವಾಗಿದ್ದ ಸೇನಾ ದಂಡುಗಳು ಆ ಸಮುದಾಯಗಳಿಗೆ ನಿರ್ಣಾಯಕ ಅನ್ನಬಹುದಾದಂತಹ ರಾಜಕೀಯ ಪ್ರಾಮುಖ್ಯತೆಯನ್ನು ತಂದುಕೊಟ್ಟವು. ಈ ವಿಧದಲ್ಲಿ ರಾಜಕೀಯವಾಗಿ ಪ್ರಾಮುಖ್ಯತೆಯನ್ನು ಮತ್ತು ಮಾನ್ಯತೆಯನ್ನು ಪಡೆದುಕೊಂಡಂತಹ ಒಂದು ಕುಲಕ್ಕೆ ಕನಕದಾಸರಂತವರು ಯಾಕೆ ಅಗತ್ಯ ಆಗುತ್ತಾರೆ ಅನ್ನೋದನ್ನು ನಾವು ಆಲೋಚಿಸಬೇಕಾಗುತ್ತದೆ.

ಕಾರಣ ಏನು ಅಂತ ಪರಿಶೀಲಿಸುವುದಾದರೆ ಆ ಕಾಲಘಟ್ಟದಲ್ಲಿ ಬೇಡರು ಮತ್ತು ಕುರುಬರು ಒಂದು ವಿಚಿತ್ರವಾಗಿರುವ ಸಂದಿಗ್ಧ ಪರಿಸ್ಥಿತಿಯಲ್ಲಿದ್ದರು ಅನಿಸುತ್ತದೆ. ಈ ಎರಡೂ ಸಮುದಾಯಗಳು ತಮಗಿದ್ದಂತಹ ಸಮರಶೀಲ ಗುಣಗಳಿಂದ ವಿಜಯನಗರ ಸಾಮ್ರಾಜ್ಯದ ಅಸ್ತಿತ್ವಕ್ಕೆ ಅಗತ್ಯವಾಗಿರುವಂತಹ ಬಹಳ ದೊಡ್ಡ ರಾಜಕೀಯ ಮಹತ್ವ ಪಡೆದಿರುವಂಥ ಸಮುದಾಯಗಳಾಗಿದ್ದರೂ ಅದೇ ಬಗೆಯ ಮಾನ್ಯತೆ ಅವರಿಗೆ ಗ್ರಾಮೀಣ ಸಮುದಾಯಗಳಲ್ಲಿ ಸಿಕ್ಕಲಿಲ್ಲ. ಯಾಕೆಂದರೆ ಊಳಿಗಮಾನ್ಯ ವ್ಯವಸ್ಥೆಯ ಸಮುದಾಯದಲ್ಲಿ ಅವರು ಎಷ್ಟು ಎಕರೆ ಭೂಮಿಯನ್ನ ಹೊಂದಿದ್ದಾರೆ? ಎಷ್ಟು ಸೇವಕರನ್ನು ಹೊಂದಿದ್ದಾರೆ? ಎಷ್ಟು ಆಸ್ತಿಪಾಸ್ತಿಯನ್ನ ಹೊಂದಿದ್ದಾರೆ? ಎನ್ನುವುದನ್ನು ಅವಲಂಬಿಸಿಯೇ ಗೌರವ, ಮಾನ್ಯತೆ ಮತ್ತು ಮನ್ನಣೆಗಳು ದೊರಕುತ್ತಿದ್ದವು.

ಅಲ್ಲಿಯವರೆಗೆ ಅರೆ ಅಲೆಮಾರಿಗಳ ರೀತಿಯಲ್ಲಿ ಪಶುಪಾಲನೆ, ಕುರಿಗಾಹಿಗಳಾಗಿ ಬದುಕಿದ್ದಂತಹ ಕುರುಬರಿಗೆ ಕರ್ನಾಟಕದ ಸಂದರ್ಭದಲ್ಲಿ ಗ್ರಾಮೀಣ ಸಮಾಜದಲ್ಲಿ ಆ ರೀತಿಯಾಗಿರುವ ಆಸ್ತಿ ಹಿಡುವಳಿಗಳಿರಲಿಲ್ಲ. ಬೇಡರು ಕೂಡ ಹೆಚ್ಚೂ ಕಡಿಮೆ ಅರೆ ಅಲೆಮಾರಿಗಳಾಗಿ ಬೇಟೆಗಾರರ ಹಂತದಲ್ಲೇ ಉಳಿದುಕೊಂಡಿದ್ದವರು. ಆದ್ದರಿಂದಲೇ ಆ ಕಾಲಘಟ್ಟದ ಸಂದಿಗ್ಧ ಪರಿಸ್ಥಿತಿಯನ್ನು

ಈ ಎರಡೂ ಕುಲಗಳು ಎದುರಿಸಿವೆ. ಕ್ರಮೇಣ ರಾಜಕೀಯವಾಗಿ ಅವರ ಮಹತ್ವ ಹೆಚ್ಚಾಗಿ ಆಗಿದ್ದಂತಹ ಪಾಳೆಗಾರ ವ್ಯವಸ್ಥೆ ಇವರನ್ನ ಬಹು ಮಟ್ಟಿಗೆ ಆಧರಿಸಿದೆ. ಆದರೆ ಸಮಾಜದಲ್ಲಿ ಇವರಿಗೆ ಸಿಗಬೇಕಾಗಿರುವಂಥ ಮನ್ನಣೆ ಸಿಕ್ಕಿಲ್ಲ. ಅದರಲ್ಲೂ ಬಹಳ ಮುಖ್ಯವಾಗಿ ಸಾಂಸ್ಕೃತಿಕ ಕ್ಷೇತ್ರ ಮತ್ತು ಧಾರ್ಮಿಕ–ಆಧ್ಯಾತ್ಮಿಕ ಕ್ಷೇತ್ರದಲ್ಲಿ ಇವರಿಗೆ ಸೂಕ್ತ ಪ್ರಾತಿನಿಧ್ಯ ಸಿಕ್ಕಿಲ್ಲ.

ಆದ್ದರಿಂದಲೇ ಆ ಕಾಲಘಟ್ಟದಲ್ಲಿ ಪ್ರಬಲ ಯೋಧ ಕುಲಗಳಾಗಿ, ಮುಂಚೂಣಿಗೆ ಬಂದ ಕುರುಬ ಮತ್ತು ಬೇಡ ಸಮುದಾಯಗಳಿಗೆ ಒಬ್ಬ ಸಾಮಾನ್ಯ ಪ್ರತಿನಿಧಿಯಾಗಿ ಕನಕದಾಸ ತನ್ನನ್ನು ತಾನು ಈ ಆಧ್ಯಾತ್ಮಿಕ ಪ್ರಕ್ರಿಯೆಗೆ ಒಡ್ಡಿಕೊಂಡಿರಬೇಕು. ಆತ ಸ್ವತಃ ಮಂಡಲಾಧಿಪತಿಯಾಗಿದ್ದವನು. ಒಂದು ಚಿಕ್ಕ ಪಾಳೇಪಟ್ಟಿನ ಡಣ್ಣಾಯಕನಾಗಿದ್ದವನು. ಕಾಗಿನೆಲೆಗೆ ಸಂಬಂಧಪಟ್ಟಂತೆ ಇರುವ ಮಾಹಿತಿ ಪ್ರಕಾರ ಆ ಕಾಲದಲ್ಲಿ ಬರಿ ಕಾಗಿನೆಲೆಯ ಮೇಲೆ ನಿಯಂತ್ರಣ ಸಾಧಿಸಲಿಕ್ಕಾಗಿ ನೂರೈವತ್ತೇಳು ಸಲ ಕದನಗಳು ನಡೆದಿವೆ. ಈ ಮಾಹಿತಿ ಕಾಗಿನೆಲೆಗಿದ್ದ ಆರ್ಥಿಕ ಮಹತ್ವವನ್ನು ಸೂಚಿಸುತ್ತಿವೆಯೋ ಅಥವಾ ಅದಕ್ಕಿದ್ದಂತಹ ವ್ಯೂಹಾತಾಂತ್ರಿಕ ಮಹತ್ವವನ್ನು ಸೂಚಿಸುತ್ತಿದೆಯೋ ಎನ್ನುವುದನ್ನು ಇನ್ನೂ ವಿವರವಾಗಿ ಅಧ್ಯಯನ ಮಾಡಬೇಕಾಗಿದೆ.

ವಿಜಯನಗರ ಕಾಲಘಟ್ಟದಲ್ಲಿ ರಾಯಚೂರು ಜಿಲ್ಲೆಯ ಸುತ್ತಮುತ್ತಲೂ ಇರುವಂತಹ ದೋಆಬ್ ಎಂದು ಕರೆಯಲಾಗುವ ವ್ಯವಸಾಯ ಕ್ಷೇತ್ರಗಳ ಪ್ರದೇಶವನ್ನು ವಶಪಡಿಸಿಕೊಳ್ಳೋದಕ್ಕಾಗಿ ಅತ್ಯಂತ ಹೆಚ್ಚು ಸಲ ಕದನಗಳು ನಡೆದಿವೆ. ಅದೇ ರೀತಿ ಕಾಗಿನೆಲೆ ಮೇಲಿನ ನಿಯಂತ್ರಣಕ್ಕಾಗಿ ಹೆಚ್ಚು ಸಲ ಕದನಗಳು ನಡೆದಿವೆ ಎಂದರೆ ಅದಕ್ಕೆ ಕಾರಣಗಳೇನು ಅಂತ ಆಲೋಚಿಸಬೇಕಾತ್ತದೆ. ಏನೇ ಆದರೂ ಆ ರೀತಿ ಪದೇ ಪದೇ ದಾಳಿಗೊಳಗಾಗುತ್ತಿದ್ದಂತಹ ಒಂದು 'ಅಮರಂ' (ಮಂಡಲ) ಒಡೆಯನಾಗಿದ್ದಂತಹ ಕನಕದಾಸನಿಗೆ ಅದು ವೈರಾಗ್ಯವನ್ನು ಹುಟ್ಟಿಸಿರಬೇಕು. ಆ ಕಾಲದಲ್ಲಿ ಇವತ್ತು ರಾತ್ರಿ ಪಾಳೆಯಗಾರನಾಗಿದ್ದವನು ನಾಳೆ ಬೆಳಗ್ಗೆ ಇದ್ದಕ್ಕಿದ್ದಂತೆ ಬಂಧಿಯಾಗಬಹುದು, ಗುಲಾಮನಾಗಬಹುದು, ಭಿಕಾರಿಯಾಗಿಬಿಡಬಹುದು ಎನ್ನುವಷ್ಟು ಚಂಚಲ ಪರಿಸ್ಥಿತಿ. ಹಾಗೆಯೇ ತೋಳ್ಬಲವನ್ನೇ ಹೆಚ್ಚು ನೆಚ್ಚಿ ಆಡಳಿತ ನಡೆಸಬೇಕಾದ ಪರಿಸ್ಥಿತಿಯೂ ಇತ್ತು.

ಒಂದೇ ಚಕ್ರಾಧಿಪತ್ಯಕ್ಕೆ ಒಳಪಟ್ಟಿದ್ದರೂ ಕೂಡ, ನಿತ್ಯವೂ ತಮ್ಮ ಪಾಳೇಪಟ್ಟನ್ನು ವಿಸ್ತರಿಸಲು ಅಥವಾ ತಮ್ಮ ಪಾಳೇಪಟ್ಟಿನ ಮೇಲಿನ ನಿಯಂತ್ರಣವನ್ನು ಕಾಪಾಡಿಕೊಳ್ಳಲು ಅವರೆಲ್ಲರೂ ನಿತ್ಯವೂ ಪರಸ್ಪರ ಕಾದಾಡುತ್ತಿದ್ದಂತಹ ಸಂದರ್ಭ ಅದು. ಕೆಲವೊಮ್ಮೆ ಮಾತ್ರ ವಿಜಯನಗರದ ಸೈನ್ಯ ಬಂದು ಈ ಬಗೆಯ ಕದನ ಕೋಲಾಹಲವನ್ನು ನಿಯಂತ್ರಣಕ್ಕೆ ತರುತ್ತಿತ್ತು. ಮಿಕ್ಕಂತೆ ತಮ್ಮ ಸಾಮರ್ಥ್ಯದಿಂದ ಗೆದ್ದವರು ಯಾರೇ ಆಗಿರಲಿ, ಸಾಮ್ರಾಜ್ಯಕ್ಕೆ ನಿಷ್ಠೆ ತೋರಿಸಿ ಕಾಲಕಾಲಕ್ಕೆ ಕಪ್ಪ ಕೊಡುವವರಾಗಿದ್ದರೆ ಸಾಕು ಅವರಿಗೇ ಸಾಮ್ರಾಜ್ಯ ಮಾನ್ಯತೆ ನೀಡುತ್ತಿತ್ತು.

ಆ ಸನ್ನಿವೇಶದ ಹಿನ್ನೆಲೆಯಲ್ಲಿ ಕನಕನಿಗೆ ವೈರಾಗ್ಯ ಬಂತು. ಕನಕನ ವೈರಾಗ್ಯದ ಬಗ್ಗೆ  ನನಗನ್ನಿಸೋದು ಒಂದು ತಾರ್ಕಿಕವಾದ ಅಂತ್ಯ. ಎಲ್ಲಿ ಭೋಗಲಾಲಸೆ ಅಥವಾ ಅಧಿಕಾರ, ಹಣ ಮತ್ತು ಸಂಪತ್ತು ಬಹಳ ದೊಡ್ಡ ಪ್ರಾಮುಖ್ಯತೆಯನ್ನು ಪಡೆಯುತ್ತೋ ಅಂತಹ ಸಮಾಜದಲ್ಲಿ ಯಾವಾಗ್ಲೂ ಕೂಡ ಅದರ ಇನ್ನೊಂದು ತುದಿಯಾಗಿ ವಿರಕ್ತಿಯೂ ಹುಟ್ಟುತ್ತೆ. ಅದಕ್ಕೆ ಇನ್ನೊಂದು ಉದಾಹರಣೆಯನ್ನು ನೋಡಬಹುದು. ದಾಸರು ಹೆಣ್ಣಿನ ಬಗ್ಗೆ ಮತ್ತು ಹೆಣ್ಣಿನ ಕುಲದ ಬಗ್ಗೆ ಹೊಂದಿರುವಂತಹ ವಿರಕ್ತಿಯ ಪ್ರಮಾಣ. ಯಾಕೆ ಅಂತ ಹೇಳಿದರೆ ಆ ಕಾಲಘಟ್ಟದಲ್ಲಿದ್ದಂತಹ ಮಾಂಡಲೀಕರು, ಡಣ್ಣಾಯಕರು, ಸೇನಾಧಿಪತಿಗಳು, ಸಾಮಂತರು ಹೀಗೆ ರಾಜಮಾನ್ಯ ವರ್ಗ ಅಂತ ಯಾರನ್ನು ಕರೀತೀವಿ ಅವರೆಲ್ಲರೂ ಕೂಡ ಹೆಣ್ಣನ್ನು ಎಷ್ಟು ಅತಿರೇಕಕ್ಕೆ ಭೋಗ ವಸ್ತುವನ್ನಾಗಿ ಪರಿಭಾವಿಸಿದ್ದರು ಅನ್ನುವುದನ್ನು ಗಮನಿಸಬೇಕು.

ವಿಜಯನಗರ ಸೈನ್ಯದ ಕಾರ್ಯಾಚರಣೆಯಲ್ಲಿ ಮತ್ತು ವಿಜಯನಗರ ಸಾಮ್ರಾಜ್ಯದ ಬೆಳವಣಿಗೆಯಲ್ಲಿ ಎಷ್ಟೋಂದು ಊರಿಗೆ ಊರುಗಳೇ ಸೂಳೆಗೇರಿಗಳಾಗೋದವು. ಈಗ್ಲೂ ಕೂಡ ಅದರ ಪಳೆಯುಳಿಕೆಗಳು ಉಳಿದಿವೆ. ಈಗಲೂ ವಿಜಯನಗರ ಸಾಮ್ರಾಜ್ಯದ ಕೆಲವು ಊರುಗಳಿಗೆ ಹೋಗಿ ನೋಡಿದರೆ ಗೊತ್ತಾಗುತ್ತೆ, ಎಷ್ಟು ಪ್ರಮಾಣದಲ್ಲಿ ಹೆಣ್ಣನ್ನ ಆ ಕಾಲದಲ್ಲಿ ಕಾಮೋಪಭೋಗದ ವಸ್ತುವನ್ನಾಗಿ ಬಳಸ್ತಿದ್ರು ಅಂತ. ಆ ಬಗೆಯ ಒಂದು ಹಿನ್ನೆಲೆಯಲ್ಲಿ ವೈರಾಗ್ಯದ ಉಗಮವೂ ಕೂಡ ಆಗಿರಬಹುದು. ಹೆಣ್ಣನ್ನು, ಹಣವನ್ನು, ಅಧಿಕಾರವನ್ನು ಶೌರ್ಯವನ್ನು ಬಹಳ ದೊಡ್ಡ ಸಾಧನಗಳು ಅಂತ ತಿಳಿದಿದ್ದಂತಹ ಸಮಾಜದಲ್ಲಿ, ಅದರ ಮತ್ತೊಂದು ತುದಿಯಾಗಿ ಕನಕನಂತಹವರಿಗೆ ಹುಟ್ಟಿರುವ ವೈರಾಗ್ಯ ಆ ಕಾಲಘಟ್ಟದ ಮತ್ತೊಂದು ತಾರ್ಕಿಕ ಅಂತ್ಯದ ಚಿಂತನೆಯನ್ನು ತೋರಿಸುತ್ತಿದೆ.

ಎರಡನೆಯದು ಕನಕದಾಸರಿಗೆ ಆ ಕಾಲದಲ್ಲಿ ಏನನ್ನು ಪ್ರತಿಪಾದನೆ ಮಾಡಬೇಕಾಗಿತ್ತು? ಅಂದರೆ ಆವರೆಗೂ ಯಾರು ತುಂಬ ಕುಲಜರು ಅಂತ ಭಾವಿಸಿದ್ದರೋ, ಯಾರು ಶ್ರೇಷ್ಠ ಕುಲದವರು ಅಂತ ಭಾವಿಸಿದ್ದರೋ, ಅವರೆಲ್ಲರ ಪ್ರಾಬಲ್ಯಕ್ಕೆ ಅಥವಾ ಏಕಸ್ವಾಮ್ಯಕ್ಕೆ ಸವಾಲು ಎಸೆಯಬೇಕಾಗಿತ್ತು. ಆ ಸವಾಲಿನ ಅಂಗವಾಗಿ ಕನಕದಾಸರ ಹಾಗಿರುವ ಸಂತರು ಹುಟ್ಟಿ ಬಂದಿದ್ದಾರೆ. ಅದು ಕನಕದಾಸರಲ್ಲಿ ಮಾತ್ರ ಕಂಡು ಬಂದ ಪ್ರವೃತ್ತಿ ಅಂತ ಹೇಳೋದು ಕಷ್ಟ. ಕನಕದಾಸರದ್ದು ಹೆಚ್ಚು ಪ್ರಸಿದ್ಧಿ ಪಡೆದಿರುವಂತಹ ವೈರಾಗ್ಯ.

ಕರ್ನಾಟಕದಲ್ಲಿ ಯಾರು ಇವತ್ತು ಶೆಟ್ಟಿ ಅನ್ನುವ ಕುಲನಾಮಧೇಯಗಳನ್ನು ಬಳಸ್ತಾ ಇದಾರೆ– ಅದು ಬಂಟರಿರಬಹುದು, ಉಪ್ಪಾರರಿರಬಹುದು, ಕುಂಬಾರರಿರಬಹುದು ಅಂತಹ ಹಲವು ಜಾತಿಗಳು ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಆ ಶೆಟ್ಟಿ ಅನ್ನುವಂತಹ ಅಭಿದಾನವನ್ನು ಧರಿಸುವಂತಹ ಪರಿಪಾಠ ಶುರು ಮಾಡಿಕೊಂಡವು. ಯಾಕಂದ್ರೆ ಅವರೆಲ್ಲರೂ ಕೂಡ ಅಲ್ಲಿಯವರೆಗೆ ಕೇವಲ ವ್ಯವಸಾಯಕ್ಕೆ ಅಥವಾ ಕುಶಲಕರ್ಮಿತನಕ್ಕೆ ಹೆಸರಾಗಿದ್ದ ಜಾತಿಗಳು. ಆ ಕಾಲಘಟ್ಟದಲ್ಲಿ ಬಂದಂತಹ ವ್ಯಾಪಾರದ ಹೆಚ್ಚಳದ ಪ್ರಕ್ರಿಯೆಯಲ್ಲಿ ಈ ಹಲವು ಕುಲಗಳು ಆ ಕಾಲದಲ್ಲಿ ತಮ್ಮನ್ನ ತಾವು ವರ್ತಕ ಶ್ರೇಣಿಗೆ ವರ್ಗಾಯಿಸಿಕೊಂಡ ಕಾಲಘಟ್ಟ ಆದಾಗಿತ್ತು. ಈ ಮೊದಲೇ 'ಶೆಟ್ಟಿ' ಅಭಿದಾನವನ್ನು ಇಟ್ಟುಕೊಳ್ಳುತ್ತಿದ್ದ ಕೋಮಟಿ ಶೆಟ್ಟರು, ಬಣಜಿಗ ಲಿಂಗಾಯತರನ್ನು

ಬಿಟ್ಟರೆ ಮೇಲೆ ಹೆಸರಿಸಿದ ಎಲ್ಲಾ ಕುಲಗಳೂ ಕೂಡ ತಮ್ಮ ಹೆಸರಿನ ಮುಂದೆ ಶೆಟ್ಟಿ ಎನ್ನುವ ಅಭಿದಾನವನ್ನ ಧರಿಸುವ ಮುಖಾಂತರ ನಾವೂ ವ್ಯಾಪಾರಿ ಕುಲದವರಾಗಿದ್ದೀವಿ ಅಂತ ತೋರಿಸಿಕೊಳ್ಳೋಕೆ ಪ್ರಯತ್ನಿಸುತ್ತಿವೆ.

ಆ ರೀತಿ ಪ್ರಯತ್ನ ನಡೆಸಿದ ಕುಲಗಳೆಲ್ಲ ಶೂದ್ರ ಜಾತಿಗಳಾಗಿದ್ದವು. ಕ್ಷತ್ರಿಯ ಮತ್ತು ವೈಶ್ಯರಿಗಿಂತ ಕೆಳಸ್ಥಾನದಲ್ಲಿದ್ದಂತಹ ಜಾತಿಗಳಾಗಿದ್ದವು. ಅವು ಆ ಕಾಲಘಟ್ಟದಲ್ಲಿ ತಮ್ಮ ಮೇಲ್ಮುಖ ಸಾಮಾಜಿಕ ಚಲನೆಯನ್ನು ಈ ಬಗೆಯಲ್ಲಿ ಪ್ರಕಟಪಡಿಸಿರುವ ವಿದ್ಯಮಾನವನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಕನಕದಾಸರ ವಿಷಯಕ್ಕೆ ಆಮೇಲೆ ಬರ್ತೀನಿ. ಮೂರನೆಯ ಪ್ರಕ್ರಿಯೆ ಏನು ಅಂತ ಹೇಳಿದರೆ, ವಿಜಯನಗರ ಕಾಲಘಟ್ಟದಲ್ಲಿಯೇ ಹಲವಾರು ಹಿಂದುಳಿದ ಜಾತಿಗಳು ತಾವೂ ಕೂಡ ಜನಿವಾರ ಧರಿಸುವ ಮುಖಾಂತರ ಜಾತಿ ಶ್ರೇಷ್ಠತೆಯ ಏಕಸ್ವಾಮ್ಯಕ್ಕೆ ಒಂದು ಸವಾಲನ್ನು ಎಸೆದವು. ಬ್ರಾಹ್ಮಣ ಶ್ರೇಷ್ಠತೆಯನ್ನು ನಿರಾಕರಿಸುವ, ಪೌರೋಹಿತ್ಯದ ಹುದ್ದೆ ಬ್ರಾಹ್ಮಣರಿಗೆ ಮಾತ್ರ ಏಕಸ್ವಾಮ್ಯದ ವಿಷಯ ಅಲ್ಲ ಅಂತ ಪ್ರತಿಪಾದಿಸುವ, ಆ ಮುಖಾಂತರವಾಗಿ ತಮ್ಮ ದೇವತೆಗಳಿಗೆ ತಾವೇ ದೇವಸ್ಥಾನವನ್ನು ನಿರ್ಮಿಸುವ ಮತ್ತು ಅರ್ಚನೆ ಮಾಡುವ ಒಂದು ಪ್ರಕ್ರಿಯೆಯನ್ನು ಶುರುಮಾಡಿದರು. ಇವತ್ತು ನಾವು ಯಾರನ್ನ ಪಾಂಚಾಳರು ಅಂತ ಕರೀತೀವಿ, ಚಿನಿವಾರರು, ಕಮ್ಮಾರರು, ಬಡಗಿಗಳು, ಶಿಲ್ಪಿಗಳು ಅವರೆಲ್ಲರೂ ಕೂಡ ಆ ಬಗೆಯದೊಂದು ಸವಾಲು ಎಸೆಯುವ ಪ್ರಕ್ರಿಯೆಯ ಅಂಗವಾಗಿಯೇ ತಮಗೂ ಕೂಡ ಜನಿವಾರ ಧಾರಣೆ ಮಾಡುವ ಹಕ್ಕಿದೆ ಅಂತ ಪ್ರತಿಪಾದನೆ ಮಾಡಿದರು. ಆ ಬಗೆಯ ಹಲವು ಜಾತಿಗಳವರು ಶೂದ್ರ ಜಾತಿ ದೇವರುಗಳಿಗೆ ಪೂಜಾರಿಗಳಾಗಿ, ಆಚರಣೆಗಳ ಸಂದರ್ಭದಲ್ಲಿ ಪುರೋಹಿತರಾಗಿ ಕೆಲಸ ಮಾಡೋದಕ್ಕೆ ಶುರುಮಾಡಿದ್ದನ್ನು ಕೂಡ ಆ ಕಾಲಘಟ್ಟದಲ್ಲಿ ನೋಡಬಹುದು.

ಕನ್ನಿಕಾ ಪರಮೇಶ್ವರಿ ರೀತಿಯ ಬಹುಪಾಲು ದೇವತೆಗಳು ರೂಪುಗೊಂಡಿದ್ದೂ ಆ ಕಾಲಘಟ್ಟದಲ್ಲೇ. ಒಟ್ಟಾರೆಯಾಗಿ ಶೂದ್ರ ಜಾತಿಗಳು ಅಂತ ನಾವು ಕರೆಯುವಂತಹ ವ್ಯವಸಾಯದ ಜೊತೆಗೆ ನಿಕಟವಾಗಿ ಸಂಬಂಧ ಹೊಂದಿದ್ದಂತಹ ಕೆಲವು ಜಾತಿಗಳು ತಮ್ಮನ್ನ ತಾವು ಮೇಲ್ಮುಖ ಸಾಮಾಜಿಕ ಚಲನೆಯೆಡೆಗೆ ಒಡ್ಡಿಕೊಂಡ ಒಂದು ಕಾಲಘಟ್ಟ ಅದು. ಆದ್ದರಿಂದಲೇ ಅದೊಂದು ಸ್ಥಿತ್ಯಂತರದ ಕಾಲಘಟ್ಟ ಕೂಡ ಅಲ್ಲಿಯವರೆಗೆ ಅದರ ಹಿಂದಿದ್ದಂತಹ ರಾಜ್ಯ ವ್ಯವಸ್ಥೆಗಳು ಮಾಡುತ್ತಿದ್ದ ಆಡಳಿತಕ್ಕೂ, ವಿಜಯನಗರ ಸಾಮ್ರಾಜ್ಯ ಬಂದ ಮೇಲೆ ಶುರು ಮಾಡಿದಂತ ಆಡಳಿತ ವ್ಯವಸ್ಥೆಗೂ ವ್ಯತ್ಯಾಸಗಳಿವೆ. ಅಂದರೆ ಒಂದು ಹೊಸ ಬಗೆಯ ಸಾಮಾಜಿಕ ಮತ್ತು ವಾಣಿಜ್ಯಕ ವ್ಯವಸ್ಥೆಗೆ ಹೊರಳಿಕೊಂಡದ್ದಕ್ಕೆ ಪುರಾವೆಗಳು ನಮಗೆ ಸಿಗುತ್ತವೆ.

ಇಂತಹ ಸಂದರ್ಭದಲ್ಲಿ ಕನಕದಾಸರು ಸಹಜವಾಗಿ ಆ ಯುಗಧರ್ಮದ ವಾಣಿಯಾಗಿ ಮೂಡಿಬಂದರು. ಕುಲದ ಹಿರಿಮೆ ಅಂತ ಹೊಡೆದಾಡಬೇಕಾದುದಿಲ್ಲ ಅಂದರು. ಅವರ ಮಾತಿನ ಹಿನ್ನೆಲೆ ಸ್ಪಷ್ಟ. ನಿಮ್ಮ ಕುಲದ ನೆಲೆಯನ್ನ ನೀವು ಅರಿತಿಲ್ಲ ಆದ್ದರಿಂದ ಹುಸಿ ಹಿರಿಮೆ ಅದು–ಎನ್ನುವುದು ಅವರ ಮುಖ್ಯವಾದುದೊಂದು ಪ್ರಮೇಯ. ಕನಕದಾಸರನ್ನು ಮಾತ್ರವೇ ಯಾಕೆ ನಾವು ಮತ್ತೆ ಮತ್ತೆ ಉದಾಹರಿಸುತ್ತೀವಿ ಅಂದರೆ, ಅವರು ಪ್ರತಿಪಾದಿಸಿರುವ ನಿಲುವುಗಳಿಗೂ ಅವರು ಹುಟ್ಟಿ ಬಂದ ಹಿನ್ನೆಲೆಗೂ ಬಹಳ ತಾಳ ಮೇಳ ಇದೆ. ಅದನ್ನು ಬೇರೆ ಯಾರೋ ಹೇಳಿದರೆ ಅದು ಬರಿ ತೋರಿಕೆಯ ಮಾತೂ ಆಗಿರಬಹುದಾಗಿರುತ್ತದೆ. ಅದನ್ನ ಬೇರೆ ಯಾರೋ ಪ್ರತಿಪಾದನೆ ಮಾಡಿದರೆ ಅದು ಬರೀ ಆದರ್ಶದ ಮಾತಾಗಬಹುದಾದ ಸಾಧ್ಯತೆ ಇದೆ.

ಕನಕದಾಸರ ವಿಷಯದಲ್ಲಿ ನಾವು ಗಮನಿಸಬೇಕಾದ ಮುಖ್ಯ ವಿಷಯ ಏನಂದರೆ, ಕೀಳು ಎಂದು ಕರೆಯಲ್ಪಟ್ಟ ಒಂದು ಕುಲದ ಹಿನ್ನೆಲೆಯಲ್ಲಿ ಹುಟ್ಟಿದವರು. ಆ ಕಾಲಘಟ್ಟದಲ್ಲಿ ಶ್ರೇಷ್ಠತೆಯನ್ನು ಪ್ರತಿಪಾದನೆ ಮಾಡುತ್ತಿದ್ದ ಕೆಲವೇ ಜಾತಿಗಳ ಸಾಂಸ್ಕೃತಿಕ ಶ್ರೇಷ್ಠತೆಗೆ ಸವಾಲಾಗಿ ತಮ್ಮ ಸಾಹಿತ್ಯ ರಚನೆ ಮಾಡಿದವರು. ಅದೂ ಕೂಡ ಬಹಳ ಆಶ್ಚರ್ಯಕರವಾಗಿರುವ ವಿದ್ಯಮಾನ ಅಂತ ಕಾಣುತ್ತೆ. ಇತಿಹಾಸದ ಹೆಚ್ಚಿನ ವಿವರಗಳು ನಮಗೆ ಗೊತ್ತಿಲ್ಲ. ಆತನಿಗೆ ಅಷ್ಟೊಂದು ಸಂಸ್ಕೃತವೂ, ಕಾವ್ಯಾಲಂಕಾರ ಶಾಸ್ತ್ರವೂ ಹಾಗೂ ಶಾಸ್ತ್ರಗಳ ಪರಿಚಯವೂ ಇರೋದನ್ನು ನೋಡಿದರೆ ಅದು ಕಡಿಮೆ ಆಶ್ಚರ್ಯದ ಮಾತಾಗುವುದಿಲ್ಲ.

ಲೇಖಕರನೇಕರು ಈ ಬಗ್ಗೆ ಸರಳೀಕೃತ ನಿಲುವುಗಳನ್ನು ಬರೀತಾರೆ. ಅವನು ಡಣ್ಣಾಯಕನ ಮಗನಾಗಿದ್ದನಾದ್ದರಿಂದ ತುಂಬ ಒಳ್ಳೆಯ ಶಿಕ್ಷಣ ಸಿಕ್ಕಿತ್ತು ಅಂತ. ಅದಕ್ಕೆ ಸಾಕಷ್ಟು ಆಧಾರಗಳು ಇದ್ದಂಗಿಲ್ಲ. ಯಾಕಂದ್ರೆ ಆ ಕಾಲಘಟ್ಟದಲ್ಲಿಯೇ ಕನಕನ ಹಿಂಚು–ಮುಂಚಿನ ಕಾಲಘಟ್ಟದವರಾದ ಬೆಂಗಳೂರಿನಲ್ಲಿ ಪಾಳೇಪಟ್ಟನ್ನು ನಿರ್ಮಿಸಿ ಆಳ್ವಿಕೆ ಮಾಡಿದಂತಹ ಕೆಂಪೇಗೌಡ ಮತ್ತು ಅವರ ಮಕ್ಕಳು ಆ ರೀತಿಯಾಗಿರುವ ಶಿಕ್ಷಣವನ್ನು ಪಡೆದುಕೊಂಡಂತಿಲ್ಲ. ಅವರೂ ಕೂಡ ಇದೇ ರೀತಿಯ ಮಾಂಡಲೀಕರಾಗಿದ್ದರು. ಹಾಗಿದ್ದರೂ ಕೆಂಪೇಗೌಡ ಮತ್ತವರ ಮಕ್ಕಳಿಗೆ ಸಿಗದಿರುವಂತಹ ಬಹಳ ಶಾಸ್ತ್ರೋಕ್ತ ವಿದ್ಯಾವಂತಿಕೆಯ ತರಬೇತಿಗಳು ಕನಕದಾಸರಿಗೆ ಸಿಕ್ಕಿದ್ದಕ್ಕೆ ನಾವು ಬೇರೆ ಕಾರಣಗಳನ್ನು ಹುಡುಕಬೇಕಾಗುತ್ತೆ.

ಅವರು ಮಾಂಡಲೀಕರಾದ ಮಾತ್ರಕ್ಕೆ ಆ ರೀತಿಯಾಗಿರುವ ವಿದ್ಯೆಯನ್ನು ಪಡೆದಿರುವ ಸಾಧ್ಯತೆಯಿದೆ. ಅದೊಂದು ಪರಿಪಾಠವಾಗಿತ್ತು ಅಂತ ಹೇಳೋದು ಕಷ್ಟದ ವಿಷಯ. ಯುದ್ಧಕಲೆ, ಸಮರ ಚಾತುರ್ಯಗಳ ತರಬೇತಿ ಕೊಡಿಸುವುದು ಇಂತಹ ಸಂದರ್ಭಗಳಲ್ಲಿ ಸಾಮಾನ್ಯ. ರಣಕಲೆಗಳಲ್ಲಿ ತರಬೇತಿ ಕೊಡಿಸುವುದು ಸಾಮಾನ್ಯವಾದ ನಡೆ. ಆದರೆ ಕಾವ್ಯಾಲಂಕಾರದಲ್ಲಿ, ತತ್ವಶಾಸ್ತ್ರ ವಿಷಯದಲ್ಲಿ, ಸಂಸ್ಕೃತ ಪುರಾಣ ಗ್ರಂಥಗಳ ಅಧ್ಯಯನದ ವಿಷಯದಲ್ಲಿ ಕನಕದಾಸರಿಗೆ ಅಷ್ಟು ಒಳ್ಳೆಯ ಶಿಕ್ಷಣ ಎಲ್ಲಿಂದ ಸಿಕ್ಕಿರಬಹುದು? ಇದು ನಾವಿನ್ನೂ ಅರಿಯಬೇಕಾಗಿರುವ ವಿಷಯ. ಆ ಬಗೆಯದೊಂದು ಹುಡುಕಾಟದಲ್ಲಿ ನಮಗೆ ಸಿಗಬಹುದಾಗಿರುವ ಒಂದು ಸಣ್ಣ ಎಳೆ ಏನು ಅಂತ ಹೇಳಿದರೆ, ಅಸ್ಪೃಶ್ಯರಿಗೆ ವಿದ್ಯಾಭ್ಯಾಸ ನಿಷೇಧ ಆಗಿತ್ತು, ಅವರು ವಿದ್ಯೆ ಕಲಿಯುವುದಕ್ಕೆ ಅವಕಾಶ ಇಲ್ಲ ಅನ್ನುವಂತ ನಿರ್ಬಂಧಗಳಿದ್ದ ಸಮಯದಲ್ಲಿ ಬಳ್ಳಿಗಾವಿ ಅಥವಾ ಬನವಾಸಿ ಹತ್ತಿರದಲ್ಲಿದ್ದಂತಹ ಕೋಡಿಮಠದಲ್ಲಿ ಮಾದಾರ ಚನ್ನಯ್ಯ ವಿದ್ಯಾರ್ಥಿಯಾಗಿದ್ದ ಎಂದಿರುವ ಪ್ರತೀತಿ ಇದೆ. ಈ ಉದಾಹರಣೆಯನ್ನು ನೋಡಿದರೆ ಆ ಬಗೆಯ ನಾಥಪಂಥ, ಕಾಳಾಮುಖ, ಪಾಶುಪತ ಅಥವಾ ಶಾಕ್ತ್ಯ/ಶೈವ ತಾಂತ್ರಿಕ ಪಂಥೀಯವಾದ ಯಾವುದಾದರೊಂದು ಘಟಿಕಾಸ್ಥಾನ ಕುರುಬ ಸಮುದಾಯದ ಜೊತೆಗೆ ಹೆಚ್ಚು ಸಂಪರ್ಕವನ್ನು ಪಡೆದಿರುವ ಸಾಧ್ಯತೆಯನ್ನು ನಾವು ಊಹಿಸಬಹುದು.

ಅದಕ್ಕೆ ಪೂರಕವಾಗಿ ನಾನು ಇನ್ನೂ ಸ್ವಲ್ಪ ಮುಂದಕ್ಕೆ ಹೋಗಿ ಬೇರೆ ಉದಾಹರಣೆಯೊಂದನ್ನು ಹೇಳಬಯಸುತ್ತೀನಿ. ಡಿ.ಆರ್. ನಾಗರಾಜ್ ಆಧ್ಯಾತ್ಮಿಕ ಲೋಕದ ದಂಗೆಕೋರ ಅಂತ ಕರೆದ ಮಂಟೇಸ್ವಾಮಿ ಆತ ಹೊರಟ ಜಾಗದಿಂದ ಹಿಡಿದು ಆತ ಬಂದು ನೆಲೆಸಿದ ಬೊಪ್ಪೇಗೌಡನಪುರದ ಜಾಗದವರೆಗೆ ಆಶ್ರಯವನ್ನು ಒದಗಿಸಿರೋದರಲ್ಲಿ ಕುರುಬ ಕುಲದ ಪಾತ್ರ ಹೆಚ್ಚಾಗಿದೆ. ಆತ ಹೊರಟ ಜಾಗ ಕೃಷ್ಣಾ ನದಿ ತೀರ ಎಂಬ ಪ್ರತೀತಿಯಿದೆ. ಸಖರಾಯಪಟ್ಟಣ, ಆಮೇಲೆ ಬೇಲೂರು ಪಾಳೇಗಾರರ ಭೇಟಿ, ಅಲ್ಲಿಂದ ಆತ ಮುಂದಕ್ಕೆ ಬಂದು ರಾಚಪ್ಪಾಜಿಯನ್ನು ಶಿಶುಮಗನಾಗಿ ಪಡೆದು, ಕಡೆಗೆ ಬೊಪ್ಪೇಗೌಡನಪುರದಲ್ಲಿ ನೆಲೆಗೊಂಡ. ಆ ಬೊಪ್ಪೇಗೌಡನಪುರದ ಕುರುಬ ಬೊಪ್ಪೇಗೌಡನ ಕುರಿದೊಡ್ಡಿ ಮಂಟೇಸ್ವಾಮಿಯ ಚಂದ್ರಸಾಲೆಯಾಗಿ ಮಾರ್ಪಾಡಾಗುತ್ತದೆ. ಅಲ್ಲಿದ್ದಂತಹ ಒಬ್ಬ ಮಡಿವಾಳಯ್ಯನ ಉಬ್ಬೆ ಒಲೆ ಅವರ ಉರಿಗದ್ದಿಗೆಯಾಗಿ ಮಾರ್ಪಡುತ್ತೆದೆ.

11ನೇ ಶತಮಾನದಲ್ಲಿದ್ದ ಎನ್ನಲಾಗುವ ರೇವಣಸಿದ್ಧನ ಉದಾಹರಣೆಯನ್ನು ತಗೊಂಡ್ರೆ ಅಥವಾ ರೇವಣಸಿದ್ಧ ತನ್ನ ಶಿಷ್ಯನನ್ನಾಗಿ ಮಾದಿಗರ ಮರಳುಸಿದ್ಧ ನನ್ನ ಸ್ವೀಕಾರ ಮಾಡಿರುವ ಉದಾಹರಣೆಯನ್ನು ತಗೊಂಡ್ರೆ ಬಹಳ ಹಿಂದಿನಿಂದಲೇ ಕುರುಬ ಅಥವಾ ಪಶುಪಾಲಕ ಜನಾಂಗ, ಅದು ಗ್ರಾಮೀಣ ಜೀವನದಲ್ಲಿ ನೇರ ಪಾಲುದಾರ ನಾಗಿರಲಿಲ್ಲವಾದ ಕಾರಣ, ಗ್ರಾಮೀಣ ಉತ್ಪಾದನೆಯ ವ್ಯವಸ್ಥೆಯಲ್ಲಿ ಪಶುಪಾಲಕ ಸಮುದಾಯಕ್ಕೆ ಇದ್ದ ಕೊಳುಕೊಡೆ ಬೇರೆ ರೀತಿಯದಾಗಿತ್ತು. ಅದು ನೇರವಾಗಿ ವ್ಯವಸಾಯೋತ್ಪಾದನೆಯಲ್ಲಿ ತೊಡಗಿರುವುದಕ್ಕಿಂತ ಹೆಚ್ಚು ಊರಿಂದ ಊರಿಗೆ ಅಂಚುಗಳಲ್ಲಿದ್ದ ಹುಲ್ಲುಗಾವಲು, ಕುರುಚಲು ಕಾಡುಗಳನ್ನು ಆಶ್ರಯಿಸಿ ಅಲೆದಾಡುತ್ತಿದ್ದ ಸಮುದಾಯವಾಗಿತ್ತು. ಆ ಬಗೆಯ ಸಮುದಾಯಗಳಿಗೆ ಶೈವ/ಶಾಕ್ತ್ಯ ತಾಂತ್ರಿಕ ಪರಂಪರೆಯ ಲಿಂಗ ಪೂಜೆ ಮೊದಲಿಂದಲೂ ಬೆಳೆದು ಬಂದ ಪದ್ಧತಿಯಾಗಿದೆ. ಅದಕ್ಕೆ ಆ ಸಮುದಾಯಗಳ ಜೀವನಾನುಭವದ ಹಿನ್ನೆಲೆಯಿದೆ.

ಈ ಹಿನ್ನೆಲೆಯಲ್ಲಿ ನಾಥಪಂಥದ ಹೋಲಿಕೆಯಿರುವ ಆಚರಣೆಗಳನ್ನು, ಆ ಮುಖಾಂತರವಾಗಿ ವೈದಿಕತೆಗೆ ಪೂರಾ ಭಿನ್ನವಾಗಿರುವ ಆಧ್ಯಾತ್ಮಿಕ ಪ್ರೇರಣೆಗಳನ್ನು ಪಡೆದಿರುವ ಎಲ್ಲ ಸಾಧ್ಯತೆಗಳೂ ಇವೆ. ಆ ಕಾರಣದಿಂದಲೇ ಬಹಳ ಕಾಲದವರೆಗೆ ಲಿಂಗ ಪೂಜೆ ಮತ್ತು ಅವೈದಿಕವಾಗಿರುವ ಹಲವು ತಾಂತ್ರಿಕ ಪಂಥಗಳ ಭಿನ್ನ ಭಿನ್ನ ಚಿಂತನಾ ಪದ್ಧತಿಗಳಿಗೂ ಪಶುಪಾಲಕರು ಆಶ್ರಯ ಕೊಟ್ಟಿರೋದನ್ನು ಗಮನಿಸಬಹುದಾಗಿದೆ. ಈ ಬಗೆಯ ಹಲವು ರೀತಿಯ ಪ್ರೇರಣೆಗಳ ಹಿನ್ನೆಲೆಯಿಂದಾಗಿ ಕನಕದಾಸ ಜನಸಮೂಹಗಳ ಆಶಯವನ್ನು ಜನಸಮೂಹಗಳ ಭಾಷೆಯಲ್ಲೇ ಹಳ್ಳಿಹಳ್ಳಿಗಳಿಗೆ ತಲುಪಿಸುವಂತಹ ಬಹಳ ದೊಡ್ಡ ಸಂತನಾಗಿ ರೂಪುಗೊಂಡ. ಆಶ್ಚರ್ಯದ ವಿಷಯ ಏನು ಅಂದರೆ ಬೇರೆ ಎಲ್ಲ ದಾಸರಿಗೆ ಮೈ ತುಂಬ ಉಡುಪಿದೆ. ಈ ಕನಕದಾಸನಿಗೆ ಮಾತ್ರ ಕಲಾವಿದರ ಕಲ್ಪನೆಯಲ್ಲಿ ಮೈ ತುಂಬ ಉಡುಪಿಲ್ಲ. ಕಂಬಳಿಯನ್ನ ಹೊದ್ದಿದಾನೆ, ತಲೆಗೆ ಮುಂಡಾಸೂ ಇಲ್ಲ. ಅಂದ್ರೆ ನೇರವಾಗಿ ಕೆಳಜಾತಿ ಸೂಚಕವಾಗಿರುವಂತಹ, ಸಾಮಾನ್ಯವಾಗಿ ನಾವು ಬೀದಿ ಬೈರಾಗಿಗಳು ಅಂತ ಯಾರನ್ನ ಕರೀಬಹುದೋ ಆ ಬೀದಿ ಬೈರಾಗಿಗಳ ರೂಪದಲ್ಲೇ ನಮಗೆ ಕನಕದಾಸ ಕಂಡುಬರ್ತಾನೆ. ಆ ಉಡುಪಿನಲ್ಲೇ ಆತ ರಾಜ್ಯಾದ್ಯಂತ ಓಡಾಡಿದ.

ನಾವಿಲ್ಲಿ ಗಮನಿಸಬೇಕಾದದ್ದು ಏನೆಂದರೆ ಆವರೆಗೆ ಕರ್ನಾಟಕದ ಹಲವು ಪ್ರದೇಶಗಳನ್ನು, ಗ್ರಾಮಗಳನ್ನು ಸುತ್ತಿ, ಹಳ್ಳಿಹಳ್ಳಿಗಳಲ್ಲಿ ತನ್ನ ನೀತಿಯನ್ನು ಪ್ರಚಾರ ಮಾಡಿದ, ಈ ರೀತಿ ಅಪರಿಚಿತ ಸಮೂಹವನ್ನು ಉದ್ದೇಶಿಸಿ ತನ್ನ ಕಾಣ್ಕೆಗಳನ್ನು ಪ್ರತಿಪಾದನೆ ಮಾಡಿದ ಸಂಕಥನಕಾರರು ಅಥವಾ ಕವಿಗಳು ಈ ಹಿಂದೆ ಬಂದಿರಲಿಲ್ಲ. ಕನಕದಾಸ ಮತ್ತು ಸ್ವಲ್ಪ ಮಟ್ಟಿಗೆ ಪುರಂದರದಾಸ ಮಾತ್ರವೇ ದಾಸಕೂಟವನ್ನು ಕಟ್ಟಿಕೊಂಡು ಗ್ರಾಮಗ್ರಾಮಗಳಲ್ಲಿ ವಿಚಾರಗಳನ್ನು ಹರಡುತ್ತಾ ಹೋದರು. ಆ ಮುಖಾಂತರ ಒಂದು ಹೊಸ ಜನಪರ ಭಕ್ತಿ ಪ್ರಜ್ಞೆಯನ್ನು ಸೃಷ್ಟಿ ಮಾಡಿದ್ರು. ಅದರ ಅಂಗವಾಗಿಯೇ ಮೇಲ್ಜಾತಿ ಜನರಿಗೆ ಕುಲದ ಬಗ್ಗೆ ಇರುವ ಅಹಂಕಾರವನ್ನು ನಿರಾಕರಿಸಿದರು.

ದೊರೆಯಾಗಿದ್ದಂತಹ ಕನಕದಾಸ ತಾನು ದೊರೆ ಅಂತ ಕರ್‍ಕೊಂಡಾಗ ನಿಜದ ಅರ್ಥದಲ್ಲಿ ಧರಾಧೀಶರಿಗೆ ದಾಸನಾಗಿದ್ದ. ಮಾಂಡಲೀಕನಾಗಿದ್ದಾಗ ಯಾವುದೋ ನರಾಧೀಶನ ಅಧೀನದವನಾಗಿದ್ದ, ಅವನ ದಾಸನಾಗಿದ್ದ. ಆ ಪದವಿಯನ್ನು ಬಿಟ್ಟು, ತಾನು ಕೃಷ್ಣನ ದಾಸ ಅಂತ ಹೊರಟಾಗ ನಿಜಕ್ಕೂ ದೊರೆಯಾದ. ಯಾಕಂದ್ರೆ ಈಗ ಅವನು ಪಡೆದಿರುವ ದಾಸತ್ವ ನರಾಧೀಶರಿಗೆ ತೋರಿಸ್ತಾ ಇರುವ ದಾಸತ್ವ ಅಲ್ಲ. ಇವರೆಲ್ಲರನ್ನು ಮೀರಿದ ಎಲ್ಲರಿಗೂ ಒಡೆಯನಾದ ಭಗವಂತನಿಗೆ ತೋರಿಸ್ತಾ ಇರುವ ದಾಸತ್ವ. ದೇವರಿಗೆ ಮಾತ್ರವೇ ಅವನು ದಾಸ. ಭೂಮಿ ಮೇಲೆ ಇರುವಂತಹ ಯಾವುದೇ ಭೂಪತಿಗಳಿಗೆ ಅವನು ದಾಸನಲ್ಲ. ಆದ್ದರಿಂದಲೇ ದಾಸನೆಂದು ತನ್ನನ್ನು ಕರೆದುಕೊಂಡಾಗ ನಿಜಕ್ಕೂ ದೊರೆಯಾದ ಕನಕದಾಸ.

ಆದ್ದರಿಂದಲೇ ಕನಕದಾಸ ನೀಡಿದ ಬಹಳ ದೊಡ್ಡ ಸಂದೇಶ ಏನು ಅಂತ ಹೇಳಿದ್ರೆ ನಾವು ಇಲ್ಲಿ ಭೂಸುರರಾಗಿರುವವರಿಗೆ, ನರಾಧೀಶರಿಗೆ ದಾಸರಾಗಿರುವವರಿಗೆ ನಮಗೆ ಮುಕ್ತಿ ಇಲ್ಲ. ನಮ್ಮ ಸ್ವಾತಂತ್ರ್ಯವನ್ನು, ನಮ್ಮ ಶ್ರೇಷ್ಠತೆಯನ್ನ, ಬದುಕಿನ ಸಾರ್ಥಕತೆಯನ್ನ ಪಡೆಯಬೇಕು ಅಂತಾದರೆ ನಾವು ಈ ಎಲ್ಲ ಗುಲಾಮಗಿರಿಗಳನ್ನು, ಕಟ್ಟಳೆಗಳನ್ನು ಮೀರುವ ಹಂತಕ್ಕೆ ಏರಬೇಕು. ಆಗ ಮಾತ್ರವೇ ನಾವು ನಮ್ಮ ಬದುಕಿನ ಸಾರ್ಥಕತೆಯನ್ನು ಕಾಣೋದಕ್ಕೆ ಸಾಧ್ಯ. ಸಂಪತ್ತಾಗಲಿ, ಅಧಿಕಾರ ಹುದ್ದೆಗಳಾಗಲಿ, ಬಿರುದುಗಳಾಗಲಿ ನಮ್ಮ ಶ್ರೇಷ್ಠತೆಗೆ ಕಾರಣ ಆಗೋದಿಲ್ಲ. ಅವುಗಳೆಲ್ಲವನ್ನ ಮೀರಿದಾಗ ಮಾತ್ರ ಸಾರ್ಥಕ ವ್ಯಕ್ತಿಗಳಾಗ್ತೀವಿ ಅನ್ನುವಂತಹ ವಿಚಾರಧಾರೆಯನ್ನು ಪ್ರಬಲವಾಗಿ ಮಂಡಿಸಿದ ಕನಕದಾಸರು ಅದೇ ಕಾರಣಕ್ಕೆ ನಮ್ಮಲ್ಲಿ ಪ್ರಾತಃಸ್ಮರಣೀಯರಾಗಿದ್ದಾರೆ.

**ಪ್ರಶ್ನೋತ್ತರ**

**ಮೊದಲ ಪ್ರಶ್ನೆಗೆ ಉತ್ತರ:**

ಭಕ್ತಿ ಪಂಥ ಅವರನ್ನು ವ್ಯಾಖ್ಯಾನಿಸಿಕೊಂಡಿರುವ ರೀತಿಯಲ್ಲಿ ಮತ್ತು ಅವರು ಕಾರ್ಯ ಎಸಗಿರುವ ರೀತಿಯಲ್ಲಿ ನೋಡಿದರೆ ವೈದಿಕವಾಗಿರುವಂಥ ಪದಜಾಲವೂ ಅವರಲ್ಲಿ ಬಳಕೆಯಾಗಿರಬಹುದು. ಆದ್ರೆ ಒಟ್ಟಾರೆ ಅವರ ಕಾರ್ಯಾಚರಣೆ, ಅವರು

ಪ್ರತಿಪಾದನೆ ಮಾಡಿದಂತಹ ಭಕ್ತಿಯ ನೆಲೆಗಳು, ಆಗ ಇದ್ದ ವೈದಿಕ ಪಂಥದ ಏಕಸ್ವಾಮ್ಯಕ್ಕೆ ಅದು ವಿರೋಧವೇ ಆಗಿತ್ತು. ಅದಕ್ಕೆ ಮುಖ್ಯವಾಗಿರುವ ಒಂದು ಉದಾಹರಣೆ ಏನು ಅಂದ್ರೆ ವಿಜಯನಗರ ಕಾಲಘಟ್ಟದಲ್ಲೇನೇ ಎಲ್ಲರ ಮನೆಗಳಲ್ಲಿ ದಾಸಯ್ಯಗಳಾಗುವಂಥ ಒಂದು ಪ್ರವೃತ್ತಿ ಶುರುವಾಯ್ತು, ಅದು ಮೊದಲನೆಯದು. ದಾಸಯ್ಯಗಳು ಅಂತ ಹೇಳಿದರೆ, ಪ್ರತೀ ಜಾತಿಗೂ ತನ್ನದೇ ಆದ ಪುರೋಹಿತರು. ನೀವು ಬ್ರಾಹ್ಮಣರನ್ನೂ ಕರೀಬೇಕಾದ್ದಿಲ್ಲ, ಲಿಂಗಾಯತರನ್ನೂ ಕರೀಬೇಕಾದ್ದಿಲ್ಲ. ದಾಸಪ್ಪಗಳು ಬಂದು ಕ್ರಿಯಾವಿಧಿಯನ್ನ ನಡೆಸಬಹುದು ಅನ್ನುವುದೊಂದು. ಎರಡನೆಯದು ತಿರುಪತಿ ತಿಮ್ಮಪ್ಪನ ಪ್ರಾಬಲ್ಯ. ತಿರುಪತಿ ತಿಮ್ಮಪ್ಪ ಅನ್ನೋದು ವೈದಿಕ ದೇವರಲ್ಲ. ಆತ ವೇದೋಕ್ತ ದೇವರಲ್ಲ. ಶಾಸ್ತ್ರಗಳಲ್ಲಿ ಕೂಡ ಅವನ ಪ್ರಸ್ತಾಪ ಇಲ್ಲದಿರುವಂತಹ ದೇವರು. ಎಲ್ಲ ಜಾತಿಯವರೂ ಸಮಾನವಾಗಿ ಹೋಗಿ ನಡೆದುಕೊಳ್ಳಬಹುದಾಗಿರುವಂತಹ ಒಬ್ಬ ದೇವರು. ಧರ್ಮಸ್ಥಳದ ಮಂಜುನಾಥನ ರೀತಿ. ತಿರುಪತಿ ತಿಮ್ಮಪ್ಪನ ಪ್ರಾದುರ್ಭಾವವೇ ಆ ಕಾಲಘಟ್ಟದಲ್ಲಿ ಮೂಡಿಬಂದ ಶೂದ್ರ ಜಾತಿಗಳ ಆಧ್ಯಾತ್ಮಿಕ–ಧಾರ್ಮಿಕ ವಿಜಯದ ಸಂಕೇತ. ಆ ದೇವರ ಮುಂದೆ ಉಳಿದ ದೇವತೆಗಳ ಪ್ರಾಬಲ್ಯ ಬಿದ್ಹೋಗುತ್ತೆ. ಅದೇ ವಿಷಯವನ್ನು ನಾವು ಮಹಾರಾಷ್ಟ್ರದ ಸಂದರ್ಭದಲ್ಲಿ ನೋಡಿದರೆ ಪಾಂಡುರಂಗ ವಿಠಲ. ಅವನು ವಿಟ್ಟ – ಬೀರೋಬ ಅವನೂ ಕೂಡ ವೇದೋಕ್ತನಾದ ದೇವರಲ್ಲ. ಅಂದ್ರೆ ನಾವು ಈ ಭಕ್ತಿ ಪಂಥವನ್ನು ಪದಗಳ ಆಧಾರದಲ್ಲಿ, ಅದರ ಆಕೃತಿಯಲ್ಲಿ ಆಲೋಚನೆ ಮಾಡದೆ, ಅದರ ಪ್ರಕ್ರಿಯೆಯಲ್ಲಿ ಬಂದಿರುವ ಬದಲಾವಣೆಗಳನ್ನ ನೋಡಿದರೆ ಮಾತ್ರವೇ ಅದು ವೈದಿಕತೆಯ ವಿರುದ್ಧವಾಗಿದ್ದದ್ದು ಹೇಗೆ ಅನ್ನೋದು ತಿಳಿಯುತ್ತೆ.

ಅದಕ್ಕೆ ಇನ್ನೂ ಒಂದು ನಿದರ್ಶನವಿದೆ. ಕನಕನೂ ಕೃಷ್ಣ ಭಕ್ತನೇ, ಕೆಲವರು ಹೇಳುವ ಪ್ರಕಾರ ಅವನು ವ್ಯಾಸರಾಯರ ಶಿಷ್ಯನೂ ಆಗಿದ್ದ, ದೀಕ್ಷೆಯೂ ಪಡೆದಿದ್ದ. ಆದ್ರೆ ಯಾಕೆ ಉಡುಪಿಯ ಕೃಷ್ಣನನ್ನು ದರ್ಶನ ಮಾಡೋದಕ್ಕೆ ಒಳಗಡೆ ಬಿಡೋದಿಲ್ಲ? ಆದ್ದರಿಂದ ಕನಕ ವಿವರಿಸ್ತಿರುವಂತಹ ಭಕ್ತಿಪಂಥಕ್ಕೂ ಮಾಧ್ವರು ಹೇಳ್ತಾ ಇರುವ ವೈಷ್ಣವ ಪಂಥಕ್ಕೂ ಒಂದು ಮೂಲಭೂತ ವಿರೋಧಾಭಾಸವೇ ಇದೆ. ಅಲ್ಲಿ ಹೋದಾಗ್ಲೂ ಕೂಡ ಪ್ರಾಬಲ್ಯದ ಪ್ರಶ್ನೆಯೇ ಅಡ್ಡಬಂದಿರೋದು. ವೈದಿಕ ಹಿಡಿತದಲ್ಲಿರುವ ಆ ಕೃಷ್ಣನನ್ನು ಬಿಡಿಸಬೇಕು ಅನ್ನುವ ಸಂಘರ್ಷ ಇದ್ದುದಕ್ಕಾಗಿಯೇ ಆ ದೇವರೇ ತಿರುಗಿ ನಿಂತ ಅನ್ನುವಂತ ಪ್ರತೀತಿಗಳು ಜನಮಾನಸದಲ್ಲಿ ಹುಟ್ಟಿರಬೇಕು. ಅದಕ್ಕಿರುವಂತಹ ಐತಿಹಾಸಿಕ ವಿವರಣೆಗಳು ಬೇರೆ ಏನೇ ಇರಲಿ. ಆದ್ರೆ ಒಂದು ಜನಸಮುದಾಯ ಕಟ್ಟೋ ಕತೆಗಳಲ್ಲಿ ಇವರು ವೈದಿಕರ ಪರವಾಗಿರುವ ಮತ್ತು ಅದನ್ನು ಪುನರುಜ್ಜೀವನಗೊಳಿಸುವ ಕೆಲಸವನ್ನ ಮಾಡೋರಾಗಿದ್ರೆ ಇವರಿಗೆ ಸಿಗಬೇಕಾದ ಮಾನ್ಯತೆ ಬೇರೆ ಬಗೆಯಲ್ಲಿರುತ್ತಿತ್ತು. ಇವರು ರಾಜಾಶ್ರಯವನ್ನು ಒಪ್ಪಲೇ ಇಲ್ಲ. ಬೇರೆ ಎಲ್ಲಾ ವೈಷ್ಣವ ಪಂಥೀಯರು, ವ್ಯಾಸರಾಯರು ಮತ್ತವರ ಶಿಷ್ಯರು ರಾಜರಿಂದ ಉಂಬಳಿಯನ್ನು ಪಡೆದಿದ್ದು ಮಾತ್ರವಲ್ಲದೆ, ಮಠಗಳನ್ನೂ ಸ್ಥಾಪಿಸಿದರು.

ಕನಕದಾಸ ರಾಜಾಶ್ರಯಕ್ಕೂ ಹೋಗ್ಲಿಲ್ಲ. ಉಂಬಳಿಯನ್ನೂ ಪಡೀಲಿಲ್ಲ. ಶಿಷ್ಯ ಪರಂಪರೆಯ ಮಠಗಳನ್ನು ಕೂಡ ತಯಾರು ಮಾಡಲಿಲ್ಲ. ಮುಕ್ತವಾಗಿ ಗ್ರಾಮಗಳಲ್ಲಿ ಓಡಾಡಿ, ಭಿಕ್ಷೆ ಬೇಡುವ ಒಂದು ಪ್ರವೃತ್ತಿಯ ಮುಖಾಂತರವಾಗಿಯೇ ತಮ್ಮ ತತ್ವಗಳನ್ನು ಅವರು ಪ್ರಚಾರ ಮಾಡಿದರು ಮತ್ತು ಅವು ಹೆಚ್ಚು ನೆಲೆಗೊಂಡಿದ್ದೂ ಕೂಡ ಹೆಚ್ಚಿನ ಮಟ್ಟಿಗೆ ಹೆಣ್ಣು ಮಕ್ಕಳಲ್ಲಿ. ಕೀರ್ತನಕಾರರ ಕೀರ್ತನೆಗಳನ್ನ ಉಳಿಸಿಕೊಂಡು ಬಂದಿದ್ದು ಬಹುಮಟ್ಟಿಗೆ ಹೆಣ್ಣು ಮಕ್ಕಳು. ಆನಂತರ ಅದನ್ನ ಯಾರೋ ಸಂಗ್ರಹಿಸಿ ಬರಹ ರೂಪಕ್ಕಿಳಿಸಿರೋದು. ಈಗ್ಲೂ ಕೂಡ ದಾಸರ ಪದಗಳನ್ನು ಹಾಡೋರ್ನ ನೋಡಿ– ಹೆಚ್ಚಿನ ಸಲ ಅದು ನಮ್ಮ ಹೆಣ್ಣು ಮಕ್ಕಳೇ. ಶಿಶುನಾಳ ಷರೀಫರ ಸೂಫಿ ಹಾಡುಗಳನ್ನು ಆ ಹೆಣ್ಣು ಮಕ್ಕಳು ಬಳಸಿದರೆ ಏನರ್ಥವೋ ಇವುಗಳನ್ನ ಬಳಸಿದರೂ ಅದೇ ಅರ್ಥ.

**ಎರಡನೇ ಪ್ರಶ್ನೆಗೆ ಉತ್ತರ :**

ಆಕೃತಿಯಲ್ಲಿ ಒಡೆದು ಕಾಣುವ ಭೇದಗಳಿಲ್ಲದೇ ಇರಬಹುದು. ತಾತ್ವಿಕ ನೆಲೆಯಲ್ಲಿ ಮತ್ತು ಕಾರ್ಯಾಚರಣೆಯಲ್ಲಿ ಪೂರ್ತಿ ಪ್ರತಿರೋಧವನ್ನೇ ಅವರು ಒಡ್ಡಿದರು. ಈ ದಾಸಕೂಟದ ಯಾವುದೇ ಸದಸ್ಯರು ಬ್ರಾಹ್ಮಣ ಪೂಜಾರಿಗಳಿರುವ ದೇವಸ್ಥಾನಗಳಿಗೆ ಹೋಗಿದ್ದೇ ಕಡಿಮೆ. ಅದನ್ನೂ ನಾವು ನೋಡ್ಬೇಕು. ಚಲುವನಾರಾಯಣ, ಬೇಲೂರು ಚನ್ನಕೇಶವ, ಕಾಗಿನೆಲೆಯಾದಿ ಕೇಶವ ಇತ್ಯಾದಿ. ಅವರು ಪ್ರತಿಪಾದನೆ ಮಾಡ್ತಾಯಿರೋ ವಿಧಾನದಲ್ಲಿ ಮೇಲುಕೋಟೆ ಚಲುವನಾರಾಯಣ, ಕಾಗಿನೆಲೆಯಲ್ಲಿರುವ ಆದಿಕೇಶವ ಇವರ್‍ಯಾರೂ ಕೂಡ ವಿಷ್ಣುವಿನ ಅವತಾರಗಳಾಗಿ ಅಲ್ಲ. ಇವರು ಪೂಜೆ ಮಾಡ್ತಾ ಬಂದಿರುವ ನೆಲೆಗಟ್ಟೇ ಬೇರೆ ಇದೆ.ಅಂದ್ರೆ ಬರೀ ಕೆಲವು ಕೀರ್ತನೆಗಳ ಆಧಾರದಲ್ಲೇ ಜಾತಿ ಶ್ರೇಷ್ಠತೆಗಳನ್ನ ಅವರು ವಿರೋಧಿಸಿದರು ಅಂತ ನಾವು ಹೇಳೋಕಾಗಲ್ಲ.

ನಾನು ಹೇಳ್ತಾ ಇರೋದು ಈ ರೀತಿಯಾಗಿರುವ ಸನ್ನಿವೇಶ ಆ ಸಂದರ್ಭದಲ್ಲಿ ಉಂಟಾದ ಸಾಮಾಜಿಕ ಪರಿಣಾಮಗಳ ಹಿನ್ನೆಲೆಯಲ್ಲೂ ಕೂಡ. ನೇಕಾರರೂ ಆ ಕಾಲಘಟ್ಟದಲ್ಲೇ ತಾವು ಕೂಡ ಶ್ರೇಷ್ಠ ಕುಲದವರು ಅಂತ ಪ್ರತಿಪಾದಿಸಿದ್ದು ಮತ್ತು ಜನಿವಾರ ಧರಿಸಿದ್ದು – ಪಾಂಚಾಳರ ರೀತಿಯಲ್ಲೇ. ಅವರೆಲ್ಲರಿಗೂ ಆಶ್ರಯ ಕೊಟ್ಟಿದ್ದು ಇದೇ ಕೃಷ್ಣಪಂಥ, ಭಕ್ತಿ ಪಂಥ.

**ಮೂರನೇ ಪ್ರಶ್ನೆಗೆ ಉತ್ತರ :**

ವೈದಿಕ ತಾತ್ವಿಕತೆ ಅನ್ನೋದನ್ನ ನಾವು ಆಚರಣಾತ್ಮಕವಾಗಿರುವ ಅಥವಾ ಆಧ್ಯಾತ್ಮಿಕವಾಗಿರುವ ಕೆಲವು ಪರಿಕರಗಳ ಹೆಸರಲ್ಲಿ ಗ್ರಹಿಸಿದರೆ, ಆ ಶ್ರೇಷ್ಠತೆಯನ್ನು ಏಕಸ್ವಾಮ್ಯವನ್ನು ಒಡೆಯೋದಕ್ಕೆ ಪ್ರಯತ್ನ ಮಾಡೋದು ಅನ್ನೋದು ಆ ಕಾಲ ಘಟ್ಟದ ಮಟ್ಟಿಗೆ ಬಹಳ ದೊಡ್ಡ ಮುನ್ನಡೆ. ಏಕಸ್ವಾಮ್ಯವನ್ನು ಒಡೆಯೋದು, ಅದನ್ನ ತಾವು ವಶಪಡಿಸಿಕೊಳ್ಳಬೇಕು ಅನ್ನುವುದರಲ್ಲಿ ಜಾತಿಗಳ ಮೇಲು ಕೀಳು ಇರಬೇಕು ಅನ್ನೋ ಪ್ರತಿಪಾದನೆ ಇಲ್ಲ. ಕೆಲವು ಮಾತ್ರ ಶ್ರೇಷ್ಠ ಜಾತಿಗಳು, ಉಳಿದವು ಕೆಳ ಜಾತಿಗಳು ಅನ್ನೋ ಪ್ರತಿಪಾದನೆ ಅವರಲ್ಲಿಲ್ಲ. ಅಂದ ಮೇಲೆ ವೈದಿಕ ಸಂಸ್ಕೃತಿಗೆ ಅದು ತದ್ವಿರುದ್ಧವೇ ತಾನೇ. ಯಾಕಂದ್ರೆ ಅದೊಂದೇ ಬಹಳ

ಮುಖ್ಯವಾಗಿರುವ ಅಸ್ತ್ರ. ನಮಗೂ ವೈದಿಕರಿಗೂ ಇರುವ ಅಂತರ ಏನು ಅಂತ ಹೇಳಿದ್ರೆ ಶ್ರೇಣೀಕರಣದ ಪ್ರತಿಪಾದನೆ ಮತ್ತು ನಿರಾಕರಣೆ. ಇನ್ನುಳಿದ ಹಾಗೆ ಜಾತಿ ಸಂಸ್ಕೃತಿಗಳು, ದೈವ ಸಂಸ್ಕೃತಿಗಳು ಸಾವಿರ ತರ ಇವೆ. ಶ್ರೇಣೀಕರಣವನ್ನ ಪ್ರತಿಪಾದಿಸುವ ಬ್ರಾಹ್ಮಣ ಸಂಸ್ಕೃತಿಗೆ ತದ್ವಿರುದ್ಧ ಆಗಬೇಕು ಅಂತ ಹೇಳಿದರೆ ಶ್ರೇಣೀಕರಣವನ್ನು ನಿರಾಕರಿಸಬೇಕು. ಅದು ನಿರಾಕರಣೆ ಆಗಿದೆಯೋ ಇಲ್ಲವೋ ಭಕ್ತಿ ಪಂಥದಲ್ಲಿ ಅದರಲ್ಲೂ ಮುಖ್ಯವಾಗಿ ಕನಕದಾಸರಲ್ಲಿ ಅಂತ ನಾವು ನೋಡಿದ್ರೆ ನಮಗೆ ಅರ್ಥಮಾಡಿಕೊಳ್ಳೋದು ಸುಲಭ ಆಗುತ್ತೆ.

**ನಾಲ್ಕನೇ ಪ್ರಶ್ನೆಗೆ ಉತ್ತರ :**

ಅಂದ್ರೆ ನೀವು ಹೇಳೊ ರೀತಿಯಲ್ಲಿ ಅವರದೇ ಪರಿಕರವನ್ನು ಬಳಸಿ ಅವರನ್ನು ಸೋಲಿಸುವುದು ಕಷ್ಟ ಇರಬಹುದು ನಮಗೆ. ಆದ್ರೆ ಕನಕದಾಸರ ಆಶಯವನ್ನು ನಾವು ಅನುಮಾನಿಸೋದು ಕಷ್ಟ. ಅಂದ್ರೆ ಅವರು ಆರಿಸಿಕೊಂಡ ಉಪಕರಣ ಇದೆಯಲ್ಲ ಆ ಉಪಕರಣಗಳಿಗೆ ಇವತ್ತಿನ ಜಿಜ್ಞಾಸೆಗೆ ಅದಕ್ಕೆ ಅದರದೇ ಆಗಿರುವ ಮಿತಿಗಳಿವೆ. ಅವರು ಆ ಕಾಲದಲ್ಲೇ 'ನೀನು ಮಾತ್ರ ಏನು ಪೂಜೆ ಮಾಡ್ತೀಯ ನಾವೂ ಪೂಜೆ ಮಾಡ್ತೀವಿ' ಅನ್ನೋದು ಅದು ಬೇರೆಯದೇ ರೀತಿಯ ಪ್ರತಿಪಾದನೆ. ಜನಿವಾರ ಅಂದ್ರೆ ನಮಗೇನನ್ಸುತ್ತೆ ಜನಿವಾರನೇ ತೆಗೆದುಬಿಡ್ಬೇಕು, ಯಾರೂ ಹಾಕ್ಬಾರ್ದು ಅಂತ. ಅದು ಅಷ್ಟು ಮಾತ್ರ ಅಲ್ಲ. ಯಾಕಂದ್ರೆ, ಅದನ್ನು ಅಂಬೇಡ್ಕರ್ ಅವರು ಯಾವುದೋ ಒಂದು ಸಂದರ್ಭದಲ್ಲಿ ಹೇಳಿದ್ದರು. ನಮ್ಮ ದಲಿತರನ್ನೂ ಕೂಡ ಪೂಜಾರಿಗಳನ್ನು ಮಾಡಿ ಅಂತ ಹೇಳಿದ್ರೆ ಅವರೂ ಕೂಡ ಪುರೋಹಿತಶಾಹಿ ಆಗಲಿ ಅಂತ ಅಲ್ಲ. ದಲಿತರಿಗೆ ನಿರಾಕರಿಸಲ್ಪಟ್ಟಿರುವ ಮಾನವತಾ ಹಕ್ಕನ್ನು, ಸಮಾನತಾ ಹಕ್ಕನ್ನು ಮಾತ್ರ ಕೇಳ್ತಾಯಿದೀನಿ ದೇವಸ್ಥಾನ ಪ್ರವೇಶದಲ್ಲಿ. ಪೂಜೆ ಮಾಡುವ ಹಕ್ಕನ್ನು ಕೇಳೋದು ಸಾಮಾಜಿಕ ಸಮಾನತೆಯನ್ನು ಪ್ರತಿಪಾದಿಸುವ ಇನ್ನೊಂದು ವಿಧ ಅಂದಿದ್ದರು. ಆದೇ ರೀತಿ ಕೆಳಜಾತಿಗಳು ಜನಿವಾರವನ್ನ ಧರಿಸೋದಾಗ್ಲಿ, ತಮ್ಮ ದೇವರನ್ನು ಭಕ್ತವತ್ಸಲನನ್ನಾಗಿ ಮಾಡಿ ಪೂಜಾರಿಯ ಮಧ್ಯಸ್ತಿಕೆಯೇ ಬೇಡ ಅಂತ ಹೇಳುವ ಭಕ್ತಿ ಪಂಥದ ನಿಲುವೇ ಬಹಳ ದೊಡ್ಡ ರೆವಲ್ಯೂಷನ್ ಆ ಕಾಲಕ್ಕೆ.

**ಪ್ರಶ್ನೆ :**

ಒಂದೊಂದು ಸಲ ಹಾಗಾಗುತ್ತೆ. ಯಾವುದೋ ಒಂದು ಬಹಳ ದೊಡ್ಡ ಐಕಾನ್ ನಮಗೆ ಸಿಕ್ಕಾಗ ನಮ್ಮ ಇಂದಿನ ಅಪೇಕ್ಷೆಗಳೂ ಕೂಡ ಅದರ ಮೇಲೆ ಆರೋಪಿಸಲ್ಪಡುವ ಸಾಧ್ಯತೆಗಳು ಅಥವಾ ಅದನ್ನ ಆರೀತಿಯಾಗಿ ನಾವು ಗ್ರಹಿಸುವ, ಓದಿಕೊಳ್ಳುವ ಕ್ರಮಗಳು ಇರುತ್ತೆ. ಅಷ್ಟು ಮಾತ್ರಕ್ಕೆ ನಾವು ಆ ಕಾಲದಲ್ಲಿ ಬಂದಿರುವಂತಹವರು ಪ್ರತಿಪಾದನೆ ಮಾಡಿದಂತಹ ಸಮಾನತೆಯ ಆಶಯಗಳನ್ನು ನಮ್ಮ ಪರಂಪರೆ ಅಲ್ಲ ಅಂತ ಹೇಳೋಕಾಗಲ್ಲ. ನಾವದರ ವಾರಸುದಾರರು ಅಂತಲೇ ಹೇಳ್ಬೇಕು.

**ಪ್ರಶ್ನೆ :**

ಆ ಕಾಲಘಟ್ಟದಲ್ಲಿ ಬಹಳ ಮುಖ್ಯವಾಗಿ ಬೇರೆ ಬೇರೆ ಚಿಂತಕರು ಹೇಳೋದೇನು ಅಂದ್ರೆ ಸಮಾಜವನ್ನು ನಿರ್ದೇಶಿಸುವುದು ಮುಖ್ಯವಾಗಿ ಧಾರ್ಮಿಕ ಸ್ವರೂಪವೇ ಆಗಿದ್ರೆ, ದೈವ ಸ್ವರೂಪವೇ ಆಗಿದ್ರೆ ಅದರ ವಿರುದ್ಧ ಬರುವ ಪ್ರತಿಭಟನೆಯೂ ಕೂಡ ಧಾರ್ಮಿಕ ಸ್ವರೂಪದಲ್ಲೇ ದೈವ ಸ್ವರೂಪದಲ್ಲೇ ಬರುತ್ತೆ. ಯಾಕಂದ್ರೆ ಲಾಂಗ್ವೇಜ್ ಅವರಿಗೆ ಈಕ್ವಲ್ ಆಗ್ಬೇಕಲ್ಲ. ಆಧ್ಯಾತ್ಮಿಕತೆಗೆ ಮಾಡಿದರೆ ಪರ್ಯಾಯ ಆಧ್ಯಾತ್ಮಿಕತೆ. ನಾರಾಯಣಗುರು ಆಗ್ಲಿ, ರಮಣಮಹರ್ಷಿಗಳಾಗ್ಲಿ ಆಧ್ಯಾತ್ಮಿಕತೆಯನ್ನು ಅಲ್ಲಗಳೀಲಿಲ್ಲ. ಪೂಜೆಗಳನ್ನ, ಹರಕೆಗಳನ್ನ, ವ್ರತಗಳನ್ನ ಅಲ್ಲಗಳಿದರೆ ಹೊರತು ದೇವರ ಅಸ್ತಿತ್ವವನ್ನೇ ಅಲ್ಲಗಳೆದಿಲ್ಲ. ಆದ್ದರಿಂದ ಅವರು ಬಳಸುವ ಉಪಕರಣಗಳು ಆ ಕಾಲಘಟ್ಟದ ಅವರ ಎದುರಾಳಿ ಶಕ್ತಿ ಏನನ್ನು ಬಳಸುತ್ತದೋ ಅದರ ಮುಖಾಂತರವಾಗಿ ಒಡೆಯೋಕೆ ಟ್ರೈ ಮಾಡ್ತರೆ. ಕೃಷ್ಣನನ್ನು ಆಯ್ಕೆ ಮಾಡಿಕೊಳ್ಳೋದೇ ಬಹಳ ಕಾನ್ಷಿಯಸ್ ಆದದ್ದು ಅಂತ ನನಗನ್ನಿಸುತ್ತೆ. ಅವನು ವೇದಗಳ ದೇವರೇ ಅಲ್ಲ. ಇವರು ಏನು ಪಲ್ಟಿ ಹೊಡೆದ್ರೂ ಕೂಡ ಎಷ್ಟು ತರ ವಿವರಿಸಿದರೂ ಅವನು ವಿಷ್ಣು ಅಲ್ಲ. ಈಗ ತಿರುಪತಿ ತಿಮ್ಮಪ್ಪನಿಗೆ ಶ್ರೀನಿವಾಸ ಅಂತ ಎಷ್ಟು ಹೇಳಿದರೂ ವೆಂಕಟೇಶ್ವರನೇ ಅವನು. ತಿಮ್ಮ ಅಂತನೇ ಅವನ ಹೆಸರು. ತಿಮ್ಮ ಅನ್ನುವ ಹೆಸರು ಯಾವ ಬ್ರಾಹ್ಮಣ ದೇವರಿಗಿದೆ? ಅವನು ಹುಟ್ಟಿರೋದು ಹುಣಸೆ ತೋಪಿನಲ್ಲಿ. ಅವನ ಪೂಜಾರಿಕೆ ಬ್ರಾಹ್ಮಣರಿಗೆ ಮುಜರಾಯಿ ಟೈಂನಲ್ಲಿ ಬಂದಿದೆ ಅಂತ ಕಾಣುತ್ತೆ. ಅಲ್ಲಿಯವರೆಗೂ ದಿನಾ ಬೆಳಗ್ಗೆ ಮೊದಲ ಪೂಜೆ ಮಾಡೋ ಹಕ್ಕಿರೋದು ಗೊಲ್ಲರಿಗೇನೆ. ಆರೀತಿಯಾದ ಅವೈದಿಕ ದೇವಸ್ಥಾನ ಕೇಂದ್ರಗಳು ಅಷ್ಟು ಪ್ರಾಚುರ್ಯಕ್ಕೆ ಬರ್ಬೇಕು ಅಂತ ಹೇಳಿದ್ರೆ, ಸಂಘಟಿತವಾಗಿರುವ, ಧೃವೀಕೃತವಾಗಿರುವ ಆಧ್ಯಾತ್ಮಿಕ ನೆಲೆಯ, ದೈವಿಕ ನೆಲೆಯ ಹಕ್ಕುದಾರಿಕೆ ಅದು. ನಾವು ದೇವರನ್ನೇ ಪ್ರಶ್ನೆ ಮಾಡ್ತೀವಿ ಅಂದ್ರೆ ಅದು ಬೇರೆ ಆಗುತ್ತೆ. ದೇವರನ್ನೇ ಪ್ರಶ್ನೆ ಮಾಡ್ತೀವಿ ಅನ್ನೋದು ನಮ್ಮ ಕಾಲಘಟ್ಟದ ಮಾತು. ಅವರ ಮೇಲೆ ಅದನ್ನು ಆರೋಪಿಸೋದು ಬಹುಶಃ ತಪ್ಪೋ ಏನೋ. ಆತ್ಮವಾದವೂ ಕೂಡ ಬಹಳ ಗೊಂದಲ ಹುಟ್ಟಿಸುವಂತಿದೆ.

ಈ ಆತ್ಮವಾದವನ್ನು ಭಾರತೀಯ ತತ್ವಶಾಸ್ತ್ರಕ್ಕೆ ಪರಿಚಯಿಸಿದ್ದು ಈ ವೇದಗಳಾ? ಬುದ್ಧನಾ, ಈ ಕರ್ಮವಾದವಾ? ಅಂದ್ರೆ ನಾವು ಅದನ್ನ ಇನ್ನೂ ಪರಿಶೀಲನೆ ಮಾಡುವ ಹಂತದಲ್ಲೇ ಇದ್ದೀವಿ. ಅತ್ಯಂತ ಆದಿಮವಾಗಿರುವ ಸಂಸ್ಕೃತಿಗಳನ್ನು ನೋಡಿದರೆ, ಅವರ ಪೂರ್ವಿಕರ ಆತ್ಮಗಳು ಅಲ್ಲೇ ಇಷ್ಟಿಷ್ಟು ದಿವಸ ಓಡಾಡ್ತಿದಾವೆ ಅನ್ನೋ ಕಲ್ಪನೆಗಳು ಇವೆ. ಅವ್ರು ಪೂಜೆ ಶುರು ಮಾಡಿದ್ದೇ ಪಿತೃಗಳ, ಪೂರ್ವಿಕರ ಪೂಜೆಗೋಸ್ಕರ. ಮೊದಲಲ್ಲಿ ಪಿತೃಪೂಜೆ, ಆಮೇಲೆ ಅವ್ರು ದೇವರಾಗೋದು. ಹಂಗಿದ್ದಾಗ ಆತ್ಮವಾದವನ್ನು ಸಾರಾಸಗಟಾಗಿ ಅದು ಆರ್ಯರಿಂದಲೋ ಅಥವಾ ವೈದಿಕರಿಂದಲೋ, ವೇದಗಳಿಂದಲೋ ಪ್ರಣೀತವಾದ ವಾದ ಅಂತ ಹೆಂಗೆ ಹೇಳೋದು?

**ಪ್ರಶ್ನೆ :**

ಈಗ ಏನಂದ್ರೆ ಚರಿತ್ರೆಯಲ್ಲಿ ಬರುವ ಆ ಬಗೆಯ ಸ್ಥಿತ್ಯಂತರವನ್ನು ನಾವು ಬೇರೆ ತರ ಚರ್ಚೆ ಮಾಡ್ಬೇಕು. ಮಾತೃಮೂಲೀಯ ದೇವರುಗಳನ್ನು ಬಿಟ್ಟು ಪುರುಷ ದೇವರುಗಳನ್ನು ಅಥವಾ ತಿರುಪತಿ ತಿಮ್ಮಪ್ಪನ ತರ, ಪಾಂಡುರಂಗ ವಿಠಲನ ತರದವರನ್ನು, ಬೀರಪ್ಪನನ್ನು ಅವರು ಪೂಜೆ ಮಾಡೋಕೆ ಆರಂಭಿಸಿದ್ದನ್ನ, ಆನಂತರ ಬಂದ ಭಕ್ತಿ ಪಂಥದವರು ಬೀರಪ್ಪನನ್ನೂ ಪೂಜೆ ಮಾಡ್ಬೇಡ್ರಿ ಅಂತ ಹೇಳಿದ್ದನ್ನು, ಶರಣರೆಲ್ಲ ಮರ ದೈವ, ಮಡಕೆ ದೈವ ಅಂತ ಟೀಕಿಸಿದ್ರು ಅವು ಬೇರೆ ಪಾತಳಿಯ ಮಾತು. ಅದರಿಂದ ಮೋಸ ವಂಚನೆ ಮಾಡೋದು ಭಕ್ತಿ ಪಂಥದ ಉದ್ದೇಶ ಅಲ್ಲ. ನಾವದನ್ನು ಮತ್ತೊಂದು ಸಲ ಸರಿಯಾಗಿ ಗ್ರಹಿಸಬೇಕು ಅನ್ಸುತ್ತೆ.

**ಪ್ರಶ್ನೆ :**

ಆಗಲ್ಲ. ಆದ್ರೆ ನಮಗೀಗ ಸಧ್ಯಕ್ಕೆ ಪದಗಳಿಲ್ಲ. ಆ ನೆಲೆಗೆ ಏನೋ ಒಂದು ಹೆಸರಿಟ್ಟು ಹೇಳ್ಬೇಕಲ್ಲ. ಈ ಆರ್ಯ ಮತ್ತು ದ್ರಾವಿಡ ಅನ್ನುವವು ಕೂಡ ಬಹಳ ಪ್ರಾಬ್ಲಮೆಟಿಕ್ ಆಗಿರುವಂತ ಶಬ್ದಗಳೇ. ಈಗ ನಾನು ದೇಸೀ ಪದಗಳ ಪರ್ಯಾಯ ಹೇಳ್ಬೇಕು ಅಂದ್ರೆ ನನಗಿನ್ನೂ ಅಂತಹವು ಸಿಕ್ಕಿಲ್ಲ. ಅಂದ್ರೆ ಸೂಕ್ತವಾದ ಅಥವಾ ಒಪ್ಪಿಗೆಯಾಗಿರುವಂತ ಪದಗಳು ಸಿಕ್ತಾಯಿಲ್ಲ.

**ಪ್ರಶ್ನೆ :**

ನಮಗೆ ಸೂಕ್ತವಾದ ಪದಗಳು ಸಿಕ್ತಾಯಿಲ್ಲ. ಈ ವಿಂಗಡಣೆಯನ್ನು ವಿವರಿಸುವುದಕ್ಕೆ ನಾವು ಯಾವ ಪದಗಳನ್ನು ಬಳಕೆ ಮಾಡ್ಬೇಕು ಅನ್ನೋದು ಒಂದು ತೊಡಕೇ ನಿಜ. ವೈದಿಕ ಅನ್ಬೇಕಾದ್ರೆ ಜಾತಿ ಶ್ರೇಣೀಕರಣವನ್ನು ಆಧರಿಸಿದ, ಕೆಲವರನ್ನು ಕೆಳಜಾತಿಗೆ ತಳ್ಳಿರುವಂತ ಪ್ರಕ್ರಿಯೆಯನ್ನು ಸೂಚಿಸೋದಕ್ಕೆ ಬಳಕೆಯಾಗಿರುವ ಶಬ್ದ ಅದು. ಅದರಲ್ಲಿ ಹಾಗಾದ್ರೆ ಬರೀ ಬ್ರಾಹ್ಮಣರೇ ಪಾಲ್ಗೊಂಡರಾ? ಅದರ ಜೊತೆ ಇನ್ಯಾವ ಆಳುವ ವರ್ಗಗಳು ಪಾಲ್ಗೊಂಡವು? ಇವೆಲ್ಲವಕ್ಕೆ ಸೂಕ್ತವಾದ ಬೇರೆ ಪದಗಳನ್ನು ಹುಟ್ಟಿಸ್ಬೇಕು ನಾವು.

**ಪ್ರಶ್ನೆ :**

ಆರ್ಯ–ದ್ರಾವಿಡ ಅನ್ನೋದು ಅಷ್ಟು ಸೂಕ್ತವಾದ ವಿಂಗಡಣೆ ಅಲ್ದೇ ಇರಬಹುದು. ನಾನು ಅನುವಾದ ಮಾಡಿರುವ ಶಂಕರ ಮೊಕಾಶಿ ಪುಣೇಕರ ಅವರ 'ಮಧ್ಯಯುಗೀನ ಭಾರತ: ಅಂತ್ಯಜರ ತತ್ವ ಚಿಂತನೆ' ಪುಸ್ತಕದಲ್ಲೂ ಅವರು ಅದನ್ನೇ ಹೇಳ್ತಾರೆ. ಇಲ್ಲಿಗೆ ಬಂದ ಆರ್ಯರು ದ್ರಾವಿಡರನ್ನು ಎಷ್ಟರ ಮಟ್ಟಿಗೆ ಆರ್ಯೀಕರಿಸಿದರೋ ಅದಕ್ಕಿಂತ ಹೆಚ್ಚು ಪ್ರಮಾಣದಲ್ಲಿ ಆರ್ಯರು ದ್ರಾವಿಡೀಕರಿಸಲ್ಪಟ್ಟರು ಅಂತ. ನನಗೂ ಕೂಡ ಆ ಮಾತು ನಿಜ ಅನ್ನಿಸ್ತಿದೆ. ಪೂಜೆಯೇ ಮಾಡದಿರೋ ಬ್ರಾಹ್ಮಣರು, ಅವರಲ್ಲಿ ಮೂರ್ತಿ ಪೂಜೆ ಇರಲಿಲ್ಲ. ಪೂಜೆ ಮಾಡುವವರನ್ನು ಭಾಗವತರು ಅಂತ ಕರೆದು ಬ್ರಾಹ್ಮಣರು ಬಹಿಷ್ಕರಿಸುತ್ತಿದ್ದ ಕಾಲವೂ ಇತ್ತು. ಈಗ ನೋಡಿದರೆ ಎಲ್ಲಾ ದೇವರುಗಳಿಗೂ ಅವರೇ ಪೂಜಾರಿ ಗಳಾಗೋದ್ರು ಅದು ಅವರ ತಂತ್ರಗಾರಿಕೆಯ ಭಾಗವೇ ಇರಬಹುದು, ಅದು ಬೇರೆ ವಿಷಯ.

**ಪ್ರಶ್ನೆ :**

ಭಕ್ತಿ ಪಂಥ ವೈದಿಕ ಪಾರಮ್ಯವನ್ನ ಒಪ್ಪುವ ಕ್ರಿಯೆ ಅಲ್ಲ. ಅದನ್ನು ಒಡೆಯುವ ಕ್ರಿಯೆ ಅದು.

**ಪ್ರಶ್ನೆ :**

ನಯವಾದ ವಿಧಾನದಲ್ಲಿ ಪರಿಷ್ಕರಿಸೋಕೆ ಶುರು ಮಾಡಿದ್ರು ಅನ್ನೋದು ಅಷ್ಟು ಸುಲಭದ ಕೆಲಸ ಅಲ್ಲ. ಯಾಕಂದ್ರೆ ನೀವು ಅಸ್ತಿತ್ವದಲ್ಲಿರುವ ಯಾವುದೇ ಪಟ್ಟಭದ್ರ ಹಿತಾಸಕ್ತಿಯನ್ನು, ನೀವು ನಯವಾಗಿ ಹೇಳ್ತಿರೋ, ಗಟ್ಟಿಯಾಗಿ ಹೇಳ್ತಿರೋ ನೀವದರ ತಂಟೆಗೋದ ತಕ್ಷಣವೇ ಜೈಲಿಗೋಗೋದು ಗ್ಯಾರಂಟಿ. ಆದ್ದರಿಂದ ಕನಕ ಹೇಳಿರುವ ಮಾತು ಅವರಿಗೆ ಅಪಥ್ಯ ಅನ್ನಿಸಿದ ತಕ್ಷಣ ಕನಕನಿಗೆ ಏಟೇ ಅವರು ಕೊಡೋದು. ಸುಧಾರಣೆ ಅಂದ್ರೆ ಈ ಚೌಕಟ್ಟನ್ನು ಏನೋ ಮಾಡ್ಬೇಕು ಅಂತ ಅನ್ಕೊಂಡೇ ಇಲ್ಲ ಅವರು. ತಾನು ಹೇಳುವ ಇನ್ನೊಂದು ದಾರಿ ಇದೆ ಅಂತ ಮಾತ್ರ ಮಾತಾಡ್ತಾರೆ ಅಷ್ಟೆ ಅವರು. ಬೇರೆ ಒಂದು ದಾರಿ ಅದು. 20ನೇ ಶತಮಾನದಲ್ಲಿ ರಾಜಾರಾಂ ಮೋಹನರಾಯ್, ದಯಾನಂದ ಸರಸ್ವತಿ ಅವರು ಬಂದ ಮೇಲೆ ಆ ಚೌಕಟ್ಟನ್ನೇ ಮತ್ತೆ ಸರಿ ಮಾಡ್ತೀವಿ ಅಂತ ಶುರು ಮಾಡಿದ್ರು. ಆ ಚೌಕಟ್ಟೇ ಬೇರೆ. ಯಾಕಂದ್ರೆ ಇವರ ದೇವರು, ಇವರು ಪೂಜೆ ಮಾಡುವ ರೀತಿ ಇಡೀ ಭಕ್ತಿಪಂಥದ ಪ್ರತಿಪಾದನೆಯೇ ಪೂಜಾರಿಕೆಯನ್ನು, ಮಧ್ಯವರ್ತಿತನವನ್ನು, ಹರಕೆ ವ್ರತಗಳನ್ನ, ಯಜ್ಞಯಾಗಾದಿಗಳನ್ನ ಧಿಕ್ಕರಿಸುತ್ತೆ. ಜನಸಾಮಾನ್ಯರ ಜ್ಞಾನವನ್ನು ಬಹಳ ಪ್ರಮುಖವಾಗಿ ಆಧರಿಸುತ್ತೆ. ಶ್ರದ್ಧೆಯೇ ಮಾನದಂಡ ಅಂತ ಕರಿಯುತ್ತೆ. ಅವೆಲ್ಲವೂ ಕೂಡ ವೇದಗಳು ಹೇಳುವ, ಪುರೋಹಿತಶಾಹಿಗಳು ಹೇಳುವ ಎಲ್ಲಕ್ಕೂ ವಿರುದ್ಧ. ಅವು ವಿಚಿತ್ರನೂ ಕೂಡ. ಗಂಡ ಹೆಂಡತಿ ಮುದ್ದಾಡ್ಬೇಕಿದ್ರೆ ಕೂಡ ಕೃಷ್ಣನನ್ನು ನೆನಪಿಸಿಕೊಳ್ಳಬಹುದು ಅಂತ ಹೇಳ್ತಾರೆ. ವೈದಿಕರು ಹೇಳ್ತಾರೆ ಭಗವನ್ನಾಮ ಸ್ಮರಣೆ ಮಾಡ್ಬೇಕಿದ್ರೆ ಹೆಣ್ಣನ್ನ ಮುಟ್ಲೂಬಾರ್ದು. ನೀನು ಬ್ರಹ್ಮಚಾರಿಯಾಗಿದ್ದರೆ ದೇವರು ಬಹಳ ಬೇಗ ಬರ್ತಾನೆ ನಿನ್ನತ್ರಕ್ಕೆ ಅಂತ. ಅದರ ತದ್ವಿರುದ್ಧ ನಿಲುವೇನು? ಭಕ್ತಿಪಂಥದವರ ಲೆಕ್ಕದಲ್ಲಿ ದೇವರನ್ನು ಕಂದ ಅಂತ ಕೂಡ ಎತ್ತಿಕೊಳ್ಳಬಹುದು. ಪುರೋಹಿಕಶಾಹಿದು ಹಂಗಲ್ಲ. ಅವರ ದೇವರ ಸ್ಥಾನವೇ ಬಹಳ ಶ್ರೇಣೀಕರಣವಾದುದು. ಇವರಿಗೆ ಹಂಗಲ್ಲ. ದೇವರು ಸಖನೂ, ನಲ್ಲನೂ, ಗುರುವೂ, ತಂದೆಯೂ ಎಲ್ಲವೂ ಆಗಿಬರಬಲ್ಲ. ಆ ಪರಿಕಲ್ಪನೆಯಲ್ಲೇ ವ್ಯತ್ಯಾಸ ಇದೆ.

• ಮಂಗಳೂರು ವಿವಿಯ ಕನಕ ಅಧ್ಯಯನ ಪೀಠವು ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ಏರ್ಪಡಿಸಿದ್ದ ಕನಕದಾಸ ಉಪನ್ಯಾಸ ಮಾಲಿಕೆಯಲ್ಲಿ ಮಾಡಿದ ಭಾಷಣದ ಬರಹ ರೂಪ

# ಜನಪರ ಚಿಂತನಾ ಪರಂಪರೆ ಹಾಗೂ ಕನಕದಾಸ

**ಡಾ. ಬಂಜಗೆರೆ ಜಯಪ್ರಕಾಶ**

ಕನಕದಾಸರು ಒಬ್ಬ ಸಂತ ಕವಿ. ಒಬ್ಬ ಅನುಭಾವಿ ಕವಿ ಮತ್ತು ಚಿಂತಕ. ಆತನ ಬಗ್ಗೆ ನಾವು ಹಲವು ಅಂಶಗಳನ್ನು ತಿಳಿದುಕೊಳ್ಳಬೇಕಾದ ಅಗತ್ಯ ಇದೆ. ಅದನ್ನು ಸಾಧ್ಯವಾದಷ್ಟು ಒಂದು ಚೌಕಟ್ಟಿನಲ್ಲಿ ತಂದು ನಿಮಗೆ ಹೇಳೋದಕ್ಕೆ ಸಾಧ್ಯ ಆಗುತ್ತಾ ಅಂತ ನಾನು ಪ್ರಯತ್ನಪಡುತ್ತೇನೆ. ಕನಕದಾಸರ ಬಗ್ಗೆ ನಾವು ಆಲೋಚನೆ ಮಾಡ್ಬೇಕಾದ್ರೆ ಭಾರತೀಯ ಪರಂಪರೆಯಲ್ಲಿ ಮೊದಲಿಂದಲೂ ನಡೆಯುತ್ತಾ ಬಂದಂಥ ಭಕ್ತಿ ಪಂಥದ ಬಗ್ಗೆಯೂ ಆಲೋಚನೆ ಮಾಡ್ಬೇಕು ಮತ್ತು ಕನಕದಾಸರು ಬಾಳಿ ಬದುಕಿದಂತಹ 16–17ನೇ ಶತಮಾನದ ಕಾಲಘಟ್ಟದ ಸಾಮಾಜಿಕ ಪ್ರಕ್ರಿಯೆಗಳ ಬಗ್ಗೆಯೂ ನಾವು ಮಾತನಾಡಬೇಕು. ಒಟ್ಟಾರೆಯಾಗಿ ಕನ್ನಡ ಸಾಹಿತ್ಯದಲ್ಲಿ ಜನಮುಖಿಯಾಗಿರುವ ಚಿಂತನಾ ಪರಂಪರೆಯಿದೆ ಅದರ ಬಗ್ಗೆಯೂ ನಾವು ಆಲೋಚನೆ ಮಾಡಬೇಕು.

ಕನಕದಾಸನನ್ನು ಈ ಮೂರೂ ಅಂಶಗಳ ಫಲಿತಾಂಶ ಅಂತ ಕರೆದರೆ ತಪ್ಪಲ್ಲ. ಭಕ್ತ ಕವಿಯಾದ, ಹರಿದಾಸನಾದ ಕನಕದಾಸ ತನ್ನ ಸಾಹಿತ್ಯವನ್ನು ನಿರ್ಮಾಣ ಮಾಡಿರುವಂತಹ ಅಗತ್ಯ ಮತ್ತು ಅದರ ಸ್ವರೂಪ. ಅದು ಕನ್ನಡ ನಾಡಿನ ಸಾಂಸ್ಕೃತಿಕ ರಂಗದಲ್ಲಿ ಪಡೆದಿರುವಂತಹ ಮಹತ್ವ ಅದನ್ನೂ ಕೂಡ ನಾವು ಗಮನಿಸಬೇಕು. ಭಕ್ತಿ ಅಂದ್ರೆ ಅದಕ್ಕಿರುವಂತಹ ಒಂದು ಸ್ವರೂಪವನ್ನು ಭಾರತೀಯ ಚರಿತ್ರೆಯಲ್ಲಿ ಗಮನಿಸಿದರೆ ಸಾಮಾನ್ಯವಾಗಿ ಭಾರತೀಯ ಭಕ್ತಿ ಪಂಥಗಳು ವ್ಯವಸ್ಥೆಯ ವಿರುದ್ಧವಾಗಿರುವ ದನಿಯನ್ನು ಎತ್ತಿ ಆಯಾ ಕಾಲಘಟ್ಟದ ಜನರ ಆಶಯಗಳಿಗೆ ದನಿಯಾಗುವಂತಹ ಪ್ರಯತ್ನ ಮಾಡಿರೋದನ್ನು ನಾವು ನೋಡ್ತೀವಿ. ಇವುಗಳ ಪ್ರಮಾಣದಲ್ಲಿ ಮತ್ತು ಸ್ವಭಾವದಲ್ಲಿ ವ್ಯತ್ಯಾಸಗಳಿವೆ. ಅವೆಲ್ಲವೂ ಕೂಡ ಒಂದೇ ರೂಪದ ಒಂದೇ ಆಕೃತಿಯ ಹಾಗೂ ಒಂದೇ ಗುಣ ಸ್ವಭಾವದವುಗಳು ಅಂತ ಹೇಳೋದು ಕಷ್ಟ.

ಆದ್ರೆ ಒಟ್ಟಾರೆಯಾಗಿ ಅವುಗಳ ನೆಲೆಗಟ್ಟನ್ನು ನೋಡಿದರೆ, ಧರ್ಮ ಮತ್ತು ದೇವರು, ಅವುಗಳ ಹಿಡಿತದಲ್ಲಿರುವಂತ ವ್ಯವಸ್ಥೆಯ ವಿರುದ್ಧ ಈ ಭಕ್ತಿ ಪಂಥಗಳ ಧೋರಣೆ ಯಾವಾಗ್ಲೂ ಕೂಡ ಬೆಳೀತಾ ಬಂದಿದೆ. ಅದರಲ್ಲಿ ಮುಖ್ಯವಾಗಿ ಎರಡು ಪಂಥಗಳು. ಒಂದು ವೈಷ್ಣವ ಪರವಾದದ್ದು ಮತ್ತೊಂದು ಶೈವಪರವಾದದ್ದು. ಅವೆರಡಕ್ಕೂ ಕೂಡ ಬಹಳ ದೀರ್ಘವಾಗಿರುವ ಇತಿಹಾಸ ಇದೆ ಭಾರತೀಯ ಪರಂಪರೆಯಲ್ಲಿ ಪ್ರತಿಯೊಂದು ಕಾಲಘಟ್ಟದಲ್ಲಿಯೂ ನಿರ್ಣಾಯಕವಾಗಿರುವಂತಹ ಸಂದರ್ಭಗಳು ಉಂಟಾದಾಗ ಸಾಂಸ್ಕೃತಿಕ ಕ್ಷೇತ್ರದಲ್ಲಿ ಇವರು ಕ್ರಿಯಾಶೀಲರಾಗಿ ಅವತ್ತಿನ ಜನರ ಆಶಯಗಳನ್ನು ಆಳುವ ವರ್ಗದವರಿಗೆ ಮುಟ್ಟಿಸುವ ಮತ್ತು ತಾಕುವಂತೆ ಮಾಡುವ ರೀತಿಯಲ್ಲಿ ಭಕ್ತಿಪಂಥದ ಕವಿಗಳು, ಚಿಂತಕರು ಕೆಲಸ ಮಾಡಿರೋದನ್ನು ನಾವು ಗಮನಿಸ್ತೀವಿ.

ಭಕ್ತಿಪಂಥ ಕುರಿತು ನಾವು ಆಲೋಚಿಸುವಾಗ ಗಮನಿಸಬೇಕಾದ ಅಂಶ ಏನು ಅಂತ ಹೇಳಿದ್ರೆ ಭಕ್ತಿ ಪಂಥವೂ ದೇವರನ್ನು ನಂಬುತ್ತೆ, ಅದೂ ಕೂಡ ಕೆಲವು ಸಣ್ಣ ಪುಟ್ಟ ಕ್ರಿಯಾ ವಿಧಿಗಳನ್ನು ಹೇಳುತ್ತೆ ಆದ್ರೆ ಅವು ಕರ್ಮಠ ದೈವ, ಪಂಥಗಳಿಗೆ ಮೂಲಭೂತವಾಗಿ ಭಿನ್ನವಾಗಿರುವ ನಂಬಿಕೆಗಳು ಮತ್ತು ಆಚರಣೆಗಳು. ಭಾರತೀಯ ಇತಿಹಾಸದಲ್ಲಿ ನಮಗೆ ಗೊತ್ತಿರುವಂತಹ ಮೊದಲ ಭಕ್ತಿ ಪಂಥ ಎಂದರೆ ಭಾಗವತ. ವೇದಗಳು, ವೇದಗಳ ಪ್ರತಿಪಾದನೆಗಳು, ಯಜ್ಞಯಾಗಾದಿಗಳು ಇತ್ಯಾದಿಗಳ ವಿರುದ್ಧ ಬಹಳ ಹಿಂದೆ ಭಿನ್ನ ಮತವನ್ನ ವ್ಯಕ್ತಪಡಿಸಿದ್ದು ಈ ಭಾಗವತ. ಇವತ್ತು ನಾವು ಯಾವುದನ್ನು ಭಾರತೀಯ ಸಂಸ್ಕೃತಿಯ ಅತ್ಯಂತ ಪ್ರಮುಖ ಲಕ್ಷಣ ಅಂತ ಹೇಳುತ್ತೇವೋ ಅಂತಹ ಮೂರ್ತಿ ಪೂಜೆಯನ್ನು ಆರಂಭಿಸಿದ್ದೂ ಕೂಡ ಭಾಗವತ ಪಂಥವೇ ವೇದ ಕಾಲದ ಚಿಂತನೆಗಳಿಗೆ, ಆಚರಣೆಗಳಿಗೆ ಮೂರ್ತಿ ಪೂಜೆ ಅಭ್ಯಾಸದಲ್ಲಿರಲಿಲ್ಲ.

ಭಾಗವತದ ವೈಶಿಷ್ಟ್ಯ ಏನು ಅಂತ ಹೇಳಿದ್ರೆ ವೇದ–ಶಾಸ್ತ್ರ ಮೂಲಗಳಿಂದ ತನ್ನ ಪೂಜೆಗೆ ಮೂರ್ತಿಗಳನ್ನು ಆರಿಸ್ಕೊಳ್ಳಿಲ್ಲ. ಭಾಗವತದ ಚಿಂತನೆ ಯಾಕೆ ವೇದ ಕಾಲದ ಧಾರ್ಮಿಕ ಚಿಂತನೆಗಿಂತ, ಸಾಂಸ್ಕೃತಿಕ ಚಿಂತನೆಗಿಂತ ಭಿನ್ನವಾದುದಾಯ್ತು ಅಂತ ಹೇಳಿದ್ರೆ ಅದು ಆರಾಧ್ಯ ಮೂರ್ತಿಯನ್ನಾಗಿ ಆರಿಸಿಕೊಂಡದ್ದು ಜನರ ನಡುವೆ ಜನಪ್ರಿಯವಾಗಿದ್ದ ಒಬ್ಬ ದೇವರನ್ನು. ಭಾಗವತ ಪೂಜಿಸಿದ್ದು ಕೃಷ್ಣನನ್ನು. ಕೃಷ್ಣನ ಸಾಂಕೇತಿಕತೆಯನ್ನು ನಾವು ಅರ್ಥ ಮಾಡ್ಕೊಂಡ್ರೆ, ಸಾಂಸ್ಕೃತಿಕವಾಗಿ ಭಾರತದಲ್ಲಿ ಆತನ ಪ್ರಾಮುಖ್ಯತೆ ಬೆಳೆದು ಬಂದ ವಿಧಾನವನ್ನು ನೋಡಿದ್ರೆ, ಸಂಸ್ಕೃತಿ ಮತ್ತು ಪ್ರತಿಸಂಸ್ಕೃತಿಗಳ ಹೊಯ್ದಾಟವೂ ಮತ್ತು ಅವುಗಳ ನಡೆಯ ಗತಿತಾರ್ಕಿಕತೆ ಯಾವ ವಿಧಾನದಲ್ಲಿತ್ತು ಅನ್ನೋದಕ್ಕೆ ಸುಳುಹುಗಳು ಸಿಗುತ್ತೆ.

ಕೃಷ್ಣನ ಬಣ್ಣ ಹಾಗೂ ಹೆಸರೇ ಸೂಚಿಸುವ ಹಾಗೆ ಅವನು ಆರ್ಯ ಸಮುದಾಯದ ಬಣ್ಣ ಹೊಂದಿದ್ದವನಲ್ಲ. ಅವರ ರೀತಿಯಲ್ಲಿ ಹೆಸರಿಟ್ಟುಕೊಂಡಿದ್ದವನೂ ಅಲ್ಲ. ಸಾಮಾನ್ಯವಾಗಿ ಗೋಪಾಲಕರಾಗಿದ್ದ ವೃಷ್ಣಿ ಪಂಗಡಕ್ಕೆ ಸೇರಿದ ಕಪ್ಪು ಜನರ ದೈವವಾಗಿದ್ದ ಕೃಷ್ಣ ಭಾಗವತರ ಆರಾಧ್ಯ ದೈವವಾದ. ಅವನನ್ನು ಪೂಜಿಸುವುದಕ್ಕೆ, ಅವನನ್ನು ಆರಾಧಿಸುವುದಕ್ಕೆ ಮತ್ತು ಅವನನ್ನು ಸಾಕ್ಷಾತ್ಕರಿಸಿಕೊಳ್ಳಲಿಕ್ಕೆ ಭಾಗವತ ಹೇಳಿದಂತ ಮಾರ್ಗಗಳೂ ಕೂಡ ಬಹಳ ಮಾರ್ಮಿಕವಾಗಿವೆ. ದ್ರಾವಿಡ ಸಂಸ್ಕೃತಿಯ ಬೇರು ಹೊಂದಿರುವ **'ಪೂಜೆ'** ಅನ್ನುವಂತದ್ದು ಇವತ್ತಿನ ಭಾರತೀಯ ಸಂಸ್ಕೃತಿಯಲ್ಲಿ ಪುರೋಹಿತಶಾಹಿ ವರ್ಗದ ಕೈಯಲ್ಲಿದೆ. ಸಾಮಾನ್ಯವಾಗಿ ಬ್ರಾಹ್ಮಣರೇ ಇಂದು ಪೂಜಾರಿಗಳು. ಎಲ್ಲಾ ಬಗೆಯ ದೇವಸ್ಥಾನಗಳಲ್ಲಿ ಬ್ರಾಹ್ಮಣ ಜಾತಿಗೆ ಸೇರಿದವರೇ

ಪೂಜಾರಿಗಳು. ಮೂಲದಲ್ಲಿ ಅದು ಬ್ರಾಹ್ಮಣರಿಗೆ ಸೇರಿರಲಿಲ್ಲ. ಬ್ರಾಹ್ಮಣರು ಯಾರೂ ಕೂಡ ಪೂಜೆಯನ್ನು ಮಾಡ್ತಿರಲಿಲ್ಲ. ಮೂರ್ತಿ ಪೂಜೆಯನ್ನು ಮಾಡುವವರನ್ನು, ಪೂಜಾರಿಕೆ ಮಾಡುವವರನ್ನು, ದೇವರಿಗೆ ಅರ್ಪಿಸುವ ನೈವೇದ್ಯವನ್ನು, ಉಚ್ಚಿಷ್ಟ ಅಂತ ತಿರಸ್ಕಾರದಿಂದ ಕರೆಯಲಾಗುತ್ತಿದ್ದ ನೈವೇದ್ಯವನ್ನು ತಿನ್ನುವವರನ್ನ ಧರ್ಮಬಾಹಿರರು ಅಂತ ವೈದಿಕರು ಕರೀತಾ ಇದ್ರು. ಅದು ಅವರಿಗೆ ನಿಷಿದ್ಧವಾಗಿತ್ತು.

ಆ ಸಂದರ್ಭದಲ್ಲಿ ಪೂಜೆಯನ್ನು ಮಾಡುತ್ತಿದ್ದುದು ದ್ರಾವಿಡ ಸಂಸ್ಕೃತಿಯ ಮಹಿಳೆಯರು. ಅವರಿಗೆ ಬೇಕಾಗಿರುವ ಯಾವುದಾದರೊಂದು ಮೂರ್ತಿಯನ್ನು ಇಟ್ಟು ಪೂಜೆ ಮಾಡ್ತಾಯಿದ್ರು. ಪೂಜೆ ಪದ 'ಪೂ'ನಿಂದ ಬಂದಿರೋದು. ಅದು ಪುಷ್ಪಗಳನ್ನು ಸಮರ್ಪಿಸುವ ಒಂದು ಆಚರಣೆ. ಯಜ್ಞಗಳಲ್ಲಿ ಅರ್ಪಿಸುವಂತಹ ವಸ್ತುಗಳು ಬೇರೆ. ಭಾಗವತರು ಪುಷ್ಪವನ್ನು ಸಮರ್ಪಿಸುವ ಮುಖಾಂತರವಾಗಿ ತಮ್ಮ ಮೆಚ್ಚಿನ ದೇವರಿಗೆ ಕೃತಜ್ಞತೆಯನ್ನು, ಭಕ್ತಿಯನ್ನು ಸಲ್ಲಿಸುತ್ತಿದ್ದರು. ಪುಷ್ಪ ಅನ್ನೋದೂ ಕೂಡ ಬಹಳ ಮುಖ್ಯ ಆಗಿರುವ ಸಂಕೇತ. ಪೂಜೆಗೂ ಮತ್ತು ಪುಷ್ಪಕ್ಕೂ ಇರುವಂತಹ ಸಂಬಂಧ; ಪುಷ್ಪ ಅನ್ನುವಂಥಾದ್ದು ಈಗಿನ ರೀತಿಯಲ್ಲಿ ನಾವು ಮಾರುಕಟ್ಟೆಯಲ್ಲಿ ಕೊಂಡುತರಬೇಕಾದ ಬೆಲೆಬಾಳುವ ವಸ್ತುವಾಗಿರಲಿಲ್ಲ ಆ ಕಾಲಘಟ್ಟದಲ್ಲಿ. ಬೆಲೆಬಾಳುವ, ವಸ್ತುಗಳನ್ನು ಅರ್ಪಿಸುವ ಮೂಲಕ ಅರ್ಚನೆಯನ್ನು ನಡೆಸುವ ಅಗತ್ಯವೇ ಇಲ್ಲ ಅಂತ ಪ್ರತಿಪಾದಿಸುವ ಸರಳತೆಯ ತತ್ವದ ಮೇಲೆ ಈ ಪೂಜೆ ಹುಟ್ಟಿತು.

ಬೇಲಿಯಲ್ಲಿ ಬೆಳೆಯುವ, ನಿಸರ್ಗದಲ್ಲಿ ಸುಲಭವಾಗಿ ಸಿಗಬಹುದಾಗಿರುವ ಹೂಗಳನ್ನು ತಂದು ಒಪ್ಪಿಸಿದರೂ ಕೂಡ ದೇವರು ಮೆಚ್ಚುತ್ತಾನೆ ಅನ್ನುವ ಬಹಳ ದೊಡ್ಡ ಬಂಡುಕೋರ ನಿಲುವೇ ಆ ಪೂಜೆಯಲ್ಲಿ ವ್ಯಕ್ತವಾಯಿತು. ಅದಕ್ಕೆ ನಾವು ದೇವರಿಗೆ ಹಣವನ್ನೇ ಖರ್ಚು ಮಾಡಬೇಕಾದುದಿಲ್ಲ. ಆ ಪೂಜೆಯನ್ನು ಮಾಡಬೇಕಾದುದಕ್ಕೆ ಮತ್ತೊಬ್ಬ ಪುರೋಹಿತ ಬರಬೇಕಾದುದಿಲ್ಲ. ಯಜ್ಞ ಯಾಗಾದಿಗಳನ್ನು ನಡೆಸೋದಕ್ಕೆ ಒಬ್ಬ ಅಧ್ವರ್ಯು ಬೇಕು. ಪೂಜೆಗೆ ಇಂತಹ ಯಾವ ವಿಧಿ ವಿಧಾನಗಳು ಏನೂ ಇಲ್ಲ. ಮನಸ್ಸನ್ನು ನಂಬಿ ನಮ್ಮ ಮೆಚ್ಚಿನ ಮೂರ್ತಿಯನ್ನು ಕಲ್ಪಿಸಿ, ಅದಕ್ಕೆ ಹೂಗಳನ್ನು ಅರ್ಪಿಸಿದರೆ ಅಲ್ಲಿಗೆ ಪೂಜೆ ಮುಗೀತು. ಅದು ಎರಡನೇ ಅಂಶ.

ಮೂರನೇ ಅಂಶ ಅವರು ಆಧರಿಸಿದ್ದು ಒಂದು ಸಾಧಾರಣ ಹಿನ್ನೆಲೆಯ, ಪಶುಪಾಲಕ ವೃತ್ತಿ ಅವಲಂಬಿಸಿದ್ದ ಒಂದು ಬುಡಕಟ್ಟಿನ ವ್ಯಕ್ತಿಯ ಪ್ರತೀಕವಾಗಿದ್ದ ಒಬ್ಬ ದೇವರನ್ನು ಈ ರೀತಿಯಲ್ಲಿ ಭಕ್ತಿಪಂಥದ ಆದಿಮ ಪ್ರತಿಪಾದನೆ ಹುಟ್ಟಿತು. ಭಾಗವತ ಹೇಳಿದ್ದು ಏನು ಅಂತ ಹೇಳಿದ್ರೆ, ವೇದಗಳಿಗೆ ಭಿನ್ನವಾದ ರೀತಿಯಲ್ಲಿ ಯಾರು ಬೇಕಾದರೂ ಪೂಜೆ ಮಾಡಬಹುದು. ಯಾರು ಬೇಕಾದರೂ ಗುರುವಾಗಬಹುದು. ಯಾರು ಬೇಕಾದರೂ ಭಗವಂತನನ್ನು ತಲುಪಬಹುದು. ಭಗವಂತನನ್ನು ತಲುಪುವುದಕ್ಕೆ ಭಕ್ತಿಯೊಂದಿದ್ದರೆ ಸಾಕು. ಯಾವ ಮನಸ್ಸು ಅತ್ಯಂತ ಪ್ರಾಂಜಲತೆಯಿಂದ, ನಿರ್ಮಲತೆಯಿಂದ ಭಗವಂತನನ್ನು ಜ್ಞಾಪಿಸಿಕೊಳ್ಳುತ್ತದೋ ಅದಕ್ಕೆ ದೇವರು ಒಲಿಯುತ್ತಾನೆ. ಇದು ಅದರ ಸಿದ್ಧಾಂತ. ಆ ನಂತರದ ಇಡೀ ಭಾರತೀಯ ಪರಂಪರೆಯ ಸಾಂಸ್ಕೃತಿಕ ರಚನೆಯಲ್ಲಿ ಪ್ರತಿ ಸಾಂಸ್ಕೃತಿಕವಾಗಿರುವ ನಡೆಯನ್ನು ಹುಟ್ಟು ಹಾಕಿರುವಂತಹ ಭಕ್ತಿಪಂಥಗಳ ಹಿಂದೆ ಈ ಪ್ರತಿಪಾದನೆಯ ನೆಲೆಗಟ್ಟಿದೆ. ಈ ಪರಿಕಲ್ಪನೆಯಲ್ಲಿ ಯಾವ ಕಾರಣಕ್ಕೂ ದೇವರು ಭಕ್ತನ ಮೇಲೆ ಸವಾರಿ ಮಾಡುವವನಾಗಿಲ್ಲ.

ಅವನು ಸಖನಾಗಿದ್ದಾನೆ. ದೇವರು ದುಬಾರಿ ವೆಚ್ಚಗಳ ಮೂಲಕವಾಗಿ ಭಕ್ತರಿಗೆ ಎಟುಕುವವನಾಗಿಲ್ಲ. ಅವನು ಸರಳವಾಗಿ ಅವರ ಭಕ್ತಿಯಿಂದಲೇ ಅವರಿಗೆ ದೊರೆಯುವವನಾಗಿದ್ದಾನೆ. ಅದು ಭಾಗವತ. ಆನಂತರದ ಭಾಗವತ ಪಂಥದ ಬೆಳವಣಿಗೆ ಬಹಳ ಭಿನ್ನ ರೂಪಗಳನ್ನು ಧರಿಸಿಕೊಂಡಿತು. ಅದು ಬೇರೆ ವಿಷಯ. ನಾನು ಹೇಳುತ್ತಿರುವುದು ಭಾಗವತದ ಹುಟ್ಟಿನ ಮೂಲವನ್ನ. ಭಗವದ್ಗೀತೆಯ ಹುಟ್ಟಿನ ಮೂಲವನ್ನು. ಆನಂತರದಲ್ಲಿ ವಿಚಿತ್ರ ಏನು ಅಂತ ಹೇಳಿದ್ರೆ ಇವತ್ತು ಭಗವದ್ಗೀತೆಯ ಹೆಸರನ್ನು ಹೇಳೋದಕ್ಕೆ ಹಿಂಜರಿಯಬೇಕಾಗಿರುವ ಸನ್ನಿವೇಶ ನಿರ್ಮಾಣ ಆಗೋಗಿದೆ. ಇವತ್ತು ಕೃಷ್ಣನ ಹೆಸರನ್ನು, ರಾಮನ ಹೆಸರನ್ನು ಹೇಳೋದು ಕೂಡ ಗೊಂದಲಕಾರಿ ಆಗಬಹುದಾದ ಸನ್ನಿವೇಶ ನಿರ್ಮಾಣ ಆಗಿದೆ. ಪೂಜೆ ಅನ್ನುವ ಹೆಸರನ್ನು ಹೇಳೋದು ಕೂಡ ಬಹಳ ಪ್ರತಿಗಾಮಿ ವಿಷಯವಾಗಿ ಬದಲಾಗಿದೆ.

ಹುಟ್ಟುತ್ತಾ ಅವು ಭಿನ್ನವಾಗಿರುವಂಥ ನೆಲೆಯಲ್ಲಿ ಹುಟ್ಟುತ್ತವೆ. ಅವು ಬೆಳೆಯುತ್ತಾ ಮುಂದುವರಿದು ಯಾರು ಯಾರದೋ ಕೈಗಳ ಆಯುಧಗಳಾಗಿ, ಸಾಧನಗಳಾಗಿ ಕಡೆಗೆ ಜನರನ್ನ ಮೋಸಗೊಳಿಸುವಂತಹ ಹಂತಕ್ಕೆ ಬಂದು ತಲುಪುತ್ತೆ ಅನ್ನೋದು ವಿಪರ್ಯಾಸಕರ. ಭಕ್ತಿ ಎನ್ನುವುದು ಯಾವಾಗಲೂ ಕೂಡ ನಮ್ಮಲ್ಲಿ ಎರಡು ರೀತಿಯಲ್ಲಿ ಬಳಕೆಯಾಗಿದೆ ಅಂತಾರೆ ಡಿಡಿ ಕೋಸಾಂಬಿ. ಭಕ್ತಿ ಅನ್ನುವುದು ಭಾರತೀಯ ನೆಲೆಗಟ್ಟಿನಲ್ಲಿ ಎರಡು ವಿಧಾನದಲ್ಲಿ ಬಳಕೆಯಾಗುತ್ತಾ ಬಂದಿದೆ. ಭಕ್ತಿ ಅನ್ನುವ ಪ್ರತಿಪಾದನೆ ಆಳುವ ವರ್ಗದ ಕೈಯಲ್ಲಿ ಸಾಧನವಾಗಿ ಬಳಕೆಯಾಗುವಾಗ, ವ್ಯವಸ್ಥೆಯ ಮಾಲೀಕರ ಕೈಯಲ್ಲಿ ಅದು ಬಳಕೆಯಾಗುವಾಗ ಜನರನ್ನ ಮೌಢ್ಯಕ್ಕೆ ನೂಕುವ, ಮೋಸಗೊಳಿಸುವ ವಿಧಾನದಲ್ಲಿ ಅದು ಬಳಕೆಯಾಗಿದೆ.

ಆದರೆ ಅದಕ್ಕೆ ಇನ್ನೊಂದು ಮುಖ ಇದೆ. ಯಾವ್ಯಾವಾಗ ಭಕ್ತಿ ಎನ್ನುವುದು ಜನ ಸಮುದಾಯಗಳ ಕೈಯಲ್ಲಿ ಆಯುಧವಾಗಿದೆಯೋ ಆಗೆಲ್ಲ ಅದು ಅವರಿಗೆ ಪುರೋಹಿತಶಾಹಿಯ ಹಿಡಿತದಿಂದ ಬಿಡುಗಡೆಗೊಳಿಸುವ ಸಾಧನವಾಗಿದೆ. ಅವರಿಗೆ ಜ್ಞಾನೋದಯದ ಸಾಧನವಾಗಿದೆ. ಅವರು ತಮಗೆ ಹೊಸದೊಂದು ಸಾಮಾಜಿಕ ಅಂತಸ್ತಿಗಾಗಿ ಆಗ್ರಹಿಸುವ ಅಸ್ತ್ರವಾಗಿದೆ. ವಿಚಿತ್ರವೆಂದು ಕಾಣಿಸುತ್ತದಾದರೂ ಇದು ವಾಸ್ತವ ಭಕ್ತಿ ಎನ್ನಲಾಗುವ ಒಂದೇ ವಸ್ತು ಆಳುವವರ ಕೈಗೆ ಸಿಕ್ಕಾಗ ಆಳಿಕೆಗೆ ಒಳಪಟ್ಟವರನ್ನು ಮತ್ತಷ್ಟು ದಾಸ್ಯಕ್ಕೆ ನೂಕುವ, ಮತ್ತಷ್ಟು ಸುಲಿಗೆಗೆ ಈಡು ಮಾಡುವಂತಹ ಒಂದು ನೆಲೆಯನ್ನು ತಲುಪಿದರೆ, ಬಡತನದಲ್ಲಿರುವ ಜನರ ಮೂಲದಿಂದ ಭಕ್ತಿ ಹುಟ್ಟಿದಾಗ ಅದು ಅವರ ಬಿಡುಗಡೆಯ ಸಾಧನವಾಗಿರುತ್ತದೆ.

ಭಕ್ತಿಯನ್ನು ಆಳುವ ವರ್ಗ ಪ್ರತಿಪಾದಿಸುವಾಗ ಶರಣಾಗತಿಯನ್ನು ಹೇಳುತ್ತೆ. ಆಳುವವರಿಗೆ ಸಂಪೂರ್ಣ ಶರಣಾಗತಿ ವ್ಯಕ್ತಪಡಿಸುವುದೇ ಅವರ ಪ್ರಕಾರ ಭಕ್ತಿ. ರಾಜ, ಪುರೋಹಿತ, ಧಣಿ ಇವರೇ ಭೂಲೋಕದಲ್ಲಿರುವ ದೇವರ ಪ್ರತಿನಿಧಿಗಳು.

ಅವರಿಗೆ ಸೇವೆ ಮಾಡುವುದೇ ಧರ್ಮ. ರಾಜ ದೇವರಿಂದ ನೇಮಿಸಲ್ಪಟ್ಟ ಪ್ರತಿನಿಧಿಯಾದ್ದರಿಂದ ರಾಜ ದೇವರಿಗೆ ಸಮ, ಪುರೋಹಿತ ದೇವರಿಗೆ ನಿತ್ಯ ಪೂಜೆ ಮಾಡಿ ದೇವರ ಅನುಗ್ರಹ ಪಡೆದಿರುವವನಾದ್ದರಿಂದ ಅವನಿಗೆ ಶಾಪ ಕೊಡುವ, ದೇವರ ಪರವಾಗಿ ಆಶೀರ್ವಾದ ಮಾಡುವ ಶಕ್ತಿ ಹೊಂದಿದ್ದಾನೆ. ನಿಮ್ಮ ಸ್ವಂತ ಹಿತವನ್ನು ಬದಿಗಿಟ್ಟು ಸರ್ವಸ್ವವನ್ನೂ ಅವರಿಗೆ ಸಮರ್ಪಿಸಬೇಕು. ಇದರಿಂದ ನಿಮಗೆ ಸದ್ಗತಿ ದೊರೆಯುತ್ತದೆ ಇದು ಆಳುವ ವರ್ಗದವರ ಕೈಯಲ್ಲಿ ಭಕ್ತಿ ನಿರ್ವಚನೆಯಾಗುವ ರೀತಿ.

ಜನರ ನೆಲೆಯಿಂದ ಹುಟ್ಟಿದ ಭಕ್ತಿ ಹೇಳುವುದು; ಭಗವಂತನೊಬ್ಬನೆ ಒಡೆಯ, ಅವನೇ ಈ ಲೋಕದ ಸೃಷ್ಟಿಕರ್ತನಾದ್ದರಿಂದ ಅವನ ಅಡಿಯಲ್ಲಿರುವ ಯಾವುದೇ ಒಡೆಯರಿಗೆ ನಾವು ನಮಿಸಬೇಕಾದ, ಅವರಿಗೆ ಅಧೀನರಾಗಿರಬೇಕಾದ ಅಗತ್ಯವಿಲ್ಲ. ಚಕ್ರವರ್ತಿಗೇ ಚಕ್ರವರ್ತಿಯಾಗಿರುವ ದೇವರನ್ನು ನಾವು ಭಕ್ತಿಯಿಂದ ಒಲಿಸಿಕೊಂಡ ಮೇಲೆ, ಭೂಲೋಕದ ಒಡೆಯರ ಕೃಪೆಗೆ ನಾವು ಕಾಯುವ ಅಗತ್ಯವಿಲ್ಲ. ಹುಟ್ಟಿಸಿದ ದೇವರು ಹುಲ್ಲು ತಿನ್ನಿಸುವುದಿಲ್ಲ, ಕಾಡಲ್ಲಿ ಹುಟ್ಟಿದ ಮೃಗ, ಪಕ್ಷಿಗಳಿಗೆಲ್ಲ ಅಲ್ಲಲ್ಲಿಗೇ ಆಹಾರವಿತ್ತವನು ಭಗವಂತನಾದ್ದರಿಂದ, ನಮ್ಮನ್ನೂ ಅದೇ ಬಗೆಯಲ್ಲಿ ಸಲಹುತ್ತಾನೆ, ಇದಕೆ ಸಂಶಯವಿಲ್ಲ ಎನ್ನುವುದು ಭಕ್ತಿ ಪಂಥದ ನಂಬುಗೆ.

ಇದು ಬಹಳ ಮುಖ್ಯವಾಗಿರುವಂಥಾದ್ದು. ಒಬ್ಬರು ದೇವರಿಗೆ ಶರಣಾಗಿ ಎಂದಾಗ ಅವರು ಹೇಳುವಂತಹ ಅರ್ಥಗಳು ಬೇರೆ. ದೇವರು, ದೇವರ ಮೂಲಕ, ಪುರೋಹಿತ, ಮತ್ತೆ ಪುರೋಹಿತರ ಮೂಲಕ ಎಲ್ಲ ಕರ್ಮಗಳು, ಅವುಗಳ ಮುಖಾಂತರವಾಗಿ ಜಾತಿ ಶ್ರೇಷ್ಠತೆ–ಕನಿಷ್ಠತೆಗಳು ಇತ್ಯಾದಿ ಪರಿಕಲ್ಪನೆಗಳ ಹೇರಿಕೆಗಳು. ಜನಸಮೂಹಗಳು ಭಕ್ತಿಯ ಬಗ್ಗೆ ಹೇಳ್ಬೇಕಾದ್ರೆ ಅವು ಅಂತಿಮವಾಗಿ ಲೋಕಕ್ಕೆ ಏಕೈಕ ಒಡೆಯನನ್ನಾಗಿ ದೇವರನ್ನು ಒಪ್ಪಿ, ಅವನಿಗೆ ಮಾತ್ರವೇ ಆತ್ಯಂತಿಕವಾಗಿ ಶರಣಾಗುವ ನೆಲೆಯಲ್ಲಿ ನಿಲ್ಲುತ್ತವಾದ್ದರಿಂದ, ಅವು ಉಳಿದ ನಡುವಂತರದ ಒಡೆಯರನ್ನು ನಿರಾಕರಿಸುವಂತಹ ಒಂದು ಬಂಡುಕೋರ ಪ್ರವೃತ್ತಿಯನ್ನು ಪರೋಕ್ಷವಾಗಿ ವ್ಯಕ್ತಪಡಿಸುತ್ತವೆ.

ಭಕ್ತಿ ಪಂಥದ ಕೆಲವು ಕಥೆಗಳನ್ನು ನೋಡಿದರೆ ನಮಗೆ ಈ ನೆಲೆಗಟ್ಟು ಅರ್ಥವಾಗುವುದು ಸುಲಭವಾಗುತ್ತೆ. ಭಕ್ತಿಪಂಥದಲ್ಲಿ ಬಹಳ ಸಲ ಭಕ್ತನಿಗೇ ದಾಸನಾಗಿ ದೇವರು ಬಂದಿರೋದುಂಟು. ಯಾವಾಗಲೂ ಕೂಡ ಶ್ರೀಮಂತರಿಗೆ ವಿರೋಧವಾಗಿರುವ ನೆಲೆಯಿಂದಲೇ ಈ ಭಕ್ತಿ ಕತೆಗಳ ನಿರ್ವಚನ ಆಗಿರೋದು. ಕರಿಕಾಲ ಚೋಳ ಮಹಾ ಶಿವಭಕ್ತನಾದ ರಾಜ. ನಿತ್ಯವೂ ಅವನು ಶಿವನಿಗೆ ಪೂಜೆ ಮಾಡಿ ನೈವೇದ್ಯವನ್ನು ಅರ್ಪಿಸಿ ಅದನ್ನು ಶಿವ ಸ್ವೀಕರಿಸುವುದನ್ನು ಕಾಣುತ್ತಿರುತ್ತಾನೆ. ಒಂದು ದಿನ ಅವನು ಅರ್ಪಿಸಿದ ನೈವೇದ್ಯವನ್ನು ಶಿವ ಸ್ವೀಕರಿಸುವುದಿಲ್ಲ. ಕರಿಕಾಲ ಚೋಳ ಶಿವನನ್ನು ಕೇಳುತ್ತಾನೆ– ನೀನು ಯಾಕೆ ಇವತ್ತು ನನ್ನ ನೈವೇದ್ಯವನ್ನು ಸ್ವೀಕರಿಸಲಿಲ್ಲ. ಶಿವ ನನಗೆ ಹೊಟ್ಟೆ ತುಂಬಿದೆ ಅನ್ನುತ್ತಾನೆ. ಕರಿಕಾಲ ಚೋಳನಿಗೆ ಆಶ್ಚರ್ಯ ನಾನು ಅರ್ಪಿಸಿದ ನೈವೇದ್ಯವನ್ನು ನೀನು ಸ್ವೀಕರಿಸಿಲ್ಲ. ಹೀಗಿರುವಾಗ ಶಿವನಿಗೆ ಹೊಟ್ಟೆ ಹೇಗೆ ತುಂಬಿತು? ಮಹಾ ಶಿವಭಕ್ತನೆಂದರೆ ನಾನು ಮಾತ್ರ. ಶಿವ ನೈವೇದ್ಯ ಸ್ವೀಕರಿಸೋದು ನನ್ನ ಪೂಜೆಯಲ್ಲಿ ಮಾತ್ರ ಅನ್ನುವ ನಂಬಿಕೆ ಕರಿಕಾಲ ಚೋಳನಲ್ಲಿ ಅಹಂಕಾರವಾಗಿ ನೆಲೆಯಾಗಿರುತ್ತೆ.

ನಾನು ಮಾದಾರ ಚೆನ್ನಯ್ಯನ ಗುಡಿಸಲಿಗೆ ಹೋಗಿ ಅವನ ಅರ್ಪಿಸಿದ ಅಂಬಲಿಯನ್ನು ಕುಡಿದು ಬಂದೆ, ಹಾಗಾಗಿ ನನ್ನ ಹೊಟ್ಟೆ ತುಂಬಿದೆ ಅನ್ನುತ್ತಾನೆ ಶಿವ. ಇವನಿಗೆ ಆಶ್ಚರ್ಯ. ನಾನು ಮಹಾ ಶಿವಭಕ್ತ. ಪ್ರಪಂಚಕ್ಕೇ ಶ್ರೇಷ್ಠ ಭಕ್ತ. ನಾನು ಅರ್ಪಿಸಿದ ನೈವೇದ್ಯ ಸ್ವೀಕರಿಸದೆ ಅದ್ಯಾರೋ ಚನ್ನಯ್ಯ ಅನ್ನುವವನ ಗುಡಿಸಲಿಗೆ ಹೋಗಿ ಅಂಬಲಿ ಕುಡಿದು ಬಂದಿದ್ದಾನೆ ಶಿವ ಅಂದ್ರೆ ಏನರ್ಥ. ಮಾದಾರ ಚನ್ನಯ್ಯ ನನಗಿಂತಲೂ ದೊಡ್ಡ ಶಿವಭಕ್ತ ಅಂತ ಅರ್ಥವೇ. ಅವನು ನನಗಿಂತ ದೊಡ್ಡ ಶಿವಭಕ್ತನಾದ ಬಗೆ ಏನು? ಇದು ಕರಿಕಾಲ ಚೋಳನ ಪ್ರಶ್ನೆ. ಮಾದಾರ ಚನ್ನಯ್ಯ ಯಾಕೆ ಕರಿಕಾಲ ಚೋಳನಿಗಿಂತ ದೊಡ್ಡ ಶಿವ ಭಕ್ತನೆಂದರೆ, ತಾನು ಮಹಾ ಶಿವಭಕ್ತ ಎನ್ನುವುದನ್ನು ಅವನು ಎಂದೂ ಪ್ರದರ್ಶನಕ್ಕೆ ಇಟ್ಟಿಲ್ಲ ಮತ್ತು ಶಿವನೇ ಬಂದು ತನ್ನ ನೈವೇದ್ಯ ಸ್ವೀಕರಿಸುತ್ತಾನೆ ಎಂಬ ಅಹಂಕಾರ ಚನ್ನಯ್ಯನಲ್ಲಿ ಇಲ್ಲ. ಶಿವನಿಗಾಗಿ ತಾನು ಇಂತಿಂಥ ಮಹತ್ತಾದ ಸಾಮಗ್ರಿಗಳನ್ನು ಅರ್ಪಿಸುತ್ತಾ ಇದೀನಿ ಅನ್ನುವ ಹೆಮ್ಮೆಯ ನೆಲೆಯಿಂದ ಅವನು ಎಂದೂ ಪೂಜೆ ಮಾಡಿದವನಲ್ಲ.

ಕರಿಕಾಲ ಚೋಳ ಮಹಾ ಶಿವಭಕ್ತ. ಅದರಲ್ಲಿ ಅನುಮಾನವೇ ಇಲ್ಲ. ಆದರೆ ಆ ಪೂಜೆಯಲ್ಲಿ ಪ್ರದರ್ಶನದ ಒಂದಂಶ ಅವನ ಅರಿವಿಲ್ಲದೆ ಅಡಗಿದೆ. ಅದೊಂದು ಅಹಂಕಾರ ಪೋಷಣೆಯ ಅಂಶವಾಗಿಯೂ ಬೆಳೆದಿದೆ. ತನ್ನಲ್ಲಿರುವ ಅತಿ ಅಮೂಲ್ಯ ವಸ್ತುಗಳನ್ನು ನಾನು ದೇವರಿಗೆ ಅರ್ಪಿಸ್ತಾ ಇದೀನಿ ಅನ್ನುವ ಭಾವ ಕೂಡ ಪರೋಕ್ಷವಾಗಿ ಅಹಂಕಾರದ ರೂಪ. ಆದರೆ ಮಾದಾರ ಚನ್ನಯ್ಯನಿಗೆ ಅಂತಹ ಯಾವ ಭ್ರಮೆಗಳೂ ಇಲ್ಲ. ತಾನು ನಿತ್ಯ ಕುಡಿಯುವ ಅಂಬಲಿಯನ್ನೇ ಅವನು ನಿರ್ವ್ಯಾಜವಾಗಿ ಶಿವನಿಗೆ ಅರ್ಪಿಸಿ ಆನಂತರ ಶಿವ ಪ್ರಸಾದವಾಗಿ ತನ್ನ ಪಾಲಿನ ಅಂಬಲಿಯನ್ನು ಅವನು ಕುಡಿಯುತ್ತಾನಾದ್ದರಿಂದ ಶಿವನಿಗದು ಸಲ್ಲುತ್ತೆ.

ಈ ಬಗೆಯ ಕಥೆ ಕೃಷ್ಣನ ಕಥೆಯಲ್ಲೂ ಬರುತ್ತದೆ. ರಾಯಭಾರಕ್ಕೋಸ್ಕರವಾಗಿ ಶ್ರೀಕೃಷ್ಣ ಬಂದಾಗ ದುರ್ಯೋಧನ ಸಕಲ ಸತ್ಕಾರ ಮಾಡೋದಕ್ಕೆ ಕಾಯ್ತಾ ಕೂತಿರ್ತಾನೆ. ಕೃಷ್ಣ ಆಸ್ಥಾನಕ್ಕೆ ನೇರವಾಗಿ ಬರದೆ ದಾರಿಯಲ್ಲಿದ್ದ ವಿದುರನ ಗುಡಿಸಲಿಗೆ ಹೋಗಿ ಅವನ ಸತ್ಕಾರವನ್ನು ಸ್ವೀಕರಿಸಿ ಬರ್ತಾನೆ. ಇದರಿಂದ ಕೋಪಗೊಂಡ ದುರ್ಯೋಧನ ಕೃಷ್ಣನನ್ನು ಬೈಯ್ಯುತ್ತಾನೆ– ದನ ಕಾಯೋ ಗೊಲ್ಲ ಅವನು, ಆ ದಾಸಿ ಮಗ ವಿದುರನ ಹತ್ರ ಹೋಗದೆ ನನ್ನ ಆಸ್ಥಾನಕ್ಕೆ ಬಂದು ಸತ್ಕಾರ ಸ್ವೀಕರಿಸೋ ಯೋಗ್ಯತೆ ಅವನಿಗೆ ಎಲ್ಲಿದೆ ಅಂತ. ಆದ್ರೆ ವಿಷಯ ಏನು ಅಂತ ಹೇಳಿದ್ರೆ ದೇವರು ಒಲಿದದ್ದು ನಿರ್ವ್ಯಾಜವಾದ ಭಕ್ತಿಗೆ ಮತ್ತು ನಿರಹಂಕಾರ ಮನಃಸ್ಥಿತಿಗೆ. ಈ ನೀತಿ ರುಕ್ಮಿಣಿಯ ಕಥೆಯಲ್ಲೂ ತಂದಿದ್ದಾರೆ. ಕೃಷ್ಣನನ್ನು ತುಲಾಭಾರ ಮಾಡ್ತೀನಿ ಅಂತ ಹೊರಡ್ತಾಳೆ ಸತ್ಯಭಾಮೆ. ಸತ್ಯಭಾಮೆ ತುಲಾಭಾರ ಮಾಡೋದಕ್ಕೆ ಹೊರಟಾಗ ತನ್ನಲ್ಲಿರುವ ಅಷ್ಟೂ ಬಂಗಾರವನ್ನು, ಐಶ್ವರ್ಯವನ್ನು ತಂದು ಒಂದು ಕಡೆ

ತಕ್ಕಡಿಗೆ ಹಾಕ್ತಾಳೆ. ತಕ್ಕಡಿ ಮೇಲೇರೋದೇ ಇಲ್ಲ. ಅವಳ ಎಲ್ಲ ಸವತಿಯರು ಕೂಡ ಸತ್ಯಭಾಮೆಯ ಕೋರಿಕೆ ಮೇರೆಗೆ ತಮ್ಮ ಬಂಗಾರವನ್ನು ತಂದು ಹಾಕಿದಾಗಲೂ ಕೂಡ ತಕ್ಕಡಿ ಮೇಲೇರೋದಿಲ್ಲ. ನಾರದ ಹೋಗಿ ರುಕ್ಮಿಣೀನ ಕರೀತಾನೆ. ಬಾರವ್ವ ನೀನೂ ಕೂಡ ತುಲಾಭಾರದಲ್ಲಿ ಪಾಲ್ಗೊಳ್ಳು, ನಿನ್ನ ಗಂಡ ಶ್ರೀ ಕೃಷ್ಣನ ತುಲಾಭಾರ ನಡೀತಿದೆ ಅಂತ. ಅದಕ್ಕೆ ರುಕ್ಮಿಣಿ ಅವನು ಲೋಕನಾಟಕ ಸೂತ್ರಧಾರಿ. ಅಂತಹವನನ್ನು ತುಲಾಭಾರ ಮಾಡೋದು ಸಾಧ್ಯವೇ? ಅವನು ಭೂಮಿ ತೂಕದವನು. ಸತ್ಯಭಾಮೆಗೆಲ್ಲೋ ಹುಚ್ಚು. ಅದಕ್ಕೇ ಇಂತ ಕೆಲಸ ಮಾಡ್ತಿದಾಳೆ. ಈ ಹುಚ್ಚಾಟಕ್ಕೆ ನನ್ನನ್ನು ಬೇರೆ ಕರೀತಿದೀರಲ್ಲ. ನಾನು ಬರೋದಕ್ಕೆ ಸಾಧ್ಯ ಇಲ್ಲ. ನನ್ನತ್ರ ಸಂಪತ್ತು ಅನ್ನೋದು ಏನೂ ಇಲ್ಲ. ನಾನು ಐಶ್ವರ್ಯವಂತಳಲ್ಲ. ಏನಾದ್ರೂ ನಾನು ಈ ಭೂಮಿ ಮೇಲೆ ಬದುಕಿದ್ದರೆ ಅದು ಕೃಷ್ಣನ ಅನುಗ್ರಹದಿಂದ ಮಾತ್ರ. ನನಗೇನಾದ್ರೂ ಗೌರವ ಇದ್ರೆ ಅದು ಅವನ ಅನುಗ್ರಹ. ಅವನ ಪ್ರೀತಿಯೇ ನನಗೆ ಶ್ರೀರಕ್ಷೆ. ಹಂಗಿರಬೇಕಾದ್ರೆ ನಾನು ಯಾವ ಐಶ್ವರ್ಯವನ್ನು ತಂದು ಅವನಿಗೆ ತುಲಾಭಾರ ಮಾಡ್ಲಿ. ಬ್ರಹ್ಮಾಂಡದ ಪ್ರತಿರೂಪವಾಗಿರುವ ಶ್ರೀಕೃಷ್ಣನನ್ನು ತುಲಾಭಾರ ಮಾಡ್ತೀನಿ ಅನ್ನೋದು ಒಂದು ಅಹಂಕಾರ ಅಷ್ಟೆ. ನಾನು ಇದರಲ್ಲಿ ಪಾಲ್ಗೊಳ್ಳೋ ಶಕ್ತಿ ಇರೋಳಲ್ಲ ಅಂತ ಅವಳು ಹೇಳುತ್ತಾಳೆ.

ಅವನು ತುಲಾಭಾರಕ್ಕೆ ಕೂತಿದಾನೆ. ತುಲಾಭಾರ ಮುಗಿಯೋವರೆಗೂ ಅವನು ಊಟ ಮಾಡೋ ಹಂಗಿಲ್ಲ. ನೀನೂ ಬಂದು ಪ್ರಯತ್ನ ಪಟ್ಟುಬಿಡು, ಕೃಷ್ಣನಿಗೆ ಊಟ ಮಾಡಲು ಅವಕಾಶವಾಗುತ್ತೆ ಎಂದು ರುಕ್ಮಿಣಿಯನ್ನು ಅನುನಯಿಸಿದ ನಾರದ. ಅಲ್ಲಿಗೆ ಬಂದ ಅವಳು ಭಕ್ತಿಯಿಂದ ಪೂಜಿಸುವ ಒಂದು ತುಳಸಿ ಎಲೆಯನ್ನು ತುಲಾಭಾರದ ತಕ್ಕಡಿಗೆ ಹಾಕುತ್ತಾಳೆ. ಆವರೆಗೆ ಮಿಸುಗದೇ ಇದ್ದ ತುಲಾಭಾರದ ತಕ್ಕಡಿ ಬರೀ ಒಂದು ತುಳಸಿ ಎಲೆಯನ್ನು ಇಟ್ಟ ಕೂಡಲೇ ಸಮಭಾರವಾಗಿ ತೂಗತೊಡಗುತ್ತದೆ.

ಭಕ್ತಿಪಂಥದಲ್ಲಿ ಸಾಮಾನ್ಯವಾಗಿ ನಡೆಯುವ ಪವಾಡಗಳು ಯಾಕೆ ಈ ರೀತಿಯ ನೀತಿ ಹೊಂದಿವೆ. ದೇವರಿಗೆ ಯಾವಾಗಲೂ ಕೂಡ ನಿರ್ಮಲವಾದ ಭಕ್ತಿ ಮುಖ್ಯವೇ ಹೊರತು ಅಹಂಕಾರಭರಿತವಾದ ತೋರಿಕೆಯಲ್ಲ. ಇದು ಭಕ್ತಿಪಂಥದ ಮೂಲ ಪ್ರತಿಪಾದನೆ. ಅದನ್ನು ಕನಕದಾಸರು ಯಾವ ರೀತಿಯಲ್ಲಿ ಪ್ರತಿಪಾದಿಸುತ್ತಾರೆ ಎನ್ನುವುದನ್ನು ನೋಡೋದಕ್ಕೆ ಮೊದಲು ಇನ್ನೂ ಒಂದೆರಡು ಕಥೆಗಳನ್ನು ಹೇಳುವುದು ಸೂಕ್ತ. ನಕ್ಕೀರ ಅನ್ನುವವನು ತಮಿಳು ಶೈವ ಪರಂಪರೆಯಲ್ಲಿ ಉಲ್ಲೇಖಿತನಾಗಿರುವ ಶಿವಭಕ್ತ. ನಕ್ಕೀರ ಮುತ್ತು ಕೊಯ್ಯುವ ಜಾತಿಯವನು. ಪ್ರತಿದಿನವೂ ಸಮುದ್ರದಲ್ಲಿ ಮುಳುಗುವುದು, ಕಪ್ಪೆಚಿಪ್ಪುಗಳನ್ನು ತರೋದು, ದಂಡೆಯಲ್ಲಿ ಕೂತು ಶಿವಧ್ಯಾನವನ್ನು ಮಾಡುತ್ತಾ ಚಿಪ್ಪುಗಳನ್ನು ಕೊಯ್ದು, ಅದರೊಳಗಿರೋ ಮುತ್ತುಗಳನ್ನು ತೆಗೆಯೋದು. ಮಿಕ್ಕ ಮುತ್ತುಗಳಿಲ್ಲದ ಚಿಪ್ಪುಗಳನ್ನು ವಾಪಸ್ಸು ಸಮುದ್ರಕ್ಕೆ ಹಾಕೋದು. ಇದು ನಕ್ಕೀರನ ಕಾಯಕ.

ಒಂದು ಸಲ ಶಿವನಿಗೆ ಇವನ ಪ್ರಖ್ಯಾತಿಯನ್ನು ಕೇಳಿ, ಇವನನ್ನು ಭೇಟಿ ಮಾಡ್ಬೇಕು ಅಂತ ಅವನಿರುವ ಸಮುದ್ರ ದಂಡೆಗೆ ಬರ್ತಾನೆ. ನಕ್ಕೀರ ಕಪ್ಪೆಚಿಪ್ಪು ಕೊಯ್ಯುವ ಕಾಯಕದಲ್ಲಿ ನಿರತ ಆಗಿದ್ದಾನೆ. ಶಿವ ಬಂದಿದ್ದನ್ನು ಇವನು ಗಮನಿಸೋದಿಲ್ಲ. ನಮಿಸೋದಿಲ್ಲ. ಶಿವನಿಗೆ ಅಸಾಧ್ಯ ಕೋಪ ಬರುತ್ತೆ. ಕೋಪ ಬಂದಾಗ ಅವನು ಹಣೆಗಣ್ಣನ್ನು ತೆರೀತಾನೆ. ಶಿವ ಹಣೆಗಣ್ಣು ತೆರೆದರೆ ಅದರೆದುರು ಇರುವ ಸರ್ವ ವಸ್ತುಗಳೂ ಭಸ್ಮ ಆಗೋಗುತ್ತವೆ. ಆದ್ರೆ ನಕ್ಕೀರ ಸುಟ್ಹೋಗಲ್ಲ. ಈಶ್ವರನಿಗೆ ಆಶ್ಚರ್ಯ. ನಾನು ಹಣೆಗಣ್ಣು ತೆರೆದರೆ ಸೃಷ್ಟಿಯೇ ಭಸ್ಮ ಆಗುತ್ತೆ. ಆದರೆ ಈ ನಕ್ಕೀರ ಯಾಕೆ ಸುಟ್ಹೋಗಲಿಲ್ಲ. ಶಿವ ನಕ್ಕೀರನನ್ನೇ ಇದಕ್ಕೇನು ಕಾರಣ ಅಂತ ಕೇಳ್ತಾನೆ. ಶಿವನೇ ಎದುರುಗಡೆ ಬಂದ್ರೂ ಕೂಡ ನೀನು ನಮಿಸದೆ, ಗೌರವಿಸದೆ ಕೂತಿದ್ದೀಯ. ಸಾಲದ್ದಕ್ಕೆ ನಾನು ಹಣೆಗಣ್ಣು ತೆರೆದರೂ ನೀನು ಭಸ್ಮ ಆಗ್ಲಿಲ್ಲ. ಇದಕ್ಕೇನು ಕಾರಣ? ಆಗ ನಕ್ಕೀರ ಹೇಳುವ ಉತ್ತರ ಬಹಳ ಮಾರ್ಮಿಕವಾದ ಆಯಾಮ ಹೊಂದಿದೆ. ನಾನು ಕಾಯಕದಲ್ಲಿ ನಿರತನಾಗಿದ್ದೆ. ಕೆಲಸ ಅನ್ನುವುದೇ ದೇವರು, ಕೆಲಸವೇ ದೇವರಾಗಿದ್ದಾಗ ಇನ್ನೊಂದು ರೂಪದಲ್ಲಿ ದೇವರು ಬಂದ್ರೆ, ನಾನೀಗಾಗಲೇ ದೇವರ ಪೂಜೆಯಲ್ಲಿರೋದ್ರಿಂದ, ಬೇರೆ ಯಾವುದಕ್ಕೂ ನಮಿಸಬೇಕಾದ ಅಗತ್ಯವಿಲ್ಲ ಅನ್ನುತ್ತಾನೆ. ಇದು ಮೊದಲನೆಯ ಅಂಶ.

ಎರಡನೆಯ ಅಂಶ ಅದಕ್ಕಿಂತ ಬಹಳ ಸ್ವಾಭಿಮಾನದ ಅಂಶವನ್ನು ಹೊಂದಿದೆ. ಶಿವನೇ ನೀನು ಹಣೆಗಣ್ಣ ತೆರೆದರೆ ನಾನು ಯಾಕೆ ಸುಟ್ಹೋಗ್ಲಿಲ್ಲ ಅಂದರೆ ನಾನು ದುಡಿದು ತಿನ್ನುವವನು, ನೀನು ತಿರಿದು ತಿನ್ನುವವನು ಅಂತ ನಕ್ಕೀರ ವಿವರಿಸುತ್ತಾನೆ. ಶಿವ ದುಡಿಯುವ ಕೆಲಸ ಮಾಡೊದಿಲ್ಲ. ಅವನು ಮನೆಮನೆಗೆ ಭಿಕ್ಷಾನ್ನಕ್ಕೆ ತಿರುಗುವವನು. ನಕ್ಕೀರ ಕಾಯಕ ಮಾಡುವವನಾದ್ದರಿಂದ, ದುಡಿಯುವವನನ್ನು ತಿರಿದುಣ್ಣುವವನು ಏನೂ ಮಾಡೋದಕ್ಕೆ ಸಾಧ್ಯವಿಲ್ಲ. ದೊಡ್ಡ ತಾತ್ವಿಕ ನೆಲೆಗಟ್ಟನ್ನು ಭಕ್ತಿಪಂಥದ ಒಳಗಡೆ ಜನಸಮೂಹಗಳು ಕಂಡುಕೊಂಡಿರುವ ರೀತಿ ಇದು. ಇದೆಲ್ಲವನ್ನೂ ಕೂಡ ರೂಪಕಗಳಾಗಿ ಮಾತ್ರವೇ ನಾವು ಗ್ರಹಿಸಬೇಕು. ಈ ಕತೆಯಲ್ಲಿ ಬರುವ ಪಾತ್ರಗಳು ಹೇಳುತ್ತಿರುವ ತಾತ್ವಿಕ ನೆಲೆಗಟ್ಟು ಏನು? ಅದು ಬಹಳ ಮುಖ್ಯ.

ಭಕ್ತಿ ಪಂಥದ ಪ್ರತಿಪಾದನೆಗಳಲ್ಲಿ ವ್ಯತ್ಯಾಸಗಳಿಲ್ಲ ಅಂತ ಅಲ್ಲ. ಬಂಗಾಳದ ಚೈತನ್ಯ ಪ್ರತಿಪಾದಿಸಿದ ಭಕ್ತಿ ಪಂಥಕ್ಕೂ, ಕರ್ನಾಟಕದಲ್ಲಿ ಕನಕದಾಸರು ಪ್ರತಿಪಾದಿಸಿದ ಭಕ್ತಿ ಪಂಥಕ್ಕೂ ವ್ಯತ್ಯಾಸ ಇದೆ. ಅದೇ ರೀತಿ ಕಬೀರ ಪ್ರತಿಪಾದಿಸಿದ ಭಕ್ತಿಪಂಥಕ್ಕೂ, ವಾರಕರಿಗಳು ಮಹಾರಾಷ್ಟ್ರದಲ್ಲಿ ಪ್ರತಿಪಾದಿಸಿದ ಭಕ್ತಿ ಪಂಥಕ್ಕೂ ವ್ಯತ್ಯಾಸ ಇದೆ. ಬಸವಣ್ಣನವರ ನೇತೃತ್ವದಲ್ಲಿ ವಚನಕಾರರು ಪ್ರತಿಪಾದಿಸಿದ ಭಕ್ತಿ ಪಂಥಕ್ಕೂ, ದಾಸ ಸಾಹಿತ್ಯದಲ್ಲಿ ಪುರಂದರರು ಹಾಗೂ ಕನಕದಾಸರು ಪ್ರತಿನಿಧಿಸಿದಂತಹ ತಾತ್ವಿಕ ನೆಲೆಗಟ್ಟಿಗೂ ವ್ಯತ್ಯಾಸಗಳಿವೆ. ಏನೇ ಆದಾಗಲೂ ಕೂಡ ಇವುಗಳ ನಡುವೆ ಇರುವಂತಹ ಒಂದು ಪಾರಂಪರಿಕವಾದ ಆಶಯಾತ್ಮಕ ಸಂಬಂಧವನ್ನ ನಾವು ಗ್ರಹಿಸಬೇಕು.

ಕನಕದಾಸರಿಗೆ ಸಂಬಂಧಪಟ್ಟಂತೆ ಹೇಳ್ಬೇಕು ಅಂದರೆ, ಕನಕದಾಸರು ಈ ರೀತಿಯಾಗಿರುವ ಭಾಗವತ ಮೂಲದ ಭಕ್ತಿಪಂಥಕ್ಕೆ ದಾಸರಾಗಿ ತಮ್ಮ ಜೀವನವನ್ನು ಸವೆಸಿದಂತಹ ಒಬ್ಬ ಮಹಾ ಸಂತ ಕವಿ. ಕರ್ನಾಟಕದಲ್ಲಿ 16ನೇ ಶತಮಾನದಲ್ಲಿ ಇದ್ದಂತಹವರು. ಕೃಷ್ಣನೇ ಅವರ ಆರಾಧ್ಯ ದೈವ. ಪ್ರಸಿದ್ಧವಾಗಿರುವ ಅವರ ಎಲ್ಲ ಕವಿತೆಗಳೂ ಕೂಡ ಕನ್ನಡದ ಜನಮಾನಸದಲ್ಲಿ ಯಾವ ರೀತಿಯಲ್ಲಿ ನೆಲೆನಿಂತಿವೆ? ಜಾತಿಯನ್ನು ಅವರು ವಿರೋಧಿಸಿ ಹೋರಾಡಿದವರು. ಜಾತಿಯ ಶ್ರೇಣೀಕರಣವನ್ನು ವಿರೋಧಿಸಿ

ನಿಂತವರು. ಇದಕ್ಕೆ ಕಾರಣ ಏನು ಅಂತ ಹೇಳಿದರೆ ಅವರು ಸ್ವತಃ ಕೆಳಜಾತಿಯಲ್ಲಿ ಹುಟ್ಟಿದವ ರಾಗಿದ್ದರು. ಸಾಮಾನ್ಯವಾಗಿ ಕುರಿಗಾಹಿ ಜಾತಿಗೆ ಸೇರಿರುವ, ಪಶುಪಾಲಕ ಜಾತಿಗಳ ಇನ್ನೊಂದು ಮುಖವಾಗಿರುವ ಕುರುಬರ ಜಾತಿಯಲ್ಲಿ ಹುಟ್ಟಿದವರು ಕನಕದಾಸರು.

ಒಂದು ಕಾಲಕ್ಕೆ ಅವರ ತಂದೆಯ ಮುಖಾಂತರವಾಗಿ ದಂಡನಾಯಕ ಪದವಿಯನ್ನು ಪಡೆದಿದ್ದವರು. ಒಂದು ಪ್ರಾಂತ್ಯದ ಮಾಂಡಲೀಕರಾಗಿದ್ದವರು. ವಿಜಯನಗರ ಸಾಮ್ರಾಜ್ಯದ ಕಾಲಘಟ್ಟ ಅದು. ಅವರ ಪ್ರಾಂತ್ಯಕ್ಕೆ ಅವರೇ ದೊರೆ. ದೊರೆ ಎನಿಸಿಕೊಂಡಿದ್ದರೂ ಭೂಪತಿಗಳಿಗೆ ದಾಸರಾಗಿದ್ದವರು, ಕೃಷ್ಣನ ದಾಸರಾಗುವ ಮುಖಾಂತರವಾಗಿ ಭೂಮಿ ಮೇಲಿನ ಎಲ್ಲ ದೊರೆಗಳ ದಾಸ್ಯತನವನ್ನು ನಿರಾಕರಿಸಿ, ದೇವರಿಗೆ ಮಾತ್ರವೇ ತಾನು ಅಡಿಯಾಳಾಗಿರಲು ಸಾಧ್ಯವೇ ಹೊರತು, ಧರಾಧೀಶರಿಗೆ ನಾನು ಇನ್ನೆಂದೂ ಕೂಡ ತಲೆ ಬಾಗಬೇಕಾದ ಅಗತ್ಯವಿಲ್ಲ ಎಂಬ ಸಂದೇಶವನ್ನು ಸಾರಿದವರು ಕನಕದಾಸ. ನಾವು ಭಕ್ತಿಪಂಥವನ್ನು, ಕರ್ನಾಟಕದಲ್ಲಿ ಹುಟ್ಟಿದ ಹರಿದಾಸ ಪಂಥವನ್ನು, ಅದರಲ್ಲಿರುವ ಎಲ್ಲ ದಾಸರನ್ನು ಒಂದೇ ತಕ್ಕಡಿಯಲ್ಲಿಟ್ಟು ತೂಗೋದಕ್ಕೆ ಆಗೋದಿಲ್ಲ.

ವಿಜಯನಗರ ಕಾಲಘಟ್ಟ ಅನ್ನುವಂಥಾದ್ದು ನಮಗೆ ಗೊತ್ತಿರುವ ರೀತಿಯಲ್ಲಿ ಕರ್ನಾಟಕದಲ್ಲೇ ಅತ್ಯಂತ ಹೆಚ್ಚು ವ್ಯಾಪಾರ ವಹಿವಾಟುಗಳನ್ನು ನಡೆಸಿದ್ದಂತಹ ಒಂದು ಸಾಮ್ರಾಜ್ಯ. ಆ ಕಾಲವನ್ನು ರೂಪಕವಾಗಿ, ದಂತಕಥೆಗಳಲ್ಲಿ ಮುತ್ತುರತ್ನಗಳನ್ನು ಹಾದಿಬೀದಿಗಳಲ್ಲಿ ರಾಶಿ ಹಾಕಿ ಮಾರುತ್ತಿದ್ದರು ಅಂತ ಹೇಳ್ತಾರೆ. ರಾಶಿ ಹಾಕಿ ಮಾರುತ್ತಿದ್ರೋ ಇಲ್ವೋ ಅದು ಐತಿಹಾಸಿಕವಾದ ಪರಿಶೀಲನೆಗೆ ಸಂಬಂಧಪಟ್ಟ ವಿಷಯ. ಅದನ್ನ ನಾವು ಮತ್ತಷ್ಟು ಅಧ್ಯಯನ ಮಾಡಿ ನೋಡಬಹುದು. ಅದನ್ನು ನಾವು ನಂಬಬೇಕೇ ನಂಬಬಾರದೇ ಎನ್ನುವುದು ಬೇರೆ ವಿಷಯ. ಆದ್ರೆ ಆ ರೂಪಕ ಹೇಳ್ತಾ ಇರುವ ಒಂದು ವಾಸ್ತವ ಸ್ಥಿತಿ ಏನಿದೆ, ಅದನ್ನು ನಾವು ಗಮನದಲ್ಲಿಟ್ಟುಕೊಳ್ಳಬಹುದು. ವಿಜಯನಗರ ಸಾಮ್ರಾಜ್ಯ ಅತ್ಯಂತ ವೈಭವಪೂರ್ಣವಾಗಿತ್ತು. ಅಲ್ಲಿ ಆದಾಯ ಮತ್ತು ವೆಚ್ಚಗಳಿಗೆ ಸಾಕಷ್ಟು ವರಮಾನ ಇತ್ತು. ಅದರಿಂದಾಗಿ ಅಲ್ಲಿ ವ್ಯಾಪಾರಿಗಳು, ಕಸುಬುದಾರರು ಇತ್ಯಾದಿಯವರು ಬಹಳ ದೊಡ್ಡ ಸಂಖ್ಯೆಯಲ್ಲಿ ನೆಲೆಸಿದ್ದರು. ಅದು ಉತ್ಕರ್ಷಮುಖಿಯಾಗಿದ್ದಂತಹ ಒಂದು ಸಾಮ್ರಾಜ್ಯ. ಆ ಸಾಮ್ರಾಜ್ಯದ ದಣ್ಣಾಯಕನಾಗಿದ್ದ, ಒಂದು ಮಂಡಲದ ಮಂಡಲೀಕನಾಗಿದ್ದ ಕನಕದಾಸ ಯಾಕೆ ದಾಸನಾದ. ಅದಕ್ಕೆ ಸಿಕ್ಕ ಪ್ರೇರಣೆಗಳೇನು. ಆ ಕಾಲಘಟ್ಟದ ಒಂದು ಪ್ರಕ್ರಿಯೆ ಏನಾಗಿತ್ತು. ಇದನ್ನು ನಾವು ಗಮನಿಸಬೇಕು.

ಯಾಕಂದ್ರೆ ಸಣ್ಣ ದೊರೆಯಾಗಿದ್ದವನು ಇನ್ನೂ ದೊಡ್ಡ ದೊರೆಯಾಗೋದಕ್ಕೆ ಪ್ರಯತ್ನಪಡ್ತಾನೆ. ಸಾಮಾನ್ಯವಾಗಿ ಶ್ರೀಮಂತನಾದವನು ಮತ್ತಷ್ಟು ಶ್ರೀಮಂತನಾಗೋದಕ್ಕೆ ಪ್ರಯತ್ನಪಡ್ತಾನೆ. ಸಾಮಾನ್ಯವಾಗಿ ಭೋಗವನ್ನು ಅನುಭವಿಸಿದವನು ಮತ್ತಷ್ಟು ಭೋಗವನ್ನು ಅನುಭವಿಸುವುದಕ್ಕೆ ಪ್ರಯತ್ನಪಡ್ತಾನೆ. ಸೋತಾಗಲೂ ಕೂಡ ಭೋಗದ ಹತಾಶೆಯನ್ನು ಇಟ್ಕೊಂಡು, ಮತ್ತೆ ಅದಕ್ಕಾಗಿ ಹಂಬಲಿಸುತ್ತಾ ಇರ್ತಾನೆಯೇ ಹೊರತು ಭೋಗವನ್ನು ತೊರೆಯುವುದು ಲೌಕಿಕರಿಗೆ ಸಾಧ್ಯವಿಲ್ಲದ ಮಾತು. ಆದರೆ ಕನಕದಾಸನಂಥ ಒಬ್ಬ ವ್ಯಕ್ತಿ ಯಾಕೆ ಆ ಹಾದಿಯನ್ನು ಬಿಟ್ಟು ಬೇರೆಯದೇ ಆಗಿರುವ, ದೈವ ಸಾಕ್ಷಾತ್ಕಾರದ ಹಾದಿಯನ್ನು ಹಿಡಿದ. ಆತನ ಅರ್ಥದಲ್ಲಿ ದೈವ ಸಾಕ್ಷಾತ್ಕಾರ ಅಂದ್ರೆ ಏನಾಗಿತ್ತು. ಇವು ಬಹಳ ಮುಖ್ಯವಾಗಿರುವಂತಹ ಅಂಶಗಳು.

ಕನಕದಾಸ ಹೇಳ್ತಾನೆ. ಯಾಕೆ ತಾನು ದಾಸನಾದೆ ಅಂದ್ರೆ ದೇವರೇ ನೀನು 'ಶರಣಾಗತರ ಸೇವಕನೆಂದು ನಿನ್ನನು ಮತವಿಡಿದು ನಂಬಿದೆನು. ಇದು ದೇವರ ಬಗ್ಗೆ ಕನಕನಿಗಿರುವ ಕಲ್ಪನೆಯನ್ನು ಸ್ಪಷ್ಟಪಡಿಸುತ್ತೆ. ದೇವರನ್ನು ತನ್ನ ಒಡೆಯ ಅಂತ ಕನಕ ಅಂದ್ಕೊಂಡಿಲ್ಲ. ಭಕ್ತವತ್ಸಲನಾದ ದೇವರು ಭಕ್ತರಾದವರಿಗೆ ತಾನೇ ಸೇವಕ. ಶರಣಾಗತರ ಸೇವಕನೆಂದು ನಿನ್ನನ್ನು ಮತವಿಡಿದು ನಂಬಿದೆನು ಈ ನೆಲೆಗಟ್ಟು ಬಹಳ ಮುಖ್ಯವಾಗಿರುವಂತಾದ್ದು. ನಂಬಿದವರ ಸೇವಕನಾಗಿ ಬರುವ ದೇವರ ಮತವನ್ನು ನಂಬಿ ಆತ ದೇವರನ್ನು ಸಾಕ್ಷಾತ್ಕರಿಸಿಕೊಳ್ಳೋದಕ್ಕೆ ಹೊರಟಿದ್ದಾನೆ. ಆಗ ಶರಣು ಬಂದವರು ಯಾರು? ಆ ಸನ್ನಿವೇಶದಲ್ಲಿ ಕಷ್ಟಪಡುತ್ತಿದ್ದಂತಹ ಜನಸಮೂಹಗಳು. ಅಂತಹವರು ಮಾತ್ರವೇ ಶರಣಾಗತರಾಗ್ತಾರೆ. ಅವರು ಮಾತ್ರವೇ ದೀನರಾಗ್ತಾರೆ.

ದೇಹಿ ಅನ್ಬೇಕು ಅಂದ್ರೆ ಅವರು ಬಡವರಾಗಿರ್ಬೇಕು. ಆ ರೀತಿಯಾಗಿರುವ ಜನಮಾನಸಕ್ಕೆ, ಸೇವಕ ನೀನು ಅಂತ ನಂಬಿ ನಿನ್ನ ಮತವಿಡಿದು ನಾನು ದಾಸನಾದೆ. ಇದು ಬಹಳ ಮುಖ್ಯವಾಗಿರುವ ಒಂದು ಅಂಶ. ಇದು ಕನಕದಾಸರ ತಾತ್ವಿಕ ನೆಲೆಗಟ್ಟಿನಲ್ಲಿ ಇದ್ದ ನಂಬಿಕೆ. ಇದು ಮುಖ್ಯವಾಗಿ ಭಕ್ತಿಪಂಥದ ಮೂಲದಿಂದ, ಅದರಲ್ಲೂ ಭಾಗವತ ಮೂಲದಿಂದ ಹುಟ್ಟಿದ್ದು. ಒಂದು ಶುದ್ಧ ನಂಬಿಕೆ ಅದು. ಅಲ್ಲಿ ದೇವರು ಸದಾ ಭಕ್ತರಿಗೆ ಸೇವಕನಾಗಿ ಬರ್ತಾನೆ. ಪಂಡರಾಪುರದ ವಿಠಲನ ಕಥೆಯನ್ನು ನೋಡಿ. ಅಲ್ಲಿ ಗೋರ ಕುಂಬಾರ ತಾಯಿ-ತಂದೆಗಳ ಸೇವೆಯಲ್ಲಿ ನಿರತ ಆಗಿರ್ತಾನೆ. ವಿಠಲನ ಮಹಾ ಭಕ್ತ ಅವನು. ಪಾಂಡುರಂಗ ವಿಠಲನೇ ಸ್ವತಃ ಪ್ರತ್ಯಕ್ಷ ಆದ್ರೆ, ನಾನು ತಾಯಿ-ತಂದೆಗಳ ಸೇವೆಯಲ್ಲಿ ಇದ್ದೀನಾದ್ದರಿಂದ ಅದನ್ನು ಮುಗಿಸಿ ಬರುವವರೆಗೆ ನೀನು ಕಾಯಬೇಕು ಅಂತ ಹೇಳಿ ಒಂದು ಇಟ್ಟಿಗೆಯನ್ನು ಎಸೀತಾನೆ. ಅವನು ತಾಯಿ-ತಂದೆಗಳ ಸೇವೆಯನ್ನು ಮುಗಿಸೋವರೆಗೂನೂ ವಿಠಲ ಅಲ್ಲಿ ತನ್ನ ಸೊಂಟದ ಮೇಲೆ ಕೈಯಿಟ್ಟುಕೊಂಡು ನೂರಾರು ವರ್ಷಗಳವರೆಗೆ ಕಾಯ್ತಾನೆ.

ದೇವರ ಸಾಕ್ಷಾತ್ಕಾರಕ್ಕಿಂತ ದೊಡ್ಡದು ತಾಯಿ-ತಂದೆ ಸೇವೆ. ತಾಯಿ-ತಂದೆಯರ ಸೇವೆ, ಗುರುಹಿರಿಯರ ಸೇವೆ ಅನ್ನುವಂಥಾದ್ದು ಬಹಳ ದೊಡ್ಡ ಮೌಲ್ಯ. ಜನಸಾಮಾನ್ಯರು ಪಾಲಿಸಬೇಕಾಗಿರುವಂಥ ಮೌಲ್ಯ. ಆ ಮೌಲ್ಯವನ್ನು ಪಾಲಿಸುತ್ತಿರುವ ಗೋರ ಕುಂಬಾರ ಸ್ವತಃ ವಿಠಲನೇ ಪ್ರತ್ಯಕ್ಷ ಆದಾಗಲೂ ಕೂಡ ವಿಠಲ ಅವನಲ್ಲಿ ತಪ್ಪು ಹಿಡಿಯೋ ಹಾಗಿಲ್ಲ. ಆದ್ದರಿಂದ ದೇವರ ಹೆಸರಿನ ಯಾವುದೋ ಶಪಥಕ್ಕೋಸ್ಕರ ತನ್ನ ಕೈಗಳನ್ನು ಕಡಿದುಕೊಂಡ ಗೋರ ಕುಂಬಾರನಿಗೆ ವಿಠಲ ಸೇವಕನ ರೀತಿ ಕೆಲಸ ಮಾಡಿದ ಅಂತ ಕಥೆ ಇದೆ. ಇದು ದೇವರ ದೊಡ್ಡ ಗುಣ ಅಂತ ಭಕ್ತಿ ಪಂಥ ನಂಬುತ್ತೆ. ಅದನ್ನು ಜನಸಾಮಾನ್ಯರಲ್ಲಿ ಬಿತ್ತಬೇಕು. ಆ ಮುಖಾಂತರವಾಗಿ ಈ ಲೋಕ ಜಂಜಡದಿಂದ ಬಿಡಿಸಬೇಕು. ಅವರನ್ನು ಅಜ್ಞಾನದಿಂದ ಮುಕ್ತಿಯ ಕಡೆಗೆ ಕರೆದೊಯ್ಯಬೇಕು

ಅಂತ ಹೇಳಿದರೆ ಅವರು ಈ ಲೋಕಕ್ಕೆ ಅಂಟಿಕೊಂಡಿರುವ ವಿಧಾನವನ್ನು ಬಿಡಿಸಬೇಕು ಅನ್ನುವಂಥಾದ್ದು ಕನಕದಾಸನ ಮುಖ್ಯವಾದ ಪ್ರಯತ್ನ.

ಹಣವನ್ನು ಗಳಿಸಬೇಡ. ಅಧಿಕಾರಕ್ಕೆ ಅಂಟಿಕೊಳ್ಳಬೇಡ. ಸುಖಭೋಗಗಳೇ ಶಾಶ್ವತ ಅಂತ ತಿಳಿಯಬೇಡ. ಯಾಕೆ ಅಂದ್ರೆ ಆ ರೀತಿಯಾಗಿರುವ ಹಾದಿಗಳಲ್ಲಿ ನೀನು ಹೊರಟರೆ ನೀನು ನೂರೆಂಟು ಗುಲಾಮಗಿರಿಗಳಿಗೆ ಒಳಗಾಗಬೇಕಾಗುತ್ತದೆ. ಗುಲಾಮಗಿರಿಗಳು ಯಾಕೆ ಏರ್ಪಡುತ್ತೆ ಈ ವ್ಯವಸ್ಥೆಯಲ್ಲಿ? ಅವನಿಗೆ ಅಧಿಕಾರ ಬೇಕು ಅನ್ನುವ ಆಸೆ. ಅಧಿಕಾರವನ್ನು ಕೊಡುವವರಿಗೆ ಗುಲಾಮನಾದಾಗ ಇವನಿಗೊಂದಿಷ್ಟು ಅಧಿಕಾರ ಸಿಗುತ್ತೆ. ಹಣ ಬೇಕು ಅನ್ನುವ ಆಸೆ. ಹಣವಂತರ ಮರ್ಜಿ ಕಾಯ್ಬೇಕು ಹಾಗೆಯೇ ಹಣವಂತರ ರೀತಿ ಅಡ್ಡ ದಾರಿಯಲ್ಲಿ ಹಣವನ್ನು ಗಳಿಸಬೇಕು. ಅದಕ್ಕೋಸ್ಕರವಾಗಿ ಜನಸಾಮಾನ್ಯರನ್ನ ಸುಲಿಯಬೇಕು. ಅದನ್ನು ಹೊರತುಪಡಿಸಿರುವಂತ ಒಂದು ಹಾದಿಯಲ್ಲಿ ನೀನು ನಿನ್ನ ಮುಕ್ತಿಯನ್ನು ಮತ್ತು ಸಂತಸವನ್ನು ಕಾಣ್ಬೇಕು. ಇದು ಜನಮಾನಸಕ್ಕೆ ಅವರು ಕೊಟ್ಟಿರುವಂತಹ ಒಂದು ಕರೆ.

ನಿಜವಾಗಿ ಭಕ್ತಿ ಪಂಥವನ್ನು ಅರ್ಥಮಾಡಿಕೊಂಡಿರುವಂತ ಒಬ್ಬ ಸಂತ ಕವಿ ತನ್ನ ಅನುಭವದ ಮೂಲಕ ಹೇಳೋದು ಈ ಜಗತ್ತು ಶಾಶ್ವತವಾದುದಲ್ಲ. ಈ ಭೋಗಲಾಲಸೆ ನಶ್ವರವಾದುದು. ಯಾವುದೇ ಭಕ್ತಿ ಪಂಥದ ಕವಿಯ ಪದ್ಯಗಳಲ್ಲಿ ನೋಡಿ. ಅವರು ಹೇಳೋದು ಇದೇ ಮಾತನ್ನ. ಆದ್ರೆ ಇದನ್ನು ಬೇರೆ ಅರ್ಥದಲ್ಲಿ ನಾವು ತಗೊಂಡ್ರೆ, ಇದು ವೈರಾಗ್ಯ ಮುಖವಾಗಿರುವಂತಾದ್ದು, ಹೋರಾಟಗಳಿಂದ ಹಿಂದೆ ಸರಿಯುವಂಥಾದ್ದು ಅಂತ ನಮಗೆ ಅನ್ನಿಸಿಬಿಡುತ್ತೆ. ಆದರೆ ಮಾನಸಿಕವಾದ ಬಹಳ ದೊಡ್ಡ ಹೋರಾಟ ಇದು. ಉದಾಹರಣೆಗೆ ನಾನು ಇವತ್ತು ನಿಮ್ಮ ಜಾಗತೀಕರಣದ ಹೋಲಿಕೆ ಮಾಡಿ ಹೇಳ್ತೀನಿ. ನಮಗೆಲ್ಲರಿಗೂ ಗೊತ್ತಿರುವ ಹಾಗೆ ಜಾಗತೀಕರಣದ ಬಹಳ ಮುಖ್ಯವಾಗಿರುವಂತ ಸಿದ್ಧಾಂತ ಏನು? ಅದು ಭೋಗಲಾಲಸೆ. ಅನುಭೋಗವಾದ ಅದರ ಸಿದ್ಧಾಂತ. ಹೆಚ್ಚು ಹೆಚ್ಚು ಸರಕುಗಳನ್ನು ಕೊಂಡುಕೋ. ಹೆಚ್ಚು ಹೆಚ್ಚು ಆನಂದವನ್ನು ಪಡೆ. ಇದು ಅದರ ಸಿದ್ಧಾಂತ. ಹೆಚ್ಚು ಸರಕುಗಳನ್ನು ಕೊಂಡುಕೊಳ್ಳೋದು, ಅದರ ಮುಖಾಂತರವಾಗಿ ಹೆಚ್ಚು ಆನಂದವನ್ನು ಪಡೆಯೋದು.

ವಾಸ್ತವವಾಗಿ ನೀವು ಹೆಚ್ಚು ಸರಕುಗಳನ್ನು ಕೊಂಡುಕೊಂಡಂತೆ ನಿಮ್ಮ ಅತೃಪ್ತಿ ಜಾಸ್ತಿ ಆಗುತ್ತೆ. ಅದಕ್ಕೋಸ್ಕರವಾಗಿ ಅಡ್ಡ ಮಾರ್ಗದಲ್ಲಿ ಹಣವನ್ನು ಗಳಿಸಬೇಕಾಗುತ್ತೆ. ಅದರಿಂದ ಜಾಗತೀಕರಣದ ಕಾಲಘಟ್ಟದಲ್ಲಿ ಭ್ರಷ್ಟಾಚಾರ ಅನ್ನೋದು ಸಾಮಾನ್ಯ ಆಗಿಹೋಗುತ್ತಿದೆ. ಹಣವೇ ನಮಗೆ ಆನಂದವನ್ನು ತಂದುಕೊಡುವ ಸಾಧನ ಅಂತಾಗೋದ್ರಿಂದ ಭ್ರಷ್ಟಾಚಾರವನ್ನು ಪ್ರಶ್ನಿಸುವ ಮನಃಸ್ಥಿತಿ ಕೂಡ ಹೊರಟುಹೋಗುತ್ತೆ. ಪ್ರತಿಯೊಬ್ಬರೂ ಕೂಡ ಭ್ರಷ್ಟಾಚಾರಿಗಳಾಗಿಬಿಡುವ ಪರಿಸ್ಥಿತಿ ಏರ್ಪಡುತ್ತೆ. ಅದರಿಂದ ಅವಕಾಶವಾದ ಜಾಸ್ತಿಯಾಗುತ್ತೆ. ಆದ್ದರಿಂದ ಒಟ್ಟಾರೆಯಾಗಿ ಇಂತಹ ಒಂದು ಸಂದರ್ಭದ ಸಾಮಾಜಿಕ, ಮಾನಸಿಕ ಸ್ಥಿತಿ ಏನಾಗಿರುತ್ತೆ ಅಂದ್ರೆ, ಹೆಚ್ಚು ಭೋಗ ವಸ್ತುಗಳನ್ನು ಕೊಂಡುಕೊಳ್ಳಬೇಕು. ಆ ಮೂಲಕ ಹೆಚ್ಚು ಸುಖವನ್ನು ಪಡೆಯಬೇಕು. ಅದರಿಂದ ಪ್ರತಿಷ್ಠಿತರಾಗ್ತೀವಿ. ಹಣವನ್ನು ಯಾವ ಮಾರ್ಗದಿಂದ ಗಳಿಸಿದರೂ ಪರವಾಗಿಲ್ಲ. ಹಣವೇ ಒಂದು ಮೌಲ್ಯ.

ಇಂತಹ ಕಾಲಘಟ್ಟದಲ್ಲಿ ನಾವು ಹೇಳಬೇಕಾಗಿರುವ ಮಾರ್ಗವೇನು? ನಾವು ಹೇಳಬೇಕಾದದ್ದು ಈ ಅನುಭೋಗವಾದದಿಂದ ಆಚೆಗೆ ಬನ್ನಿ, ಈ ವಸ್ತು ವ್ಯಾಮೋಹದಿಂದ ಆಚೆಗೆ ಬನ್ನಿ. ಇದು ಮಾಯಾಜಾಲ. ಸರಕುಗಳ ಮಾಯಾಜಾಲ. ಈ ರೀತಿಯಾಗಿರುವ ವಸ್ತು ವ್ಯಾಮೋಹದಿಂದ, ಅನುಭೋಗವಾದದಿಂದ ದೇಶದ ಸ್ಥಿರ ಅಭಿವೃದ್ಧಿ ಸಾಧ್ಯ ಇಲ್ಲ. ನಿಮ್ಮ ಮಾನಸಿಕ ನೆಮ್ಮದಿಯೂ ಸಾಧ್ಯ ಇಲ್ಲ. ಮಾರುಕಟ್ಟೆ ತುಂಬ ವಸ್ತುಗಳು. ನಿತ್ಯವೂ ವಸ್ತುಗಳು. ನೀವು ಒಂದೇ ಸಲ ಅವನ್ನು ಕೊಂಡು ಮುಗಿಸೋದಕ್ಕೆ ಆಗೋದಿಲ್ಲ. ಇದು ಮಾಯಾಜಾಲ. ಒಂದು ಮೊಬೈಲ್ ಬೇಕು ಅಂತ ಇರುತ್ತೆ ನಮಗೆ ಆರಂಭದಲ್ಲಿ. ಒಂದು ಮೊಬೈಲ್ ಸಿಕ್ಕರೆ ಸಾಕು ನೀವು ಮೊಬೈಲ್ ತಗೊಂಡ ದಿನದಿಂದಲೇ ಅದ್ಯಾವ ಮಾಡೆಲ್ಲು, ತನ್ನ ಗೆಳೆಯನ ಹತ್ತಿರ ಇರುವ ಮಾಡೆಲ್‌ಗಿಂತ ಇನ್ನೂ ಒಳ್ಳೆಯದನ್ನು ಕೊಂಡುಕೊಳ್ಳೋದು ಹೇಗೆ? ನಾವು ಈ ಬಗೆಯ ಸ್ಪರ್ಧಾ ಮನೋಭಾವದಿಂದ ಆಚೆಗೆ ಬರೋಕಾಗೋದೇ ಇಲ್ಲ. ನಿತ್ಯವೂ ಹೊಸ ಮಾಡೆಲ್‌ಗಳು ಬಿಡುಗಡೆ ಆಗುತ್ತವೆ. ನೀವು ನಿತ್ಯವೂ ಬರೀ ಅದನ್ನೇ ಮಾಡ್ತಾ ಇರಬೇಕಾಗುತ್ತೆ. ನಿನ್ನ ಮೊಬೈಲ್ನಲ್ಲಿ ಏನೇನಿದೆ? ನನ್ನ ಮೊಬೈಲ್ನಲ್ಲಿ ಏನೇನಿದೆ? ನಾವು ಮೊಬೈಲ್‌ನಲ್ಲಿ ಮಾಡೋ ಕೆಲಸ ಫೋನ್ ಮಾಡೋದು, ಮೆಸೇಜ್ ಕಳಿಸೋದು ಅಷ್ಟೇ ತಾನೆ. ಮೊಬೈಲಲ್ಲೇ ಪೂರ್ತಿ ಜೀವ್ನ ಕಳೆಯೋದಕ್ಕೆ ಸಾಧ್ಯ ಇಲ್ಲ.

ಆದ್ರೂ ಇಡೀ ದೇಶದ ಯುವ ಜನಾಂಗ ಯಾವ ರೀತಿಯಲ್ಲಿ ಮೊಬೈಲ್‌ಗಳ ಮೋಹಕ್ಕೆ ಸಿಕ್ಕಿಬಿದ್ದು, ಅದರದೇ ಆಗಿರುವ ಒಂದು ಸ್ಪರ್ಧೆಯಲ್ಲಿ ನಿರಂತರವಾಗಿ ತೊಡಗಿಕೊಳ್ಳುತ್ತಿದೆ. ಫ್ಯಾಷನ್‌ಗಳೂ ಅದೇ ರೀತಿಯೇ. ಬಟ್ಟೆಯನ್ನು ಧರಿಸಿದರೆ ಸಾಕು ಅನ್ನುವಲ್ಲಿಗೆ ನಾವು ನಿಲ್ಲೋದಿಲ್ಲ. ಶಿಷ್ಟಾಚಾರಕ್ಕೆ ಅಗತ್ಯವಾದಷ್ಟು ಬಟ್ಟೆಬೇಕು. ಆ ರೀತಿಯಾದ ಉದ್ದೇಶವನ್ನು ಜಾಗತೀಕರಣದ ಸರಕು ಗ್ರಾಹಕ ಸಂಸ್ಕೃತಿಯವರು ಹೇಳೋದಿಲ್ಲ. ಹೊಸ ಹೊಸ ವಿನ್ಯಾಸಗಳು, ಹೊಸ ಹೊಸ ರೀತಿಗಳು, ಅವುಗಳನ್ನು ಬಳಸೋ ವಿಧಾನಗಳು, ಸದಾ ನಾವು ಆ ಸ್ಪರ್ಧೆಯಲ್ಲೇ ಮುಂದುವರೀತಾ ಇರ್ಬೇಕು. ಅಂತಿಮವಾಗಿ ಇದರಿಂದ ಉಂಟಾಗೋದೇನು, ಅಂತ ಹೇಳಿದರೆ, ನಾನು ಮೊದಲೇ ಹೇಳಿದಂತೆ ಅತ್ಯಂತ ಭ್ರಷ್ಟಾಚಾರದ ಮನಃಸ್ಥಿತಿ ಉಂಟಾಗುತ್ತೆ. ಎಲ್ಲಿ ಭ್ರಷ್ಟಾಚಾರ ನಡೆದರೂ ಅದನ್ನು ಪ್ರತಿಭಟಿಸುವ ಕೇಳುವ ಮನಃಸ್ಥಿತಿ ಹೊರಟುಹೋಗುತ್ತೆ. ಅದರಿಂದಾಗಿ ಒಂದು ದೊಡ್ಡ ಅವಕಾಶವಾದ ಉಂಟಾಗುತ್ತೆ. ಅಂತಿಮವಾಗಿ ಸಮಾಜ ಅಧಃಪತನಕ್ಕೀಡಾಗುತ್ತೆ. ಭಾರತ ಕೂಡ ಆ ಕಡೆಗೇ ನಡೆಯುತ್ತಾ ಇದೆ ಅಂತ ಅನಿಸುತ್ತಿದೆ.

ಇಂಥ ಸಂದರ್ಭದಲ್ಲಿ ಭೋಗವನ್ನು ಬಿಡು, ಅನುಭೋಗವಾದವನ್ನು ಬಿಡು ಅಂತ ಹೇಳಿದರೆ ಇದು ವೈರಾಗ್ಯವಾದ ಅಲ್ಲ. ಜಾಗತೀಕರಣವನ್ನು ಎದುರಿಸಬೇಕಾದರೆ ಮಾನಸಿಕವಾಗಿ ನೀನು ಸಂಘರ್ಷಕ್ಕೆ ಸಿದ್ಧನಾಗಿರಬೇಕಾದ ವಿಧಾನ. ಮನುಷ್ಯನ ಆದ್ಯತೆಗಳೇನು? ಅವನ ಅಗತ್ಯಗಳೇನು? ಏನುಕ್ಕೋಸ್ಕರ ಜೀವಿಸಿದ್ದಾನೆ. ಯಾವ ರೀತಿಯಲ್ಲಿ ಜೀವಿಸಿದರೆ ಸಾರ್ಥಕ ಆಗುತ್ತೆ ಅಂತ ಹೇಳುವ ವಿಧಾನವೇ ಈವಾಗ ಜಾಗತೀಕರಣದ ವಿರುದ್ಧದ ಹೋರಾಟ. ಕನಕದಾಸರೂ ಕೂಡ ಅದೇ ರೀತಿಯ ಭೋಗವಾದ ಪ್ರಬಲಗೊಂಡಿದ್ದಂತಹ ಒಂದು ಸನ್ನಿವೇಶದಲ್ಲಿ ಬದುಕಿದ್ದಂತ ಒಬ್ಬ ಕವಿ.

ವಿಜಯನಗರದಲ್ಲಿ ಭೋಗಲಾಲಸೆ ಎಷ್ಟು ಜಾಸ್ತಿಯಾಗಿತ್ತು ಅಂತ ಹೇಳಿದರೆ, ಒಂದು ಕಡೆ ಕರ್ಮಠ ಮತಾಚರಣೆ, ಜಾತಿ ಜಾತಿಗಳ ನಡುವೆ ಶ್ರೇಷ್ಠರು ಮತ್ತು ಕನಿಷ್ಠರು ಅನ್ನುವ ವಿಂಗಡಣೆ. ಶಾಸ್ತ್ರಗಳನ್ನು, ಗ್ರಂಥಗಳನ್ನು ಬಲ್ಲವರು ಯಾವಾಗಲೂ ಕೂಡ ಆಳುವವರನ್ನು ರಕ್ಷಿಸೋದಕ್ಕೆ ಮಾಡ್ತಾ ಇರುವಂತಹ ವಿವಿಧ ಉಪನ್ಯಾಸಗಳು, ಬೇರೆಬೇರೆ ತಂತ್ರಗಾರಿಕೆಗಳು. ಸೈನಿಕರ ಉಪಟಳ. ನಿತ್ಯವೂ ಒಂದಿಲ್ಲೊಂದು ಯುದ್ಧ. ವಿಜಯನಗರದ ಇನ್ನೂರೋ ಮುನ್ನೂರೋ ವರ್ಷಗಳಲ್ಲಿ ಮೂವತ್ತು ನಲವತ್ತು ಬಹಳ ದೊಡ್ಡ ಯುದ್ಧಗಳಾಗಿವೆ. ಇವು ದೊಡ್ಡ ಯುದ್ಧಗಳ ಲೆಕ್ಕ. ಅಕ್ಕಪಕ್ಕದ ಪಾಳೇಗಾರರು, ಮಾಂಡಲೀಕರು ತಮ್ಮ ಪ್ರದೇಶದ ವಿಸ್ತರಣೆಗೋಸ್ಕರ, ತಮ್ಮ ಅಧಿಕಾರ, ತಮ್ಮ ಹಣಕಾಸು ಸಂಪನ್ಮೂಲದ ವಿಸ್ತರಣೆಗೋಸ್ಕರ ಮಾಡಿದ ಯುದ್ಧಗಳಿಗೆ ಲೆಕ್ಕವೇ ಇಲ್ಲ. ಹೆಚ್ಚೂ ಕಡಿಮೆ ನಿತ್ಯವೂ ಯುದ್ಧ. ಯುದ್ಧದಿಂದ ಲಾಭ.

ಯುದ್ಧದಲ್ಲಿ ಪಾಲ್ಗೊಳ್ಳುವ ಸೈನಿಕರ ನೀತಿ ಏನು ಅಂತ ಹೇಳಿದರೆ ಯಾವ ಶತ್ರು ಪ್ರದೇಶಕ್ಕೆ ಹೋಗಿ ಅವನು ಲೂಟಿ ಹೊಡೀತಾನೆ ಅಲ್ಲಿ ಬಂದಿರುವ ಲೂಟಿಯಲ್ಲಿ ಅರ್ಧ ಭಾಗ ಅವರಿಗೆ. ಲೂಟಿ ಮಾಡೋದಕ್ಕೇ ಯುದ್ಧಗಳಲ್ಲಿ ಪಾಲ್ಗೊಳ್ಳುತ್ತಾ ಇದ್ದರು ಅವರು. ಉಳಿದ ಮೋಜುಗಳನ್ನೂ ಆ ಸಂದರ್ಭದಲ್ಲಿ ಸೈನಿಕರು ಮಾಡಿದರೆ ಯಾವ ಸೇನಾಧಿಪತಿಯೂ ತಡೀತಿರ್ಲಿಲ್ಲ. ಉದಾಹರಣೆಗೆ ಅತ್ಯಾಚಾರ. ಗೆದ್ದ ಪ್ರದೇಶದಲ್ಲಿ ಯಾವುದೇ ಹೆಣ್ಣುಮಗಳ ಮೇಲೆ ಗೆದ್ದ ಸೇನೆಯ ಸೈನಿಕ ಅತ್ಯಾಚಾರ ಮಾಡಬಹುದು. ಯಾವುದೇ ಮನೆಯಲ್ಲಿ ಸಿಕ್ಕ ಸಂಪತ್ತನ್ನು ಲೂಟಿ ಮಾಡಬಹುದು. ಲೂಟಿ ಮಾಡಿ ತಂದು ತನ್ನ ಸಾಮ್ರಾಜ್ಯದಲ್ಲಿ ತಾನದನ್ನು ಅರ್ಧ ಬಳಸೋದು, ಇನ್ನರ್ಧವನ್ನು ಅವನು ಒಡೆಯನಿಗೆ ಕೊಡೋದು. ಯುದ್ಧ ಅನ್ನೋದು ಕೂಡ ದರೋಡೆಯ ಒಂದು ಮುಖ ಆಗೋಗಿತ್ತು.

ಅದಕ್ಕೋಸ್ಕರವಾಗಿ ಅತ್ಯಂತ ಹೆಚ್ಚು ಯುದ್ಧಗಳನ್ನು ಮಾಡೋದು. ಶ್ರೀಮಂತಿಕೆ  ಪಡೆಯಲು ಅದೊಂದು ಜೂಜು. ಆ ರೀತಿಯ ವಾತಾವರಣ. ಹೆಣ್ಣನ್ನು ಅತ್ಯಂತ ತೀವ್ರವಾಗಿರುವ ಅನುಭೋಗದ ವಸ್ತುವನ್ನಾಗಿ ಬಳಸುತ್ತಾ ಇದ್ರು. ನೀವು ವಿಜಯನಗರದ ಬಗ್ಗೆ ಬಂದಿರುವಂಥ ವಾಸ್ತವಿಕ ಇತಿಹಾಸದ ಪುಸ್ತಕಗಳನ್ನು ಓದಿದರೆ ಗೊತ್ತಾಗೋದು ಏನು ಅಂತ ಹೇಳಿದ್ರೆ, ವಿಜಯನಗರದ ಬೃಹತ್ ಸೈನ್ಯಕ್ಕೆ ಸೂಳೆಯರ ಸೇವೆಯನ್ನು ಒದಗಿಸುವುದಕ್ಕೋಸ್ಕರವಾಗಿ ಸಾವಿರಾರು ಸಂಖ್ಯೆಯಲ್ಲಿ ಮಹಿಳೆಯರನ್ನು ಸೂಳೆಯರನ್ನಾಗಿ ಮಾಡಲಾಯಿತು. ವಿಜಯನಗರ, ಹೊಸಪೇಟೆ ಸುತ್ತಮುತ್ತ ಸೂಳೆಯರ ಕ್ಯಾಂಪುಗಳು. ಸಾಲದ್ದಕ್ಕೆ ಕೆಲವು ಊರುಗಳಲ್ಲಿ ಇಡೀ ಕೇರಿ ಕೇರಿಗಳನ್ನೇ ಸೂಳೆಗಾರಿಕೆಯ ಕೇರಿಗಳನ್ನಾಗಿ ಮಾಡಿದ್ರು. ಎರಡನೇ ಅಂಶ ಏನಂದ್ರೆ, ಸೈನಿಕರಾಗಿದ್ದವರು ಸತ್ತೋದ್ರೆ, ಅವರ ಹೆಂಡತಿಯರಿಗೆ ಬೇರೆ ಉಪಜೀವನದ ದಾರಿಯೇ ಇರಲಿಲ್ಲ. ಅವರು ಅಂತಿಮವಾಗಿ ಈ ವೇಶ್ಯಾವಾಟಿಕೆ ಕೆಲಸಕ್ಕೇ ಸೇರಬೇಕಾಗಿತ್ತು. ನಿತ್ಯ ಸಾಯುವವರ ಸಂಖ್ಯೆ ಇದ್ದೇ ಇದೆ. ಅದನ್ನು ಆ ವ್ಯವಸ್ಥೆ ಮಾನ್ಯವೂ ಮಾಡಿದೆ. ಗಂಡಂದ್ರು ಸತ್ರೆ, ಶ್ರೀಮಂತ ಗಂಡಂದ್ರು ಸತ್ರೆ, ರಾಜರು ಸತ್ರೆ ಏನು ಮಾಡ್ಬೇಕು ಆ ಹೆಣ್ಮಕ್ಳು? ಅವರು ಮೈ ಮಾರಿಕೊಳ್ಳುವ ಹಾಗಿಲ್ಲ. ಅವರು ಸತೀಸಹಗಮನ ಮಾಡ್ಬೇಕು. ಮಹಾಸತಿಯರಾಗಬೇಕು. ಅವರು ತಮ್ಮ ಪಾವಿತ್ರ್ಯವನ್ನು ಉಳಿಸಿಕೊಂಡು ಗಂಡನ ಜೊತೆಗೆ ಚಿತೆಗೆ ಹಾರಿ ಸಾಯ್ಬೇಕು. ಹಣ, ಮೋಜು, ಕಲೆಯ ಹೆಸರಲ್ಲಿ ಈ ರೀತಿಯಾಗಿರುವ ಅನುಭೋಗ, ಪೂಜೆಯ ಹೆಸರಲ್ಲಿ ಕಂದಾಚಾರಗಳಿವೆ.

ಇಂತಹ ಒಂದು ಸಂದರ್ಭದಲ್ಲಿ ಕನಕದಾಸನಂತಹ ಚಿಂತನಶೀಲ ವ್ಯಕ್ತಿತ್ವಕ್ಕೆ ಅನಿಸಿದ್ದು, ಈ ಲೋಕ ನಶ್ವರವಾದದ್ದು. ಅಧಿಕಾರ ಪಡೆಯುವುದಕ್ಕೆ ಇವರ ಹಿಂದೆ ಹೋಗೋದು, ಅಧಿಕಾರದಲ್ಲಿ ಇರೋದಕ್ಕೋಸ್ಕರವಾಗಿ ಇವರ ಜೊತೆಯಲ್ಲಿರೋದು, ನಿಜವಾಗಿಯೂ ಭಗವಂತನಿಗೆ ಮಾಡುವ ದ್ರೋಹ. ಮನುಷ್ಯನಾದವನು ಜೀವನವನ್ನು ಸಾರ್ಥಕ ಮಾಡಿಕೊಳ್ಳುವ ದಾರಿ ಇದಲ್ಲ. ಆದ್ದರಿಂದ ಭಗವದ್ ಸಾಕ್ಷಾತ್ಕಾರಕ್ಕೆ ತಾನು ಮಾಡ ಬೇಕಾದ ವಿಧಾನ ಏನಂದ್ರೆ ಇವುಗಳಿಗೆ ಹೊರತಾಗುವುದು. ಆ ಬಗೆಯ ನಿರಾಕರಣೆಯೂ ಕೂಡ ಆ ಕಾಲದಲ್ಲಿ ಹೋರಾಟದ ಒಂದು ಭಾಗ ಎನ್ನುವುದನ್ನು ನಾವು ಗ್ರಹಿಸಬೇಕು.

ಇದನ್ನು ನಾನು ಕನಕದಾಸರಿಗೆ ಸಂಬಂಧಿಸಿದಂತೆ ಹೇಳ್ತಾ ಇದೀನಿ. ಬೇರೆ ದಾಸರ ಬಗ್ಗೆ ಅಲ್ಲ. ಯಾಕೆ ಬೇರೆ ದಾಸರ ಬಗ್ಗೆ ಅಲ್ಲ ಅಂತ ಅಂದ್ರೆ ವಿಜಯನಗರದಲ್ಲಿ ಹರಿದಾಸ ಪಂಥವನ್ನು ಕಟ್ಟಿದ ಬೇರೆ ಎಲ್ಲಾ ದಾಸರೂ ಕೂಡ ಕನಕ, ಪುರಂದರರನ್ನು ಹೊರತುಪಡಿಸಿದರೆ  ಎಲ್ಲಾ ಹರಿದಾಸರೂ ಕೂಡ ಆನಂತರದಲ್ಲಿ ರಾಜಮಾನ್ಯರಾಗಿ, ರಾಜರಿಂದಲೇ ಜಹಗೀರುಗಳನ್ನು ಪಡೆದು, ಬಹಳ ದೊಡ್ಡ ಮಠಗಳನ್ನು ಕಟ್ಟಿದರು. ಅದು ವಾದಿರಾಜ ಮಠ ಇರಬಹುದು, ಸೋದೆ ಮಠ ಇರಬಹುದು, ಉತ್ತರಾದಿ ಮಠ ಇರಬಹುದು. ಇವೆಲ್ಲವೂ ಮಾಧ್ವ ಪಂಥದ ಶ್ರೀವೈಷ್ಣವ ಪಂಥದ ಮಠಗಳೇ. ಕೃಷ್ಣನನ್ನು ಆರಾಧಿಸುವ ಪಂಥಗಳೇ. ಆದರೆ ಅವೆಲ್ಲವೂ ಬಹಳ ಬೇಗ ರಾಜರ ಆಶ್ರಯವನ್ನು ಮತ್ತು ಮಾನ್ಯತೆಯನ್ನು ಪಡೆದವು. ಜಹಗೀರುಗಳನ್ನು ಪಡೆದವು.

ಅವರು ಯಾವ ಮಠಗಳನ್ನು ವಿರೋಧಿಸಿದರು? ಯಾವ ದೇವಸ್ಥಾನಗಳನ್ನು ವಿರೋಧಿಸಿದರು? ಯಾವ ಜಾತಿಪದ್ಧತಿಯನ್ನ ವಿರೋಧಿಸಿದರು? ಅದರದೇ ರೀತಿ ಯಾಗಿರುವ ಅತಿ ಪವಿತ್ರ ಮಠಗಳನ್ನು ಕಟ್ಟಿ ಮತ್ತೊಂದು ಸಲ ಜಾತಿ ವ್ಯವಸ್ಥೆಯನ್ನು ಅನುಮೋದಿಸಿದರು. ಆ ದಾಸಪಂಥದಲ್ಲಿ ಕನಕದಾಸ ಮತ್ತು ಪುರಂದರದಾಸರು ಮಾತ್ರವೇ ರಾಜರ ಆಶ್ರಯಕ್ಕೆ ಹೋಗಿ ನಿಲ್ಲದೆ, ತಾವೂ ಕೂಡ ಒಂದು ಗುರು ಪರಂಪರೆಯ ಮಠವನ್ನು ಕಟ್ಟಿ ತಾವು ಮಠಾಧಿಪತಿಗಳಾಗೋದನ್ನು ನಿರಾಕರಿಸಿದರು. ಅದಕ್ಕೇ ಕನಕದಾಸರಿಗೆ ಅಧಿಕೃತ ಶಿಷ್ಯ ಪರಂಪರೆ ಇಲ್ಲ. ಪುರಂದರದಾಸರಿಗೆ ಗಾಯನದ ಶಿಷ್ಯ ಪರಂಪರೆ ಇದೆಯೇ ಹೊರತು ಅವರಿಗೂ ಕೂಡ ಉತ್ತರಾಧಿಕಾರಿ ಅನ್ನುವ ಶಿಷ್ಯ ಪರಂಪರೆ ಇಲ್ಲ. ಅವರು ರಾಜರ ಆಸ್ಥಾನಕ್ಕೆ ಹೋಗಲಿಲ್ಲ. ಅವರು ಕಟ್ಟಿದ್ದು ದಾಸಕೂಟವನ್ನು. ದಾಸಕೂಟ ಮತ್ತು ವ್ಯಾಸಕೂಟ ಅನ್ನುವ ವಿಂಗಡಣೆಯೇ ಬಹಳ ಮಾರ್ಮಿಕವಾಗಿದೆ.

ಆದ್ದರಿಂದ ನಾವು ಭಕ್ತಿಪಂಥವನ್ನು ಗುಂಡಾಗಿ ನೋಡೋದಕ್ಕೆ ಸಾಧ್ಯ ಇಲ್ಲ. ಅದರ ಒಳಗೆಯೇ ಬೇರೆ ಬೇರೆ ವಿನ್ಯಾಸಗಳಿವೆ. ದಾಸಕೂಟ ಮತ್ತು ವ್ಯಾಸಕೂಟ ಎರಡೂ ಭಕ್ತಿ ಪಂಥಕ್ಕೆ ಸೇರಿದವಾದಾಗಲೂ, ಕೃಷ್ಣ ಭಕ್ತರೇ ಆಗಿದ್ದಾಗಲೂ, ಭಾಗವತದ ಮುಂದುವರಿಕೆಯ ಪರಂಪರೆಗಳೇ ಆಗಿದ್ದಾಗಲೂ, ಇವುಗಳ ನಡುವೆ ವ್ಯತ್ಯಾಸಗಳಿರಲು ಏನು ಕಾರಣ? ವ್ಯಾಸಕೂಟದವರು

ಸಂಸ್ಕೃತದಲ್ಲಿ ಗ್ರಂಥಗಳನ್ನು ಬರೆದರು. ಮಠಗಳನ್ನು ಕಟ್ಟಿದರು. ಅವರ ಕೀರ್ತನೆಗಳು, ಅವರ ಹಾಡುಗಳು ಎಲ್ಲವೂ ಕೂಡ ಸಂಸ್ಕೃತದಲ್ಲಿ ಇದ್ದವು. ವ್ಯಾಸಕೂಟದವರು ಆ ವಿಧಾನದಲ್ಲಿ ರಾಜರಿಗೆ ಮತ್ತು ರಾಜಮಾನ್ಯರಿಗೆ ಬೇಕಾಗಿರುವ ಸೇವೆಗಳನ್ನು ಒದಗಿಸಿದರೆ, ಅವರಿಗೆ ಬೇಕಾಗಿರುವಂಥ ಚರ್ಚೆಗಳನ್ನು, ಚಿಂತನೆಗಳನ್ನು ಮಾಡಿಕೊಟ್ಟರೆ, ದಾಸಕೂಟದವರು ಕನ್ನಡದಲ್ಲಿ ಹಾಡುಗಳನ್ನು ರಚಿಸಿದರು. ಕನ್ನಡದಲ್ಲಿ ಹಾಡುಗಳನ್ನು ಬರೆದದ್ದು ಮಾತ್ರವಲ್ಲದೆ, ಅವುಗಳಲ್ಲಿ ಲೋಕ ಕಲ್ಯಾಣಕ್ಕೆ ಅಗತ್ಯವಾಗಿರುವ ಸಂದೇಶಗಳನ್ನು ಸಾರಿದರು.

ಜಾತಿ ಮತಗಳನ್ನು ಬಿಟ್ಟು ಬನ್ನಿ ಅಂತ ಹೇಳಿದರು. ಹೊತ್ತಾರೆ ಎದ್ದು, ನದಿಯಲ್ಲಿ, ಚಳಿಯಲ್ಲಿ ಗಡಗಡ ನಡುಗಿದ ಮಾತ್ರಕ್ಕೆ ನಿಮ್ಮ ದೇವರು ನಿಮ್ಮನ್ನ ಮೆಚ್ಚೋದಿಲ್ಲ. ತೋರಿಸ್ಕೊಳ್ಳೋದಕ್ಕೋಸ್ಕರವಾಗಿ ಭಕ್ತಿ, ಲಾಂಛನಗಳನ್ನು ನೀವು ಹಣೆ ಮೇಲೆ ಧರಿಸಿದ ಮಾತ್ರಕ್ಕೆ ನಿಮ್ಮ ಹೃದಯದಲ್ಲಿ ಭಕ್ತಿ ಇದೆ ಅಂತಾಗೋದಿಲ್ಲ. ಆ ರೀತಿ ಆಗಬೇಕು ಅಂತ ಹೇಳಿದರೆ ಸಜ್ಜನರಾಗಿರಬೇಕು, ಒಳ್ಳೆಯವರಾಗಿರಬೇಕು. ಒಳ್ಳೆಯವರಾಗಿದ್ದರೆ ಮಾತ್ರವೇ ಅದು ನಿಜವಾದ ಭಕ್ತಿ. ನೀವು ಸಜ್ಜನರಾಗದೆ, ಲೋಕ ಕಲ್ಯಾಣಕ್ಕೋಸ್ಕರ ಶ್ರಮಿಸದೆ, ಲೋಕ ಪೀಡಕರಾಗಿದ್ದರೆ ಭಗವಂತನಿಗೆ ಪ್ರಿಯರಾಗುವುದಕ್ಕೆ ಸಾಧ್ಯವಿಲ್ಲ. ಅದನ್ನು ಸರಳ ಕನ್ನಡದಲ್ಲಿ, ಸ್ಪಷ್ಟವಾಗಿ ಹೇಳಿದ್ದಾರೆ.

ಭಕ್ತಿ ಪರಂಪರೆ ಪ್ರತಿಪಾದಿಸಿದ ಪ್ರತಿಸಾಂಸ್ಕೃತಿಕ ನೆಲೆಗಟ್ಟು 'ತೀರ್ಥಪಿಡಿದವರೆಲ್ಲ ತಿರುನಾಮಧಾರಿಗಳೇ?' ಎನ್ನುವ ಮಾತು ಬರುತ್ತೆ, ಕೀರ್ತನೆಯೊಂದರಲ್ಲಿ. ತೀರ್ಥ ಅಂತ, ಗಂಗಾತೀರ್ಥ ಅಥವಾ ಯಾವುದೋ ತೀರ್ಥವನ್ನು ಕೈಯಲ್ಲಿ ಹಿಡಿದ ಮಾತ್ರಕ್ಕೆ ಅವರೆಲ್ಲರೂ ಶ್ರೀನಾಮಧಾರಿಗಳಲ್ಲ. ಜನ್ಮ ಸಾರ್ಥಕವಿಲ್ಲದವರೆಲ್ಲ ಭಾಗವತರೇ? ಗೋಪಾಳ ಬುಟ್ಟಿಯನ್ನು ಹಿಡಿದು ಬೀದಿಗೆ ಹೊರಟರು ಅಂದ ಮಾತ್ರಕ್ಕೆ ಅವರೆಲ್ಲರೂ ಭಾಗವತರಾಗೋದಕ್ಕೆ ಸಾಧ್ಯವಿಲ್ಲ. ಯಾಕಂದ್ರೆ ಭಾಗವತರಾಗುವುದೆನ್ನುವುದು ಒಂದು ಮೌಲ್ಯ. ಅದೊಂದು ತಾತ್ವಿಕ ನೆಲೆಗಟ್ಟು. ವೇಷಾಲಂಕಾರ ಅಲ್ಲ. ತ್ರಿಪುಂಡ್ರವನ್ನು ಧರಿಸಿ, ಗೋಪಾಲ ಬುಟ್ಟಿಯನ್ನು ಹಿಡಿದು, ಹರಿನಾಮವನ್ನು ಹಾಡುತ್ತ ಮನೆಮನೆಗೆ ಭಿಕ್ಷೆಗೆ ಹೋದ ಮಾತ್ರಕ್ಕೆ ಅವನು ಭಾಗವತ ಆಗೋದಕ್ಕೆ ಸಾಧ್ಯ ಇಲ್ಲ. ಭಾಗವತದ ಆಚರಣೆಗೆ ಬಹಳ ಭಿನ್ನವಾಗಿರುವ ಮಾನಸಿಕ ನೆಲೆಗಟ್ಟಿದೆ.

ಜಾತಿಯನ್ನನುಸರಿಸುವಂತಿಲ್ಲ. ಎಲ್ಲರಿಂದಲೂ ಪ್ರಸಾದವನ್ನು ಸ್ವೀಕರಿಸಬೇಕಾಗುತ್ತೆ. ದಾಸನಾದವನು ಜಾತಿಯನ್ನು ಎಣಿಸುವಂತಿಲ್ಲ. ಶ್ರೀಮಂತಿಕೆಯಲ್ಲಿ ಜೀವಿಸುವಂತಿಲ್ಲ. ಶ್ರೀಮಂತಿಕೆ ಹೊಂದಿದವರ ಬಳಿ ದಾಸನಾಗುವಂತಿಲ್ಲ. ಅವರ ಸೇವೆಯನ್ನು ಮಾಡುವಂತಿಲ್ಲ. ಮೂಗಿಡಿದು ನೀರೊಳಗೆ ಮುಳುಗಿ, ಜಪ ತಪ ಮಾಡಿ, ನಿಗಮಾಗಮ ಪುರಾಣಗಳನ್ನೋದಿ ತಿಳಿದು, ಪರಸ್ತ್ರೀಯನ್ನು ಬಯಸಿ ಕಣ್ಣಿಡುವಂತಹ ಯೋಗಭ್ರಷ್ಟರೆಲ್ಲ ದೇವ ಬ್ರಾಹ್ಮಣರೇ? ಎಷ್ಟು ಚೆನ್ನಾಗಿ ಆ ಕಾಲಘಟ್ಟದಲ್ಲಿ ತಾವು ನೀತಿವಂತರು ಜಾತಿಶ್ರೇಷ್ಠರು ಅಂತ ಕರೆದುಕೊಳ್ಳುತ್ತಿರುವವರ ಡಾಂಭಿಕ ವರ್ತನೆಗಳನ್ನ ಅವರು ವಿಡಂಬಿಸಿದ್ದಾರೆ. 'ಮೂಗಿಡಿದು ನೀರೊಳಗೆ ಮುಳುಗಿ, ಜಪ ತಪ ಮಾಡಿ, ನಿಗಮಾಗಮ ಪುರಾಣಗಳನೋದಿ ತಿಳಿದು, ಪರಸ್ತ್ರೀಯನ್ನು ಬಯಸಿ ಕಣ್ಣಿಡುವಂತಹ ಯೋಗ ಭ್ರಷ್ಟರೆಲ್ಲರೂ ದೇವ ಬ್ರಾಹ್ಮಣರೇ?' ಸಾಧ್ಯ ಇಲ್ಲ. ನಾನು ಬ್ರಾಹ್ಮಣ. ನಾನು ಶ್ರೇಷ್ಠ, ನಾನು ಭೂಸುರ ಅಂತ ಹೇಳಿಕೊಂಡರೆ, ನಿನ್ನ ವರ್ತನೆಗಳು ಶುದ್ಧವಾಗದ ಹೊರತು ಅರ್ಥರಹಿತ. ಅವುಗಳನ್ನು ಸರಿಪಡಿಸಿಕೊಂಡವರು ಮಾತ್ರವೇ ಶುದ್ಧರಾಗೋದಕ್ಕೆ ಸಾಧ್ಯ.

'ಲಿಂಗಾಂಗದೊಳಗಿರುವ ಚಿನ್ಮಯವ ತಿಳಿಯದೆ, ಅಂಗಲಿಂಗದ ನೆಲೆಯ ಗುರುತರಿಯದೆ, ಜಂಗಮ ಸ್ಥಾನದ ಹೊಲವನರಿಯದೆ, ಇಂಥ ಭಂಗಿಮುಕ್ಕಗಳೆಲ್ಲ ನಿಜಲಿಂಗವಂತರೇ?' ಲಿಂಗವಂತರಾಗೋದು ಅಂತ ಹೇಳಿದರೆ ಆರೂಢ ಪರಂಪರೆಯಲ್ಲಿ ಅಥವಾ ಶೈವ ದೀಕ್ಷೆಯನ್ನು ಪಡೆಯೋದು ಅಂತ ಹೇಳಿದರೆ ಬಹುಶಃ ಆ ಕಾಲಘಟ್ಟದಲ್ಲಿ ಭಂಗಿ ಸೇದೋದೂ ಕೂಡ ಒಂದು ಪದ್ಧತಿಯಾಗಿತ್ತು ಅಂತ ಕಾಣುತ್ತೆ. ಗುರು ದೀಕ್ಷೆ ಪಡೆದವರು ಈಗ್ಲೂ ಕೂಡ ಹಳ್ಳಿಗಳಲ್ಲಿ ಭಂಗಿ ಸೇದ್ತಾರೆ. ಆದ್ದರಿಂದ ಭಂಗಿ ಸೇದೋದಕ್ಕೆ ಯಾರ್‍ಯಾರು ಲಿಂಗ ಧರಿಸಿದರೋ ಅವರೆಲ್ಲರೂ ನಿಜಲಿಂಗವಂತರಾಗೋದಕ್ಕೆ ಸಾಧ್ಯವೇ?

ಅವರಿಗೆ ಪ್ರಶ್ನೆ ಇರೋದು ಲಿಂಗವಂತ ಧರ್ಮದ ಮೇಲಲ್ಲ. ವೀರಶೈವ ಧರ್ಮದ ಮೇಲೆ, ಶೈವ ಧರ್ಮದ ಮೇಲಲ್ಲ. ಅವರು ಹೇಳ್ತಾ ಇರೋದು ಈ ರೀತಿಯಾಗಿ ಭಂಗಿಮುಕ್ಕಗಳೆಲ್ಲರೂ ಕೂಡ ನಿಜವಾದ ಶರಣರಾಗಲು ಸಾಧ್ಯವಿಲ್ಲ. ಅದರ ಅಂತರಂಗವನ್ನು ತಿಳಿಯದಿದ್ದ ಮೇಲೆ ಇವರು ಲಿಂಗವಂತರಾಗೋದಕ್ಕೆ ಸಾಧ್ಯವೇ? 'ಅಲ್ಲಾ ಖುದಾ ಎಂಬ ಅರ್ಥವನ್ನು ತಿಳಿಯದೆ, ಮುಲ್ಲಾಶಾಸ್ತ್ರದ ನೆಲೆಯ ಮುನ್ನರಿಯದೆ, ಪೊಳ್ಳು ಕೂಗುಗಳ ಕೂಗಿ ಬೊಗುಳಿ ಬಾಯಾರುವಂತ ಕಳ್ಳಸುಳ್ಳರುಗಳಿಗೆಲ್ಲ ವೀರ ಸ್ವರ್ಗವುಂಟೇ?' ದೇವರ ಪರವಾಗಿ ಜಿಹಾದಿ ಮಾಡ್ತಾ ಇದ್ದೀವಿ ಅಂತ ಹೇಳಿಕೊಂಡ ಮಾತ್ರಕ್ಕೆ ವೀರಸ್ವರ್ಗ ಸಿಗೋದಕ್ಕೆ ಸಾಧ್ಯ ಇಲ್ಲ. ಅದಕ್ಕೆ ನಿಜವಾದ ಭಕ್ತನ ಆಚರಣೆ ಯಾವ ರೀತಿಯಲ್ಲಿರಬೇಕು? ನಿಜವಾದ ಭಕ್ತನಾದವನ ರೀತಿಗಳೇನು? ಕೂಡಿದೆಡೆಯಲಿ ಕಪಟವನೆಸಗುವನೆ ದ್ರೋಹಿ. ನಂಬಿ ಜೊತೆಗಿರ್‍ತಾರೆ ಅಂತಹವರಿಗೇ ದ್ರೋಹವನ್ನೆಸಗಿದರೆ, ಅವನು ದ್ರೋಹಿ, ಮಾಡಿದುಪಕಾರವನು ಮರೆವವನೆ ದ್ರೋಹಿ.

ಯಾರು ತನಗೆ ಉಪಕಾರವನ್ನು ಮಾಡಿದ್ದಾರೆ, ಅವರ ಸ್ಮರಣೆಯನ್ನು ಮಾಡದಿರೋ, ಚಾಡಿಕೊಂಡೆಗಳನಾಡಿನಡೆವವನೆ ದ್ರೋಹಿ, ರೂಢಿಯೊಳು ಬಾಳುವವನ ಸಹಿಸದವನೆ ದ್ರೋಹಿ, ಸತಿ ಇದ್ದು ಪರಸತಿಯ ಬಯಸುವವನೆ ದ್ರೋಹಿ, ಹೆತ್ತವರೊಡನೆ ಕಲಹ ಮಾಡುವವನೆ ದ್ರೋಹಿ, ಹೊನ್ನಿದ್ದು ಅನ್ನದಾನವ ಮಾಡದವನೆ ದ್ರೋಹಿ, ಅದಕ್ಕೆ ಒಂದು ನೀತಿಯ ಚೌಕಟ್ಟನ್ನು ಹೇಳುವ ವಿಧಾನದಲ್ಲೇ ಕಂದಾಚಾರದ ಶಾಸ್ತ್ರಾಚಾರಗಳಿಂದ, ತೋರಿಕೆಯ ಭಕ್ತಿಯಾಚರಣೆಗಳಿಂದ ಹೊರಗೆ ಬರಬೇಕು. ಇದು ಕನಕದಾಸರ ಬಹಳ ಮುಖ್ಯವಾಗಿರುವಂಥ, ಆ ಕಾಲದ ದಾಸರೊಳಗಿನ ದಾಸಶ್ರೇಷ್ಠ ಮತ್ತು ಮಹಾ ಸಂತ ಭಕ್ತಿಯ ನೆಲೆ.

ಅದಕ್ಕೆ ಕಾರಣ ಏನು? ತಾನೂ ಸ್ವತಃ ಕೆಳ ಜಾತಿಯಲ್ಲಿ ಹುಟ್ಟಿದವನು, ಆತ ದಾಸನಾಗಿ, ವಿಷ್ಣುಭಕ್ತನಾಗಿ ಇತರ ದಾಸರ ಹಾದಿಯಲ್ಲಿ ನಡೆದಾಗಲೂ ಕೂಡ ಅವರಿಂದ ತಿರಸ್ಕಾರಕ್ಕೆ ಗುರಿಯಾದವನು. ಆದ್ದರಿಂದಲೇ ಆತ ಹೇಳಿದ್ದು 'ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆ ಏನು?' ಇಷ್ಟು ಜಾತಿ ಜಾತಿ ಅಂತ ಹೇಳ್ತೀರ, ಕುಲ ಶ್ರೇಷ್ಠತೆಯ ಬಗ್ಗೆ ಮಾತಾಡ್ತೀರ, ನಿಜವಾಗಲೂ ನಿಮ್ಮ ಕುಲದ ನೆಲೆ ಏನು? ಅದಕ್ಕೆ ಬೇರೆ ಬೇರೆ ದೃಷ್ಟಾಂತಗಳ ಮುಖಾಂತರವಾಗಿ, ದೇವರನ್ನು ಪೂಜಿಸಬೇಕಾದರೆ ಅಲ್ಪವಾಗಿರೋ ಪದಾರ್ಥಗಳಿಂದ, ಅಶುದ್ಧವಾಗಿರುವ ಪದಾರ್ಥಗಳಿಂದ ಹುಟ್ಟಿದ ವಸ್ತುಗಳಿಂದ ಪೂಜೆಯನ್ನು ಮಾಡ್ತಾರಲ್ಲ, ಮತ್ತದು ದೇವರಿಗೆ ಹೆಂಗೆ ಸಲ್ಲುತ್ತೆ? ಹಸುವಿನ ಮಾಂಸದಲ್ಲಿ ಹುಟ್ಟುವ ಹಾಲನ್ನು ತಂದು ಶಿವನಿಗೆ ಕ್ಷೀರಾಭಿಷೇಕ ಮಾಡ್ತಾರೆ, ಕೆಸರಿನಲ್ಲಿ ಹುಟ್ಟಿದ ಕಮಲವನ್ನು ತಂದು ಶಿವನಿಗೆ ಪುಷ್ಪಾರ್ಚನೆ ಮಾಡ್ತಾರೆ, ಅವೆಲ್ಲವೂ ಸಲ್ಲೋದಾದ್ರೆ ಈ ಮೇಲು ಕೀಳು ಅನ್ನುವುದ್ಯಾವುದಿದೆ? ಆತ್ಮ ಯಾವ ಕುಲ? ಜೀವ ಯಾವ ಕುಲ? ತತ್ವೇಂದ್ರಿಯಗಳ ಕುಲಪೇಳಿರಯ್ಯ ಸಮಾಜಕ್ಕೆ ಅವರ ಗಟ್ಟಿ ಪ್ರಶ್ನೆ ಇದು. ಜಾತಿಯ ಹೆಸರಲ್ಲಿ ಇಷ್ಟು ವಿಂಗಡಣೆ ಮಾಡ್ತೀರ? ಶ್ರೇಷ್ಠರು ಅಂತ ಹೇಳ್ತೀರ, ಭಗವದ್ಭಕ್ತರು ಅಂತ ಹೇಳ್ತೀರ, ಭಗವದ್ ಸಾಕ್ಷಾತ್ಕಾರ ನಿಮಗೆ ಮಾತ್ರ ಸಿಕ್ಕಿದೆ ಅಂತೀರಲ್ಲ, ಕಾಗಿನೆಲೆಯಾದಿಕೇಶವ ಯಾರನ್ನು ಬಂದು ದರ್ಶಿಸ್ತಾನೆ? ಯಾರನ್ನು ಬಂದು ಭೇಟಿ ಮಾಡ್ತಾನೆ? ನಿಜವಾದ ಭಕ್ತರನ್ನು. ಆ ನಿಜವಾದ ಭಕ್ತಿ ಅಂದ್ರೆ ಏನು? ಅಂತರಂಗವನ್ನು ಶುದ್ಧಿಯಾಗಿಟ್ಟುಕೊಂಡಿರೋದು. ಇದೊಂದು ಪರಂಪರೆಯ ವಿಧಾನ. ಬೌದ್ಧ ಪರಂಪರೆಯಿಂದ ಹಿಡಿದು, ಶೈವ ಪರಂಪರೆಯಲ್ಲಿ, ನಾಥ ಪರಂಪರೆಯಲ್ಲಿ ನಿಜದ ಭಕ್ತಿಯ ಅರ್ಥ ಏನು ಅಂತ ಹೇಳಿದ್ರೆ, ಅಂತರಂಗ ಶುದ್ಧಿ, ಬೇರೆಯವರಿಗೆ ಕೇಡನ್ನು ಮಾಡದಿರುವಂಥಾದ್ದು. ಬೇರೆಯವರನ್ನು ಅಡಿಯಾಳು ಮಾಡಿಕೊಳ್ಳದೇ ಇರುವಂಥಾದ್ದು. ದುಡಿದು ತಿನ್ನುವಂಥಾದ್ದು ಮತ್ತು ತಾನು ದುಡಿದಿದ್ದರಲ್ಲಿ ಹಸಿದವರು ಕನಿಷ್ಠ ಒಬ್ಬರಿಗಾದರೂ ದಾಸೋಹವನ್ನಿಕ್ಕುವಂಥಾದ್ದು. ಇದು ನಿಜವಾದ ಭಕ್ತಿಯ ನೆಲೆ. ಈ ನೆಲೆಗಟ್ಟನ್ನು ಪ್ರತಿಪಾದಿಸುತ್ತಾ ಕನಕದಾಸರು ನೂರಾರು ಕೀರ್ತನೆಗಳನ್ನು ಬರೆದಿದ್ದಾರೆ. ಕನ್ನಡದ ಸಾಹಿತ್ಯ ಪರಂಪರೆ ಒಳಗಿರುವ ಅಭಿನ್ನ ಧಾರೆಯ ಒಬ್ಬ ಮುಖ್ಯ ವಾಹಕರಾಗಿ ಹದಿನಾರನೇ ಶತಮಾನದಲ್ಲಿ ಅವರು ಕಾಣಿಸಿಕೊಂಡಿದ್ದಾರೆ. ಪಂಪ ಏನು ಹೇಳಿದ ಮನುಷ್ಯ ಕುಲಂ, ತಾನೊಂದೇ ವಲಂ ಅಂತ. ಹನ್ನೆರಡನೇ ಶತಮಾನದಲ್ಲಿ ಶಿವಶರಣರು ಏನಂತ ಹೇಳಿದರು; ಆವಂದಿರ ಕುಲವೇನೋ ಅಂತ. ಯಾವುದು ಕುಲ? ಆ ನಂತರ ಸರ್ವಜ್ಞ ಏನು ಹೇಳಿದ ಅದನ್ನು ಕನಕದಾಸರು ತಮ್ಮ ಭಕ್ತಿಪಂಥದ ನೆಲೆಯಲ್ಲಿ ಹೇಳಿದರು. ನಿಮ್ಮ ಕುಲದ ನೆಲೆಯನ್ನು ನೀವು ಬಲ್ಲಿರಾ ಅಂತ? ನಿಜವಾಗಲೂ ನಿಮಗೆ ಗೊತ್ತಿದೆಯಾ ಅಂತ. ಹುಟ್ಟದ ಯೋನಿಗಳಿಲ್ಲ. ಮೆಟ್ಟದ ಭೂಮಿಗಳಿಲ್ಲ. ಅವರು ವಿವರಣೆ ಕೊಡ್ತಾ ಹೋಗ್ತಾರೆ. ಇಡೀ ಭೌತಿಕ ಪ್ರಪಂಚವನ್ನು ವಿವರಿಸ್ತಾ ಇದರಲ್ಲಿ ಮೇಲು ಮತ್ತು ಕೀಳು ಅಂತ ವಿಂಗಡಿಸೋದಕ್ಕೆ ನಿಮಗಿರುವ ಅಧಿಕಾರ ಏನು? ಭಗವದ್ ಸೃಷ್ಟಿಯಾದ ಮೇಲೆ ಎಲ್ಲರಿಗೂ ಭಗವಂತನನ್ನು ಸೇರುವ ಹಕ್ಕಿದೆ. ಅದು ಸಾಕ್ಷಾತ್ಕಾರ. ಅದಕ್ಕೋಸ್ಕರವಾಗಿ ನೀವು ಪುರೋಹಿತರನ್ನು ಅವಲಂಬಿಸಿಕೊಳ್ಳಬೇಕಾದ್ದಿಲ್ಲ. ಅದಕ್ಕೋಸ್ಕರವಾಗಿ ರಾಜರ ಸೇವೆಯನ್ನು ಮಾಡಬೇಕಾದ್ದಿಲ್ಲ. ಇದು ಬಹಳ ಮುಖ್ಯವಾಗಿರುವಂಥಾದ್ದು. ನೀನು ನಿನ್ನ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕು ಅಂದ್ರೆ, ನೀನು ಮೋಕ್ಷವನ್ನು ಪಡೆಯಬೇಕಂದ್ರೆ, ಒಡೆಯನ ಸೇವೆಯನ್ನು ಸಮರ್ಪಕವಾಗಿ ಮಾಡಬೇಕು ಅಂತ ಆಗಿನ ಧಾರ್ಮಿಕ ವ್ಯವಸ್ಥೆ ಹೇಳ್ತಾ ಇತ್ತು. ಇವರು ಹೇಳ್ತಾರೆ ನೀನು ಮಾಡಬೇಕಾಗಿರೋದು ಜಗದೀಶನ ಸೇವೆಯನ್ನು. ಧರಾಧೀಶರ ಸೇವೆಯನ್ನಲ್ಲ. ಅವನ ಸೇವೆಯನ್ನು ನಿಷ್ಕಲ್ಮಶವಾಗಿ ಮಾಡಿದರೆ ನೀನು ಸಾಕ್ಷಾತ್ಕಾರವನ್ನು ಪಡೆಯುವುದಕ್ಕೆ ಸಾಧ್ಯ. ಅಂದ್ರೆ ಭಗವಂತನನ್ನು ತಲುಪುವುದಕ್ಕೆ ನೀನು ಲೌಕಿಕವಾಗಿರುವ ಯಾವುದೇ ಚೌಕಟ್ಟಿನ ಒಳಗಡೆ ಇದ್ದು ಅವರ ಸೇವೆಯನ್ನು ಪೂರೈಸಬೇಕಾದದ್ದು, ಜಾತಿ ಧರ್ಮವನ್ನು ಅನುಸರಿಸಬೇಕಾದದ್ದು ಅಗತ್ಯವೇ ಇಲ್ಲದೆ ನೀನು ಭಗವಂತನನ್ನು ಪಡೆಯಬಲ್ಲೆ. ಕನಕದಾಸರು ಭಗವಂತನ ಬಗ್ಗೆ ಮತ್ತೆ ಮತ್ತೆ ಮಾತಾಡೋದ್ರಿಂದ ನಮಗೆ ಅನ್ನಿಸಬಹುದು. ಭಗವಂತನ ಬಗ್ಗೆ ಮಾತಾಡೋದು ಎಷ್ಟರಮಟ್ಟಿಗೆ ಪ್ರಗತಿಪರ? ಎಷ್ಟರಮಟ್ಟಿಗೆ ವೈಚಾರಿಕ? ನಾವು ಕನಕದಾಸರನ್ನು ನಮ್ಮ ಕಾಲದ ವೈಚಾರಿಕತೆಯಿಂದ ಅಳೆಯುವುದು ಸಾಧ್ಯ ಇಲ್ಲ. ನಾವು ನಿರೀಶ್ವರವಾದಿಗಳು, ನಾವು ಎಲ್ಲವನ್ನು ಬಿಟ್ಟವರು, ದೇವರನ್ನು ನಂಬದಿರುವವರಾದುದರಿಂದ ಅವನು ದೇವರು ಅಂತ ಹೇಳಿದರೆ ಏನರ್ಥ? ನಾವು ಕನಕನ ಕಾಲಘಟ್ಟದಲ್ಲೇ ನಿಂತು, ಆ ಸಾಂಸ್ಕೃತಿಕ ಆಯಾಮದಲ್ಲಿ ಅವರು ದೇವರನ್ನು ತಲುಪೋದಕ್ಕೆ ಇರುವಂತಹ ಇತರ ಅಡೆತಡೆಗಳನ್ನು ನಿವಾರಿಸೋದಕ್ಕೆ ಜನಮುಖಿಯಾಗಿರುವ ಯಾವ ದಾರಿಯನ್ನು ಹೇಳಿದರು? ಜಡ ಜಾತಿ ವ್ಯವಸ್ಥೆಗೆ ವಿರೋಧಿಯಾಗಿ ನಿಂತು, ಜನರಿಗೆ ಅನುಕೂಲವಾಗುವ ರೀತಿ ಅಷ್ಟು ಕೀರ್ತನೆಗಳನ್ನು ಬರೆದು, ಎಲ್ಲಾ ಕೃಷ್ಣ ಕ್ಷೇತ್ರಗಳನ್ನು ಭೇಟಿಯಾಗಿ, ಅಷ್ಟು ದೊಡ್ಡ

ವಿದ್ವಾಂಸರಾಗಿದ್ದಾಗಲೂ ಕೂಡ ಅತ್ಯಂತ ಸರಳವಾಗಿರುವ ಜೀವನವನ್ನು ಬದುಕಿ, ಭಗವಂತನ ಸೇವೆ ಅಂತ ಹೇಳಿದರೆ ಜನರ ಸೇವೆ ಅಂತ ಅವರು ತಿಳಿದರು. ಹಂಗಾಗಿಯೇ ತಲ್ಲಣಿಸದಿರು ಕಂಡ್ಯ ತಾಳು ಮನವೇ ಅಂದರು ಆ ಕಾಲದಲ್ಲಿ ಯಾವ ಜನ ತಲ್ಲಣಿಸಿ ಹೋಗಿದ್ದರು ಅವರಿಗೊಂದು ಭರವಸೆಯನ್ನು ಹೇಳ್ಬೇಕಾಗಿತ್ತು. ಭಗವಂತ ಎಲ್ಲರನ್ನೂ ಸಲಹುತ್ತಾನೆ. ಒಳ್ಳೆಯವನಾಗು. ಕೆಡುಕರ ಸಂಗ ಬೇಡ ನಿನಗೆ, ದುರ್ಜನರ ಸಂಗ ಬೇಡ. ಒಳ್ಳೆಯವರ ಸಂಗದಲ್ಲಿರು, ದೇವರು ತಾನೇ ತಾನಾಗಿ ನಿನ್ನನ್ನು ಸಲಹುತಾನೆ. ಇದೊಂದು ಆತ್ಮವಿಶ್ವಾಸದ ದಾರಿ. ಆತ್ಮವಿಶ್ವಾಸ ಇಲ್ಲದೆ ಒಂದು ಸಮುದಾಯ ಬದುಕೋದಕ್ಕೆ ಆಗೋದಿಲ್ಲ. ಆದ್ದರಿಂದ ಬಹಳ ಸಲ ಭಗವಂತ ನಿಮ್ಮ ಕಡೆಗೆ ಇದಾನೆ ಅಂತ ಹೇಳುವ ಸಂದೇಶ ಕೂಡ ಜನರ ಆತ್ಮವಿಶ್ವಾಸವನ್ನು ನಿರ್ಮಾಣ ಮಾಡುವ ದಾರಿಯಾಗಿತ್ತು ಆ ಕಾಲಘಟ್ಟದಲ್ಲಿ. ಆ ವಿಧಾನದಲ್ಲಿ ಬರೆದು ಬದುಕಿದವರು, ಬನ್ನಂಜೆ ಗೋವಿಂದಾ ಚಾರ್ಯರು ಹೇಳ್ತಾರೆ; ಆ ಕಾಲಘಟ್ಟದಲ್ಲಿ ಭಕ್ತಿಪಂಥ ಏನನ್ನು ಮಾಡ್ತು, ಆಧ್ಯಾತ್ಮಿಕ ಅರ್ಥದಲ್ಲಿ ಅನ್ನೋದನ್ನು ನಾನು ಹೇಳಿದ್ದು ಲೌಕಿಕ ಅರ್ಥದಲ್ಲಿ ಮತ್ತು ಸಾಮಾಜಿಕ ಅರ್ಥದಲ್ಲಿ. ಆಧ್ಯಾತ್ಮಿಕ ಅರ್ಥದಲ್ಲೂ ಕೂಡ ಅದಕ್ಕೊಂದು ಭಿನ್ನ ನೆಲೆಗಟ್ಟಿದೆ. ಬನ್ನಂಜೆ ಯವರು ಹೇಳೋದು ಆಧ್ಯಾತ್ಮಿಕ ಅನುಭವದಿಂದ, ಸಾಧನೆಯ ಅನುಭಾವದಿಂದ ದೂರ ಸರಿದಿದೆ. ಅನುಭಾವಿಯಾಗಬೇಕಿದ್ರೆ ಮಾಡಬೇಕಾಗಿರುವ ಸಾಧನೆಯಿಂದಲೂ ದೂರ ಸರಿದಿದೆ ಆಧ್ಯಾತ್ಮ. ನಮ್ಮ ಕಾಲಕ್ಕೆ ಆಧ್ಯಾತ್ಮ ಅನುಭವದಿಂದ, ಸಾಧನೆಯ ಅನುಭಾವದಿಂದ ದೂರ ಸರಿದು ಕೇವಲ ಗ್ರಾಂಥಿಕ ಪಾಂಡಿತ್ಯದ, ತರ್ಕದ ಕಸರತ್ತಿನ ಗರಡಿ ಸಾಧನೆಯಲ್ಲಿ ಮುಳುಗಿದೆ. ಯಾರು ವೇದಗಳನ್ನು ಉರು ಹಚ್ಚಿದ್ದಾರೆ, ಯಾರು ಶಾಸ್ತ್ರಗಳನ್ನು ಉರು ಹಚ್ಚಿದ್ದಾರೆ ದೊಡ್ಡ ಗ್ರಂಥಗಳನ್ನು ಓದಿ, ಪಂಡಿತರಾಗಿದ್ದಾರೆ. ಅವರೆಲ್ಲರೂ ಮೋಕ್ಷದ ಹಾದಿಯನ್ನು ಜನರಿಗೆ ಒದಗಿಸಿಕೊಡುವ ಕಾಂಟ್ರಾಕ್ಟರ್‌ಗಳಂತಿದ್ದಾರೆ. ಅವರಿಗೆ ಅನುಭವವೂ ಇಲ್ಲ. ಸಾಧನೆಯ ಅನುಭಾವಿತನವೂ ಇಲ್ಲ. ತರ್ಕದ ಕಸರತ್ತದು. ಅನುಭವದ ಮಾತನಾಡುವವರು ಆಗ ಅಸ್ಪೃಶ್ಯರಾದರು. ಅನುಭವದ ಮಾತಾಡೋರು ಯಾರು? ಜನಸಾಮಾನ್ಯರು, ದುಡಿಮೆಯಲ್ಲಿರೋರು. ಅವರಿಗೆ ಮಾತ್ರ ಅನುಭವಗಳಿವೆ. ಜೀವನಾನುಭವಗಳಿವೆ. ಬದುಕಿನ ಅನುಭವಗಳಿವೆ. ಆದರೆ ಅನುಭವದ ಮಾತನಾಡು ವವರು ಆಗ ಅಸ್ಪೃಶ್ಯರಾದರು. ಅನುಭಾವ ನಗೆಪಾಟಲಾಯಿತು. ಹೀಗೆ ವೇದಾಂತ ಮಡುಗಟ್ಟಿ ನಿಂತಾಗ, ನಿಂತ ನೀರಾದಾಗ, ಪಾಚಿಗಟ್ಟಿ ನಾರುವ ಸ್ಥಿತಿ ನಿರ್ಮಾಣವಾಗಿತ್ತು. ಇಡೀ ವೇದಾಂತ, ವೇದ ಜ್ಞಾನ ಎಲ್ಲವೂ ಕೂಡ ಪಾಚಿಗಟ್ಟಿ ನಾರತೊಡಗಿತ್ತು. ಜಾತಿಗಳ ಮೇಲುಕೀಳುಗಳಲ್ಲಿ ಸಿಲುಕಿ ಮನುಷ್ಯರನ್ನು ಭೇದವೆಣಿಸುವ, ಬೇರ್ಪಡಿಸುವ, ಅವಮಾನಿಸುವಂಥ ಸ್ಥಿತಿಯನ್ನು ತಲುಪಿತ್ತು. ಮರಳಿ ಅದನ್ನು ಅನುಭಾವದ ಗಟ್ಟಿ ನೆಲದಲ್ಲಿ ನೆಲೆಯೂರಿಸುವ ತುರ್ತನ್ನು ಕಂಡ ಮಹನೀಯರು ದಾಸಪಂಥವನ್ನು ಹುಟ್ಟುಹಾಕಿದರು. ಆ ದಾಸಪಂಥದ ನಿಜವಾದ ಆಶಯಗಳ ಪ್ರತೀಕವಾಗಿ ಬಹಳ ಹಿಂದೆ ವೇದಗಳ ವಿರೋಧವಾಗಿ ಹೋರಾಡಿದ ಆ ಭಾಗವತದ ಆಗಿನ ಆಶಯಗಳ ನಿಜರೂಪವಾಗಿ, ಅತ್ಯಂತ ಕೆಳಸ್ತರದ ಸಮಾಜದಿಂದ ಬಂದು, ಅತ್ಯಂತ ಗಟ್ಟಿಯಾದ ಸಾಹಿತ್ಯವನ್ನು ಮತ್ತು ಸಂದೇಶವನ್ನು ಕೊಟ್ಟ ಕನಕದಾಸರು ನಮಗೆ ಅದಕ್ಕೋಸ್ಕರವಾಗಿ ಬಹಳ ಮುಖ್ಯವಾಗಿರುವ ದಾರ್ಶನಿಕ ಕವಿಯೂ, ಸಂತ ಮತ್ತು ಹೋರಾಟಗಾರನೂ ಆಗಿದ್ದಾರೆ. ಅವರ ಸಾಹಿತ್ಯವನ್ನು ನೀವು ಮತ್ತಷ್ಟು ಓದಬೇಕು, ಚರ್ಚೆ ಮಾಡಬೇಕು, ಅದರೊಳಗಡೆ ಇರುವಂತಹ ಆಧ್ಯಾತ್ಮಿಕ ಅರ್ಥವೂ ಸೇರಿದಂತೆ, ಅದರ ಸಾಮಾಜಿಕ ಆಶಯಗಳನ್ನೂ ಕೂಡ ಗಮನಿಸೋದಕ್ಕೆ ನಿಮಗೆ ಇಂಥ ಉಪನ್ಯಾಸಗಳ ಮೂಲಕ ಅನುಕೂಲ ಆಗ್ಬೇಕು ಅಂತ ನಾನು ಆಶಿಸ್ತಾ ಇದೀನಿ.

* ಮಂಗಳೂರು ವಿವಿಯ ಕನಕ ಅಧ್ಯಯನ ಪೀಠವು ಶಿವಮೊಗ್ಗದಲ್ಲಿ ಏರ್ಪಡಿಸಿದ್ದ ಕನಕದಾಸ ಉಪನ್ಯಾಸ ಮಾಲಿಕೆಯಲ್ಲಿ ಮಾಡಿದ ಭಾಷಣದ ಬರಹ ರೂಪ